# ರಂಗದಂಗಳ

ಡಾ. ವಿಜಯಾ ಸುಬ್ಬರಾಜ್ ಅವರ ಸಮಗ್ರ ನಾಟಕಗಳು





ಕಣ್ವ ಪಬ್ಲಿಕೇಷನ್ಸ್ ಪ್ರೈವೇಟ್ ಲಿ.
ಬೆಂಗಳೂರು

# ರಂಗದಂಗಳ

(ಡಾ.ವಿಜಯಾ ಸುಬ್ಬರಾಜ್ ಅವರ ಸಮಗ್ರ ನಾಟಕಗಳು)

ಡಾ॥ ವಿಜಯಾ ಸುಬ್ಬರಾಜ್

ಕಣ್ವ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್
ಬೆಂಗಳೂರು

**RANGADANGALA**

By:
**Dr. Vijaya Subbaraj**
# 51, Hamsi, 1-A Cross
35th Main, Banagirinagara
Banashankari 3rd Stage
Bangalore - 560085
Phone : 080-26793219

Published by
**Kanva Publications Pvt Ltd.**
"Kaala Kanasu", No.894
1 st Main, Nisarga Badavane
Chandra Layout
Bengaluru - 560 072
Ph : 080 - 23426778
E-mail : giriraju@kanvaprakashana.com
web : www.kanvaprakashana.com

**Publisher: M.R.Giriraju**
M : 98450 52481



First Impression : 2010
Price : Rs.320 /-
Pages : XX +508=528

Paper Used : 70 GSM Maplitho
Book Size : Demy 1/8
Cover page Art : **K.V.Pundalika**

Printed At
**Akshara Printers**
Bengaluru

# ಅರ್ಪಣೆ

ಇಲ್ಲಿನ ನಾಟಕಗಳ ರಚನೆಯ ಹಿಂದೆ
ಪ್ರಬಲ ಪ್ರೇರಣೆಯಾಗಿರುವ,
ರಂಗಭೂಮಿಗೇ ತಮ್ಮನ್ನು
ದಶಕಗಳ ಕಾಲ ಅರ್ಪಿಸಿಕೊಂಡಿದ್ದ
ನನ್ನ ಪ್ರೀತಿಯ ಚಿಕ್ಕಪ್ಪ
**ದಿ|| ಸಿ.ಟಿ.ಶೇಷಾಚಲಂ**
ಅವರ ನೆನಪಿಗೆ.

# ಮುನ್ನುಡಿ

ಡಾ. ವಿಜಯಾ ಸುಬ್ಬರಾಜ್ ಅವರ ನಾಟಕಗಳ 'ಸಮಗ್ರ ಕೃತಿ' ಪ್ರಕಟವಾಗುತ್ತಿರುವುದು ಸಂತಸದ ಮತ್ತು ಅಪೇಕ್ಷಣೀಯ ಸಂಗತಿಯಾಗಿದೆ. ಬಹುಮುಖ ಪ್ರತಿಭೆಯ ಡಾ. ವಿಜಯಾ ವೃತ್ತಿಯಿಂದ ಕನ್ನಡ ಅಧ್ಯಾಪಕಿ. ಪ್ರವೃತ್ತಿಯಲ್ಲಿ ಕತೆಗಾರ್ತಿ, ಕಾದಂಬರಿಕಾರ್ತಿ, ಕವಿ, ಅನುವಾದಕಿ, ನಾಟಕಕಾರ್ತಿ. ಬೇರೆ ಭಾಷೆಯಿಂದ ಅನುವಾದಿಸಿರುವ ಇವರ ಕೃತಿಗಳು ಅವರ ವಿದ್ವತ್ತು, ಪಾಂಡಿತ್ಯ, ಭಾಷಾಜ್ಞಾನ ಮತ್ತು ಸಾಹಿತ್ಯಾಸಕ್ತಿಯ ಪ್ರತೀಕಗಳಾಗಿವೆ.

ಆಧುನಿಕ ಕನ್ನಡ ಸಾಹಿತ್ಯ ಚರಿತ್ರೆಯನ್ನು ಗಮನಿಸಿದಾಗ ನಾಟಕ ರಚಿಸಿರುವ ಮಹಿಳೆಯರು ತುಂಬಾ ಕಡಿಮೆ. 'ನಾಟಕ', ಅದರ ರಚನೆ, ನಟನೆ ಮೊದಲಾದ ಕ್ರಿಯೆಗಳನ್ನು ಕುರಿತು ನಮ್ಮ ಸಮಾಜ ಹೊಂದಿದ್ದ 'ಭಾವನೆ' ಇದಕ್ಕೆ ಕಾರಣ ಇದ್ದಿರಬಹುದು. ಇಂತಹ ಸಾಮಾಜಿಕ ನಿಲುವುಗಳು ಸಾಹಿತ್ಯ ಮತ್ತು ಸಾಂಸ್ಕೃತಿಕ ಅಭಿವ್ಯಕ್ತಿಗೆ ತೊಡಕಾಗಿ ಪರಿಣಮಿಸಿವೆ. ಅದರಲ್ಲೂ ಮಹಿಳೆ ತನ್ನ ಸೃಜನಶೀಲತೆಯ ಅಭಿವ್ಯಕ್ತಿಗೆ ಹರಸಾಹಸ ಮಾಡಿದ್ದು, ಮಾಡುತ್ತಿರುವುದು, ಮಾಡಬೇಕಾಗಿರುವುದು ಸತ್ಯ. ಹೀಗಿರುವಲ್ಲಿ 'ನಾಟಕ'ದಂತ ಬಹುಮುಖಿ ಆಯಾಮದ ಪ್ರಕಾರವನ್ನು ಆಯ್ದುಕೊಂಡು, ಆ ಪ್ರಕಾರಕ್ಕೆ ಗಮನಾರ್ಹ ಕೊಡುಗೆ ನೀಡಿರುವ ವಿಜಯಾರ ಸಾಧನೆ ಉಲ್ಲೇಖಾರ್ಹ.

ವಿಜಯಾ ರಚಿಸಿರುವ ನಾಟಕಗಳು ಏಳು. ಅವು: ಪಾಂಚಾಲಿ, ದಂಗೆ ಎದ್ದವಳು, ಮಿಲನ, ಪ್ರೇಮಸಮಾಧಿ, ಮತ್ತೊಂದು ಮಹಾಭಾರತ, ಪಾದ್ರಿಯೊಬ್ಬನ ಕತೆ, ನಗರವಧು ಸಾಲವತಿ. ಗಾತ್ರದಲ್ಲಿ ಸದೃಢವಾಗಿರುವ ಇವು ವಸ್ತು, ನಿರ್ವಹಣೆಯಿಂದಲೂ ಗಮನ ಸೆಳೆಯುತ್ತವೆ. ಮಹಿಳೆಯರಿಂದ ಕೊಂಚ ದೂರವೇ ನಿಂತಿರುವ ಈ ಮುಖ್ಯ 'ಪ್ರಕಾರ'ವನ್ನು ತಮ್ಮ ಸಂಶೋಧನೆಯ ವಿಷಯವನ್ನಾಗಿಸಿಕೊಂಡು ಡಾ. ವಿಜಯಾ

'ಗೀತನಾಟಕ'ಗಳನ್ನು ತಮ್ಮ ಮಹಾಪ್ರಬಂಧಕ್ಕಾಗಿ ಅಧ್ಯಯನ ಕೈಗೊಂಡಿದ್ದಾರೆ. ಈ ಅಧ್ಯಯನ ಅವರ ಗ್ರಹಿಕೆ, ಅಭಿವ್ಯಕ್ತಿಗಳಿಗೆ ವ್ಯಾಪ್ತಿ ಮತ್ತು ನಿಶಿತತೆ ನೀಡಿರುವುದು ಅವರ ನಾಟಕಗಳ ಓದಿನಿಂದ ಸ್ಪಷ್ಟವಾಗುತ್ತದೆ.

ಆಧುನಿಕ ನಾಟಕ ತನ್ನ ನಿರ್ವಚನ ವೈವಿಧ್ಯತೆಯಿಂದ ಬೆರಗುಂಟುಮಾಡುತ್ತದೆ. ಸಾಮಾಜಿಕ, ರಾಜಕೀಯ, ಪೌರಾಣಿಕ, ಐತಿಹಾಸಿಕ ವಸ್ತುಗಳನ್ನು 'ಹೊಂದಿ' ಅವನ್ನು ಸಮರ್ಥವಾಗಿ ಅಭಿವ್ಯಂಜಿಸಿರುವುದು ಆಧುನಿಕ ನಾಟಕಗಳ ಹೆಗ್ಗಳಿಕೆಯಾಗಿದೆ. ಮಹಿಳೆ ಈ ಪ್ರಕಾರವನ್ನು ನಿರ್ವಹಿಸಿದಾಗ ಸಹಜವಾಗಿಯೇ ಈ ಪ್ರಕಾರ ಹೊಸ ಆಯಾಮಕ್ಕೂ ಪಕ್ಕಾಗಿದೆ. ಯಾರದೋ ಕತೆ, ಪ್ರಹಸನ, ವ್ಯಥೆಯ ವೇದಿಕೆಯಾಗಿದ್ದ ರಂಗಕೃತಿ 'ಮಹಿಳೆ'ಯನ್ನು ಕೇಂದ್ರವಾಗಿ ಹೊಂದಿ, ಅವಳ ನೋವಿನ, ರಸದ, ಸಂಘರ್ಷದ, ಸಂಕಷ್ಟದ ದನಿಯನ್ನು ಧ್ವನಿಯಾಗಿಸಿದಾಗ ಅದು ಸಹಜವಾಗಿಯೇ ಸಮಕಾಲೀನತೆ, ಸಾರ್ವತ್ರಿಕತೆಗಳನ್ನು ಒಳಗೊಳ್ಳುತ್ತದೆ. ಇಂತಹ ಪ್ರಯತ್ನ ವಿಜಯಾರ ನಾಟಕಗಳಲ್ಲಿ ಸಾಧ್ಯವಾಗಿದೆ.

ವಿಜಯಾ ತಮ್ಮ ನಾಟಕಗಳ 'ವಸ್ತು'ವಿನ ವೈವಿಧ್ಯ, ಪಾತ್ರ ವಿನ್ಯಾಸ, ಪೋಷಣೆ ಮತ್ತು ಅವುಗಳ 'ವ್ಯಕ್ತಿತ್ವ' ದರ್ಶನದಲ್ಲಿ ತೀವ್ರ ಗಮನ ಸೆಳೆಯುತ್ತಾರೆ. ಈ ವಸ್ತುವಿನ ನಿರ್ವಹಣೆಗಾಗಿ ಅವರು ಬಳಸಿಕೊಂಡಿರುವ ಮೇಳ, ಸೂತ್ರಧಾರ, ಭಾಗವತ ಮೊದಲಾದ 'ಕೊಂಡಿ' ಅಥವ ನಿರೂಪಣಾ ತಂತ್ರ ಗಮನಾರ್ಹ. ನಾಟಕ ರಚನೆಯಲ್ಲಿ ಇವನ್ನು ಬಳಸಿಕೊಳ್ಳುವ ಅವರಿಗೆ ಇಂಗ್ಲೀಷ್, ಸಂಸ್ಕೃತ, ಗ್ರೀಕ್ ಭಾಷೆಗಳ ಅತ್ಯುತ್ತಮ ನಾಟಕಗಳ ವಸ್ತು, ರಚನೆ, ಸಂವಿಧಾನ, ನಿರ್ವಹಣೆಗಳು ನೆರವಾಗಿವೆ; ಅರಿವಾಗಿವೆ; ವರವಾಗಿವೆ. ನಾಟಕ ಕೇವಲ ಸಂಭಾಷಣೆ ಅಲ್ಲ, ಕ್ರಿಯೆ, ಕ್ರಿಯೈಕ್ಯಗಳು ಮುಖ್ಯ ಎಂಬ ತಿಳುವಳಿಕೆ ಅವರ ನಾಟಕಗಳಲ್ಲಿ ಗೋಚರಿಸುತ್ತದೆ.

೧. **ಪಾಂಚಾಲಿ :** ಭಾರತೀಯ ಮಹಾಕಾವ್ಯಗಳು ಭಿನ್ನ ಪ್ರಕಾರಗಳಲ್ಲಿ ಕಾಲಕಾಲದಲ್ಲಿ ರೂಪು ತಳೆದಿವೆ. ಮಹಾಭಾರತವಂತೂ ಕತೆಗಳ ತವರು. ಆದರೆ ಅಂದಿನಿಂದ ಈವರೆಗೆ ಅದರ ಪುರುಷ ನಿರ್ವಚನವೇ ಮುಖ್ಯ ಎಂಬಂತಾಗಿತ್ತು. ಎಸ್.ಎಲ್.ಭೈರಪ್ಪ ತಮ್ಮ 'ಪರ್ವ' ಕಾದಂಬರಿಯಲ್ಲಿ, ಬಂಗಾಲಿ, ಮಲೆಯಾಳಿ, ತೆಲುಗು, ಹಿಂದೀ ಲೇಖಕಿಯರು ತಮ್ಮ ಕಾವ್ಯ, ನಾಟಕಗಳಲ್ಲಿ ಮಹಾಭಾರತದ ಕೆಲವು ಪಾತ್ರಗಳಿಗೆ ನೀಡಿದ ಮಹತ್ವ ಮತ್ತು ಅವನ್ನು ನಿರ್ವಚಿಸಿದ ಹೊಸ ದೃಷ್ಟಿಕೋನ ದಾಖಲಾರ್ಹ. ಡಾ. ವಿಜಯಾ ಅಂತಹದೇ ಮಹತ್ವದ ಪ್ರಯತ್ನವನ್ನು ಈ ನಾಟಕದಲ್ಲಿ ಕೈಗೊಂಡಿದ್ದಾರೆ. ದ್ರೌಪದಿ, ಕುಂತಿ, ಗಾಂಧಾರಿಯರ ಪಾತ್ರಗಳು ಅಪರೂಪಕ್ಕೆಂಬಂತೆ, ಮೊದಲ ಬಾರಿಗೆಂಬಂತೆ 'ತಮ್ಮದೇ' ಕತೆ-ವ್ಯಥೆಯನ್ನು, ದೃಷ್ಟಿಕೋನವನ್ನು, ವೈಫಲ್ಯ-ಸಾಫಲ್ಯಗಳನ್ನು ನಿರೂಪಿಸಿಕೊಂಡಿರುವುದು 'ಪಾಂಚಾಲಿ' ನಾಟಕದ ವೈಶಿಷ್ಟ್ಯವಾಗಿದೆ. ರಾಜಕಾರಣ,

ಪುರುಷ ಪ್ರಾಮಣ್ಯಗಳಿಗೆ ಸುಖಾ–ಸುಮ್ಮನೆ ಬಲಿಯಾಗಿ ನೋವುಂಡ ಈ ಸ್ತ್ರೀ ಪಾತ್ರಗಳ ಆಂತರ್ಯದ ನೋವು ಮನಮಿಡಿಸುತ್ತದೆ. ಗ್ರೀಕ್ ಮಾದರಿಯನ್ನು ಅನುಸರಿಸಿ ರೂಪಿತವಾಗಿರುವ ಈ ನಾಟಕ "ಮಹಿಳೆ ತನಗೊದಗಿದ ಆಪತ್ತಿನ ಅನಾವರಣಕ್ಕೆ ಕಾರಣ, ಮೂಲ, ಪರಿಣಾಮಗಳನ್ನು ಎದುರಿಸಿದ ಬಗೆಯನ್ನು" ಅಪೂರ್ವವಾಗಿ ಅಭಿವ್ಯಂಜಿಸಿದೆ.

ತಂದೆ, ಗಂಡ, ಮಗ, ಸಮಾಜದ ತಾಳಕ್ಕೆ ಸ್ಪಂದಿಸಬೇಕಾದ 'ಹೆಣ್ಣು' ತನ್ನ ಮನದಾಳವನ್ನು ಮನಕರಗುವಂತೆ ನಿವೇದಿಸುವ ಬಗೆ, ತನ್ನ ನೋವನ್ನು ಇನ್ನೊಬ್ಬಳೊಂದಿಗೆ ಹಂಚಿಕೊಳ್ಳುವ ರೀತಿ ಅನುಕಂಪ ಹುಟ್ಟಿಸುತ್ತವೆ. ಪಾಂಚಾಲಿಯ 'ಬಿರುನುಡಿಗೆ' ಅವಳು ಅನುಭವಿಸಿದ ನೋವು, ಅಪಮಾನ ಕಾರಣವಾಗಿವೆ. ಗಾಂಧಾರಿಯ ಮೋಹ ಅವಳ ಮಕ್ಕಳ 'ಉಡಾಳತನಕ್ಕೆ ಕಾರಣ' ಎಂಬ, ಅಸೂಯೆಯ ಬಸಿರಿನ ಪಾಪದ ಮೊಟ್ಟೆಗಳು ನಿನ್ನ ಮಕ್ಕಳು ಎಂದು ಗಾಂಧಾರಿಗೆ ನುಡಿವ, ಗಂಡ ಕುರುಡ, ನೀವೇಕೆ ಕಣ್ಣಿದ್ದೂ ಕುರುಡಿ ಎಂದು ಕೇಳುವ ದ್ರೌಪದಿಯ ಮಾತು ಅವಳ ರೂಕ್ಷ ವ್ಯಕ್ತಿತ್ವದ ಕಿರು ಪರಿಚಯ ನೀಡುವಲ್ಲಿ ಸಫಲವಾಗಿವೆ.

ಸರಳ ರಗಳೆಯ ಮುಂದುವರೆದ ರೂಪದಂತಿರುವ ಇಲ್ಲಿನ ಬಂಧ, ಶೈಲಿ, ಅದರ 'ಭಾಷೆ' ಸರಳವಾಗಿದೆ, ಪಾರದರ್ಶಕವಾಗಿದೆ. ದ್ರೌಪದಿಯ ದೀರ್ಘ ಮಾತು ಅವಳ ನೋವಿನ ಅಗಾಧತೆಗೆ ಸಾಕ್ಷಿಯಾಗಿವೆ. ಕುಂತಿಯ ಪುತ್ರವಾತ್ಸಲ್ಯ, ಗಾಂಧಾರಿಯ ಮೂಕನೆಲೆ, ಧರ್ಮಜನ ಕ್ರಿಯಾಹೀನತೆ, ವ್ಯವಸ್ಥೆಯ ಶೋಷಕ ಸ್ಥಿತಿಗಳು ಥಾಳಾಗಿ ನಿರೂಪಿತವಾಗಿವೆ. ಕೀಚಕವಧೆ ಅನಿವಾರ್ಯ. ಅಜ್ಞಾತವಾಸದ ಈ 'ಪರೀಕ್ಷೆ'ಯನ್ನು ದ್ರೌಪದಿ ಗೆಲ್ಲುವ ಬಗೆ ಸೊಗಸಾಗಿದೆ. ಅಳುವುದೇ ಹೆಣ್ಣಿನ ಗತಿ–ಸ್ಥಿತಿ, ಅವರ ದೌರ್ಬಲ್ಯವೇ ಅವರ ಸ್ಥಿತಿಗೆ ಕಾರಣ ಎಂಬುದನ್ನು ಗಾಂಧಾರಿ, ದ್ರೌಪದಿ, ಮೇಳ ಒಟ್ಟಾರೆಯಾಗಿ ಹೇಳುವುದೂ ಸಮಂಜಸವಾಗಿದೆ.

ಹತ್ತು ಪುಟ್ಟ ದೃಶ್ಯಗಳ ಬಂಧದಲ್ಲಿ ರಚಿತವಾಗಿರುವ ಈ ನಾಟಕ ತನ್ನೊಳಗಿನ ಸಂಘರ್ಷದಿಂದಲೇ ಕುತೂಹಲ ಹುಟ್ಟಿಸುವಂತಿದೆ. 'ಮೇಳ' ಇಡೀ ನಾಟಕದ ಹಿನ್ನೆಲೆ, ಮುನ್ನೆಲೆ, ವಾಸ್ತವವನ್ನು 'ಕಥಿಸುವುದು', ನಾಟಕದ ಓಟಕ್ಕೆ ಓಘವನ್ನು ನೀಡಿರುವ ಕತೆಯ ಚಲನೆ, ಗಾಂಧಾರಿಯ ಆತ್ಮ ನಿವೇದನೆ, ನೋವಿನ ಚಿತ್ರಣಗಳು ನಾಟಕಕ್ಕೆ ಗಂಭೀರ ಆವರಣ ಕಲ್ಪಿಸಿವೆ.

ನಾಟಕದ ಕೊನೆಯ ಮಾತು–'ನರಮೇಧದಲಿ ಭೂಮಿ ನವೆಯದಿರಲಿ'– ಕೇವಲ ಗಾಂಧಾರಿಯದಾಗಿರದೆ; ಓದುಗ, ನೋಡುಗರದ್ದೇ ಆಗಿದೆ.

**೨. ಮಿಲನ :** ಭಾಸನ ಸಣ್ಣ ನಾಟಕವೊಂದರ ವಿಸ್ತೃತ ರೂಪವಿದು. ನಾಟಕಕಾರ್ತಿಯ ಸೃಜನಶೀಲತೆ ಈ ಕೃತಿಯನ್ನು ಭಾಷಾಂತರ, ರೂಪಾಂತರಗಳಿಂದ ಭಿನ್ನವಾಗಿಸಿದೆ.

ಅದಕ್ಕೆ ಕಾರಣ ನಾಟಕಕಾರ್ತಿಯ ಕಲ್ಪನೆ ಮತ್ತು ರಾಜನಿಕ ಪ್ರತಿಭೆ. ಸೊಗಸಾದ ಪ್ರೇಮಕತೆ ಇಲ್ಲಿದೆ. ಕುರಂಗಿ ಮುಖ್ಯ ಪಾತ್ರವಾದರೂ ಅವಳ ಸಖಿಯರ, ಅವಳ ಪ್ರಿಯಕರನ ಪಾತ್ರವೂ ಸಮಾನ ಪೋಷಣೆಗೊಂಡಿವೆ. ರಮ್ಯವರ್ಣನೆ, ಪ್ರೇಮ ಸಾಫಲ್ಯ, ಲಘುಹಾಸ್ಯ, ವಿರಹ, ರಾಜಕಾರಣ ಎಲ್ಲವೂ ನಾಟಕದ ಕ್ರಿಯೆಗೆ ಪೂರಕವಾಗಿವೆ. ಇಲ್ಲಿ ಬಳಕೆಯಾಗಿರುವ ಭಾಷೆ ಅಲ್ಲಲ್ಲಿ ರೂಕ್ಷ, ಕೆಲವೆಡೆ ದೀರ್ಘ ಎನಿಸಿದರೂ ಒಟ್ಟಾರೆ ಸರಳತೆ ಹಾಗೂ ನಿರರ್ಗಳತೆಯಿಂದ ಕೂಡಿದೆ. ವಿದೂಷಕನ ಪಾತ್ರ ನಗೆಯುಕ್ಕಿಸುವಷ್ಟು ಸಪುಷ್ಟವಾಗಿದೆ. ಅವಿಮಾರಕನ ಬಯಕೆ, ಅದಕ್ಕೆ ಸಹಕರಿಸುವ ಗಂಧರ್ವ, ಕುರಂಗಿಯ ಶೃಂಗಾರ ಪ್ರಲಾಪ, ಸಖಿಯರ ಛೇಡಿಕೆ, ಎಲ್ಲವೂ ಏಕ ಸೂತ್ರದಲ್ಲಿ ನಿರೂಪಿತವಾಗಿವೆ. ಅಲ್ಲಲ್ಲಿ ಕನ್ನಡ ಜಾಯಮಾನಕ್ಕೆ ಹೊರತಾದ ಶಬ್ದ, ವಾಕ್ಯ ಪ್ರಯೋಗಗಳು ಕಾಣಿಸಿಕೊಂಡರೂ 'ಕತೆ'ಯ ಓಟದಲ್ಲಿ ಅವು ಮರೆಯಾಗುತ್ತವೆ. ಸರಸ, ಪ್ರೇಮ, ಸಂಬಂಧಗಳನ್ನು ಬೆಸೆಯುವ ಈ ಶೃಂಗಾರಭರಿತ ನಾಟಕ ಭಾವಶೋಧಕ್ಕೆ ಪೂರಕವಾಗಿದೆ. ಅಂತಿಮವಾಗಿ ಒಂದುಗೂಡುವ ಪ್ರೇಮಿಗಳು ಓದುಗ-ನೋಡುಗರ ರಸಾನಂದಕ್ಕೆ ಕಾರಣರಾಗುತ್ತಾರೆ.

೩. **ಪ್ರೇಮ ಸಮಾಧಿ** : ಇದು ಒಂದು ಬಗೆಯ ದುರಂತ ನಾಟಕ. ವಿದೇಶೀ ದುರಂತ ಪ್ರೇಮ ಕತೆ ಇದರ ಮೂಲ. ಈ ಪ್ರೇಮಕತೆಗೆ ನಾಟಕಕಾರ್ತಿ ಜೋಡಿಸಿರುವ ಆಯಾಮ ಅಪೂರ್ವವಾಗಿದೆ. ಭಾಗವತ, ನಟಿಯರು ನಾಟಕದ ಆರಂಭ, ಬೆಳವಣಿಗೆ, ಅಂತ್ಯದ ಸಮರ್ಪಕ ನಿರ್ವಹಣೆಗೆ ನೆರವಾಗುವಂತೆ ಮಾಡಿಕೊಂಡಿರುವ ಏರ್ಪಾಟು ಸೊಗಸಾಗಿದೆ. ದೇವಸೇನನ ವಿಫಲ ಪ್ರೇಮ, ಕಾತ್ಯಾಯನಿಯ ಅವಿವೇಕ, ಇಂದುಮತಿಯ ತಾಳ್ಮೆ, ಸಹಕಾರಗಳು ಸ್ಪಷ್ಟವಾಗಿ ನಿರೂಪಿತವಾಗಿವೆ. ವೈಯಕ್ತಿಕ ಸಂಬಂಧಗಳು ಸಾಮಾಜಿಕ ಗೊಂದಲಕ್ಕೆ ಕಾರಣವಾಗುವ, ರಾಜಕಾರಣ ವೈಯಕ್ತಿಕ ಆಶೋತ್ತರಗಳನ್ನು ಕಡೆಗಣಿಸುವ ಪರಿ ಗಮನಾರ್ಹ. ತಂದೆ-ಮಗ, ಗಂಡ-ಹೆಂಡತಿ, ಪ್ರಿಯ-ಪ್ರಿಯತಮೆಯರ ಸಂಭಾಷಣೆ ಕುತೂಹಕರವೂ, ಮರ್ಮಭೇದಕವೂ ಆಗಿವೆ. ಹದಿನೇಳು ದೃಶ್ಯಗಳಲ್ಲಿ ರೂಪುಗೊಂಡಿರುವ ಈ ನಾಟಕ ಅಂತಿಮವಾಗಿ ದೇವಸೇನನ ವಿಕ್ಷಿಪ್ತ ನಿರ್ಧಾರದಿಂದ ನೋಡುಗ-ಓದುಗರಿಗೆ ಆಘಾತ ಉಂಟುಮಾಡುವಲ್ಲಿ, ಆ ಮೂಲಕ ಯಾರದೋ ನಿರ್ಧಾರದಿಂದ ಇನ್ಯಾರಿಗೋ ಉಂಟಾಗುವ ಅನ್ಯಾಯವನ್ನು ಪರಿಣಾಮಕಾರಿಯಾಗಿ ಸಂವೇದಿಸುತ್ತದೆ.

ಭಾಗವತ ಹೇಳುವಂತೆ 'ಇಂತಹ ಸಂಗತಿಗಳು ಅಪರೂಪ' ಎಂಬುದನ್ನು ನಾಟಕ ನಿಜವಾಗಿಸುತ್ತದೆ, ನಿರೂಪಿಸುತ್ತದೆ. 'ಹಿಂದಿಲ್ಲದ, ಮುಂದಿಲ್ಲದ, ಎಂದಿಲ್ಲದ' ನಿತ್ಯದ ಕತೆಯನ್ನು ನಾಟಕಕಾರ್ತಿ ಕೃತಿರೂಪದಲ್ಲಿ ಕಟ್ಟಿಕೊಟ್ಟಿರುವುದು ಮತ್ತು ಅದರ ರಂಗ ಸಾಧ್ಯತೆಗಳ ಬಗ್ಗೆ ಕುತೂಹಲ ವ್ಯಕ್ತಪಡಿಸಿರುವುದು ಸಕಾರಣವಾಗಿದೆ.

**೪. ದಂಗೆ ಎದ್ದವಳು:** ಹದಿನಾಲ್ಕು ದೃಶ್ಯಗಳ ಸದೃಢ ನಾಟಕವಿದು. ಗೌಡನ ಮಗಳು 'ಮಾದೇವಿ' ಬಂಡಾಯ ಸಾಹಿತ್ಯದ ನಾಯಕಿಯರನ್ನು ನೆನಪಿಸುವಷ್ಟು ಪ್ರಬಲವಾಗಿ ರೂಪಿತವಾಗಿದ್ದಾಳೆ. 'ಮಾದೇವಿ'ಯ ಆಲೋಚನಾ ಶಕ್ತಿ, ನಿಧಾನಕ್ಕೆ ಅರಿವಿಗೆ ತೆರೆದುಕೊಳ್ಳುವ 'ಜನ', ನಿರಂತರ 'ಬಲಿ'ಗೆ ಕಾದಿರುವ ಸಮಾಜ/ವ್ಯವಸ್ಥೆ ಇವು ಮುಪ್ಪುರಿಗೊಂಡ 'ಕ್ರಿಯೆ' ನಾಟಕದ ಕತೆಯಲ್ಲಿವೆ. ಕ್ರಾಂತಿಕಾರಿ ಆಲೋಚನೆಯ ಪ್ರತೀಕವಾಗಿದ್ದಾಳೆ ಇಲ್ಲಿನ ಮಾದೇವಿ ವ್ಯವಸ್ಥೆ ಬದಲಾಗಬೇಕಾದರೆ ಹಿಂಸೆ, ಕ್ರಾಂತಿ ಅಗತ್ಯ, ಸಹಜ ಎಂಬ ಇಲ್ಲಿನ ನಿಲುವು ಇಲ್ಲಿನ 'ಒಂದು ಕಾಲಘಟ್ಟಕ್ಕೆ' ಬದ್ಧವೆನಿಸುತ್ತದೆ. ಸಾಂಪ್ರದಾಯಿಕ ಪರಿಕರಗಳು ನಾಟಕದ ವೇಗಕ್ಕೆ ನೆರವಾಗಿವೆ. ಕತೆಯ ಆಶಯ ಸಾಮಾಜಿಕ, ಜಾನಪದೀಯ; ಅದರ ಪ್ರಭಾವ ಸಾರ್ವತ್ರಿಕ.

'ಹಾಗಾದರೆ ದೇವರೇಕೆ ಬಲಿಯ ಹೆಸರಿನಲ್ಲಿ ನಮ್ಮನ್ನು ಕೊಲ್ಲಿಸುತ್ತಾನೆ' ಎಂಬ ಮಾದೇವಿಯ ಪ್ರಶ್ನೆ ಧ್ವನಿಯುಕ್ತ. ಏಕವ್ಯಕ್ತಿಯ 'ದಂಗೆ' ಬಹುವ್ಯಕ್ತಿಗಳನ್ನು ಒಳಗೊಳ್ಳುವುದು ನಾಟಕಕಾರ್ತಿಯ ಧನಾತ್ಮಕ ಆಲೋಚನೆಯನ್ನು ಸೂಚಿಸುತ್ತದೆ. ಮೌಖಿಕ ಇತಿಹಾಸದ ನಿದರ್ಶನದಂತೆ 'ಜನನಾಯಕಿ' ಮಾದೇವಿ ನಾಟಕದ ಕೊನೆಗೆ 'ದೇವಿ' ಆಗುವುದು ಪರಂಪರೆಯನ್ನು ಬಿಂಬಿಸುವ ಚಿಂತನೆಯಾಗಿದೆ. ಒಟ್ಟಾರೆ ಮಹಿಳೆ ಎದುರಿಸಬೇಕಾದ, ಬಹುದಾದ ಒಂದೊಂದು ಸಮಸ್ಯೆಗಳನ್ನು ನಾಟಕಕಾರ್ತಿ ಒಂದೊಂದು ನಾಟಕದಲ್ಲಿ ನಿರ್ವಚಿಸಿರುವುದು ಕುತೂಹಲ ಮೂಡಿಸುತ್ತದೆ.

**೫. ಪಾದ್ರಿಯೊಬ್ಬನ ಕತೆ :** ಇದು ಪ್ರಸಿದ್ಧ ಇಟಾಲಿಯನ್ ಕಾದಂಬರಿಯೊಂದರ ನಾಟಕ ರೂಪ. ಪ್ರೇಮದ ವೈಚಿತ್ರ್ಯಗಳು ನಿಜಕ್ಕೂ ಕುತೂಹಲಕರ. ಧರ್ಮದ ಜೊತೆ ಅದರ ಸಂಘರ್ಷವಂತೂ ಆಸಕ್ತಿದಾಯಕ. ಮಾಸ್ತಿ ಇದನ್ನು 'ವಿಚಿತ್ರ ಪ್ರೇಮ' ಎಂಬ ಕತೆಯಲ್ಲಿ ಅದ್ಭುತವಾಗಿ ನಿರೂಪಿಸಿದ್ದಾರೆ. ಲಂಕೇಶ್ ತಮ್ಮ ಕತೆ, ನಾಟಕಗಳಲ್ಲಿ ಅಭಿವ್ಯಂಜಿಸಿದ್ದಾರೆ. ಗ್ರೀಕ್ ನಾಟಕಗಳೂ ಇದನ್ನು ಆತ್ಯಂತಿಕವಾಗಿ ನಿರ್ವಚಿಸುತ್ತವೆ. ಇಂತ ವಸ್ತುವಿನ ಆಯ್ಕೆಯೇ ಧೈರ್ಯದ ಸಂಗತಿ. 'ನಾಟಕ'ದಂತ ಪ್ರಕಾರ ಇದಕ್ಕೆ ಹೇಳಿಮಾಡಿಸಿದ್ದು. ಡಾ. ವಿಜಯಾ ನಿಜಕ್ಕೂ ಅದನ್ನು ಅಪರೂಪಕ್ಕೆಂಬಂತೆ, ಅಪೂರ್ವವೆಂಬಂತೆ ನಾಟಕವಾಗಿಸಿದ್ದಾರೆ.

ತಾಯಿಯ ಸಂದಿಗ್ಧ, ಏಗ್ನಿಸ್‌ಳ ಮುಗ್ಧ (?) ಪ್ರೇಮ, ಪಾಲ್‌ನ ಇಬ್ಬಂದಿತನ, ಆ್ಯಂಟಿಯ ವ್ಯಕ್ತಿತ್ವಗಳು ನಾಟಕದಲ್ಲಿ ಅಭೂತಪೂರ್ವವಾಗಿ ರೂಪು ತಳೆದಿವೆ. ಮೇಳವೂ ಸಮರ್ಪಕವಾಗಿ ಬಳಕೆಯಾಗಿದೆ. ಇಲ್ಲಿನ ಸುದೀರ್ಘ ಮಾತುಗಳು– ನಿವೇದನೆಗಳಾಗಿ, ಸಂಭಾಷಣೆಗಳಾಗಿ, ವಿವರಗಳಾಗಿ– ಧ್ವನಿಪೂರ್ಣವಾಗಿವೆ. ಪಾಲ್ ನಿಜಕ್ಕೂ ಅನುಕಂಪೆಗೆ ಪಾತ್ರನಾಗಿದ್ದಾನೆ. ತಾಯಿಯ ಪಾತ್ರ ಪರಿಪೂರ್ಣವಾಗಿ ಚಿತ್ರಣಗೊಂಡಿದೆ. ಏಗ್ನಿಸ್‌ಳದು ಲೆಕ್ಕಾಚಾರವೆ? ಪ್ರತಿಭಟನೆಯೆ? ಶರಣಾಗತಿಯೆ? ಎಂಬ ಪ್ರಶ್ನೆ ಹುಟ್ಟಿದರೂ, ಅವೆಲ್ಲವನ್ನೂ

ಒಳಗೊಂಡು, ಅದನ್ನು ಮೀರಿದ ಪಾತ್ರವಾಗಿದೆ. "ಧರ್ಮವೇಕೆ ವ್ಯಕ್ತಿಯನ್ನು ನಿರ್ಬಂಧಿಸುತ್ತದೆ' ಎಂಬ ಪ್ರಶ್ನೆ ಓದುಗ-ನೋಡುಗರನ್ನು ಆಳವಾಗಿ ಕಾಡುತ್ತದೆ. ಸೈತಾನನ ಕಲ್ಪನೆ ಕುತೂಹಲಕರವಾಗಿದೆ. ನಾಟಕ ಎಷ್ಟು ತೀವ್ರವಾಗಿದೆ ಎಂದರೆ, ಈ ಕ್ಷಣವೇ ಮೂಲ ಕೃತಿಗೆ ಹಾತೊರೆಯುವಂತೆ ಪ್ರೇರೇಪಿಸುತ್ತದೆ. ಪಾಲ್‌ನ ಒಂದು ವ್ಯಕ್ತಿತ್ವಕ್ಕೆ ಹಿಡಿದ ದರ್ಪಣದಂತೆ 'ಆ್ಯಂಟಿ'ಯ ಪಾತ್ರ ಫಲಿತವಾಗಿದೆ. "ದೇವರೆ ದೇವರೆ ಎಂತ ಪರೀಕ್ಷೆ ಇದು? ನನ್ನ ಮಗ ಏನು ತಾನೇ ಅಪರಾಧ ಮಾಡಿದ್ದಾನೆ? ಸಹಜ ಮನುಷ್ಯನಂತೆ ಒಂದು ಹೆಣ್ಣನ್ನು ಪ್ರೀತಿಸಿದ. ಪ್ರೀತಿ ಪ್ರೇಮಗಳು ಮನುಷ್ಯನ ಸಹಜ ಕ್ರಿಯೆಗಳು; ಸಹಜ ಪ್ರವೃತ್ತಿಗಳು" ಎಂಬ ತಾಯಿಯ ಮಾತು ಲೋಕಾನುಭವದ ಫಲಗಳು. ಮಗನ ಮೇಲಿನ ಅವಳ ಪ್ರೀತಿ, ಮರುಕ, ತಲ್ಲಣ, ದುರಂತ ಮನತಟ್ಟುವಂತಿವೆ. ಮೇಳವೂ ನಮ್ಮ ತುಡಿತಕ್ಕೆ ಜೊತೆಯಾಗಿದೆ. ಏಗ್ನಿಸ್‌ಳ ನಿರ್ಧಾರ ಪಾಲ್‌ನನ್ನು ಅಧೀರನನ್ನಾಗಿಸದಿದ್ದರೂ, ತಾಯಿಗೆ ಆಘಾತ ತರುತ್ತದೆ. ಧರ್ಮದ ಉದ್ದೇಶವಾದರೂ ಏನು ಎಂಬ ಪ್ರಶ್ನೆ ಅಂತಿಮವಾಗಿ ಉಳಿಯುತ್ತದೆ.

ಉಳಿದ ನಾಟಕಗಳಿಗೆ ಹೋಲಿಸಿದಲ್ಲಿ ಡಾ. ವಿಜಯಾ ಈ ನಾಟಕದಲ್ಲಿ ತಮ್ಮ ಪ್ರತಿಭೆಯೆಲ್ಲವನ್ನು ಧಾರೆ ಎರೆದಿದ್ದಾರೆ ಅನಿಸುತ್ತದೆ. ಇಲ್ಲಿನ ಪಾತ್ರಗಳು ಸಪುಷ್ಟವಾಗಿವೆ. ಸಂಭಾಷಣೆ ಹದಗೊಂಡಿವೆ. ಘರ್ಷಣೆ ವಸ್ತುವಿನಲ್ಲೇ ಇದೆ; ಆದರೂ ಅದು ಕ್ರಿಯೆಯಾಗಿ ಫಲಿಸಿರುವುದರಿಂದ ನಾಟಕ ರಾಚನಿಕವಾಗಿ ಸಫಲವಾಗಿದೆ; ಪರಿಣಾಮಕಾರಿಯಾಗಿದೆ. ರಂಗದ ಮೇಲಂತೂ ಅದ್ಭುತ ಪ್ರದರ್ಶನದ ಸಾಧ್ಯತೆ ಒಳಗೊಂಡಿದೆ. ವ್ಯಕ್ತಿ ಅಸಹಾಯಕತೆ, ಸಮಾಜ, ಸಂಬಂಧಗಳು, ಧರ್ಮ, ಪ್ರೇಮ, ಕಾಮಗಳು ಎರಕಹೊಯ್ದಂತೆ ಅಚ್ಚಾಗಿರುವುದೇ ನಾಟಕದ ಪರಿಣಾಮಕ್ಕೆ ಕಾರಣವಾಗಿದೆ. ಭಾಷೆ-ಬಂಧ-ಪರಿಣಾಮದಲ್ಲಿ ಇದು ಮಹೋನ್ನತ ನಾಟಕದ ಎಲ್ಲ ಲಕ್ಷಣಗಳನ್ನು ಒಳಗೊಳ್ಳುವತ್ತ ಸಾಗಿದೆ.

೬. **ನಗರವಧು ಸಾಲವತಿ** : ಹಿಂದಿಯ ಸಣ್ಣಕತೆಯೊಂದನ್ನು ಆಧರಿಸಿ ರೂಪು ತಳೆದ ನಾಟಕವಿದು. ಇಲ್ಲಿನ ಸಾಲವತಿ ಆಧುನಿಕತೆಯನ್ನು ವ್ಯಂಜಿಸುವಷ್ಟು ದಟ್ಟವಾದ ಪಾತ್ರವಾಗಿ ರೂಪಿತವಾಗಿದ್ದಾಳೆ. ಅನಾಮಿಕ ಸಾಲವತಿ ನಗರವಧುವಾದರೂ ಅವಳು ಅಂತಿಮವಾಗಿ ಬಯಸುವುದು 'ಸ್ತ್ರೀ ವ್ಯಕ್ತಿತ್ವದ ಸ್ವಾತಂತ್ರ್ಯ ಮತ್ತು ಸಮಾಜದ ಕಟ್ಟಳೆಗಳ ಜಿಡುಗಡೆಯನ್ನು'. ಸ್ತ್ರೀವಾದದ ಆಶಯಗಳು ಕೃತಿರೂಪದಲ್ಲಿ ಗಮನಾರ್ಹವಾಗಿ ಪ್ರಕಟವಾಗಿರುವುದು ವಿಜಯಾ ಅವರ ನಾಟಕಗಳಲ್ಲಿ ಎನ್ನುವುದು ಮುಖ್ಯ ಸಂಗತಿ. ತತ್ವ, ಚಿಂತನೆಗಳಿಗೆ 'ಸಾಹಿತ್ಯಿಕ ರೂಪ' ನೀಡಿರುವ ನಾಟಕಕಾರ್ತಿಯ ಪ್ರಯತ್ನ ಮೆಚ್ಚತಕ್ಕದ್ದು. ರೂಪದ ವಾಣಿಜ್ಯೀಕರಣ, ಹೆಣ್ಣಿಗೆ ಬೆಲೆ ಕಟ್ಟುವುದು, ಅಂತಿಮವಾಗಿ ಪುರುಷ ಲಾಲಸೆಗೆ ಹೆಣ್ಣು 'ಬಲಿ'ಯಾಗುವುದನ್ನು ಅಭಿವ್ಯಂಜಿಸುವ ಈ ನಾಟಕ 'ದೂರದೃಷ್ಟಿ' ಮತ್ತು ಸಮಕಾಲೀನತೆಗಳನ್ನು ಒಳಗೊಂಡು 'ಸಾರ್ವಕಾಲಿಕ' ಚಿಂತನೆಯೆಡೆಗೆ

ಸಾಗಿರುವುದು ಸ್ವಾಗತಾರ್ಹ. ಸಂಭ್ರಮ, ಉಲ್ಲಾಸ, ಪ್ರೇಮ, ನಿಸರ್ಗ ಇವುಗಳ ವರ್ಣನೆ ನಾಟಕಕಾರ್ತಿಗೆ ಬಹು ಪ್ರಿಯವಾದದ್ದು. ಇದು ಅವರ ಧನಾತ್ಮಕ ಮನೋಭಾವದ ನಿದರ್ಶನವೂ ಹೌದು. ಅವಕಾಶ ಸಿಕ್ಕಲ್ಲಿ ನಾಟಕಕಾರ್ತಿ ಜಾತಿ, ಕುಲ, ಅಂತಸ್ತುಗಳ ವಿಶ್ಲೇಷಣೆ ಮಾಡಿರುವುದೂ ಉಂಟು. ಸಮಾನತೆ ಬಯಸುವುದು, ಕನಸುವುದು ವಿವೇಕದ ಲಕ್ಷಣ. ಇಂತ ಅಪರೂಪದ ಆಲೋಚನೆ ನಾಟಕಕಾರ್ತಿಯನ್ನು, ಅವರ ಅಭಿವ್ಯಕ್ತಿಯನ್ನು ಪ್ರಸ್ತುತಗೊಳಿಸಿವೆ. ಅನಾಮಿಕಳಾಗಿದ್ದಾಗಿನ ಸಾಲವತಿಯ ವ್ಯಕ್ತಿತ್ವ, ವರ್ತನೆಗಳು ಮುಂದೆ ನಗರವಧುವಾದ ಸಾಲವತಿಯ ವ್ಯಕ್ತಿತ್ವ ಸ್ಫುಟವಾಗಿ ರಚಿತವಾಗಿವೆ. ದೀರ್ಘ ಮಾತುಗಳು ಅಲ್ಲಲ್ಲಿ ರಸಭಂಗಕ್ಕೆ ಕಾರಣವಾದರೂ ನಾಟಕದ ಓಟಕ್ಕೆ ಪೂರಕವಾಗಿವೆ. ನಾಯಕಿಯ ಸಖಿಯರ ಪಾತ್ರಗಳೂ ಸಮರ್ಪಕವಾಗಿ ಪೋಷಿತವಾಗಿವೆ. ಅರಸುತನ, ರಾಜಕಾರಣ, ವ್ಯಾಪಾರ, ಪ್ರತಿಷ್ಠೆಗಳು ನಿರ್ವಚನಕ್ಕೆ ಈಡಾಗಿವೆ. 'ಸೂಳೆ'ಯ ಬಗೆಗಿನ ಸಾಮಾಜಿಕ ದೃಷ್ಟಿಕೋನ ಗಮನಾರ್ಹವಾಗಿ ವ್ಯಂಜಿತವಾಗಿದೆ. 'ಬದಲಾವಣೆ' ಸಾಧ್ಯವೆ? ಎಂಬ ಸಾಲವತಿಯ ಪ್ರಶ್ನೆ ಅಂತಿಮವಾಗಿ ನಾಟಕದಲ್ಲಿ ಸಾಧ್ಯವಾಗುತ್ತದೆ. ಇದು ಸಾಹಿತ್ಯಿಕ ಅಪೇಕ್ಷೆ, ಸಾಮಾಜಿಕ ಅಪೇಕ್ಷೆ. 'ವೇಶ್ಯೆ ಸ್ವತಂತ್ರನಾರಿ' ಎನ್ನುತ್ತಲೇ ಹೆಣ್ಣನ್ನು ಸೂಳೆಯಾಗಿಸುವ ಧರ್ಮ, ಸಮಾಜಗಳ ಕುರುಡಿಗೆ ನಾಟಕ ಕನ್ನಡಿ ಹಿಡಿದಿದೆ. ಸಾಲವತಿಯ ಗೆಲುವು ಸಮಾಜದ ಗೆಲುವಾಗಬಾರದೆ? ಎಂಬ ಅನಿಸಿಕೆ ನೋಡುಗ–ಓದುಗನಲ್ಲಿ ಮೂಡುವಷ್ಟು ಪರಿಣಾಮಕಾರಿಯಾಗಿದೆ ನಾಟಕ.

೭. **ಮತ್ತೊಂದು ಮಹಾಭಾರತ** : ರಾಜಕಾರಣದ ಒಳಸುಳಿ, ಅಧಿಕಾರದ ಲಾಲಸೆ, ಅನಗತ್ಯ ವ್ಯಕ್ತಿ ಪ್ರತಿಷ್ಠೆ, ಅಹಂಗಳ ಸಂಘರ್ಷವನ್ನು ಈ ನಾಟಕ ವ್ಯಂಜಿಸಿದೆ. 'ಸ್ವಂತ'ಕ್ಕೆ ಏನೂ ಆಗದಿದ್ದರೂ 'ನನ್ನದು' ನಡೆಯಬೇಕೆಂಬ ಹುಚ್ಚು ತಲೆಗೆ ಏರಿದರೆ ಪರಿಣಾಮ ಏನಾಗಬಹುದು ಎಂಬುದನ್ನೇ ಇಲ್ಲಿನ 'ನಾಯಕಿ' ಸಾಕ್ಷೀಕರಿಸುತ್ತಾಳೆ. ಅರಸನ ದೌರ್ಬಲ್ಯ, ಸಂಬಂಧಿಗಳ ಅವಕಾಶವಾದಿತನ, ರಾಜನಿಷ್ಠೆ ಮತ್ತು ಕಾಮ ಸಂಬಂಧಗಳು ಉಂಟುಮಾಡಬಹುದಾದ 'ಪರಿಸ್ಥಿತಿ'ಯ ಅನಾವರಣ ಈ ನಾಟಕದ ವಿಶೇಷ. 'ನಾಗಮಣಿ'ಯ ಪಾತ್ರ ಅಪರೂಪದ್ದು. ತ.ರಾ.ಸು ಕಾದಂಬರಿಗಳ ನಾಗ್ತಿಯರ 'ಚಾಣಾಕ್ಷತೆ'ಯನ್ನು, ಗ್ರೀಕ್ ನಾಟಕ ಮೀಡಿಯಾದ 'ನಾಯಕಿ'ಯನ್ನು ನೆನಪಿಸುವಷ್ಟು ಪ್ರಭಾವಕಾರಿಯಾಗಿ ಇವಳು ರೂಪುಗೊಂಡಿದ್ದಾಳೆ. ತಂತ್ರ, ರಹಸ್ಯ, ರಾಜಕಾರಣ, ಪಂದ್ಯ, ದ್ವೇಷದಲ್ಲಿ ಹೆಣ್ಣು ಗಂಡಿಗೇನೂ ಕಡಿಮೆಯಿಲ್ಲ ಎಂಬಷ್ಟು ಚತುರ ಪಾತ್ರ ನಾಗಮಣಿಯದು. ವ್ಯಕ್ತಿಗತ ಅಹಂಗಳು ನಾಟಕದ 'ಸಂಘರ್ಷ'ಕ್ಕೆ ಕಾರಣವಾಗಿವೆ. ಮೂಲ ಕಾವ್ಯದ 'ವಸ್ತು', ಮಹಾಭಾರತದ ರಾಜಕಾರಣದ 'ಏಕ ಆಯಾಮ' ನಾಟಕದಲ್ಲಿ ಫಲಿಸಿವೆ. ಇಲ್ಲಿನ ರಾಜಕೀಯ ಚಿತ್ರಣ ಸ್ವಾತಂತ್ರ್ಯೋತ್ತರ ರಾಜಕಾರಣವನ್ನು ಧ್ವನಿಸುವಷ್ಟು ಪರಿಣಾಮಕಾರಿಯಾಗಿ ಮೂಡಿಬಂದಿದೆ.

'ರಂಗಸಾಧ್ಯತೆ' ನಾಟಕಕಾರ್ತಿಯನ್ನು ಕಾಡುವುದರ ಮೂಲಕ 'ರಂಗದ ಮೇಲಿನ' ಕ್ರಿಯೆಗಳು ಸಂಭಾಷಣೆಯಲ್ಲಿ ಬಿಂಬಿತವಾಗಿವೆ. ಹಿಂಸೆ, ಕೊಲೆ, ಬಲಿಗಳನ್ನು ಕ್ರಿಯೆ ರೂಪದಲ್ಲಿ ತರದ ನಾಟಕಕಾರ್ತಿಯ ವಿವೇಕವೂ ಅದಕ್ಕೆ ನೀರೆರೆದಿದೆ. ಮನುಷ್ಯ ಪ್ರಕೃತಿ ಸಹಜ ಸ್ವಭಾವಗಳಾದ ಅಸೂಯೆ, ಸೊಕ್ಕು, ದಾಹ, ದ್ವೇಷ, ಸಣ್ಣತನ, ಅಪನಂಬಿಕೆ ಮತ್ತು ಸ್ವಾಮಿತ್ವ ಸ್ಥಾಪನೆಯ ಆಕಾಂಕ್ಷೆಗಳನ್ನು ನಾಟಕ ವಿವರವಾಗಿಯೇ ಒಳಗೊಂಡಿದೆ. ನಾಗಮಣಿ, ಬ್ರಹ್ಮಣ್ಣನ ಪಾತ್ರಗಳು ಯಥಾರ್ಥ ಪೋಷಣೆಗೊಂಡಿವೆ. ನಲಗಾಮನಂತ ದುರ್ಬಲ ಅರಸರು ಭಾರತದಲ್ಲಿ ಜನಜನಿತ. ನಾಯಕಿ ಏಕಾಂತ ನಿವೇದನೆಯಲ್ಲಿ, ಸ್ವಗತದಲ್ಲಿ 'ವಿವೇಕಿ'ಯಂತೆ ಕಂಡರೂ 'ಸ್ಪರ್ಧೆ' ಏರ್ಪಟ್ಟೊಡನೆ ಕಾಳಸರ್ಪದಂತೆ ಭುಸುಗುಟ್ಟುವುದು 'ರೋಚಕ'ವಾಗಿ ನಿರೂಪಿತವಾಗಿದೆ. ಭಾಷೆ ಸರಳ, ಗ್ರಾಂಥಿಕ. ಆಡುನುಡಿಯ ಬಳಕೆ ಇಂತಲ್ಲಿ ಹೆಚ್ಚು ಅಪೇಕ್ಷಣೀಯ. 'ಪರಾಮರ್ಶಿಸಿಯೇ ಪರಾಮರ್ಶಿಸುತ್ತಾರೆ' ಎಂಬಂತ ದ್ವಿರುಕ್ತಿಗಳು ರಂಗದಲ್ಲಿ ಅಸಹಜ ಎನಿಸುತ್ತವೆ. ಉಳ್ಳವರು ಜಿದ್ದಿಗೆ ಬಿದ್ದು ಒದ್ದಾಡುತ್ತಿದ್ದಾಗ, ಸಖಿ ಮಾಲತಿ ಹೇಳುವ 'ನಮಗೆ ಗೊತ್ತಿರುವುದು ಮನುಷ್ಯ ಸಂಬಂಧಗಳು ಅಷ್ಟೆ' ಎಂಬ ಮಾತು ಸಮರ್ಪಕ ಎನಿಸುತ್ತದೆ. 'ನಾಗಮಣಿಯಂತವಳನ್ನು ಜನ್ಮ ಜನ್ಮಾಂತರದಲ್ಲಿಯೂ ನೋಡಲು ಸಾಧ್ಯವಿಲ್ಲ ಎಂಬುದನ್ನು ಮನಗಾಣಿಸುತ್ತೇನೆ' ಎಂಬ ನಾಯಕಿಯ ಮಾತು ನಾಟಕದ ಕೊನೆಯಲ್ಲಿ ನಿಜವಾಗಿದೆ. ನಾಟಕದಲ್ಲಿ ಬರುವ ಊರಿನ ಹೆಸರನ್ನು, ಪಾತ್ರದ ಹೆಸರನ್ನು (ಪೇರಮ್ಮ) ಕನ್ನಡದಲ್ಲಿ ನೀಡಿದ್ದರೆ ಚೆನ್ನಾಗಿರುತ್ತಿತ್ತು. ಮಾತಿನ ರೂಕ್ಷತೆ, ವಾಚ್ಯತೆ ಮರೆಯಾಗಿದ್ದಿದ್ದಲ್ಲಿ ಸಂಭಾಷಣೆ ಇನ್ನಷ್ಟು ಪರಿಣಾಮಕಾರಿಯಾಗಿರುತ್ತಿತ್ತು.

ಸಾಹಿತ್ಯ ಕೃತಿಯೊಂದು ರಂಗಕೃತಿಯ ಸಾಧ್ಯತೆ ಪಡೆಯುವುದು ಪ್ರದರ್ಶನಗೊಂಡಾಗಲೇ ಓದಿಸಿಕೊಳ್ಳುವ ಕೃತಿ ನೋಡಿಸಿಕೊಳ್ಳದಿರಬಹುದು; ಓದಿಸಿಕೊಳ್ಳದ ಕೃತಿ ಅದ್ಭುತವಾಗಿ ನೋಡಿಸಿಕೊಳ್ಳಬಹುದು. ಓದುವಾಗ ಕಾಣುವ ಅರೆಕೊರೆ ನೋಡುವಾಗ ಇಲ್ಲವಾಗಬಹುದು. ಅದೇನೇ ಇದ್ದರೂ ಬಿರುಸಾದ ಸಂಭಾಷಣೆ, ವೇಗದ ನಡೆ, ಪುಷ್ಟ ಪಾತ್ರಗಳಿಂದ ಈ ನಾಟಕ ಓದಿಸಿಕೊಳ್ಳುತ್ತದೆ. ಸಮರ್ಪಕ ನಿರ್ದೇಶಕನೊಬ್ಬ ಅಲ್ಪ ಸ್ವಲ್ಪ ಬದಲಾವಣೆಯೊಂದಿಗೆ ಇದನ್ನು ಉತ್ತಮವಾಗಿ ಪ್ರದರ್ಶಿಸುವ ಸಾಧ್ಯತೆ ಇದೆ. 'ವಸ್ತು'ವಿನಲ್ಲಿರುವ ಕ್ರಿಯೆ ಮತ್ತು ಸಂಘರ್ಷ ಅದನ್ನು ಪುಷ್ಟೀಕರಿಸುತ್ತವೆ.

ಒಟ್ಟಾರೆ, ತಮ್ಮ ಈ ನಾಟಕಗಳಿಂದ ಡಾ. ವಿಜಯಾ ಕನ್ನಡದ ಅಪರೂಪದ ನಾಟಕಕಾರ್ತಿ ಎನಿಸುತ್ತಾರೆ. ನವೋದಯ ಪೂರ್ವದ ತಿರುಮಲಾಂಬಾ, ಕಲ್ಯಾಣಮ್ಮ, ಗಿರಿಬಾಲೆ, ಶ್ಯಾಮಾಲ ಅವರು ಕನಸಿದ್ದ 'ವಸ್ತು'ವಿಗೆ ಒಂದು ರೂಪು ನೀಡಿರುವ ಸಾಧನೆ ವಿಜಯಾ ಅವರದು. ನವೋದಯದ ಉಲ್ಲಾಸ, ಪ್ರಗತಿಶೀಲರ ಆಶಯಗಳು, ನವ್ಯದ ಆತ್ಮ ಶೋಧ–ವ್ಯಕ್ತಿಶೋಧ, ಬಂಡಾಯದ ಪ್ರತಿಭಟನೆ ಇವರ ನಾಟಕಗಳಲ್ಲಿ

ಬಿಂಬಿತವಾಗಿವೆ. ಇದು ನಾಟಕಕಾರ್ತಿಯ ಗ್ರಹಿಕೆ– ಅಭಿವ್ಯಕ್ತಿಗಳಲ್ಲಿ ಸಾಕಾರಗೊಂಡಿದೆ. 'ವಸ್ತು' ಕಡ ತಂದದ್ದೇ ಆದರೂ 'ನಿರ್ವಚನ' ಸ್ವಂತದ್ದು. ಸೃಜನಶೀಲತೆಯ ಇನ್ನೊಂದು ಮುಖ 'ಅನ್ವಯ'. ವಿಜಯಾ ಈ ವಸ್ತುಗಳನ್ನು ಕನ್ನಡಕ್ಕೆ ಅನ್ವಯಗೊಳಿಸುವಲ್ಲಿ ಸಫಲರಾಗಿದ್ದಾರೆ.

ಈ ಕಾಲದಲ್ಲಿಯೂ ಮಹಿಳೆ ಅನೇಕ ಬಿಕ್ಕಟ್ಟುಗಳ ನಡುವೆಯೇ ತನ್ನತನ. ಅಭಿವ್ಯಕ್ತಿ ತೋರಬೇಕಿದೆ. ಒಂದೆಡೆ ಪರಂಪರೆ. ಮತ್ತೊಂದೆಡೆ ಈಗಾಗಲೇ ಇರುವ ದಿಗ್ಗಜರ ಮಾರ್ಗ, ಮತ್ತೊಂದೆಡೆ 'ಅಸ್ತಿತ್ವ' ತೋರಬೇಕಾದ, ಉಳಿಯಬೇಕಾದ ಹಂತದಲ್ಲಿ ತಮ್ಮ ನಾಟಕಗಳ ಮೂಲಕ ಹೊಸತನಕ್ಕೆ ಸ್ಪಂದಿಸಿರುವ ಡಾ. ವಿಜಯಾ ಅಭಿನಂದನೀಯರು. ತೆಲುಗು. ಹಿಂದೀ, ಪಂಜಾಬಿ ಸಾಹಿತ್ಯವನ್ನು ಕನ್ನಡಕ್ಕೆ ಅನುವಾದಿಸಿರುವ, ರೂಪಾಂತರಿಸಿರುವ ಅವರ ಪ್ರಯತ್ನ ಕಡಿಮೆಯದಲ್ಲ. ಗ್ರೀಕ್, ಇಂಗ್ಲೀಷ್, ಇಟಾಲಿಯನ್, ಸಂಸ್ಕೃತ ಸಾಹಿತ್ಯದ ಅವರ ತಿಳುವಳಿಕೆ ಉಲ್ಲೇಖಾರ್ಹ. ಈ ಹಿನ್ನೆಲೆಯಲ್ಲಿ 'ಮಹಿಳೆ'ಯ ವಿವಿಧ ಮುಖಗಳನ್ನು, ಆಯಾಮ, ಅಭೀಪ್ಸೆ, ಹೊಯ್ದಾಟ. ಪ್ರತಿಭಟನೆ, ವ್ಯಕ್ತಿತ್ವ, ಅಸ್ತಿತ್ವಗಳನ್ನು ತಮ್ಮ ನಾಟಕಗಳ ಮೂಲಕ ನಿರೂಪಿಸಿರುವ ಡಾ. ವಿಜಯಾ ಅವರ ಕೃಷಿ ಸ್ವಾಗತಾರ್ಹ. ಅವರ ಈ ನಾಟಕಗಳ 'ಸಮಗ್ರ ಪ್ರಕಟಣೆ' ಹೊಸ ಓದಿಗೆ, ಹೊಸ ನಿರ್ವಚನಕ್ಕೆ ಈಡಾಗಬೇಕಿದೆ.

ಹಿರಿಯರಾದ ಡಾ. ವಿಜಯಾ 'ಮುನ್ನುಡಿ' ಬರೆಯಲು ಹೇಳಿ, ಹೊಸ ಓದಿಗೆ, ಹೊಸ ಜ್ಞಾನಕ್ಕೆ ಅವಕಾಶ ನೀಡಿದ್ದಾರೆ; ಅವರಿಗೆ ಧನ್ಯವಾದ.

**ಡಾ. ಎಸ್. ಪ್ರಸಾದಸ್ವಾಮಿ**

ನುಡಿ, ನಂ.೩. ೧ನೇ 'ಎ' ಮೈನ್,
ಮುನೇಶ್ವರ ಲೇಔಟ್,
ಡಿ.ಬಿ. ಸಂದ್ರ ೪ನೇ ಬ್ಲಾಕ್
ವಿದ್ಯಾರಣ್ಯಪುರ, ಬೆಂಗಳೂರು–೯೭.

# ಪ್ರವೇಶಕ್ಕೆ ಮೊದಲು

ಬಾಲ್ಯದಿಂದಲೂ, ಬಾಲ ಕಲಾವಿದರಾಗಿ ಗುಬ್ಬಿ ಕಂಪನಿ ಸೇರಿ ಇಪ್ಪತ್ತೈದು ವರ್ಷಕಾಲ ನಿರಂತರವಾಗಿ ತಮ್ಮ ಅದ್ಭುತ ನಟನೆ, ಕಂಠಸಿರಿಯಿಂದ, ಇಪ್ಪತ್ತರ ದಶಕದಿಂದಲೇ ಖ್ಯಾತಿಯನ್ನು ಗಳಿಸಿದ್ದ ನನ್ನ ಚಿಕ್ಕಪ್ಪ ಸಿ.ಟಿ.ಶೇಷಾಚಲಂ ಅವರ ಪ್ರಭಾವದಿಂದ ನಾನೂ ನಾಟಕದ ಹುಚ್ಚು ಹಚ್ಚಿಕೊಂಡೆನಾದರೂ, ಸಂಪ್ರದಾಯಸ್ಥ ಮನೆತನವಾದ್ದರಿಂದ, ಹೊರಗಡೆ ನಾಟಕಗಳನ್ನು ಮಾಡಲು ನಿಷೇಧಿಸಲಾಗಿತ್ತು. ಆದರೂ ಮನಸ್ಸಿನ ಮೂಲೆಯಲ್ಲೆಲ್ಲೋ ಪ್ರತಿಭಟನೆಯ ಕಿಡಿ ಹೊತ್ತಿಕೊಂಡು, ನನ್ನವೇ ಆದ ಸೀಮಿತ ಪರಿಸರದಲ್ಲಿ, ಶಾಲಾ ಕಾಲೇಜುಗಳಲ್ಲಿ, ಸಾಂಸ್ಕೃತಿಕ ಕಾರ್ಯಕ್ರಮಗಳ ಭಾಗವಾಗಿ ಮುಗ್ಧ, ಪ್ರತಿಭೆಯುಪ್ಪರಿಂದಲೇ ನಾಟಕಗಳನ್ನು ಬರೆಯುವುದು, ನಿರ್ದೇಶಿಸುವುದು, ನಟಿಸುವುದು ಇತ್ಯಾದಿ ಚಟುವಟಿಕೆಗಳಲ್ಲಿ ತೊಡಗಿಸಿಕೊಂಡೆ. ವಿಶಾಲವಾದ ಮನೆಗಳ ಹಜಾರಗಳೇ ರಂಗವೇದಿಕೆಗಳಾದವು. ಸೀರೆ, ದುಪ್ಪಟಿಗಳೇ ಪರದೆಗಳಾದವು. ಸ್ನೋ, ಪೌಡರ್, ಕುಂಕುಮಗಳೇ ಮುಖವರ್ಣಿಕೆಯ ಪರಿಕರಗಳಾದವು.

ಹೀಗೆ, ಹೇಗೋ ಒಂದು ರೀತಿಯಲ್ಲಿ ನಾಟಕದ ಪ್ರೀತಿಯನ್ನು ಜೀವಂತವಾಗಿ ಇರಿಸಿಕೊಂಡು ಬಂದವಳು, ಸಾಹಿತ್ಯ ಜಗತ್ತನ್ನು ಪ್ರವೇಶಿಸಿ, ಸಾಹಿತ್ಯದ ಹಲವು ಪ್ರಕಾರಗಳ ರಚನೆಗೆ ತೊಡಗಿಸಿಕೊಂಡಿದ್ದಾಗ, ಅರವತ್ತು ಎಪ್ಪತ್ತರ ದಶಕದಲ್ಲಿ ರಂಗ ದೈತ್ಯರೆಂದೇ ಗುರುತಿಸಿಕೊಂಡಿದ್ದ ಬಿ.ವಿ.ಕಾರಂತರ ಪ್ರವೇಶದೊಂದಿಗೆ ಕನ್ನಡ ರಂಗಭೂಮಿ ಅತ್ಯಂತ ಕ್ರಿಯಾಶೀಲವೂ ಪ್ರಯೋಗಶೀಲವೂ ಆಗಿ ಮಾರ್ಪಟ್ಟು, ಹೊಸ ಹೊಸ ನಾಟಕಗಳು ಪ್ರಯೋಗಗೊಂಡವು. ನಾಟಕ ರಚನೆಯತ್ತ ಗಮನಹರಿಸದಿದ್ದ ಸಾಹಿತಿಗಳೂ ಅದ್ಭುತವಾದ ನಾಟಕಗಳನ್ನು ಹವ್ಯಾಸಿರಂಗಭೂಮಿಗೆ ಕೊಡುಗೆಯಾಗಿ ನೀಡಿದರು. ತೆಂಡೂಲ್ಕರ್, ಬಾದಲ್ ಸರಕಾರ್, ಮೋಹನ್ ರಾಕೇಶ್ ಮುಂತಾದವರ ಅನುವಾದಿತ ರೂಪಾಂತರಿತ ನಾಟಕಗಳ ಪ್ರಯೋಗಗಳ ಜೊತೆಗೆ, ಡಾ.ಚಂದ್ರಶೇಖರ

ಕಂಬಾರ, ಪ್ರೊ.ಚಂದ್ರಶೇಖರ ಪಾಟೀಲ, ಡಾ.ನಾ.ರತ್ನಾ, ಲಂಕೇಶ. ಗಿರೀಶ್ ಕಾರ್ನಾಡ್, ಪೂರ್ಣಚಂದ್ರ ತೇಜಸ್ವಿ, ಟಿ.ಎನ್.ಸೀತಾರಾಂ ಮೊದಲಾದವರು ಮಹತ್ವದ ನಾಟಕಕಾರರಾಗಿ ಕಾಣಿಸಿಕೊಂಡರು. ಅವರೆಲ್ಲರ ನಾಟಕಗಳು ಯಶಸ್ವಿ ಪ್ರಯೋಗಗಳನ್ನು ಕಂಡವು. ಇವನ್ನೆಲ್ಲ ನೋಡುತ್ತಿದ್ದ ನನಗೆ. ನಾನೂ ಯಾಕೆ ನಾಟಕಗಳನ್ನು ಬರೆಯಬಾರದು ಎನಿಸಿತು. ಜೊತೆಗೆ ಹೆಂಗಸರು ನಾಟಕಗಳನ್ನು ಬರೆಯುವುದಿಲ್ಲ; ಬರೆಯುವುದು ಸಾಧ್ಯವೂ ಇಲ್ಲ ಎನ್ನುವ ಅಭಿಪ್ರಾಯ ಬೇರೆ ಪ್ರಚಲಿತವಾಗಿತ್ತು. ಹೆಂಗಸರು ನಾಟಕಗಳನ್ನು ಬರೆದಿಲ್ಲ ಎನ್ನುವುದು ಸ್ವಲ್ಪ ಮಟ್ಟಿಗೆ ಸತ್ಯವಾದರೂ ಬರೆಯಲಾರರು ಎನ್ನುವುದಕ್ಕೆ ಉತ್ತರ ಹೇಳಬೇಕೆಂದೂ ಆಶಿಸಿ ಪ್ರಯತ್ನದ ಹೆಜ್ಜೆಗಳಿರಿಸಿದೆ. ಪರಿಣಾಮವಾಗಿ, ನನಗಿದ್ದ ಸ್ವಲ್ಪ ಮಟ್ಟಿಗಿನ ನಾಟಕದ ಹಿನ್ನೆಲೆ, ಅಭಿನಯದ ಅನುಭವದ ನೆರವಿನಿಂದ ಪಾಂಚಾಲಿ, ಪಾದ್ರಿಯೊಬ್ಬನ ಕತೆ, ನಗರವಧು ಸಾಲವತಿ ಎಂಬ ಮೂರು ನಾಟಕಗಳ ಸಂಕಲನವನ್ನು "ಮಹಿಳಾ ಸಾಹಿತ್ಯಿಕಾ". ನವನಗರ ಹುಬ್ಬಳ್ಳಿ – ಪ್ರಕಾಶನದ ಮೂಲಕ ಶ್ರೀಮತಿ ಹನುಮಾಕ್ಷಿ ಗೋಗಿ ಅವರ ಪ್ರೋತ್ಸಾಹದಿಂದ ೧೯೯೭ನೇ ಇಸವಿಯಲ್ಲಿ ಹೊರತಂದೆ. ಓದಿದವರು ತುಂಬಾ ಮೆಚ್ಚುಗೆ ಸೂಚಿಸಿದರಾದರೂ, ರಂಗ ಪ್ರಯೋಗ ಒಂದು ದೊಡ್ಡ ಸವಾಲಾಯಿತು. ನಾಟಕಗಳನ್ನು ಬರೆಯಬಹುದಾದರೂ ಅವುಗಳನ್ನು ಆಡಿಸುವವರು ದೊರೆಯುವುದೇ ಇಲ್ಲ. ದೊರೆಯುವುದೇ ಇಲ್ಲ ಎನ್ನುವುದು ನಮ್ಮಂಥವರಿಗೆ! ಹತ್ತಾರು, ನೂರಾರು ನಾಟಕ ಪ್ರಯೋಗಗಳು ಕಾಣುತ್ತವೆಯಾದರೂ, ಆ ನಾಟಕಗಳು ದೊಡ್ಡ ದೊಡ್ಡವರು ಬರೆದವುಗಳೇ ಆಗಿರುತ್ತವೆ. ಖ್ಯಾತನಾಮರಲ್ಲದವರ ನಾಟಕಗಳು ಕೇವಲ ಓದು ನಾಟಕಗಳಾಗಿ ಮಾತ್ರವೇ ಉಳಿಯುತ್ತವೆ. ಹೆಂಗಸರು ಬರೆಯುವುದಿಲ್ಲ ಎಂದು ಗೊಣಗುವ ಮಂದಿಗೆ ಬರೆದವರ ಕಡೆ ಕಣ್ಣೆತ್ತಿ ನೋಡುವ ವ್ಯವಧಾನವೂ ಇರುವುದಿಲ್ಲ. ಮನಸ್ಸೂ ಇಲ್ಲ. ಹೀಗಾಗಿ ಕಾವ್ಯ. ಕತೆ, ಕಾದಂಬರಿಗಳಿಗೆ ತೊಡಗಿಸಿಕೊಳ್ಳುವಷ್ಟು ಉತ್ಸಾಹದಿಂದ ನಾಟಕ ರಚನೆಗೆ ತೊಡಗಿಸಿಕೊಳ್ಳುವುದಿಲ್ಲ. ಹೀಗಿದ್ದೂ ನನಗಿದ್ದ ನಾಟಕದ ಹುಚ್ಚು, ನನ್ನನ್ನು ಅಧೀರಗೊಳಿಸದೆ. ಪ್ರಯೋಗಾವಕಾಶ ಇರಲಿ ಬಿಡಲಿ. ನಾಟಕ ರಚನೆಯತ್ತ ಮುನ್ನಡೆಸಿತು. ನಾನು ಓದುವ ಕತೆ. ಕಾದಂಬರಿ. ಕಾವ್ಯಗಳಲ್ಲಿನ ವಸ್ತು ನನ್ನನ್ನು ಅತೀವವಾಗಿ ಕಾಡಿದಾಗ. ತೂಗಿದಾಗ ಮತ್ತು ಅವರಲ್ಲಿ ಸಮಕಾಲೀನವಾದ, ಸಾರ್ವತ್ರಿಕವಾದ ಅಂಶಗಳು ಮತ್ತು ಬದುಕಿನಲ್ಲಿನ ಮೂಲಭೂತ ಸಂಘರ್ಷಗಳು ಪ್ರಸ್ತುತವೆನಿಸಿದಾಗ. ಕೇವಲ ಕಥಾಹಂದರವನ್ನಷ್ಟೇ ಬಳಸಿಕೊಂಡು ನನ್ನದೇ ಆದ ರೀತಿಯಲ್ಲಿ ನಾಟಕದ ಚೌಕಟ್ಟನ್ನು ಅಥವಾ ಸಂವಿಧಾನವನ್ನು ರೂಪಿಸಿಕೊಂಡು. ನನ್ನ ಗ್ರಹಿಕೆಯ ಮಿತಿಯೊಳಗೆ ಹೊಸ ವ್ಯಾಖ್ಯಾನಕ್ಕೆ, ವಿಶ್ಲೇಷಣೆಗೆ, ಅರ್ಥೈಸುವುದಕ್ಕೆ ಪ್ರಯತ್ನಿಸುತ್ತಿದ್ದೆ. ಮೂಲಕಥೆಯನ್ನು ಸ್ವಲ್ಪ ಮಟ್ಟಿಗೆ ರೂಪಾಂತರಿಸಿಕೊಂಡು. ಹೊಸ ಹೊಸ ಪಾತ್ರಗಳನ್ನು ಸೃಷ್ಟಿಸಿಕೊಂಡು ಎಷ್ಟು ಸಾಧ್ಯವೋ ಅಷ್ಟರಮಟ್ಟಿಗೆ

ಸಮಕಾಲೀನಗೊಳಿಸುವುದಕ್ಕೆ ಯತ್ನಿಸುತ್ತಿದ್ದೆ. ಇಂತಹ ಪ್ರಯತ್ನಗಳಿಂದಾಗಿ ಮತ್ತೂ ನಾಲ್ಕು ನಾಟಕಗಳು, ೨೦೦೧ರಲ್ಲಿ ಮತ್ತು ೨೦೦೩ರಲ್ಲಿ ಕ್ರಮವಾಗಿ ಪ್ರಕಟವಾದವು. ಈ ನಾಟಕಗಳಲ್ಲಿ ರಮ್ಯ ಸಾಹಸ ಕಥಾನಕಗಳಿವೆ; ಧರ್ಮ ಕಾಮ ಸಂಘರ್ಷಗಳಿವೆ; ಧರ್ಮ, ರಾಜಕಾರಣ, ವೈಯಕ್ತಿಕ ಸಂಘರ್ಷಗಳಿವೆ. ಬಂಡಾಯ, ಪ್ರತಿಭಟನೆ, ಸ್ತ್ರೀವಾದಿ ಧೋರಣೆಗಳಿವೆ. ಸಾಮಾಜಿಕ, ರಾಜಕೀಯ, ಧಾರ್ಮಿಕ ಶೋಷಣೆಯ ಹಲವಾರು ಮುಖಗಳ ದರ್ಶನವಿದೆ; ಚಿಂತನೆಗಳಿವೆ.

ನನ್ನೆಲ್ಲ ನಾಟಕಗಳ ಹಿಂದೆ ಗಂಭೀರ ಪ್ರಯತ್ನಗಳಿವೆ; ಚಿಂತನೆಗಳಿವೆ. ಆದರೆ ಪ್ರಯೋಗದಲ್ಲಿ ಅವೆಲ್ಲವೂ ಹೇಗೆ ಸಾಕಾರಗೊಳ್ಳಬಹುದೆಂಬುದನ್ನು ಅವಲೋಕಿಸುವುದಕ್ಕಾಗಲೀ; ಅನುಸಂಧಾನ ಮಾಡುವುದಕ್ಕಾಗಲೀ ಅವಕಾಶಗಳು ಇಲ್ಲವಾಗಿರುವುದು, ವಿಷಾದದ ಸಂಗತಿಯಾಗಿದೆ. ಆದರೆ ಕಾರುಮೋಡಗಳಂಚಿಗೊಂದು ಬೆಳ್ಳಿರೇಖೆ ಎಂಬಂತೆ ಕರ್ನಾಟಕ ನಾಟಕ ಅಕಾಡೆಮಿ ಅಧ್ಯಕ್ಷರಾಗಿರುವ ಡಾ.ಬಿ.ವಿ.ರಾಜಾರಾಂ ಅವರು ನನ್ನ 'ಪಾಂಚಾಲಿ' ನಾಟಕಕ್ಕೆ ಎರಡು ಪ್ರದರ್ಶನಗಳ ಅದೃಷ್ಟವನ್ನು ಕಲ್ಪಿಸಿಕೊಟ್ಟರು. ನಾಟಕ ಪ್ರಯೋಗ ಅದ್ಭುತ ಯಶಸ್ಸನ್ನು ಕಂಡಿತು. ಹಲವಾರು ಪ್ರಶಸ್ತಿಗಳು ಪ್ರಯೋಗಕ್ಕೆ ಸಂದವು. ಹಾಗೆಯೇ ಅತ್ಯುತ್ತಮ 'ನಾಟಕ'ವೆಂದು ನಾಟಕ ಕೃತಿಗೂ ಪ್ರಶಸ್ತಿ ಲಭಿಸಿತು. ಇದೇ ರೀತಿಯಲ್ಲಿ ಎಂ.ಇ.ಎಸ್. ಕಾಲೇಜಿನಿಂದ 'ಪಾದ್ರಿಯೊಬ್ಬನ ಕತೆ' ಎರಡು ಪ್ರಯೋಗಗಳನ್ನು ಕಂಡಿತು. ಇದಕ್ಕೂ ಎರಡು ಪ್ರಶಸ್ತಿಗಳು ಬಂದವು.

ಹೀಗಾಗಿ ಪ್ರಯೋಗ ಕಾಣಲಿ ಬಿಡಲಿ, ನಾಟಕಗಳನ್ನು, ಸಾಹಿತ್ಯ ಪ್ರಕಾರಗಳಲ್ಲಿ ಒಂದಾಗಿ ಭಾವಿಸಿ ಬರೆಯುವುದನ್ನು ಮುಂದುವರೆಸಿದ್ದೇನೆ. ನನ್ನ ಪ್ರಯತ್ನಗಳಿಗೆ ಅರ್ಥಪೂರ್ಣತೆಯನ್ನು ತರುವ ನಿಟ್ಟಿನಲ್ಲಿ ಕಣ್ವ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್ 'ರಂಗದಂಗಳ' ಸಮಗ್ರ ನಾಟಕ ಸಂಕಲನವನ್ನು ತರಲು ಮುಂದಾಗಿದೆ. ಅದಕ್ಕಾಗಿ ಪ್ರಕಾಶಕ ಎಂ.ಆರ್.ಗಿರಿರಾಜು ಅವರಿಗೆ ನನ್ನ ಹೃದಯಪೂರ್ವಕ ಕೃತಜ್ಞತೆಗಳು. ಈ ಸಮಗ್ರ ನಾಟಕಗಳ ಬಗ್ಗೆ ಸಂಕ್ಷಿಪ್ತವಾಗಿ, ಪರಿಚಯಾತ್ಮಕವಾಗಿಯೂ ವಿಮರ್ಶಾತ್ಮಕವಾಗಿಯೂ ಲೇಖನವನ್ನು ಬರೆದುಕೊಟ್ಟ ಡಾ.ಎಸ್.ಪ್ರಸಾದಸ್ವಾಮಿ ಅವರಿಗೂ ಮತ್ತು ಪ್ರಥಮ ಮುದ್ರಣ ಸಂದರ್ಭದಲ್ಲಿ ನನ್ನ ನಾಟಕಗಳಿಗೆ ಸಂಕ್ಷಿಪ್ತ ಮುನ್ನುಡಿಗಳನ್ನು ಬರೆದುಕೊಟ್ಟ ಪ್ರೊ.ಚಂದ್ರಶೇಖರ ಪಾಟೀಲರಿಗೂ ನನ್ನ ಅನಂತಾನಂತ ಧನ್ಯವಾದಗಳು.

**ಡಾ. ವಿಜಯಾ ಸುಬ್ಬರಾಜ್**

# ಪರಿವಿಡಿ

# ಪಾತ್ರವರ್ಗ

| | | |
|---|---|---|
| ಪಾಂಚಾಲಿ | : | ಪಂಚಪಾಂಡವರ ಪತ್ನಿ |
| ಗಾಂಧಾರಿ | : | ಧೃತರಾಷ್ಟ್ರನ ಹೆಂಡತಿ |
| ಕುಂತಿ | : | ಪಾಂಡವರ ತಾಯಿ |
| ಧರ್ಮಪುತ್ರ | : | ಕುಂತಿಯ ಹಿರಿಯ ಮಗ (ಪಂಚಪಾಂಡವರಲ್ಲಿ ಹಿರಿಯ) |
| ಸುದೇಷ್ಣೆ | : | ವಿರಾಟರಾಜನ ಮಡದಿ (ಕೀಚಕನ ಸೋದರಿ) |
| ಕೀಚಕ | : | ಸುದೇಷ್ಣೆಯ ಸೋದರ |
| ಕಮಲಿನಿ | : | ಸುದೇಷ್ಣೆಯ ಸಖಿ |
| ಮೇಳ | | |

# ಅಂಕ – ೧

## ದೃಶ್ಯ – ೧

(ಹಸ್ತಿನಾಪುರದ ಅರಮನೆ. ಎಲ್ಲವೂ ಸ್ತಬ್ಧವಾಗಿದೆ. ಸ್ವಲ್ಪ ಹೊತ್ತಿನ ನಂತರ ರಂಗದ ಎರಡು ಬದಿಗಳಿಂದ ಹಸ್ತಿನಾಪುರದ ಮಹಿಳೆಯರ ಮೇಳ ಎರಡು ಗುಂಪುಗಳಲ್ಲಿ ಪ್ರವೇಶಿಸುತ್ತದೆ.)

ಮೇಳ : ಎಂತೆಲ್ಲ ಕಾಲ ಬಂದಿದೆ ಈಗ
ಸತ್ಯ ಧರ್ಮಗಳೆಲ್ಲ ಸಾವನಪ್ಪಿಹುದಿಲ್ಲಿ,
ಹಸ್ತಿನಾಪುರವೊಂದು ಖೂಳರಾ ಬೀಡು.
ಇಲ್ಲಿ ನೆಮ್ಮದಿಯಿನ್ನು ಇರಲಾರದು
ಕುರುಡ ಕೌರವರಾಯ ಕುರುಡನಾಗಿಹನು
ಕಾಣದಾವುದು ನ್ಯಾಯ
ಧರ್ಮವಂತರು ಯಾರು?
ಮಕ್ಕಳಾ ಮೋಹವದು
ಮಾತನಾಡನು ಏನೊಂದನೂ
ದುಷ್ಟದಾನವರಂತೆ ವರ್ತಿಸುತ
ರಾಜ್ಯದಲಿ ಮಾನ ಹೆಣ್ಣು ಗಳಿವರು
ಕಸಿದು ಕಾಡುವರು
ಪಾಂಡವಾತ್ಮಜರ ಪರಮಸತಿ
ಪಾಂಚಾಲಿಗಾದುದನ್ಯಾಯವೆಂತು!
ಆವ ಹೆಣ್ಣು ಇಲ್ಲಿ ಈ ದಾನವರ
ನಾಡಿನಲಿ ಕ್ಷೇಮದಲಿ ಇರಳು.
ಏನಾಯಿತೀ ಕುಲಕೆ
ಪಾಂಡವಾನುಜರ ಬಲಕೆ?
ತುಂಬಿದಾ ಸಭೆಯಲ್ಲಿ

ಪುರುಷಶ್ರೇಷ್ಠರು. ಎಂತಹಿರಿಯರು
ತುಂಬಿರುವ ಸಭೆಯೊಳಗೆ
ಭರತವಂಶದ ಸೊಸೆಯಾಗಿ
ದ್ರುಪದನಾ ಮಗಳಾಗಿ
ಮಾನಹರಣಕೆ ಗುರಿಯೆ!
ದುಷ್ಟ ಕೌರವರ ಸೇಡಿನಾ ಬಗೆಯೆ?
ಬಡಪಾಯಿ ಪಾಂಚಾಲಿ
ನೊಂದವಳೆಂತೋ ಏನೋ
ಯಾರವಳ ಆರ್ತತೆಗೆ
ಕಿವಿಗೊಡುವರೋ!
(ಅರಮನೆಯ ಒಳಗಿನಿಂದ ಪಾಂಚಾಲಿ ಪ್ರವೇಶಿಸುತ್ತಾಳೆ.)

**ಪಾಂಚಾಲಿ:** ಓ ದೇವರೇ! ಏಕಿಂತು ನಿರ್ದಯತೆ!
ಭೂಮಿ ಆಕಾಶಗಳನ್ನು ತುಂಬಿರುವ ಬೆಳಕೇ
ಜೀವಕೋಟಿಯ ಜೀವದುಸಿರಾವ ಗಾಳಿಯೇ
ಸಚರಾಚರ ಸೃಷ್ಟಿಯೇ
ಕೇಳಿದಿರಾ ನನ್ನೆದೆಯ ಗೋಳನ್ನು
ನನಗಾದ ಬಾಳನ್ನು
ನನಗಾದ ಗತಿಯನ್ನು ಕಂಡಿರೇನು!
ಕರಗಲಿಲ್ಲವೇ ನಿಮ್ಮೆದೆ
ಬಿರಿಯಲಿಲ್ಲವೆ ನಿಮ್ಮೆದೆ
ರೋಷವನು ಕ್ರೋಧವನು
ತೋರಲಾರದೆ ಹೋದಿರೇನು?
(ಮೌನವಾಗಿ ನಿಂತ ಮೇಳದವರನ್ನು ನೋಡಿ)
ಓ ನನ್ನ ಅಕ್ಕ ತಂಗಿಯರೇ
ಕೇಳಿದಿರಾ ನೀವಾದರೂ
ಕಂಡಿರಾ ನನಗಾದ ಗತಿಯನ್ನು
ಖೂಳರಕ್ಕಸರಿಂದ ಅಂಗಭಂಗವಾಗಿ
ಶೀಲಭಂಗವಾಗದೆ ಉಳಿದವಳನ್ನು
ನ್ಯಾಯವೆಲ್ಲಿದೆ ಹೇಳಿ
ಧರ್ಮವೆಲ್ಲಿದೆ ಹೇಳಿ
ಹಸ್ತಿನಾಪುರದಲ್ಲಿ ಸತ್ಯ ಸುಡುಗಾಡಾಗಿದೆ
ಧರ್ಮ ದಳ್ಳುರಿಯಾಗಿದೆ.

ಮೇಳ : ಎಲ್ಲ ಬಲ್ಲೆವು ಮಗಳೆ ಪ್ರತ್ಯಕ್ಷವಾಗಿ
ಕಣ್ಣಾರೆ ಕಂಡು ಕಿವಿಯಾರೆ ಕೇಳಿ
ನೊಂದಿಹೆವು ಮರುಗಿಹೆವು
ಭರತವಂಶದ ಸಾಮ್ರಾಜ್ಞಿಯಾಗಿ
ಬಾಳಬೇಕಿದ್ದ ನಿನಗಾದ ಗತಿ ಕಂಡು
ಮಿಡಿದಿಹೆವು ಗುಡುಗಿಹೆವು
ನಿನಗಾದ ಅವಮಾನ ನಿನಗಲ್ಲ,
ನಮಗೆಲ್ಲ, ಸ್ತ್ರೀ ಕುಲಕ್ಕೆಲ್ಲ
ಎಂದೆಲ್ಲ ನಾವು ನೊಂದಿಹೆವು,
ಹಸ್ತಿನಾಪುರವಿಂದು ಹಸ್ತಿನಾಪುರವಲ್ಲ.
ಧರ್ಮದಿಂದಾಳಿದ ಪಾಂಡುದೊರೆ ನಮಗಿಲ್ಲ
ದುಷ್ಟ ದುರ್ಜನರ ಬೀಡಾಗಿದೆ
ಶಕುನಿ ತಂತ್ರಮಂತ್ರಗಳ ಗೂಡಾಗಿದೆ
ಬುದ್ಧಿ ಹೇಳುವ ಹಿರಿಯರಿಲ್ಲವಾಗಿದೆ ನಾಡು
ಸೇಡು ಸ್ವಾರ್ಥಗಳ ಕಾಡಾಗಿದೆ
ಕುರು ವಿನಾಶಕೆ ನಾಂದಿಯಾಗಲಿ ನಿನ್ನ
ಸುಡುತಿಹ ನೋವು ಬಾವುಗಳು
ಆದರೂ ಕೊರಗದಿರು ಮರುಗದಿರು
ಕಾಲವೇ ಕೇಡಿಗರ ಪಾತವಾಗುವುದು
ಶಾಂತಿಯನು ತಳೆ ಮಗಳೆ

ಪಾಂಚಾಲಿ: ನನ್ನಕ್ಕ ತಂಗಿಯರೆ
ನನಗಾಗಿ ಮರುಗುತಿಹ
ನಿಮಗಿದೋ ನನ್ನ ಧನ್ಯವಾದಗಳು.
ಕಾಲ ಕಲಿಸುವುದೆಂದು ಹೇಳಿದಿರಿ
ಅದರೆಂದು ಬರುವುದು ಕಾಲ
ಹೇಳಿ ನನ್ನ ಸೋದರಿಯರೇ?
ಅವಮಾನ, ಹಿಂಸೆ, ನೋವು
ನರಳಿಕೆಯ ಮುಳ್ಳು ಮಂಚದ ಮೇಲೆ
ಮಲಗಿ ಕಳೆವ ಕ್ಷಣಗಳ
ಬೇಗೆ ಬಲ್ಲಿರೇನು?
ತುಂಬಿದಾ ಸಭೆಯಲ್ಲಿ

ಗುರುಹಿರಿಯರೆದುರಲ್ಲಿ
ಬಿಡುಮುಡಿಯ ಹಿಡಿದೆಳೆದು
ಕೊಂಡು ತಂದುದನು
ಗಂಡುಕಣ್ಣುಗಳೆದುರು
ನಗ್ನಗೊಳಿಸಲು ನಿಂತವನ
ದಾರ್ಷ್ಟ್ಯವನು ಸಹಿಸಬಹುದೇ?

**ಮೇಳ** : ಮಗಳೆ ಬಲ್ಲೆವು ಎಲ್ಲ
ಜ್ಞಾನ ಫಲಿತವರು
ಗಡ್ಡ ನರೆತವರು ಸೊಲ್ಲುಸತ್ತಂತೆ
ಗರಬಡಿದವರಂತೆ
ಕಾಪುರುಷ ಕಾಮಣ್ಣರಂತೆ
ನೋಡಲಾರದೆ ನುಡಿಯಲಾರದೆ
ನಂಜು ನುಂಗಿ ಕುಳಿತುದನು ಬಲ್ಲೆವು ಮಗಳೆ.

**ಪಾಂಚಾಲಿ** : (ನಿಟ್ಟುಸಿರಿಟ್ಟು)
ಏಕೆ ದೂಷಿಸಲವರ
ನನ್ನವರು ವೀರಪುರುಷರು!
ಗಂಡರೈವರು ಕೈಕಟ್ಟಿ
ಕಾಣುತಲಿ ಅನ್ಯಾಯವನು
ಮಡದಿಗಾದವಮಾನವನು
ಕುಳಿತಿರಲು ಏನ ಹೇಳಲಿಬೇಕು
ಉರಿಯದೆ, ಸಿಡಿಯದೆ
ಮಿಡಿಯದೆ, ಚಲಿಸದೆ
ಮೌನದಲಿ ಕುಳಿತ ಗಂಡರನು
ಗಂಡರೆನಬಹುದೆ?
ಷಂಡರಾಗಿ ಭಂಡರಾಗಿಯೂ
ಬದುಕುವ ಇವರ ಸಹಿಸಬಹುದೇ?
ಪರಮ ಸಾಹಸಿಗಳೆಂದಿವರ ಕರೆಯಬಹುದೇ?

**ಮೇಳ** : (ಸಾಮೂಹಿಕವಾಗಿ)
ಸಾಕು ಮಗಳೆ ಸಾಕು
ಕೋಪದಲಿ ನುಡಿವ ಈ

ಕೆಡುನುಡಿಗಳಿನ್ನು ಸಾಕು ಮಗಳೆ
ಗಂಡರನು ದೂಷಿಸಲು
ಬರುವುದೇನದು ಭಾಗ್ಯ
ದುರ್ವಿಧಿಯ ಆಟವಿದು
ತಿಳಿದು ತಾಳ್ಮೆಯ ತಾಳು
ದ್ರುಪದ ಸುತೆ ನೀನಹುದು
ರಾಜಭೋಗದ ಬದುಕು ನಿನಗಿದ್ದುದು
ಪಾಂಡುಸೊಸೆ ನೀನಾಗಿ
ಪಂಚವಲ್ಲಭೆಯಾಗಿ
ಭರಿಸಿದಳಲಿನ ಆಳ ಅರಿಯೆವೇನು?
ನಿನ್ನ ನಂಬುಗೆ ದೈವವೇ
ನಿನಗೆ ಕನಿಕರಿಸಿ ಕರಗದಿರೆ
ನಿನ್ನ ಗೋಳಿನ ಅರ್ಥ ಸಫಲವೇನು?

**ಪಾಂಚಾಲಿ:** ಬೇಡಕ್ಕ ತಂಗಿಯರೆ
ನನ್ನಣ್ಣನೇ ದೈವ
ಅವನಿರಲು ಅವನ ಕರುಣೆಯೆ
ನನ್ನ ಭದ್ರಕವಚ
ಅವನ ರಕ್ಷಣೆಯಿಂದೆ
ಅಕ್ಷಯದ ವರದಿಂದೆ
ಮಾನಕ್ಷತವಾಗದೆ ಉಳಿಯಿತಿಂದು
ಆದ ಅವಮಾನಕ್ಕೆ
ಶೀಲಹರಣದ ಯತ್ನಕೆ
ತುಡುಕಿದವನನ್ನಿರದೆ
ಸುಡುವೆನು ನಾನು ಅಗ್ನಿ ಪುತ್ರಿ
ಉರಿವೆದೆಯ ಕಿಚ್ಚಿಗೆ
ಹಾಳಾದ ಬಾಳಿಗೆ
ಕಡೆಯೆಂದು ಬಿಡುಗಡೆಯೆಂದು?
ಹೇಳಿ ನನ್ನಕ್ಕ ತಂಗಿಯರೆ
ನಾನೆಂತು ಈ ಬಾಳ ಸಹಿಸುತಲಿ
ಹರಣವನು ಹಿಡಿದಿರಲು ಹೇಳಿ?

**ಮೇಳ** : ಭದ್ರೆ, ಸುಭದ್ರೆ,
ನಮ್ಮ ಪ್ರೀತಿಯ ಹೆಣ್ಣೆ
ಕಷ್ಟಗಳು ಕಡೆತನಕ ಇರಲಾರವು
ಕಾಲಚಕ್ರವದು ತಿರುಗಿ
ಮರಳಿ ಸ್ವಸ್ಥಾನಕ್ಕೆ ಬಂದೆ ಬರುವುದು
ನೀ ಪಟ್ಟ ಪಾಡುಗಳಿಗಿಮ್ಮಡಿ
ಪಾಡುಗಳು ಅವರದಾಗುವುದು
ವಿಧಿಯಾಟದಲಿ ನೋವು ನಲಿವಿದೆ
ನಿನ್ನ ಕೋಪದ ಕಿಡಿ ಕಾಳ್ಗಿಚ್ಚಾಗಿ
ಕೌರವರ ಸುಟ್ಟು ಬೂದಿಮಾಡುವುದು
ನೋಯದಿರು ನವೆಯದಿರು ಮಗಳೆ
(ದೂರದಿಂದ 'ಪಾಂಚಾಲಿ' 'ಪಾಂಚಾಲಿ' ಎಂಬ ಕೂಗು ಕೇಳಿಬರುವುದು)

**ಮೇಳ** : ನೋಡದೋ ಮಗಳೆ
ಆರೋ ಬಂದಂತಿಹುದು
ದನಿಯಾಲಿಸಿದರದು ಗಾಂಧಾರಿ ಎನಿಸುವುದು
ಏಕೆ ಬಂದಳೊ ಏನೊ
ಮತ್ತೇನು ಕಸಿಯ ಬಂದವಳೋ!
ನಾವು ಸರಿಯುವೆವು
ಬದಿಯಲ್ಲಿ ನಿಂತು ನಿನ್ನ
ಬೆಂಗಾವಲಾಗಿ ಉಳಿಯುವೆವು ಮಗಳೆ
ಅದೋ ಬಂದೇ ಬಂದಳು
ಆ ನೂರು ಮಕ್ಕಳ ಮಹಾತಾಯಿ!
(ಗಾಂಧಾರಿ ಪ್ರವೇಶಿಸುತ್ತಾಳೆ. ಜೊತೆಗೆ ಒಬ್ಬಳು ದಾಸಿ ದಾರಿ ತೋರುತ್ತಿದ್ದಾಳೆ.)

**ಗಾಂಧಾರಿ** : ಇಲ್ಲೇಕೆ ನಿಂತಿಹೆ ಮಗಳೆ
ಊರ ಜನ ನೂರು ಜನ
ನೋಡಿ ನಗರೇನು ಹೇಳು ತಾಯಿ.

**ಪಾಂಚಾಲಿ** : ಊರಜನ ಚಿಂತೆಯೇ?
ತುಂಬು ಸಭೆಯಲಿ
ಪುರುಷ ಸಂದೋಹ ಸಮಕ್ಷದಲಿ
ನಿಮ್ಮಕ್ಕರೆಯ ವೀರಪುತ್ರರು

ನಿಮ್ಮೀ ಸೊಸೆಯ ನಗ್ನಗೊಳಿಸಲು
ತುಡುಕಿದಂದು ಚಿಂತೆಯಿರಲಿಲ್ಲವೇ?
ತಂದೆ ತಾಯಿಗಳಾದ
ನೀವವರ ತಡೆಯಲಾರದೆ
ನಿಂತಿರೇಕೆ? ನಿಮಗದು ಸಮ್ಮತವೇ?
ವಾತ್ಸಲ್ಯ ನಿಮ್ಮೆದೆಯ
ಕಡಲಾಳದಲಿ ಒಗೆದ ಬಡಬಾಗ್ನಿ
ಸುತರವರು ಮನವೆಲ್ಲ ನಂಜು!
ಶಿಸ್ತು ನೀತಿಯ ಪಾಠ
ಕೊಡಲಿಲ್ಲವೇಕೆ?

**ಗಾಂಧಾರಿ:** ಮಗಳೆ ನಿನಗಾದ ಭಂಗ
ನಂಜು ತುಂಬಿದ ನುಡಿಯ
ನುಡಿಸುತಿದೆ ನಾ ಬಲ್ಲೆ.
ಹೆತ್ತುದಕೆ ನಾನವರ ನಾಚುವೆನು
ಮಕ್ಕಳೆನ್ನುವರು ಒಳ್ಳಿದರು
ಸಾಂಗತ್ಯದಲಿ ಕೆಡುನಡೆಯ ಕಲಿತರು
ಬೆಳೆದು ಹೆಮ್ಮರವಾದ
ಕೆಡುಸ್ವಭಾವಗಳ ಸರಿಗೈಯೆ
ಸೋಲಲ್ಲದೆ ಉಳಿದಿಲ್ಲವೇನು?

**ಪಾಂಚಾಲಿ:** ದುಷ್ಟ ಮಕ್ಕಳ ಪಡೆವ ಭಾಗ್ಯಕ್ಕಿಂತ
ಬಂಜೆಯಾದರು ಸಲ್ಲುವುದು
ಸಮ್ಮಾನ, ನಿಲ್ಲುವುದು ದುಮ್ಮಾನ,
ಕೋಪಿಸದಿರಮ್ಮ ಉರಿವೆದೆ-
ಕಿಚ್ಚು ನುಡಿಯದಿರಲಾರೆ.

**ಗಾಂಧಾರಿ :** ನಾ ಬಂದುದೇಕೆಂದು ಕೇಳೆಯಾ ಮಗಳೆ?
ನಿನಗಾದ ಸ್ಥಿತಿಗೆಮ್ಮ ಮನಮಿಡುಕುತಿದೆ
ಪಾಪಿಗಳು ನಾವೆಂಬ ಪ್ರಜ್ಞೆಯಲಗಿರಿಯುತಿದೆ
ಪರಿಹಾರವಾಗಿತ್ತ ವರಗಳನು ಮರೆತೆಯಾ?
ಸುಖವಾಗಿ ನೆಮ್ಮದಿಯ
ಬಾಳುವೆಯ ಮಾಡುತ್ತ
ನಾವೆಸಗಿದಪರಾಧ ಮರೆತುಬಿಡು

ಮತ್ತೊಮ್ಮೆ ನನ್ನ ಮಕ್ಕಳು
ದುಡುಕದಂತೆಚ್ಚರವ ವಹಿಸುವೆನು
ಬಾ ಮಗಳೆ ಇಂದು ನಾನೇ ನಿನ್ನ
ಸಿಂಗರವ ಮಾಡುವೆ.
ಕಣ್ಣ ಕಟ್ಟಿರಲೇನು ನಾ ಬಲ್ಲೆ
ನಿನ್ನ ದಿವ್ಯ ಸೌಂದರ್ಯ ತೇಜ
ನಿನ್ನ ಸ್ಪರ್ಶವು ಅರಳಿಸುವ ಪುಲಕಗಳ
ತಳೆವೆ ನಾ ಕಡೆತನಕ.

ಮೇಳ : ಓ ತಾಯಿ ಗಾಂಧಾರಿ
ಇಂದಾದರೂ ನಿಮ್ಮರಿವಿಗೆ
ಈ ಮಗಳ ನೋವು ಬಂತೇನು?
ಬಡಪಾಯಿ ಮಗಳಿವಳು
ಭರತಕುಲ ಸಾಮ್ರಾಜ್ಞೆ
ಅವಳಿಗೇ ಅವಮಾನ, ಮಾನಭಂಗ!
ಹಿರಿಯರು ಅರಿತವರು
ಸತಿಶಿರೋಮಣಿಗಳೆನಿಸಿದ
ನೀವುಗಳು ನಿಂತವರು
ಮಾನಭಂಗದ ದುಷ್ಟ ಸಾಹಸವ
ನಿಲಿಸಲಾರದೆ ಹೋದಿರೇನು?
ಅವಮಾನ ಮಗಳಿಗಷ್ಟೇ ಅಲ್ಲ
ನಮನಿಮಗೆ ಹೆಣ್ಣು ಮಕ್ಕಳಿಗೆಲ್ಲ
ಅವಮಾನವಲ್ಲವೇ ತಾಯಿ?

ಗಾಂಧಾರಿ : ಓ ನನ್ನ ಪ್ರೀತಿಯ ಹೆಣ್ಣುಗಳೆ
ನನಗರಿವಿಲ್ಲವೆಂದು ತಿಳಿದಿರೇನು?
ಆಗುವುದನೆಲ್ಲ ಕಣ್ಣಪಟ್ಟಿಯೊಳ
ಗಿನಿಂದಲೇ ಕಾಣುತಿಹೆ ನಾ
ಆದರೂ ಈ ಭರತಕುಲ ಮರ್ಯಾದೆ
ಭಾರತೀಯ ಸಂಸ್ಕೃತಿಯೊಳಗೆ
ನಮ್ಮ ಹೆಣ್ಣುಗಳಿಗೆಲ್ಲಿದೆ ಬಾಯಿ?
ಕೇಳುವರಾರು ಎಮ್ಮ ಸಲಹೆಗಳ?
ಪರಿಣಾಮಗಳ ಅನುಭವಿಸಲಷ್ಟೆ.

ನಾವು ಬಾಧ್ಯರು ನಮಗಿಲ್ಲ ಬೆಲೆ.
ನನ್ನ ಸೊಸೆಯವಮಾನ
ನನ್ನನುರಿಸದೆ ಇರುವುದೇನು?
ಪಾಂಚಾಲಿಯಿವಳು ನಮ್ಮ
ಕೆಡೆನುಡಿದಳೆಂದು ನಾ ಬೇಸರಿಸೆ
ಕಿರಿಯಳೆದುರಲಿ ಹಿರಿಯಳಾದರೇನು?
ಅಪರಾಧಿಯಲ್ಲವೇ ಬಾಗುವೆನು ತಲೆಯ.

**ಪಾಂಚಾಲಿ:** ಕ್ಷಮಿಸಿರೆನ್ನ ತಾಯಿ
ನನ್ನತ್ತೆ ಕುಂತಿಯಂತೆಯೇ ನೀವು
ಬೇರೆಯಲ್ಲವು ನನಗೆ
ನಿಮ್ಮ ಮಕ್ಕಳ ಕರೆದು
ಬುದ್ಧಿ ಹೇಳಿರಿ ಹೆಣ್ಣುಗಳ
ಗೌರವಿಸೆ ಕಲಿಸಿರಿ ಅವರಿಗೆ.

**ಗಾಂಧಾರಿ :** ನಡೆ ಮಗಳೆ
ನೊಂದ ಮನಕೆ ನೆಮ್ಮದಿಯ
ತಾರಬಯಸಿಹೆನು
ನಿಮ್ಮ ಮಾವಂದಿರೂ ನಿನಗಾಗಿ
ಕಾಯುತಿಹರು, ನೊಂದಿಹರು
ಹೇಳಿ ಕಳಿಸಿಹರು ನಮ್ಮ
ಮಗಳ ಮನಕೆ ಮುದವದು
ನಮ್ಮಿಂದಾಗಲಿ ಎಂದು ಬಂದಿಹೆನು.

**ಮೇಳ :** ಹೋಗು ಮಗಳೆ ಪಾಂಚಾಲಿ
ಇನ್ನಾದರೂ ನಿನ್ನಳಲು ಕಡೆಯಾಗಿ
ಸುಖವನನುಭವಿಸು
ಧರ್ಮ, ನ್ಯಾಯಗಳಿರಲು
ದೈವವೇ ಸಹಕರಿಸುವುದು
ಹೋಗು ಮಗಳೆ ಹೋಗು.

**ಪಾಂಚಾಲಿ:** ನನ್ನ ನೋವಿಗೆ ನನಗೆ
ಮರುಗುವ ಓ ನನ್ನ ಸೋದರಿಯರೆ
ನಿಮ್ಮ ಸಜ್ಜನಿಕೆ ಸಹಾನುಭೂತಿಗೆ

ಇದೋ ನನ್ನ ನಮನ.
ನಿಮ್ಮ ಹಾರೈಕೆಯಲಿ ಕಷ್ಟಗಳ
ಕಡಲೀಜಿ ಬರುವೆನು ಬಲ್ಲೆ
ಹೋಗಿ ಬನ್ನಿ ಶುಭವಾಗಲಿ.

(ಒಂದು ಕಡೆಯಿಂದ ಮೇಳವು ಹೋಗುವುದು. ಮತ್ತೊಂದು ಕಡೆಯಿಂದ ಗಾಂಧಾರಿ ಪಾಂಚಾಲಿಯರು ಹೋಗುವರು.)

೦೦

# ದೃಶ್ಯ – ೨

(ಅಂತಃಪುರದ ದೃಶ್ಯ. ಕುಂತಿ, ಪಾಂಚಾಲಿ, ಗಾಂಧಾರಿಯರು ಮೂರು ಆಸನಗಳಲ್ಲಿ ಕುಳಿತಿದ್ದಾರೆ. ಮೂವರ ಮುಖದಲ್ಲಿಯೂ ದುಗುಡ. ಯಾರೊಬ್ಬರೂ ಮಾತನಾಡುವುದಿಲ್ಲ. ಕೆಲಕ್ಷಣಗಳ ಮೌನದ ನಂತರ ಗಾಂಧಾರಿಯೇ ಮಾತಿಗೆ ತೊಡಗುತ್ತಾಳೆ.)

**ಗಾಂಧಾರಿ :** ಮನ್ನಿಸೆನ್ನ ಮಗಳೆ ಕೊಟ್ಟ
ಮಾತನು ಉಳಿಸಿಕೊಳ್ಳದೆ ಹೋದೆ
ನಾಚಿ ತಲೆ ತಗ್ಗಿಸುವುದಲ್ಲದೆ
ನನಗೀಗ ಉಳಿದೆಲ್ಲ ದಾರಿ.

**ಪಾಂಚಾಲಿ :** ಸುಮ್ಮನೇಕೆ ನೆಪಗಳು ತಾಯಿ
ನಿಮ್ಮ ಮಕ್ಕಳ ಅಭ್ಯುದಯದ
ಕನಸೊಂದೆ ನಿಮ್ಮ ಬದುಕಿನ ತಪಸ್ಸು
ನೀವು ಬಯಸಿದುದನೆ
ನಿಮ್ಮ ಮಕ್ಕಳು ಮಾಡಿದರು.
ಝುಂಕಿಸಿ ಬೈದು ಬುದ್ಧಿಯ ಹೇಳಿ
ದ್ಯೂತ ದುರ್ವ್ಯಸನವ ತಡೆಯಲಾರದೆ
ಹೋದಿರೆ? ಕಪಟ ದ್ಯೂತವ ರಚಿಸಿ
ವಿನೋದ ವಿಲಾಸದ ಸೋಗಿನಲಿ
ಸಾಧಿಸಿದಿರಿ ನಿಮ್ಮೆದೆಯಾಸೆಗಳನು
ನಮ್ಮ ವಿಭವವು ನಿಮ್ಮ ಮಕ್ಕಳ
ಎದೆಯೊಳಗೆ ಕಿಚ್ಚನುರಿಸಿತು
ದ್ವೇಷ, ಅಸೂಯೆಗಳು ಅನ್ಯಾಯ

ವೆಂಬುದನೆ ಮರೆತು ನಮ್ಮವರ
ಸದ್ಗುಣಿಗಳ ಗುರು ಹಿರಿಯರಾದೇಶ
ಗೌರವಿಸಬೇಕೆನುವ ಹಿರಿಬುದ್ಧಿ
ಯನೆ ದೌರ್ಬಲ್ಯವೆನಿಸಿ
ಮೋಸದಲಿ, ಕಪಟದಲಿ ಕರೆದು
ಸಂತೋಷ ಕೂಟಕೆ ದ್ಯೂತದಾ
ನೇಣಿನಲಿ ಬಿಗಿದು ಕೊಂದಿರಿ ನಮ್ಮ
ಯಾವ ಜನ್ಮದ ಸೇಡು ನಮ್ಮ ಕಾಡುತಿಹಿರಿ?

**ಗಾಂಧಾರಿ :** ಮಗಳೆ ನಾನೆಷ್ಟು ಅಸಹಾಯಕ
ಳೆಂಬುದನು ಅರಿಯೆಯಾ?
ಕುರುಕುಲದ ಹಿರಿಯರಿಗೆ
ಆಚಾರ್ಯರಿಗೆ ಪ್ರಾಜ್ಞರಿಗೆ
ಸಾಧ್ಯವಾಗದ ಕಾರ್ಯ ನಾನೆಂತು
ಬಡಹೆಣ್ಣು ಸಾಧಿಸಲುಬಹುದು?
ನನ್ನ ದುಗುಡವಷ್ಟೇ ನಿನಗೆ ಕಾಣುತಿದೆ
ಈ ಮನೆಗೆ ಹೆಜ್ಜೆಯಿಟ್ಟಂದಿನಿಂದ ಇಂದಿನತನಕ
ನಾ ಪಟ್ಟ ಪಾಡುಗಳ
ಅನುಭವಿಸಿದ ಯಾತನೆಗಳ
ಬಲ್ಲೆಯೇನು ಹೇಳು ಮಗಳೆ
ಮೋಸ, ವಂಚನೆಗಳೆಲ್ಲ ಈ ಕುಲಕೆ
ಅಂಟಿ ಬಂದ ರೋಗಗಳು
ಎಷ್ಟೆಷ್ಟೋ ಕನಸುಗಳ ಕಂಡವಳು
ಕುರುಡು ಗಂಡನ ಕೈ ಹಿಡಿದವಳು
ಕಾಣಲೇನಿರಬಹುದು ಸೊಗಸುಗಳು?
ಚೆಲುವು ನೋಟಗಳೆಲ್ಲ
ಕಳೆದ ನೆನಪುಗಳಷ್ಟೆ!
ಸತೀತ್ವ ಪಾತಿವ್ರತ್ಯಗಳ ಪ್ರಲೋಭನೆ
ಯೊಳಗೆ ಕಟ್ಟಿದನು ಕಣ್ಣಪಟ್ಟಿಯನು

**ಪಾಂಚಾಲಿ :** ಗಂಡ ಕುರುಡಾದಡೆ ಕಣ್ಣಿದ್ದೂ
ನೀವು ಕುರುಡಾಗಬೇಕೇ?
ಅವರ ಕಣ್ಣಾಗಿ ಅವರ ಬೆಳಕಾಗಿ

ನಡೆದು ತಡವರಿಸುವ ಹೆಜ್ಜೆಗಳ
ತಿದ್ದಿ ನಡೆಸುವುದು ಧರ್ಮವೆನಿಸುವುದು
ತಂದೆ ತಾಯ್ಗಳ ಸಲುಗೆ ಅತಿಮೋಹ
ಪ್ರೀತಿಗಳು ದುಷ್ಟ ನಡತೆಗಳಿಗಾಹ್ವಾನವು.
ಹೆತ್ತದ್ದು ನೀವು ಮಕ್ಕಳನಲ್ಲ
ಪಾಪದ ಮೊಟ್ಟೆಗಳನ್ನು ದ್ವೇಷದ ಮರಿಗಳನ್ನು
ಮರಿಗೆ ಮರಿ ಮರಿಗೆ ಮರಿ ಇಡುವಂತೆ
ನಿಮ್ಮ ಮಕ್ಕಳ ಪಾಪಕೆಣೆಯಿಲ್ಲವಾಯ್ತು.

**ಕುಂತಿ** : (ಗಾಂಧಾರಿಗೆ) ಅಕ್ಕ, ಪಾಂಚಾಲಿಯಳಲು
ಅವಳ ನಾಲಗೆಯನ್ನು ಅಲುಗಾಗಿಸಿದೆ
ರಾಜಕೀಯ ದ್ಯೂತದಲ್ಲಿ ಯಾರು
ಸೋಲುವರೋ ಯಾರು ಗೆಲ್ಲುವರೋ!!
ಹೆಣ್ಣುಗಳಾಗಿ ಹುಟ್ಟಿ ಅದೂ
ಈ ವಂಶಕ್ಕೆ ಸೇರಿದ್ದೇ ನಮಗೆ
ನೆಮ್ಮದಿಯಿಲ್ಲ. ಶಾಂತಿಯಿಲ್ಲ.
ಅಣ್ಣ ತಮ್ಮ ಅಕ್ಕ ತಂಗಿಯರೆಂಬ
ಪ್ರೀತಿ ಬಾಂಧವ್ಯಗಳು ಸುಳಿದಾಡುವುದೇ ಇಲ್ಲ
ಪುರುಷ ಅಹಂಕಾರ ಚದುರಂಗದಾಟಗಳಲ್ಲಿ
ಸಿಲುಕಿ ನಾವೆಲ್ಲ ನಲುಗಿ ಹೋಗಿದ್ದೇವೆ
ಅವರವರ ಇಚ್ಛೆಯಲ್ಲಿ ಅವರು ನಡೆಯುತ್ತಾರೆ
ನಮ್ಮನ್ನಾರು ಕೇಳುತ್ತಾರೆ ಅಕ್ಕ?
ಮಕ್ಕಳಿಗಾಗಿ ಪ್ರಾಣ ಉಳಿಸಿಕೊಂಡಿದ್ದೇನೆ.

**ಪಾಂಚಾಲಿ**: ನೀವು ಹೀಗೆ ತಲೆಯ ಮೇಲೆ ಕೈ ಹೊತ್ತು
ಅಳುತ್ತಾ ವಿಧಿಯನ್ನು ಹಳಿಯುತ್ತಾ ಕುಳಿತರೆ
ಏನನ್ನು ಸಾಧಿಸುತ್ತೀರಿ? ಈ ವಂಶದ ಗಂಡಸರು
ತಿಳಿದಿರುವದು ಎರಡನ್ನೇ! ನ್ಯಾಯ ಧರ್ಮ
ಅಂತ ಹೇಡಿಗಳಂತೆ ವರ್ತಿಸುವುದು
ಇಲ್ಲವೇ ದ್ವೇಷ, ಅಸೂಯೆಗಳಿಂದ ಕುದಿದು
ಉದ್ಧಟರಂತೆ ವರ್ತಿಸುವುದು. ನಾವು ಮಾಡಿದ
ಯಾವ ಪಾಪಕ್ಕಾಗಿ ಈ ವನವಾಸ, ಅಜ್ಞಾತವಾಸ!
ಅಮ್ಮ, ನಿಮ್ಮ ಮಕ್ಕಳಿಗೆ ಬುದ್ಧಿ ಹೇಳಿ

ದ್ಯೂತಕ್ರೀಡೆಯಿಂದ ದೂರ ಉಳಿಯಲು
ಸೂಚಿಸಬಾರದಿತ್ತೆ!..... ಹೋಗಲಿ ದ್ಯೂತ
ದಲಿ ಪಣವಿಡುವಾಗ ವಿವೇಕವಾದರೂ
ಇರಬಾರದಿತ್ತೆ! ಬೋಳೆತನದ ಆ ನಿಮ್ಮ
ಹಿರಿಯ ಮಗ! ಅವರ ಮಾತನ್ನೇ ವೇದ
ವಾಕ್ಯವೆಂದು ಪಾಲಿಸುವ ಉಳಿದವರು!
ಇಷ್ಟಾದರೆ ಸಾಕು, ಎಲ್ಲ ತೀರ್ಮಾನವಾದಂತೆ!
ಹೆಂಡತಿಯರನ್ನು ಲಕ್ಷ್ಯದಲ್ಲಿಡದೆ
ವ್ಯವಹರಿಸುವ ಗಂಡಸರನೇನೆನ್ನಬೇಕು?
ಹನ್ನೆರಡು ವರುಷ ವನವಾಸ
ಅಜ್ಞಾತವಾಸವೊಂದು ವರುಷ!!
ಒಳ್ಳೆಯ ಉಪಾಯವನ್ನೇ ಯೋಚಿಸಿದರು!

**ಗಾಂಧಾರಿ :** ವನವಾಸ ಅಜ್ಞಾತವಾಸಗಳು
ಬೇಡ ಮಗಳೆ ನಿನಗೆ
ನಿನ್ನತ್ತೆ ನೀನು ನಮ್ಮರಮನೆಯಲಿ
ನಿಶ್ಚಿಂತರಾಗಿ ನಿಲೆ ನಾವು ಕಾಯುವೆವು
ಗಂಡನಿಲ್ಲದ ನೋವಿನಲಿ ಮೊದಲೆ
ನವೆಯುತಿಹ ಸೋದರಿ ಕುಂತಿಯ
ಹೊಣೆ ನಮ್ಮದು
ಧರ್ಮಿಷ್ಠ ಮಕ್ಕಳ ಪಡೆದ ಬಸಿರಭಾಗ್ಯ
ವೊಂದೆಡೆಯಾದರೆ, ಮಕ್ಕಳ ಬವಣೆಗೆ
ಕುದಿಕುದಿದು ಸೊರಗಿದವಳಿಗಿದೆ
ನನ್ನೆದೆಯ ಮರುಕ.

**ಪಾಂಚಾಲಿ :** ನಿಮ್ಮೆದೆಯ ಮರುಕ ಗಿರುಕಗಳು ಸಾಕು
ಮಾತಿನಲಿ ಮೃದುವಾದ ನಿಮ್ಮ ಕಂಡು
ಒಮ್ಮೆ ಕನಿಕರವೆನಿಸಿದರೂ ಕೋಪ
ಕೆರಳುವುದು ನಿಮ್ಮ ಅಸಮರ್ಥತೆಗೆ
ದಾಯಾದಿ ಸೋದರರ ಸೆಣಸಾಟ
ನಿಲ್ಲದೆಂದಿಗು ಇನ್ನು ಉರಿದು ಕಾಳ್ಗಿಚ್ಚಾಗಿ
ನಿಮ್ಮ ಬಸಿರ ಸುಡುವುದು ಖಾತ್ರಿ
ನನ್ನವರ ಸಹನೆ ಸಿಡಿವುದೆಂದಾದರೊಮ್ಮೆ

ಎಂಬ ನಂಬಿಕೆಯಲೀ ಉಸಿರ ಧರಿಸಿಹೆನು.
ಸೇಡ ತಣಿಸಲು ಸೋತರೆ ನಾ ನನ್ನ
ಮಾನವನು ಉಳಿಸಿಕೊಳುವೆ
ಒಳಗೊಳಗೆ ಕಿಡಿಯಾಗಿ ಕುಳಿತಿರುವ
ಬೆಂಕಿ ದಳ್ಳುರಿಯಾಗಿ ನನ್ನ ತುಡುಕಿದವನ
ಸುಟ್ಟು ಸುಡುಗಾಡಿಗಟ್ಟುವೆನು
ಅವನೆದೆಯ ರಕುತದಲಿ ಶುಭ್ರಸ್ನಾತೆಯಾಗಿ
ನೆಮ್ಮದಿಯ ಉಸಿರಾಡುವೆ.
ನಾ ಬಿಡೆನು ಬಿಡೆನು ನಾನೆಂದೂ!
(ಕಂಚುಕಿ ಪ್ರವೇಶಿಸುತ್ತಾಳೆ.)

**ಕಂಚುಕಿ :** (ವಿನೀತಳಾಗಿ)
ಧರ್ಮಪುತ್ರ ಪ್ರಭುಗಳು ತಮ್ಮನ್ನು
ಕಾಣಲಿಚ್ಛಿಸುವರು.

**ಗಾಂಧಾರಿ :** ಬರಹೇಳು ಕಂಚುಕಿ
ನಾವಿರಲು ನಮ್ಮ ಕಾಣಲು
ಅಪ್ಪಣೆಯ ಅಗತ್ಯವಾದರೇನಿಹುದು.
(ಕಂಚುಕಿ ನಿರ್ಗಮನ)

**ಧರ್ಮಪುತ್ರ:** (ಪ್ರವೇಶಿಸಿ)
ಮಾತೆಯರಿಗೆ ಈ ಧರ್ಮಪುತ್ರನ
ವಿನೀತ ಪ್ರಣಾಮಗಳು.

**ಗಾಂಧಾರಿ :** ಬಾ ಮಗು ನನ್ನೆಡೆಗೆ ಬಾ ಇಲ್ಲಿ
ನಿನ್ನ ಸ್ಪರ್ಶಸುಖದ ಅನುಭವವ
ಪಡೆಯಲಾಶಿಸುವೆ.
ಮನ್ನಿಸೆನ್ನನು ಮಗುವೆ ನನ್ನ ಮಗನ
ದುರ್ನಡತೆ, ದುಷ್ಟತನಗಳನು.
ಅಣ್ಣ ತಮ್ಮಂದಿರು ನೀವು ಅನ್ಯೋನ್ಯದಲಿ
ಬಾಳುವಾಸೆಯ ಹೊತ್ತವಳಿಗೀಗಿಂದು
ನೈರಾಶ್ಯ ನೋವು ಮಾತ್ರವೇ
ನನ್ನ ಪಾಲಿಗುಳಿದಿದೆ ಮಗುವೆ.
ನನ್ನ ಮಕ್ಕಳ ನಡತೆಗೆ ನಾಚುವೆನು
ನನಗೆ ನೀ ವಿಧಿಸು ಪ್ರಾಯಶ್ಚಿತ್ತವನು.

**ಧರ್ಮಪುತ್ರ:** ನಿಮ್ಮನೇತಕೆ ದೂಷಿಸಲಿ
ರಾಜಪ್ರತಿಷ್ಠೆಯ ಹೆಸರಿನಲಿ
ದ್ಯೂತವಾಡಿದ ನನಗಿದೇ ಶಿಕ್ಷೆ.
ವಿಧಿಬರಹವಿಂತಿರಲು ಆರೇನು
ಮಾಡುವರು? ಬಂದುದನು
ಬಿಡುಗೈಯಲಿ ಬರಮಾಡಿಕೊಳುವೆ.

**ಕುಂತಿ :** ಮಗುವೆ ನಾ ನಡೆವೆ ಕಾನನಕೆ
ನಿಮ್ಮೊಡನೆ ನಿಮಗಿರಿಸೆ ವಾತ್ಸಲ್ಯ
ಕೊಡೆಯ ನೆರಳ. ಎನ್ನ ಕುಡಿಗಳು
ಎಲ್ಲೊ ಅಲ್ಲೆ ನನ್ನಿರವಿರಲಿ
ನಾನಿಲ್ಲಿ ಸುಖದ ಸುಪ್ಪತ್ತಿಗೆಯಲಿರಲು
ನ್ಯಾಯವೇನು? ನನ್ನೀ ಪ್ರಿಯಸೊಸೆಯ
ಸಾಂಗತ್ಯದಲಿ ಸಹಿಸುವೆನು ನಿಮ್ಮೊಡನೆ
ನಿಮಗಾದ ಬವಣೆಗಳು ನನಗು ಇರಲಿ.

**ಗಾಂಧಾರಿ :** ಕುಂತಿ ಏನಿದೀ ಮಾತು?
ಪಣ ಪ್ರತಿಜ್ಞೆಗಳು ಸೇಡುಗೀಡುಗಳು
ನಮ್ಮ ನಮ್ಮೊಳಗೇಕೆ? ನಿನ್ನೆದೆಯ
ತುಡಿತವ ಬಲ್ಲೆನಾ ನನ್ನ ಮಾತ ಕೇಳು
ಎನ್ನಂತಃಪುರದಲಿ ಎನ್ನೊಡನೆ
ನೀನು ಈ ನಿನ್ನ ಮುದ್ದು ಸೊಸೆ
ಪಾಂಚಾಲಿಗಿಲ್ಲವೇ ಎಡೆಯಿಷ್ಟು ಹೇಳು.
ಕಾನನವಾಸವದು ಕಡುಕಷ್ಟಕರ
ಅಬಲೆಯರು ನಾವೆಂತು ಸಹಿಸಬಲ್ಲೆವು.

**ಕುಂತಿ :** ಸಾಕಕ್ಕ ನಿಮ್ಮ ಅಕ್ಕರೆಯ ಮಾತುಗಳು.
ನಾವೆಲ್ಲರಿದ್ದೇ ನನ್ನ ಸೊಸೆಗಿಂತು ಪಾಡು!
ನನ್ನ ವೀರ ಮಕ್ಕಳ ಕಾವಲಿದ್ದೂ ನಡೆದ
ಘೋರಗಳು ಅವರಿಲ್ಲದಾಗೆ
ಬೇಲಿಯಿಲ್ಲದ ಹೊಲವಾದೀತು ನಮ್ಮ ಬದುಕು
ನಮ್ಮ ನೆರಳಿಗೂ ಸಿಡುಕುವ
ಕುದಿದು ಕರುಬುವ ನಿಮ್ಮ ಮಕ್ಕಳ
ದೃಷ್ಟಿಗೆ ಬಿದ್ದು ಬದುಕುವುದಂತೂ ದೂರವಾಯ್ತು.

ಮೋಹ ಮತ್ಸರ ಸೇಡುಗಳ
ನಡುವಲ್ಲಿ ಬದುಕಿ ಬಾಳುವುದಕ್ಕಿಂತ
ಕಾಡಿನ ಪ್ರಶಾಂತತೆಯಲ್ಲಿ ನಿಶ್ಚಿಂತೆ ಬಾಳು!
ಗೆಡ್ಡೆ ಗೆಣಸುಗಳುಣಿಸು ಪ್ರೀತಿ ಪರಿಸರದಲ್ಲಿ
ಅಮೃತದ ಸವಿಯು, ಅದುವೆ ಔತಣವು!

**ಗಾಂಧಾರಿ :** ಮುನಿದು ಕೆಡೆನುಡಿಯುವಿರಿ.
ನನಗಿಲ್ಲವೇ ಮನಸು ಮರುಕ.
ನಾ ಬಯಸಿ ತಂದೆನೇ ಬವಣೆಗಳ ನಿಮಗೆ?
ಓ ದೇವರೇ ಇನ್ನು ಜೀವಿಸಲೇಕೆ?
ಆಪ್ತರೆನ್ನುವರೆಲ್ಲ ಆಲಿಸರು ಮೊರೆಯ
ಎದೆಯಾಳದಾ ಪ್ರೀತಿ ಅರಿಯರೆನ್ನ.
ಇನ್ನೇಕೆ ಈ ಬಾಳ್ವೆ? ಸಾವೇ ಬಾ ಬೇಗ.
ಬಯಸಿ ವರಿಸಿದೆ ನಾ ಕತ್ತಲಿನ ಬದುಕನ್ನು
ಬಯಸಿದರೆ ಬರಬಹುದೆ ಬೆಳಕಿನಾ ಕುಡಿಯು.
ನನ್ನ ಪಾಡನು ಯಾರು ಕೇಳಿ ಹರಿಸುವರು
ನಾ ಪಾಪಿ ದುಷ್ಟ ಸಂತತಿಯ ಪಡೆದವಳು.

**ಧರ್ಮಪುತ್ರ:** ನಿನ್ನ ನೀ ಹಳಿಯದಿರು ತಾಯೆ.
ಆದುದಾಯಿತು ಇನ್ನು ಚಿಂತೆಯೇಕೆ?
ಎನ್ನಮ್ಮ ಕುಂತಿ ಬಳಲಿದಳು ಬಹುವಾಗಿ
ತ್ರಾಣವಿಲ್ಲವು ಕಾನನದ ಬದುಕಿಗೆ.
ಇರಿಸಿ ನಡೆವೆವು ವಿದುರನರಮನೆಯಲಿ
ಕ್ಷೇಮವವಳದು ತಿಳಿಯುತಿರಿ ತಾಯಿ.
ನಿಮ್ಮ ಪ್ರೀತಿಯನೆಂದು ಶಂಕಿಸಲಿಲ್ಲ
ಆದರೂ ಸರಿಯಲ್ಲ ನಿಮ್ಮಲುಳಿಯುವುದು.

**ಗಾಂಧಾರಿ :** ನಾನು ನಿರಪರಾಧಿಯಾದರೂ
ಲೋಕ ನನ್ನನ್ನು ನಿಂದಿಸುತ್ತಲೇ ಇರುತ್ತದೆ.

**ಪಾಂಚಾಲಿ:** ಮಕ್ಕಳ ವರ್ತನೆಗೆ ತಂದೆ ತಾಯಿಗಳೇ
ಜವಾಬ್ದಾರರೆಂಬುದು ಲೋಕಾನುಭವದ ಮಾತಲ್ಲವೇ.
ಆತುರದಲ್ಲಿ ಅಸಹನೆಯಲ್ಲಿ ಹುಟ್ಟಿದ
ಮಕ್ಕಳು ಹೀಗಲ್ಲದೆ ಹೇಗೆ ತಾನೇ ಇರಲು ಸಾಧ್ಯ,

**ಗಾಂಧಾರಿ :** ಮಗಳೆ ಪಾಂಚಾಲಿ, ನನ್ನ ಬಸಿರನ್ನೇ ಅವಮಾನ
ಮಾಡುತ್ತಿರುವೆಯಲ್ಲ. ನೀನೂ ಮಕ್ಕಳ ತಾಯಿ,
ನಿನಗಿದು ಅರ್ಥವಾಗುವುದಿಲ್ಲವೇ?

**ಪಾಂಚಾಲಿ :** ಕ್ಷಮಿಸಿ. ನಾನು ತಿಳಿದ ಸತ್ಯವನ್ನೇ
ನುಡಿಯುತ್ತಿರುವೆ. ಲೋಕವೇ ನಿಮ್ಮ
ನೂರು ಮಕ್ಕಳು, ಅದರಲ್ಲೂ ನಿಮ್ಮ
ಹಿರಿಯ ಮಗ ಹುಟ್ಟಿದ ಸಂದರ್ಭವನ್ನು
ನೆನಪಿಸಿಕೊಂಡು ಆಡಿಕೊಳ್ಳುತ್ತಿದೆ.
ಅಸಹನೆಯಲಿ ಹೊಸಕಿದಿರಿ ಗರ್ಭವನು
ಅಕಾಲ ಜನನದ ಪರಿಣಾಮವೇ ಇದು.

**ಗಾಂಧಾರಿ :** (ಕಂಬನಿ ಮಿಡಿಯುತ್ತ)
ಸಾಕು ಮಗಳೆ ಸಾಕು. ಇನ್ನು ನಿನ್ನ ಕತ್ತಿ
ನಾಲಗೆಯನ್ನು ಹಿರಿಯದಿರು. ನನ್ನ ಮಕ್ಕಳೆ
ಷ್ಟಾದರೂ ನನ್ನೊಡಲ ಪಿಂಡಗಳು ನನ್ನೆದೆಯ
ಖಂಡಗಳು. ಸಾಕು ಮಾಡು ಅವರ ನಿಂದನೆ.

**ಧರ್ಮಪುತ್ರ:** ಪಾಂಚಾಲಿ. ನಿನಗಾದ ಅವಮಾನ
ನೀ ಭರಿಸಿದ ನೋವು ನನಗೆ
ತಿಳಿದಿದೆಯಾದರೂ ನಿನ್ನ ಚುಚ್ಚು
ಮಾತುಗಳನ್ನು ಸಾಕು ಮಾಡು.
ದ್ಯೂತ ದುರ್ವ್ಯಸನವೆಂದು ತಿಳಿದೂ
ನಾನದಕೆ ಒಲಿದು ತಂದುಕೊಂಡೆ
ಪರಿಣಾಮಗಳ ಪರಿವೆಯಿಲ್ಲದೆ
ರಾಜ ಪ್ರತಿಷ್ಠೆಯಷ್ಟನ್ನೇ ಮನದಲ್ಲಿ ಧರಿಸಿದೆ.
ಅದಕೆ ನಾನೂ ಬಾಧ್ಯನೆಂದಿರುವಾಗ
ಅವರನ್ನೇ ಏಕೆ ದೂರುವೆ ಪಾಂಚಾಲಿ.

**ಪಾಂಚಾಲಿ :** ಧರ್ಮನಂದನರು ನೀವು. ನಿಮಗೆ
ಎದುರಿನವರ ದುಷ್ಟತನವೂ ನ್ಯಾಯ
ವಾಗಿಯೇ ಕಾಣುತ್ತದೆ. ನಿಮ್ಮ ಧರ್ಮ
ನ್ಯಾಯ, ಸಾಧುತನಗಳು ಬಂದೇಕೆ
ನನ್ನ ಮಾನವನ್ನು ರಕ್ಷಿಸಲಿಲ್ಲ?

ತುಂಬು ಸಭೆಯಲಿ ಪರಪುರುಷರೆದುರಲ್ಲಿ
ವಸ್ತ್ರಾಪಹರಣವಾಗುತ್ತಿದ್ದರೂ
ಕುದಿಯಲಿಲ್ಲ ಕೆರಳಲಿಲ್ಲ.
ಅಸಹಾಯಕನಂತೆ ಅವಮಾನಿತನಂತೆ
ಕೈಕಟ್ಟಿ ತಲೆಬಾಗಿ ಕುಳಿತು ನೀನೂ
ಆ ವಿನೋದವನ್ನು ನೋಡುತ್ತಿದ್ದೆ.
ನಿಸ್ಪಂದನಾಗಿ ನೀನು ಕುಳಿತದ್ದು
ಸಾಲದೆಂಬಂತೆ ಹೊತ್ತಿ ಉರಿಯಲಿದ್ದ
ನಿನ್ನ ತಮ್ಮಂದಿರ ಸ್ವಾಭಿಮಾನವನ್ನೂ ಬತ್ತಿಸಿದೆ.
ಹೆಂಡತಿ ಎನ್ನುವ ಅಭಿಮಾನವಾದರೂ
ನಿನ್ನನ್ನೂ ಸ್ಪರ್ಶಿಸಲಿಲ್ಲವೇ?
ಹೌದು ಹೇಗೆ ಸ್ಪರ್ಶಿಸುತ್ತದೆ. ನಿನಗೊಬ್ಬನಿಗೇ
ಸ್ವಂತವಾಗಿದ್ದರೆ ಉರಿಯುತ್ತಿದ್ದೆಯೇನೋ
ಹಣ್ಣಿನಂತೆ ಹಂಚಿಹೋದವಳು!
ನನ್ನದೆಂಬ ಅಭಿಮಾನ ಹೇಗೆ ಬರುವುದು?

**ಕುಂತಿ** : (ಸಮಾಧಾನಪಡಿಸುತ್ತ)
ಮಗಳೆ ಸಾಕುಮಾಡು ಈ ದೂಷಣೆಗಳನ್ನು
ನನ್ನ ಮಕ್ಕಳು ಧರ್ಮಿಷ್ಠರು, ವೀರಪುರುಷರು
ಮಾತೃವಾಕ್ಯ ಪರಿಪಾಲಕರು. ನನ್ನ ಮಾತಿಗೆ
ಕಟ್ಟುಬಿದ್ದು, ನನ್ನಿಂದ ನನ್ನ ಅಜ್ಞಾನದಿಂದ
ಅಚಾತುರ್ಯದಿಂದ ಹೊರಟ ಒಂದೇ ಒಂದು
ಮಾತನ್ನು ಅಕ್ಷರಶಃ ಪಾಲಿಸಿ ಅನುಭವಿಸು
ತ್ತಿರುವ ನನ್ನ ಮಕ್ಕಳ ಬಗ್ಗೆ ನನಗೆ ಹೆಮ್ಮೆ ಇದೆ.

**ಗಾಂಧಾರಿ** : ನೊಂದಿದ್ದಾಳೆ ಪಾಂಚಾಲಿ. ಅಗ್ನಿ ಕನ್ಯೆಯಾದವಳು
ಅಗ್ನಿಯಂತೆ ಸುಡುವುದನ್ನು ಮಾತ್ರ ಬಲ್ಲಳು!

**ಪಾಂಚಾಲಿ**: ನನ್ನ ಮಾತಿನ ತೀಕ್ಷ್ಣತೆಯಷ್ಟೇ ನಿಮ್ಮನ್ನು
ತಟ್ಟುತ್ತದೆ. ಆದರೆ ನನ್ನ ಅಳಲು. ಕ್ಷಣಕ್ಷಣವೂ
ಅನುಭವಿಸುತ್ತಿರುವ ನರಕಯಾತನೆಯ ಕಲ್ಪನೆ
ಯಾದರೂ ನಿಮಗಿದೆಯೇನು?

**ಧರ್ಮಪುತ್ರ**: ಪಾಂಚಾಲಿ ಮಾತುಗಳಾಡಿ ಪ್ರಯೋಜನವಿಲ್ಲ.
ಪಣದಲ್ಲಿ ಸೋತವರು ನಾವು. ಮಾತಿಗೆ

ಕಟ್ಟುಬಿದ್ದು ವನವಾಸ ಅಜ್ಞಾತವಾಸಗಳನ್ನು
ಅನುಭವಿಸದೆ ತಪ್ಪದು...... ಕೇಳು ಪಾಂಚಾಲಿ,
ಅರಮನೆಯ ಸುಖ ಜೀವನವನ್ನು ವರಿಸಿ
ನಿನ್ನ ತಂದೆಯೆಡೆಗೆ ತೆರಳಿ ಅಲ್ಲಿರು. ನೀನೂ
ವನವಾಸವನ್ನು ಅನುಭವಿಸಬೇಕೆಂದೇನೂ
ನಿಯಮವಿಲ್ಲ.

**ಪಾಂಚಾಲಿ:** ಕ್ಷಮಿಸು ಧರ್ಮನಂದನ
ನನ್ನ ಯಾತನೆ ನನ್ನಿಂದ ಈ ಮಾತುಗಳನ್ನು
ಆಡಿಸಿತು. ನಿಮ್ಮ ಬಲ ಪರಾಕ್ರಮಗಳನ್ನು
ಶಂಕಿಸುತ್ತಿಲ್ಲ. ಆದರೆ ನಿಮ್ಮ ಸಹನೆ, ಶಾಂತಿ
ಗಳು ನನ್ನನ್ನು ಹುಚ್ಚಿಯನ್ನಾಗಿಸುತ್ತಿದೆ, ಅಷ್ಟೆ!
ಯಾವ ರಾಜಭೋಗದ ಅಪೇಕ್ಷೆಯೂ ನನಗಿಲ್ಲ.
ನಿಮ್ಮೆಲ್ಲರ ಸಹಚರಿಯಾಗಿ ಬರುವೆನು
ಆದರೆ ನನ್ನೈವರು ಮಕ್ಕಳ ಪಾಡೇನು?
ಹದಿಮೂರು ವರುಷಗಳ ಅಗಲಿಕೆಯು
ಮರೆಸುವುದಿಲ್ಲವೇ ನನ್ನ ನೆನಪನ್ನು.

**ಧರ್ಮಪುತ್ರ:** ಚಿಂತೆ ಬೇಡ ಪಾಂಚಾಲಿ. ನಿನ್ನ
ಸೋದರನಾಗಲೇ ಆಗಮಿಸಿಹನು
ನಿನ್ನ ಮಕ್ಕಳನೊಯ್ಯೆ. ನಡೆ ನೀನು
ಶೀಘ್ರದಲಿ. ಉಟ್ಟು ಬಾ ವಲ್ಕಲವ
ತೆರಳಬೇಕಿದೆ ಈ ಕ್ಷಣವೆ ಕಾನನಕೆ.
(ಅಷ್ಟರಲಿ ಸೇವಕನೊಬ್ಬನು ಪ್ರವೇಶಿಸಿ)

**ಸೇವಕ :** ಪ್ರಭುಗಳೇ ತಾತಭೀಷ್ಮರು ನಿಮ್ಮೆಲ್ಲರ ಬರವನ್ನು ಬಯಸಿ ಕುಳಿತಿದ್ದಾರೆ.
ಶೀಘ್ರವೇ ಅವರಲ್ಲಿಗೆ ಬರಬೇಕಂತೆ.

**ಧರ್ಮಪುತ್ರ:** ನಡೆ ಸೇವಕ. ಈಗಲೇ ಹೊರಟೆವು. ಹೋಗಿ ತಾತ ಭೀಷ್ಮರಿಗೆ ನಾವು
ಬರುತ್ತಿದ್ದೇವೆಂದು ಹೇಳು.
(ಸೇವಕ ಹೋಗುವನು. ಹಿಂದಿನಿಂದ ಇವರೆಲ್ಲರೂ ಹೊರಡುತ್ತಾರೆ)

೦೦

# ದೃಶ್ಯ – ೩

(ಮೇಳದ ಪ್ರವೇಶ. ಮೇಳ ರಂಗದ ಎಡಬದಿಗೆ ಬಲಬದಿಗೆ ನಿಲ್ಲುತ್ತದೆ)

**ಬಲಮೇಳ :** ವರುಷ ಹನ್ನೆರಡಾಯ್ತು!
ಪಾಂಚಾಲಿ ಏನಾದಳೋ?
ಬಡಪಾಯಿ ಹೆಣ್ಣವಳು
ಕಷ್ಟ ನಷ್ಟಗಳೆಲ್ಲ ಕಾಡಿದವು!

**ಎಡಮೇಳ :** ಕಷ್ಟವಾದರೆ ಏನು ದಿಟ್ಟ ಹೆಣ್ಣು.
ಚಂದ್ರವಂಶದ ಸ್ತ್ರೀರತ್ನ ಅವಳು.
ನ್ಯಾಯನಿಷ್ಠುರೆ, ಸ್ವಾಭಿಮಾನಿ.
ಆದರೆ ವಿಧಿಯವಳ ಕಾಡಿತು
ಕೌರವಾನುಜರ ಕ್ರೌರ್ಯದಲಿ ಸಿಲುಕಿ
ನಲುನಲುಗಿ ಹೋದಳು.

**ಬಲಮೇಳ :** ಸಿಡಿಲವಳು ತನ್ನ ಕಾಡಿದ್ದವರ
ಕಡೆಗಾಣಿಸದೆ ಬಿಡಳು. ದುಷ್ಟ
ದುರ್ಯೋಧನ, ದುಶ್ಯಾಸನರ
ಪಾಲಿಗೆ ಅವಳು ಕಾಳಿ ಕಂಕಾಳಿ
ಸಿಗಿದವರ ರಕುತವ ಕುಡಿದಲ್ಲದೆ
ತಣಿಯೆನೆಂಬ ಪ್ರತಿಜ್ಞೆಯಾಂತವಳು.

**ಎಡಮೇಳ :** ಈಗ ಕಾನನವಾಸದಲಿ ಕಷ್ಟಗಳನು
ಏನು ಅನುಭವಿಸುವಳೋ!!
ವಾಸಿಸಲು ಮನೆಯಿಲ್ಲ

ಉಡಲಲ್ಲಿ ಪಟ್ಟು ಪೀತಾಂಬರವಿಲ್ಲ.
ಉಣಲು ರಾಜಭೋಜನವಿಲ್ಲ
ಸೇವೆಗಿಲ್ಲವಳಿಗೆ ಸಖಿಯರಾರೂ!
ಕ್ರೂರಮೃಗಗಳ ಬೀಡು
ಕಾಮರೂಪಿ ರಕ್ಕಸರ ನಾಡು ಕಾಡು
ಕಲ್ಲುಮುಳ್ಳಿನ ಹಾದಿಗಳು
ಕೋಮಲದ ಪಾದಗಳು ಸಹಿಪವೆಂತು?

ಬಲಮೇಳ : ಪಂಚಪುರುಷರ ಭದ್ರ ಕಾವಲಿನಲ್ಲೂ
ಅವಳ ಹಣೆಬರಹ ಒಳಿತಾಗಲಿಲ್ಲ.
ಪೂರ್ವಜನ್ಮದ ಕರ್ಮ
ಅನುಭವಿಸಲೆಂದೆ ಹುಟ್ಟಿದಳೊ ಈ ಹೆಣ್ಣು?
ರಾಜ್ಯವಿದ್ದರೂ ರಾಜ್ಯವಿಲ್ಲ
ರಕ್ಷೆ ಇದ್ದರೂ ರಕ್ಷೆಯಿಲ್ಲ.
ರಾಜಸೂಯದ ಪುಣ್ಯ ತಲೆಕಾಯಲಿಲ್ಲ
ಅಪ್ರತಿಮ ಶೌರ್ಯವೂ ನೆರವಾಗಲಿಲ್ಲ.

ಎಡಮೇಳ : ಇನ್ನೇನು ಮುಗಿಯಲಿದೆ ಬವಣೆ
ಈ ಹೆಣ್ಣಿನದು, ವನವಾಸ ಮುಗಿದಾಯ್ತು
ಅಜ್ಞಾತವಾಸವಿದೆ. ಕಾಲ ಕದಲಿದೆ ಬೇಗ
ನಮ್ಮ ಸೋದರಿಯ ಅಳಲು ನಮದೆಲ್ಲದು
ಅವಳ ಭಂಗ ನಮ್ಮೆಲ್ಲರಾ ಭಂಗ.
ಹೆಣ್ಣಾಗಿ ಪಡಬೇಕು ಪಾಡುಗಳನೆಂತು?
ಅವಳಿಗಾದ ಪಾಡು ಬೇಡಾರಿಗೂ.
ಕ್ಷೇಮದಲಿ ಗೆಲುವಿನಲಿ ಮರಳಿ ಬರಲಿ
ಮಾನ ಅಭಿಮಾನಗಳ ಕೊಲೆಗೈವವರ
ಕೆರಳಿ ಕೊಲ್ಲಲಿ ಅವರ ಸೇಡು ತೀರಲಿ ಅವಳ.

ಬಲಮೇಳ : ಮುಗಿವುದೆಂದೋ ಏನೋ
ದುಷ್ಟರಾ ಶಾಸನ ಕದಲಿ ಕುಸಿಯು
ವುದೆಂದೋ ಇವರಾಸನ.
ಶಕುನಿ ಸಾಯದೆ ಸಾಯದಿವರೀ
ದುಸ್ಸಾಹಸಗಳು. ದುರ್ನಡತೆಗಳು.

**ಎಡಮೇಳ :** ಅಳುವುದೊಂದೇ ನಮಗೆ
ಉಳಿದ ಹಣೆಬರಹ.
ಕೌರವರ ಪಾಂಡವರ ಸೇಡಿನಾ ಕ್ರೀಡೆ
ನಿಲ್ಲದೆಂದಿಗು ಪ್ರಳಯ ಕಾಲದಾವರೆಗೆ
ಕತ್ತಿಗಳು ಮಸೆಯುವುದು
ರಕ್ತದಾ ಕೋಡಿಗಳು ಉಕ್ಕುಕ್ಕಿ ಹರಿಯುವುವು
ಉಳಿವುದಿಲ್ಲವೂ ಇನ್ನು ಮಾನವಸಂತತಿ
ಮತ್ತೇನು ಬರೆದಿಹುದೊ ಮುಂದೆಮಗೆ ನಿಯತಿ.

**ಬಲಮೇಳ :** ಗಾಂಧಾರಿಗಾದರೂ ಬುದ್ಧಿ ಬೇಡವೇ
ಅರಿಕೆಯಲಿ ಅಂಕುಶವಿಟ್ಟು
ಮಕ್ಕಳನು ಶಿಸ್ತಿನಾ ಬೇಲಿಯಲಿ
ಇರಿಸಲಾರದೆ ಹೋದಳೇನು?

**ಎಡಮೇಳ :** ಅವಳೊಂದು ಅಸೂಯೆಯ ಕೋಳಿ.
ಮತ್ಸರದ ಮೊಟ್ಟೆಗಳನೇ ಇಟ್ಟವಳು.
ನ್ಯಾಯನೀತಿಯ ಮಾತು ತುಟಿಯ ತುಳುಕಿದರೂ
ಎದೆಯಾಳದಲಿ ಮೋಹ ಕವಿಸಿತ್ತು ಕತ್ತಲನು.
ಮಗನಾಸೆ, ದುರಾಸೆ, ಸ್ವಾರ್ಥಗಳು
ಧೃತರಾಷ್ಟ್ರ ಗಾಂಧಾರಿಯರಂತರಂಗದಾಳದ
ತೇಲುವ ತೆಪ್ಪಗಳು.
ಕೌರವನ ಮುನಿಸು ಮನಸು ಕರಗಿಸಿತು.
ಶೋಕ ಶಾಖದಲಿ ಮಿದುವಾಯಿತು.
ಹಠಮಾರಿತನವೊಂದು ನೆಪವಾಯಿತು.
ಧೃತರಾಷ್ಟ್ರನ ಕುರುಡುಗಣ್ಣಲ್ಲಿ
ಮಗನ ವಿಭವದ ಕನಸು ಅರಳಿ ನಿಂತಿತ್ತು.
ಪ್ರಜ್ಞೆಯಾಳದ ಮೂಲೆಯಲ್ಲೊಂದು
ಗೂಗೆ ಬಯಸಿತ್ತು ಪಾಂಡವರ ನಾಶವನು.

**ಬಲಮೇಳ :** ಮಾನವರು ನಾವು ಅಸಮರ್ಥರು.
ವಿಧಿಯ ಬಯಕೆಯೆ ಕಡೆಗೆ ಗೆಲ್ಲುವುದು.
ದೈವ ಹತರಾದವರು ಮೊದಲು ಮಿಂಚುವರು
ಮತ್ತೆಂದೂ ಮಿಣುಕದಂತೆ ಕತ್ತಲಾಗುವರು

ಹಮ್ಮು ಬಿಮ್ಮುಗಳೇ ಅವರಿಗಾಗುವುದು
ಯಮಪಾಶ. ದುಸ್ಸಾಹಸಗಳೇ ದುರಂತವಾಗುವುದು.

ಎಡಮೇಳ : ಪರಮ ಪುರುಷ ಪುರುಷೋತ್ತಮ
ಪಾಂಡವರ ಕಡೆಗಿರಲು ಗೆಲದೆ ಇರರು.
ನ್ಯಾಯವೆಲ್ಲಿದೆ, ಧರ್ಮವೆಲ್ಲಿದೆ
ಅಲ್ಲಿದೆ ಜಯವೆಂದು ನಂಬಿ ನಿಂತವರು.
ಕಡೆಗಾಣಿಸುವನವರ ಕಷ್ಟಗಳ
ತಣಿಸುವನು ಪಾಂಚಾಲಿಯೆದೆಯ ಜ್ವಾಲೆಗಳ.

೦೦

## ದೃಶ್ಯ – ೪

(ವಿರಾಟನಗರಿ. ಸುದೇಷ್ಣೆಯನ್ನು ಸುತ್ತುವರಿದು ನಾಲ್ಕೈದು ಮಂದಿ ದಾಸಿಯರು ನಿಂತಿದ್ದಾರೆ. ಕೆಲವರು ಅವಳಿಗೆ ಚಾಮರ ಹಾಕುತ್ತಿದ್ದಾರೆ. ಮತ್ತೆ ಕೆಲವರು ಅವಳನ್ನು ಅಲಂಕರಿಸುತ್ತಿದ್ದಾರೆ. ಸುದೇಷ್ಣೆ ತುಂಬ ಗೆಲುವಾಗಿ ಇದ್ದಾಳೆ.)

(ದಾಸಿಯೊಬ್ಬಳ ಪ್ರವೇಶ)

ದಾಸಿ : ಒಡತಿ, ಯಾರೋ ಅಸಹಾಯಕಳಂತೆ ಕಾಣುತ್ತಿರುವ ಸುಂದರ ಸ್ತ್ರೀಯೊಬ್ಬಳು ತಮ್ಮನ್ನು ಕಾಣಲು ಬಯಸುತ್ತಿದ್ದಾಳೆ.

**ಸುದೇಷ್ಣೆ** : (ಆಶ್ಚರ್ಯದಿಂದ) ನನ್ನನ್ನು ಕಾಣಲು ಬಯಸುತ್ತಿದ್ದಾಳೆಯೇ? ಹೋಗು ಆಕೆಯನ್ನು ಬರಮಾಡು.

(ದಾಸಿ ಹೋಗುವಳು. ಸ್ವಲ್ಪ ಹೊತ್ತಿನ ನಂತರ ಪಾಂಚಾಲಿಯನ್ನು ಒಡನೆ ಕರೆದು ತರುವಳು.)

**ಸುದೇಷ್ಣೆ** : (ಪ್ರವೇಶಿಸುತ್ತಿರುವ ಪಾಂಚಾಲಿಯನ್ನು ನೋಡಿ)

ಬಾ ಹೆಣ್ಣೆ ಬಾರಿಲ್ಲಿ ಬಳಿಗೆ ಬಾ ಬೇಗ
ಯಾರು ನೀನೇಕೆ ಬಂದೆ ಇಲ್ಲಿಗೆ?
ನಿನ್ನ ಅದ್ಭುತ ಸೌಂದರ್ಯ ನಮ್ಮನ್ನೇ ಮೂರ್ಛೆ
ಗೊಳಿಸುವಂತಿದೆಯಲ್ಲ! ನೀನೇಕೆ ಈ ಮಲಿನ
ವಸ್ತ್ರಗಳಿಂದ ಕೂಡಿ ದುಗುಡ ಅಸಹಾಯಕತೆ
ಗಳನ್ನು ತುಂಬಿಕೊಂಡಿರುವೆ, ನೀ ಯಾರು
ನಿನ್ನವರು ಯಾರು ಹೇಳು ಕಮಲಮುಖಿ.
ನನ್ನಿಂದಲೇನಹುದು? ನಿನಗೆಂತ ಸಹಾಯ?

**ಪಾಂಚಾಲಿ(ಸೈರಂಧ್ರಿ):** ನಾನು ಸೈರಂಧ್ರಿ. ಅತುಳ ಬಲ ಪರಾಕ್ರಮದ ಗಂಧರ್ವರು ಐದು ಮಂದಿ ಗಂಡಂದಿರು ನನಗೆ. ಅವರೊಂದಿಗಿನ ಘರ್ಷಣೆ ಮನಸ್ಸಿಗೆ ಬೇಸರವಾಗಿ ಒಂದಿಷ್ಟು ವರುಷ ಅವರಿಂದ ದೂರವಿರಲು ಅಜ್ಞಾತವಾಗಿರಲು ನಿರ್ಧರಿಸಿದ್ದೇನೆ. ಅಸಹಾಯಕಳಾದ ನನಗೆ ಪಾಂಚಾಲಿಯ ಸೇವೆ ಮಾಡುವ ಅದೃಷ್ಟವಿತ್ತು. ಆದರೆ ಕಾಲ ಪರಿಸ್ಥಿತಿಯಿಂದಾಗಿ ಅವರಿಗೊದಗಿದ ಕಷ್ಟಗಳಿಂದಾಗಿ ಅವರನ್ನು ತೊರೆದು ಬರಬೇಕಾಯಿತು ಆದರೆ ಈಗ ಅಸಹಾಯಕಳು. ಅಬಲೆಯೂ ಆದ ನನಗೆ ನಿಮ್ಮ ಸೇವೆ ಲಭಿಸಿದರೆ ಹೆಣ್ಣಾದ ನನಗೆ ಒಂದು ಭದ್ರ ನೆಲೆ ಏರ್ಪಡುತ್ತದೆ.

**ಸುದೇಷ್ಣೆ :** ಗಂಧರ್ವರ ಪತ್ನಿಯಾದ ನೀನು ಮಾನವಳಾದ ನನ್ನ ಸೇವೆಯನ್ನು ಹೇಗೆ ಮಾಡಬಲ್ಲೆ?

**ಸೈರಂಧ್ರಿ :** ಪರಿಸ್ಥಿತಿಗಳು ಮನುಷ್ಯನ ಅಹಂಕಾರ, ಸ್ವಾಭಿಮಾನಗಳೆಲ್ಲವನ್ನೂ ಕಸಿದುಕೊಂಡು ಬಿಡುವುದರಿಂದ ಎಂತಹ ದೀನ ವೃತ್ತಿಯನ್ನಾದರೂ ಮಾಡಲೇಬೇಕಾದ ಸನ್ನಿವೇಶ ಏರ್ಪಡುತ್ತದೆ.

**ಸುದೇಷ್ಣೆ :** ಬಹಳ ನೊಂದಿರುವಂತೆ ಕಾಣುತ್ತದೆ.
ಮನಸ್ಸಿಗೆ ಹಚ್ಚಿಕೊಳ್ಳಬೇಡ.
ನಿನಗೆ ನನ್ನ ಮಂದಿರದಲ್ಲಿ ಬೇಕಾದ ರಕ್ಷಣೆ
ಸಿಗುತ್ತದೆ. ನಿನ್ನ ಕೈಲಾದ ಸಹಾಯವನ್ನು
ಮಾಡಿಕೊಂಡಿರು. ನಿನ್ನನ್ನು ನೋಡಿದ
ಕೂಡಲೇ ನಾನೇಕೋ ಮೋಹಿತಳಾದೆ.

**ಸೈರಂಧ್ರಿ :** ಮುಡಿ ಕಟ್ಟಿ ಸಿಂಗರಿಸಿ ತೀಡಿ ತಿದ್ದಿ
ಸುಂದರವಾಗಿ ಕಾಣುವಂತೆ ಮಾಡಬಲ್ಲೆ
ಪರಿಪರಿಯ ಪುಷ್ಪಾಲಂಕಾರಗಳನ್ನೂ
ರಚಿಸಬಲ್ಲೆ. ಚಂದನವ ತೇದಿ ತಂಪು
ಕಂಪುಗಳನ್ನು ಒದಗಿಸಬಲ್ಲೆ.

**ಸುದೇಷ್ಣೆ :** ಭಲಾ ಸೈರಂಧ್ರಿ. ನನಗೆ ನೀನು ನಿಜವಾಗಿಯೂ ಹೃದಯಕ್ಕೆ ಹತ್ತಿರಳಾದೆ. ನೀನು ನನ್ನನ್ನು ಸೇವಿಸಿದರೂ ಸೇವಿಸದಿದ್ದರೂ ನನಗೆ ಅಭ್ಯಂತರವಿಲ್ಲ. ರಾಣೀವಾಸಕ್ಕೆ ಒಂದು ಭೂಷಣಪ್ರಾಯ.

**ಸೈರಂಧ್ರಿ** : ಅನವಶ್ಯಕವಾಗಿ ನನ್ನನ್ನು ಹೊಗಳಿ ನನಗೆ ಸಂಕೋಚವನ್ನು ಉಂಟುಮಾಡುತ್ತಿದ್ದೀರಿ. ನನಗೆ ಆಶ್ರಯಕೊಟ್ಟು ಬಹಳ ಉಪಕಾರ ಮಾಡಿದಿರಿ. ಕಾಮುಕ ಗಂಡಸರೆ ಹೊರಗೆ ತುಂಬಿರುವಾಗ ಒಂಟಿಹೆಣ್ಣು ನಾನು ಹೇಗೆ ಸುರಕ್ಷಿತವಾಗಿ ಇರಬಲ್ಲೆ? ಸ್ವಲ್ಪವೂ ಹಿಂದು ಮುಂದು ಆಲೋಚಿಸದೆ ನನ್ನನ್ನು ನಿಮ್ಮ ಆಶ್ರಯಕ್ಕೆ ತೆಗೆದುಕೊಂಡಿರಿ. ಅಷ್ಟೇ ಸಾಕು!

**ಸುದೇಷ್ಣೆ** : ಸಾಕು ಸೈರಂಧ್ರಿ. ಇನ್ನು ಹೆಚ್ಚು ಹೊಗಳಿದರೆ ನಮಗೆ ತಲೆ ತಿರುಗಿ ಹೋದೀತು. ಅದು ಸರಿ ನಾನು ನಿನ್ನನ್ನು ಒಂದು ಪ್ರಶ್ನೆ ಕೇಳಲೇ?

**ಸೈರಂಧ್ರಿ** : ಕೇಳಿ ಒಡತಿ. ನಾನು ಉತ್ತರಿಸಬಲ್ಲೆನಾದರೆ? ಪ್ರಯತ್ನಿಸುತ್ತೇನೆ.

**ಸುದೇಷ್ಣೆ** : ನೀನು ಪಾಂಚಾಲಿಯ ಸೇವೆಯಲ್ಲಿದ್ದೆಯೆಂದು ಹೇಳಿದೆ. ಪಾಂಚಾಲಿ ಮತ್ತು ಪಾಂಡವರ ಬಗ್ಗೆ ನಾನೇನೋ ಕೇಳಿದೆ. ವಿಶೇಷವಾಗಿ ಪಾಂಚಾಲಿಯ ಅವಮಾನದ ಬಗ್ಗೆ ಕೇಳಿದೆ. ನನಗೇನು ಗೊತ್ತು ಅವಳ ವಿಷಯ? ಈಗೊಂದಷ್ಟು ವರುಷಗಳಿಂದ ಅವರೇನೋ ಕಾನನ ವಾಸಕ್ಕೆ ಹೋಗಿದ್ದಾರೆ ಎಂದು ಕೇಳಿದೆ. ನಿಜವೇನು?

**ಸೈರಂಧ್ರಿ** : ಬಿಡು ಒಡತಿ. ಗತಿಸಿ ಹೋದುದನ್ನು ನೆನಪಿಸಿಕೊಂಡರೆ ಮೈಯೆಲ್ಲ ಉರಿಯುತ್ತದೆ. ಆ ಕೌರವವನ್ನು ಸೀಳಿಬಿಡಬೇಕೆನಿಸುತ್ತೆ. ಅವರು ಮನುಷ್ಯರಲ್ಲ ರಾಕ್ಷಸರು! ರಾಕ್ಷಸರು. ರಾಕ್ಷಸರಿಗಾದರೂ ಸಂಸ್ಕಾರ ಇದ್ದೀತು. ಇವರಿಗೆ ಮಾತ್ರ ಸಂಸ್ಕಾರವೂ ಇಲ್ಲ ಮನುಷ್ಯತ್ವವೂ ಇಲ್ಲ.

**ಸುದೇಷ್ಣೆ** : ಸೈರಂಧ್ರಿ, ಪಾಂಚಾಲಿಗೆ ಪಾಂಡವರಿಗೆ ಆದ ಅನ್ಯಾಯ, ನೋವಿಗೇ ನೀನಿಷ್ಟೊಂದು ಸಿಟ್ಟುಗೊಳ್ಳುವೆಯಲ್ಲ, ನಿನಗೇ ಆದಂತೆ!

**ಸೈರಂಧ್ರಿ** : ಪಾಂಚಾಲಿ ನನ್ನನೆಂದೂ ದಾಸಿಯಂತೆ ನಡೆಸಿಕೊಳ್ಳಲಿಲ್ಲ. ಎರಡು ದೇಹ ಒಂದು ಜೀವ ಇದ್ದಂತೆ ಇದ್ದೆವು. ಅವಳಿಗಿಷ್ಟಾದರೂ ನೋವುಂಟಾದರೆ ನನಗೆ ಸಹಿಸುವುದಕ್ಕಾಗುವುದಿಲ್ಲ. ಪಾಪ, ದೇವತೆಗಳಂತಿದ್ದ ಪಾಂಡವರ ಪತ್ನಿಯಾಗಿಯೂ ತುಂಬಿದ ಸಭೆಯಲ್ಲಿ ಅವಳಿಗೆ ಎಷ್ಟೊಂದು ಅವಮಾನವಾಯಿತು ಗೊತ್ತೇ!.....ನನಗೆ ಸಾಧ್ಯವಿದ್ದಿದ್ದರೆ ಕಾಳಿಯ ಅವತಾರ ತಾಳಿ ಆ ಕೌರವಕುಲವನ್ನೇ ಇಲ್ಲದಂತೆ ಅಳಿಸಿ ಬಿಡುತ್ತಿದ್ದೆ. ತೊಡೆತಟ್ಟಿ ಕರೆವ ಕೌರವನು ಒಂದು ಕಡೆ, ತುರುಬಿಗೆ ಕೈ ಹಚ್ಚಿ ಒಂದಲೆಯ ಕೂದಲನ್ನು ಹಿಡಿದು ಎಳೆದುಕೊಂಡು ಅಸಭ್ಯವಾಗಿ ವರ್ತಿಸುವ ದುಶ್ಯಾಸನ ಒಂದು ಕಡೆ....ಓಹ್ ನೆನಸಿಕೊಂಡರೆ....ಮೈ ಮುಳ್ಳಾಗುತ್ತದೆ. ಅವಳ ಅಸಹಾಯಕತೆಗೆ ಕೋಪ ಬರುತ್ತದೆ. ಅವಳ

ಮನಸ್ಸಿಗೆ ಆಗಿರಬಹುದಾದ ನೋವನ್ನು ನೀವು ಊಹಿಸಿಕೊಳ್ಳಲೂ ಸಾಧ್ಯವಿಲ್ಲ.

**ಸುದೇಷ್ಣೆ** : ಸೈರಂಧ್ರಿ, ಅಸಮಬಲರಾದ ಐದು ಜನ ಗಂಧರ್ವರ ಪತ್ನಿಯಾದವಳು ಅವಳ ಸೇವೆಯಲ್ಲಿ ಇರುವುದೇ?... ನನಗೇಕೋ ನಂಬಿಕೆಯಾಗುತ್ತಿಲ್ಲ.

**ಸೈರಂಧ್ರಿ** : (ನಿಟ್ಟುಸಿರಿಟ್ಟು) ನಾವು ಶಾಪಗ್ರಸ್ತ ಗಂಧರ್ವರು ಒಡತಿ. ಅಲ್ಲದೆ ಐದು ಜನ ಗಂಡಂದಿರಾದದ್ದು ಒಂದು ದೊಡ್ಡ ತಪ್ಪು. ಮಾಡಿದಂತೆ ಆಯಿತು. ಒಬ್ಬಳಿಗೆ ಒಬ್ಬನೇ ಗಂಡನೆಂದಾದಾಗ ಸಮಸ್ಯೆಗಳು ಹೆಚ್ಚು ಇರುವುದಿಲ್ಲ. ನಾನೀ ಸ್ಥಿತಿಗೆ ಬರುವುದಕ್ಕೆ ಐದು ಜನ ಗಂಡಂದಿರೇ ಕಾರಣವೆಂದರೆ ನಿಮಗೆ ಅಚ್ಚರಿಯೆನಿಸಬಹುದು. ಒಬ್ಬರ ಆಲೋಚನೆಯಂತೆ ಮತ್ತೊಬ್ಬರು ಇರಲಾರರು. ಅದಕ್ಕೇ ನಡುವೆ ಘರ್ಷಣೆ ಉಂಟಾಗುತ್ತಿರುತ್ತದೆ. ನಾವು ಅನುಭವಿಸಬೇಕಾಗುತ್ತದೆ.

**ಸುದೇಷ್ಣೆ** : ಹೋಗಲಿಬಿಡು ಸೈರಂಧ್ರಿ. ಇಲ್ಲದ್ದನ್ನು ಕೇಳಿ ನಿನ್ನ ಮನಸ್ಸಿಗೆ ಬೇಸರ ಮಾಡಿದೆ. ಹೋಗು ನನ್ನ ಈ ಸಖಿಯರು ನಿನ್ನ ವಾಸಕ್ಕೆ ವ್ಯವಸ್ಥೆಯನ್ನು ಮಾಡುವರು.

**ಸೈರಂಧ್ರಿ** : ಅನುಗ್ರಹೀತಳಾದೆ.

**ಸುದೇಷ್ಣೆ** : ಅಂತಹ ಮಾತುಗಳು ಬೇಡ. ನೆನಪಿರಲಿ.

(ಸೈರಂಧ್ರಿ ಉಳಿದ ಲಲನೆಯರೊಂದಿಗೆ ಹೋಗುವಳು. ಸುದೇಷ್ಣೆ ಅವಳು ಹೋದ ದಿಕ್ಕನ್ನೇ ಮುಗುಳ್ನಗುತ್ತ ದಿಟ್ಟಿಸುತ್ತಾಳೆ)

೦೦

# ದೃಶ್ಯ - ೫

(ಸುದೇಷ್ಣೆಯ ಮಂದಿರ. ಸುದೇಷ್ಣೆ ಸಖಿಯರೊಡನೆ ಚದುರಂಗವಾಡುತ್ತಿದ್ದಾಳೆ. ಸುದೇಷ್ಣೆಯ ತಮ್ಮ ಕೀಚಕ ನೇರವಾಗಿ ಸುದೇಷ್ಣೆ ಇರುವಲ್ಲಿಗೆ ಬರುತ್ತಾನೆ. ಆಕಸ್ಮಿಕವಾಗಿ ಒಳನುಗ್ಗಿದ ಕೀಚಕನ ರೀತಿಯನ್ನು ನೋಡಿ ಗಾಭರಿಯಿಂದ ಎಲ್ಲರೂ ಬೆಚ್ಚಿ ಬೀಳುತ್ತಾರೆ. ಬೆಚ್ಚಿದ ಯುವತಿಯರ ನಡುವೆ ಇನ್ನೂ ಭಯಕಂಪಿತಳಾಗಿ ಚೇತರಿಸಿಕೊಳ್ಳಲಾಗದೆ ಪ್ರಜ್ಞಾಶೂನ್ಯಳಾಗಿದ್ದ ಸೈರಂಧ್ರಿಯನ್ನೇ ಆಶ್ಚರ್ಯ ಮೆಚ್ಚುಗೆಗಳಿಂದ ನೆಟ್ಟ ನೋಟದಿಂದ ನೋಡುತ್ತಿದ್ದ ತಮ್ಮನನ್ನು ನೋಡಿದ ಸುದೇಷ್ಣೆ ಅವನನ್ನು ಸ್ಪರ್ಶಿಸಿ ಅಲುಗಿಸುತ್ತಾಳೆ)

**ಸುದೇಷ್ಣೆ** : ತಮ್ಮ, ಕೀಚಕ. ಏನಿದೇನಿದು ರೀತಿ. ಯಾವ ಕನಸಿನ ಲೋಕದಲ್ಲಿದ್ದೀ?...... ಇಲ್ಲಿ ನೋಡು ನಾನು...........ನಾನು ನಿನ್ನ ಅಕ್ಕ ಸುದೇಷ್ಣೆ!

**ಕೀಚಕ** : (ಗಾಭರಿಯಿಂದ ಎಚ್ಚರಗೊಂಡು) ಹಾಂ!.........ನೀನಾ....... (ಎಂದು ನಗುವನು.)

**ಸುದೇಷ್ಣೆ** : ಏನು ಕೀಚಕ. ನನ್ನರಮನೆಗೇ ಬಂದು, ನನ್ನನ್ನೇ 'ನೀನಾ'? ಎಂದು ಬಾಯಿಬಿಟ್ಟುಕೊಂಡು ಕೇಳುತ್ತಿರುವೆಯಲ್ಲ. ಎಲ್ಲಿತ್ತು ನಿನ್ನ ಧ್ಯಾನ....? ಹೇಳು ಯಾವಾಗ ಬಂದೆ? ಎಲ್ಲವೂ ಕುಶಲವೇ?

**ಕೀಚಕ** : ಹೂಂ! ಎಲ್ಲವೂ ಕುಶಲ. ಎಲ್ಲರೂ ಕುಶಲ. ಆದರೆ ನನಗೆ ಕುಶಲವಿಲ್ಲ. (ನಿಟ್ಟುಸಿರು)

**ಸುದೇಷ್ಣೆ** : ನಿನಗೇನಾಗಿದೆ ದಾಢಿ! ದಷ್ಟಪುಷ್ಟನಾಗಿ ಸಾವಿರ ಆನೆಬಲ ಹೊಂದಿದವನು ನೀನು. ನಿನಗೇನಾಗಲು ಸಾಧ್ಯ? ಸುಳ್ಳೇ ಮಾತನಾಡಬೇಡ.... ಹೇಳು ಈ ಅಕ್ಕನನ್ನು ಕಾಣುವ ಮನಸ್ಸಾಯಿತು ಹೇಗೆ?

**ಕೀಚಕ** : ಅಕ್ಕ ನಿನ್ನನ್ನು ಕಾಣುವ ವಿಷಯ ಒತ್ತಟ್ಟಿರಲಿ. ನಿನ್ನ ಸಖೀ ಸಮೂಹದಲ್ಲಿ ಹೊಸಬಳೆಂಬಂತೆ ಕಾಣುತ್ತಿರುವ ಈ 'ಚಂದ್ರಕಾಂತಿ' ಯಾರು.....? ಮೊದಲು ಹೇಳು ಅದನ್ನು. ನಂತರ ಉಳಿದದ್ದು.

**ಸುದೇಷ್ಣೆ** : ಅಬ್ಬ! ನಿನ್ನ ಈ ದರಿದ್ರ ಬುದ್ಧಿಯನ್ನು ಮಾತ್ರ ಹೋಗಗೊಡುವುದಿಲ್ಲ. ನನ್ನ ಅಂತಃಪುರದ ಹೆಣ್ಣುಗಳ ಮೇಲೆ ನೀನು ದಯವಿಟ್ಟು ಕಣ್ಣು ಹಾಕಬೇಡ.

**ಕೀಚಕ** : (ಅಟ್ಟಹಾಸದಿಂದ) ಹ್ಹ!ಹ್ಹ! ಹ್ಹ! ಏನಂದೆ ಕಣ್ಣು ಹಾಕಬೇಡವೇ? ಚೆನ್ನಾಗಿ ಹೇಳಿದೆ. ನಕ್ಷತ್ರ ಕನ್ನೆಯರ ನಡುವೆ ಫಳ ಪಳ ಹೊಳೆಯುತ್ತ ನಿಂತ ರೋಹಿಣಿ, ಅಪ್ಸರ ಸಮೂಹದಲ್ಲಿ ಒಡೆದೆದ್ದು ಕಾಣುವ ಊರ್ವಶಿ, ಮನಸಿಜನ ಮದ್ದಾನೆ! ನೋಟ ಮಾತ್ರದಿಂದಲೇ ತಡಬಡಿಸುವಂತೆ ಮಾಡುವ ಈಕೆಯ ಮೇಲೆ ಕಣ್ಣು ಹಾಕಬಾರದೇ? ಮದನ ತಾಪದ ಕಿಡಿಗಳು ಹೊತ್ತಿ ಉರಿದು ಬೆಂಕಿಯಾಗಿ ನನ್ನನ್ನು ಸುಡುತ್ತಿವೆ.....ಅಕ್ಕ ನಿನ್ನ ದಮ್ಮಯ್ಯ. ನಿನ್ನ ತಮ್ಮನಾಗಿ ಇಂದು ನಾನೊಂದು ಕೇಳುವೆ. ಇಲ್ಲ ಎನಬೇಡ.

**ಸುದೇಷ್ಣೆ** : (ಅನುಮಾನದಿಂದ) ಕೇಳಬಹುದಾದದ್ದನ್ನು ಕೇಳಿದರೆ ಕೊಟ್ಟೇನು. ಕೇಳಬಾರದ್ದನ್ನು ಕೇಳಿದರೆ ನಾನು ಭರವಸೆ ನೀಡಲಾರೆ.

**ಕೀಚಕ** : ಯಾರಕ್ಕ ಇವಳು? ನಿನಗೆ ಎಲ್ಲಿಂದ ಸಿಕ್ಕಿತು ಈ ವಜ್ರ? ಅಮೂಲ್ಯವಾದ ಈ ರತ್ನವನ್ನು ನಿನ್ನ ಊಳಿಗದಲ್ಲಿ ಇರಿಸಿಕೊಂಡು ಅವಮಾನ ಮಾಡುವುದೇ?

**ಸುದೇಷ್ಣೆ** : ತಮ್ಮ ಅವಳು ಯಾರಾದರೇನು? ಅವಳ ವಿಷಯವಾಗಿ ತಲೆ ಕೆಡಿಸಿಕೊಳ್ಳಬೇಡ. ಅವಳ ಪಾಡಿಗೆ ಅವಳನ್ನು ಬಿಟ್ಟು ಮೊದಲು ಇಲ್ಲಿಂದ ನಡೆ. ಅವಳ ಗಂಡಂದಿರಿಗೆ ಗೊತ್ತಾದರೆ ನಿನ್ನನ್ನು ಸೀಳಿ ಬಿಟ್ಟಾರು.

**ಕೀಚಕ** : ಅಕ್ಕ ನೀನು ಏನು ಹೇಳಿದರೂ ಕೇಳುವವನಲ್ಲ. ಅವಳ ಪ್ರೀತಿಯನ್ನು ಅವಳ ಸುಖವನ್ನು ಅನುಭವಿಸಿದಲ್ಲದೆ ನನ್ನ ಮನಸ್ಸಿಗೆ ನೆಮ್ಮದಿಯಿಲ್ಲ. ರಾಜಕಾರಣ ಬೇಡ. ಸಮರ ಸಂಗತಿ ಬೇಡ. ಇನ್ನು ನನಗೆ ಊಟ ನಿದ್ದೆಗಳೇ ಬೇಡವೆನಿಸುತ್ತಿದೆ (ನಡುಗುತ್ತ ನಿಂತಿರುವ ಸೈರಂಧ್ರಿಯ ಕಡೆ ತಿರುಗಿ) ಬಾ ಹೆಣ್ಣೇ, ಅತುಲಬಲ ಪರಾಕ್ರಮದ ಈ ಬಾಹುಕೋಟೆಯಲ್ಲಿ ನೀನು ಭದ್ರವಾಗಿ ಇರುವೆಯಂತೆ! ನಿನ್ನ ನೋಟವೆ ಕಾಮನ ಈಟಿಯಾಗಿ ನನ್ನನ್ನು ಇರಿದುಕೊಲ್ಲುತ್ತಿದೆ.

**ಸುದೇಷ್ಣೆ** : ಬೇಡ ತಮ್ಮ ಬೇಡ. ಅವಳ ತಂಟೆಗೆ ಹೋಗಬೇಡ. ಅವಳು ಬಹಳ ಸ್ವಾಭಿಮಾನಿಯಂತೆ ಕಾಣುತ್ತಾಳೆ. ಅಲ್ಲದೆ ಅವಳು ಪರಸ್ತ್ರೀ. ಈಗಾಗಲೇ ಮದುವೆಯಾದವಳು. ನಿನ್ನ ಅತಿ ಕಾಮುಕತೆಯೇ ನಿನ್ನನ್ನು ಕೊಂದೀತು. ಈ ಕೂಡಲೇ ಇಲ್ಲಿಂದ ಹೊರಡು.

**ಕೀಚಕ** : ಇಂದು ಮಾತ್ರ ನಿನ್ನ ಮಾತನ್ನು ನಾನು ಕೇಳುವ ಸ್ಥಿತಿಯಲ್ಲಿಲ್ಲ. ನನ್ನನ್ನು ಬೇಕಾದರೆ ಉದ್ಧಟನೆಂದೇ ಭಾವಿಸು.... (ಸೈರಂಧ್ರಿ ಕಡೆ ತಿರುಗಿ) ಬಾ ಹೆಣ್ಣೆ. ನಿನ್ನ ಈ ಅಲೌಕಿಕ ಸೌಂದರ್ಯ ಅನುಭೋಕ್ಷವಾಗದೆ ವ್ಯರ್ಥವಾಗಬಾರದು. ಕಾಮತಾಪದಿಂದ ಕುದಿಯುತ್ತಿರುವ ನನ್ನನ್ನು ನಿನ್ನ ಆಲಿಂಗನ ಚುಂಬನಗಳಿಂದ ತಣಿಸು ಬಾ. ಒಂದು ಕ್ಷಣವನ್ನೂ ಸಹಿಸಲಾರೆ; ತಾಳಲಾರೆ. (ಎಂದು ಗುಂಪಿನ ನಡುವೆಯಿದ್ದ ಸೈರಂಧ್ರಿಯ ಭುಜದ ಮೇಲೆ ಕೈ ಹಾಕುವನು. ಅವಳು ಥಟ್ಟನೆ ಚೀರುವಳು.)

**ಸೈರಂಧ್ರಿ** : (ರೋಷದಿಂದ) ಎಲವೋ ಪಾಪಿ, ದುಷ್ಟ, ನನ್ನನ್ನು ಸ್ಪರ್ಶಿಸಿ ನೀನು ಜೀವಂತ ಉಳಿಯಲಾರೆ. ಅನ್ಯಾಯವಾಗಿ ನನಗೆ ಆಸೆಪಟ್ಟು ನಿನ್ನ ಪ್ರಾಣವನ್ನು ಕಳೆದುಕೊಳ್ಳಬೇಡ. ನೀನು ಅಂದುಕೊಂಡಷ್ಟು ಸುಲಭವಾಗಿ ನಾನು ನಿನಗೆ ದಕ್ಕುವುದಿಲ್ಲ. ಮತ್ತೆಂದಾದರೂ ನಿನ್ನ ಕೈ ನನ್ನನ್ನು ಸ್ಪರ್ಶಿಸಿದ್ದೇ ಆದರೆ ನಿನ್ನನ್ನು ಸುಟ್ಟುಬಿಡುತ್ತೇನೆ.

**ಕೀಚಕ** : ನಾನು ಕಾಮಜ್ವಾಲೆಗಳಲ್ಲಿ ಈಗಾಗಲೇ ಸುಡುತ್ತಿದ್ದೇನೆ. ಮೊದಲು ಅದನ್ನು ತಣಿಸು. ನಂತರ ಬೇಕಾದರೆ ನಿನ್ನ ಸಂತೋಷಕ್ಕಾಗಿ ನಾನು ಅಗ್ನಿ ಪ್ರವೇಶ ಮಾಡುತ್ತೇನೆ.

**ಸೈರಂಧ್ರಿ** : ಬೇಡ ಬೇಡ ಹೇಳುತ್ತಿದ್ದೇನೆ. ಹೆಣ್ಣಿಗಾಗಿ ಆಸೆಪಟ್ಟವರು ಯಾರೂ ಉಳಿಯಲಿಲ್ಲ.

**ಕೀಚಕ** : ಉಳಿಯುವ ಆಸೆಯೂ ನನಗಿಲ್ಲ. ನಿನ್ನಂತಹ ಹೆಣ್ಣಿನ ಸುಖವಿಲ್ಲದೆ, ಆಲಿಂಗನದ ಅನುಭೂತಿ ಇಲ್ಲದೆ, ಕೆಂದುಟಿಯ ಮಧುವ ಸವಿದಲ್ಲದೆ ನಿನ್ನ ಉಬ್ಬಿದ ಎದೆಯ ತಪ್ಪಲಲ್ಲಿ ಸುಖನಿದ್ರೆಗೈಯ್ಯದೆ, ಕಲಕಂಠ ನುಡಿಯ ಅಮೃತವನ್ನು ಆಸ್ವಾದಿಸದೆ ನನಗೆ ಬದುಕಿನಲಿ ಅರ್ಥಕಾಣುವುದಿಲ್ಲ. ನಾನು ಬದುಕಿದ್ದರೂ ಸತ್ತಂತೆಯೇ!....ಆದ್ದರಿಂದ ಬಾ ಮೋಹನಾಂಗಿ ಈ ಒಂದು ಗಳಿಗೆಯ ಸ್ಪರ್ಶಸುಖವನ್ನು ನೀಡು ಬಾ. ನನ್ನೆಲ್ಲ ರಾಜ್ಯ, ಐಶ್ವರ್ಯಗಳನ್ನು ನಿನ್ನ ಕಾಲಡಿಯಲ್ಲಿ ಅರ್ಪಿಸುತ್ತೇನೆ.

**ಸೈರಂಧ್ರಿ** : ಮೂಳ, ಖೂಳ, ಲಂಪಟ, ನಿಜವಾಗಿಯೂ ನೀನು ಯಮಪುರಿಗೆ ಹತ್ತಿರವಾಗುತ್ತಿರುವೆ. ನೀನು ಮಾಡಲು ಹೊರಟಿರುವ ಕೆಲಸದಿಂದ. ನಿನ್ನ ವರ್ತನೆಯಿಂದ ನಿನ್ನ ವಂಶ ಗೌರವವನ್ನು, ನಿನ್ನ ತಂದೆತಾಯಿಯರ ಕೀರ್ತಿಯನ್ನು ಮಣ್ಣುಗೂಡಿಸುತ್ತಿರುವೆ.

**ಕೀಚಕ** : ನನಗೆ ಸಾವಿಗಿಂತಲೂ ನಿನ್ನ ಸುಖವೇ ಮುಖ್ಯ. ಸಾವು ಬಂದರೆ ಬರಲಿ. ಅದಕೆ ಅಂಜುವುದಿಲ್ಲ. ಆದರೆ ಸಾಯುವುದಕ್ಕೆ ಮೊದಲು

ನಿನ್ನನ್ನು ಅನುಭವಿಸದೆ ಬಿಡೆನು. ಬಾ ಕಮಲಮುಖಿ. ನನ್ನ ಮಾತು ಕೇಳು. ನಿನ್ನನ್ನು ಅಂಗಲಾಚಿ ಬೇಡುತ್ತೇನೆ. ಒಂದು, ಒಂದೇ ಒಂದು ರಾತ್ರಿಯನ್ನು ನನಗೆ ಕೊಡು ಸಾಕು.

**ಸುದೇಷ್ಣೆ** : (ಸಿಟ್ಟಿನಿಂದ) ಕೀಚಕ. ನಿನ್ನದೇಕೋ ಅತಿಯಾಯಿತು. ನನ್ನ ರಕ್ಷಣೆಯಲ್ಲಿರುವ ಹೆಣ್ಣನ್ನು ಅಪಾಯದಲ್ಲಿ ಸಿಲುಕಿಸುವುದು, ಅವಳ ಮಾನಹಾನಿಗೆ ಅವಕಾಶ ಮಾಡಿಕೊಡುವುದು ಧರ್ಮವಲ್ಲ. ನಿನ್ನಂತಹ ತಮ್ಮನಿಂದ ನಮ್ಮ ಕೀರ್ತಿ ಹಾಳಾಗಲಿದೆ. ಸಾಕು. ಇನ್ನು ಹೊರಡು.... ಹೊರಡು ಇಲ್ಲಿಂದ..... ನನ್ನ ಮೇಲಾಣೆ....ನೀನು ಹೋಗಲೇಬೇಕು.

**ಕೀಚಕ** : (ಬುಸುಗುಡುತ್ತ) ಅಕ್ಕ ಇಷ್ಟು ಜನ ಹೆಂಗಳೆಯರ ಮುಂದೆ ನನ್ನನ್ನು ಬೈದು ಅವಮಾನಿಸಿ. ನನ್ನ ಸ್ವಾಭಿಮಾನವನ್ನು ಕೆಣಕಿದ್ದೀಯೆ....ಆದರೂ ನಿನ್ನನ್ನು ನಾನು ಗೌರವಿಸುವುದರಿಂದ ಸುಮ್ಮನಿದ್ದೇನೆ. ಒಂದು ಮಾತ್ರ ನೆನಪಿಟ್ಟುಕೋ. ಇಂದಲ್ಲ, ನಾಳೆಯಾದರೂ ನಿನ್ನ ಈ ದಾಸಿಯನ್ನು ದಕ್ಕಿಸಿಕೊಳ್ಳದೆ ಬಿಡುವುದಿಲ್ಲ. (ಎಂದು ರಭಸವಾಗಿ ಅಲ್ಲಿಂದ ಹೊರಡುತ್ತಾನೆ.)

OO

# ದೃಶ್ಯ – ೬

(ಸುದೇಷ್ಣೆಯ ಸ್ವಪ್ನವನ. ಅಂದವಾದ ಹೂ–ಗಿಡಗಳು ಅರಳಿ ನಿಂತಿವೆ. ಸುತ್ತಲೂ ತಣ್ಣನೆಯ ನೆರಳಿನ ಅಶೋಕ ಮರಗಳು. ಒಂದು ಮರದಡಿಯಲ್ಲಿ ಸೈರಂಧ್ರಿ ಚಿಂತಾಮಗ್ನಳಾಗಿ ಕುಳಿತಿದ್ದಾಳೆ. ಒಂದೆರಡು ನಿಮಿಷದ ನಂತರ ಏನನ್ನೋ ಆಲೋಚಿಸುತ್ತಿದ್ದವಳು ಎದ್ದು ನಿಂತು ರಂಗದ ಮುಂಬದಿಗೆ ಬರುತ್ತಾಳೆ.)

**ಸೈರಂಧ್ರಿ** : (ಆರ್ತವಾಗಿ) ಓ ದೈವವೇ ನಿನ್ನಾಟದಲ್ಲಿ ಇನ್ನೆಷ್ಟು ರೂಪಗಳು ಧರಿಸಬೇಕು? ನನಗೇಕೆ ಈ ಪರಿಯ ಕಷ್ಟಗಳು. ಬದುಕಿನುದ್ದಕ್ಕೂ ಸವೆದೆನಲ್ಲದೆ ಸುಖವಿಲ್ಲ. ನೆಮ್ಮದಿಯಿಲ್ಲ. ಈ ಜಗತ್ತೇ ಕಾಮಿ ಖೂಳರಿಂದ ತುಂಬಿರಬೇಕು!.... ಈ ಖೂಳ ಕೀಚಕನಿಂದ ಪಾರಾಗಲಿ ಹೇಗೆ? ಅವನ ನೆನಪು ನನ್ನನ್ನು ದೆವ್ವದಂತೆ ಹೆದರಿಸಿ ಕಾಡುತ್ತಿರುತ್ತದೆ. ಅವನ ವಿಕಟಾಟ್ಟಹಾಸ, ಉನ್ಮತ್ತ ಕಣ್ಣುಗಳು, ಕಾಮೋದ್ರಿಕ್ತ ನಡೆ....ಛಿ! ಛಿ!.... ಅಸಹ್ಯವೆನಿಸುತ್ತದೆ.... ಓ ದೈವವೇ ಎಂತಹ ಅಸಹಾಯಕ ಸ್ಥಿತಿಯಲ್ಲಿ ಇರಿಸಿರುವೆ. ಈಗ ನಾನೇನು ಮಾಡಲಿ? ನನ್ನ ಮಾನಭಂಗದ ಚರಿತ್ರೆ ಮುಗಿದಂತೆ ಕಾಣುವುದಿಲ್ಲ...... ಮುರಾರಿ..... ಗೋವಿಂದ....... ಮುಕುಂದ ಗತಿ ಇಲ್ಲದವರಿಗೆ ನೀನೇ ಗತಿಯೆಂದು ಲೋಕ ನಂಬಿದೆ. ಈಗೆನ್ನ ಗತಿಯೇನು? ಕೌರವನ ಸಭೆಯಲ್ಲಿ ಅನುಭವಿಸಿದ ವಸ್ತ್ರಾಪಹರಣ, ಮಾನಭಂಗದ ಭೀತಿ ಮತ್ತೆ ನನ್ನ ಮುಂದಿದೆ....ಪಾಂಡವರ ಪಟ್ಟದರಸಿಗೆ ಒದಗಿದ ಈ ದರಿದ್ರ, ದೈನ್ಯ ಸ್ಥಿತಿಯನ್ನು ನೋಡಿಯೂ ಮನ ಕರಗಲಿಲ್ಲವೆ? ಇನ್ನೊಬ್ಬರ ಋಣದ ಕೂಳಿಗೆ ಬದುಕುತ್ತಾ ಅವರನ್ನು ಸೇವಿಸುತ್ತಾ ಕ್ಷುದ್ರರಂತೆ ಬಾಳುವುದಕ್ಕೆ ಆತ್ಮಹತ್ಯೆಯೇ ಮೇಲು. ಮತ್ತೆ ನನ್ನ ಗಂಡಂದಿರ ವಿವಶತೆ, ಅಸಹಾಯಕತೆಗಳೇ ಎದುರಾಗುತ್ತಿವೆ. ಸುದೇಷ್ಣೆ, ಒಡತಿ ಒಳ್ಳೆಯದಳಾದರೂ ಸೋದರನ ಹಿಂಸೆಗೆ ಹೆದರಿಕೆಗೆ ನೊಂದು, ನಡುಗಿ, ನನ್ನ ಕಳುಹಿದಳು ಕೀಚಕನ ಅರಮನೆಗೆ.

(ಮೇಳದವರು ಪ್ರವೇಶಿಸುತ್ತಾರೆ)

ಮೇಳ : (ಒಟ್ಟಾಗಿ)
ಓ ಮಗಳೆ ಪಾಂಚಾಲಿ. ವೇಷ
ಬದಲಾದರೂ ಹೆಸರು ಬದಲಾದರೂ
ಹೆಣ್ಣೇ ನಿನ್ನ ಕಷ್ಟಗಳು ಕಡೆಯಾಗಲಿಲ್ಲ.
ನಿನ್ನ ಗಂಡರು ನಿನ್ನ ಅವಮಾನಕ್ಕೆ
ಮಿಡುಕಿದರೂ ವಿವಶತೆಗೆ ಬಂದಿಗಳು.
ಆರನ್ನು ಕಾಣುವೆ, ಆರನ್ನು ಯಾಚಿಸುವೆ?

ಸೈರಂಧ್ರಿ : ಓ ನನ್ನ ಪ್ರೀತಿಯ ಹೆಣ್ಣುಗಳೆ, ಹೆಣ್ಣಾಗಿರುವ ನಿಮಗೆ ಹೆಣ್ಣಾದ ಎನ್ನ ನೋವು ಅರ್ಥವಾಗದೆ ಉಳಿಯದು. ಎಷ್ಟೆಂದು ಭರಿಸಲಿ? ಸೋತು ಹೋಗಿದೆ ದೇಹ, ರೋಸಿ ಹೋಗಿದೆ ಮನಸು. ದಾರಿ ಕಾಣದು ನನಗೆ. ರಕ್ಷಣೆಯೆ ಇಲ್ಲ. ಹಗ್ಗವೇ ಹಾವಾಯ್ತು ಅಮೃತವೆ ನಂಜಾಯ್ತು. ಮಲ್ಲಿಗೆಯೆ ಮುಳ್ಳಾಯ್ತು ಭರವಸೆಯೆ ಸುಳ್ಳಾಯ್ತು. ಓಡಿಹೋಗಲೆ ಅಸಹಾಯಕತೆಯ ಬಲೆಯಿಂದ, ಕ್ರೂರ ಮೃಗಗಳ ನಾಡಿನಿಂದ, ವಿಕಾರ ವಕ್ರಬುದ್ಧಿಯ ಈ ಜನ ಸಂಪರ್ಕದಿಂದ ದೂರ ದೂರ. ಎಲ್ಲೋ ಒಂದು ಪ್ರಶಾಂತ ದೇಶಕ್ಕೆ, ಗಂಡುಗಳೇ ಇಲ್ಲದ, ನಿರ್ಬಂಧ ಮುಕ್ತ ದ್ವೀಪಕ್ಕೆ ಹೆಣ್ಣೆಂದರೆ ಸ್ವಚ್ಛಂದವಾಗಿ, ಸ್ವತಂತ್ರವಾಗಿ ಬಾಳುವುದಕ್ಕೆ ಅವಕಾಶವಿರುವ, ಅವಳನ್ನು ಗೌರವಿಸುವ ಆದರಿಸುವ ಅವಳ ಬುದ್ಧಿ ಮನಸ್ಸುಗಳನ್ನು ಗುರುತಿಸುವ, ಪುರುಷರ ಕಾಮ, ಕ್ರೌರ್ಯ, ಸ್ವಾರ್ಥ, ಅಹಂಕಾರಗಳ ನೆರಳೂ ಸುಳಿಯದ ಅವಿಮುಕ್ತ ಕ್ಷೇತ್ರಕ್ಕೆ ಹೋಗಿ ಬಿಡಬೇಕು.

ಮೇಳ : ಹೆದರಿ ಹಿಂಜರಿದು ಇರುವ ಬದುಕನ್ನು
ಧಿಕ್ಕರಿಸಿ ಎಲ್ಲಿಗೆಂದು ಓಡುವೆ.
ನೀನೋಡಿದಲ್ಲಿ ನಿನ್ನ ವಿಧಿ ನಿನ್ನ ಬಿಡುವುದೆ?
ಕಾಮುಕ ಕೀಚಕನ ಬಾಹುಬಂಧನ ಮೋಕ್ಷ
ಲಭಿಸುವುದು ನಿನಗೆ ತಾಳ್ಮೆಯಿರಲಿ.
ಧರ್ಮ ದಾಟಿದವನು ನ್ಯಾಯ ನುಗ್ಗಾಗಿಸಿದವನು.
ಪರಸತಿಯ ತುಡುಕಿದವನು ಸಾವಕಾಣುವನು.
ನಿನ್ನವರು ಅಪ್ರತಿಮ ಬಲಶಾಲಿಗಳು
ಧರ್ಮನಿಷ್ಠರು. ವಿನಯವಂತರು, ಮಾನವಂತರು,
ಹೋಗು ಮೊರೆಯಿಡು. ಅವರಲ್ಲದಿನ್ನಾರು

ಕಾವವರು. ಇನಿತು ಕಾಲವದೆಷ್ಟು ನೋವನುಂಡೆ
ಕಡೆಯ ಗಳಿಗೆಯನಿಷ್ಟು ಗೆಲ್ಲು ನಿಲ್ಲು.

**ಸೈರಂಧ್ರಿ** : ಓ ನನ್ನ ಪ್ರೀತಿಯ ಹೆಣ್ಣುಗಳೇ,
ನನ್ನವರೆ ನನಗಿಲ್ಲ ನಾನ್ಯಾರ ಮೊರೆಹೋಗಲಿ?
ಒಬ್ಬೊಬ್ಬರೊಂದು ನೆವದಲಿ ಅಡ್ಡ
ಮೋರೆಯ ಹಾಕುವರು. ಸತಿಯ ಶೋಕಕ್ಕೆ
ಅವಮಾನಕ್ಕೆ ಮೌನವೇ ಅವರಿತ್ತ ಪರಿಹಾರ.
ಸುಡಲಿಂತಹ ಗಂಡರ! ಸನ್ಯಾಸಿಗಿಂತಲು
ಕಡೆಯೆನಿಸಿ ಧರ್ಮದಾ ಸೋಗಿನವ ಧರ್ಮಸುತನು.
ಹಿರಿಯಣ್ಣನಪ್ಪಣೆಗೆ ಹೆದರಿ ಹಿಂಜರಿವ
ಹೇಡಿಗಳು ಪಾರ್ಥ, ಯಮಳರು.

**ಮೇಳ** : ಏಕೆ ಮಗಳೆ ನಿನ್ನ ಮೆಚ್ಚಿನ ಗಂಡ
ಸಹಸ್ರ ದಂತಬಲ ಪವನನಾತ್ಮಜ ಭೀಮ
ನಿನಗೆ ಕರಗದಿರುವನೆ ಹೇಳು. ನಿನ್ನ
ನೋವದು ಅವನೊಳು ಹೊತ್ತಿಸುವುದು
ರೋಷವನು. ಕೀಚಕ ವೃಕ್ಷವನು
ಬುಡಸಹಿತ ಕಿತ್ತೆಸೆದು ಸುಡುವನಲ್ಲದೆ ಮಾಣ.
ಕೌರವಕುಲ ಕುಠಾರನು ಕೊಲ್ಲನೇ ಕೀಚಕನ.
ನಿನ್ನ ಕಂಬನಿಗೆ ಕರಗಿ ಮಾನರಕ್ಷೆಗೆ ಧಾವಿಸುವನು.
ಹೊತ್ತಿ ಉರಿದರೆ ಸಾಕು ಅವನ ತಡೆಯುವರಿಲ್ಲ.
ಧರ್ಮಗಿರ್ಮಗಳಿಲ್ಲ. ಮರ್ಮವನೆ ತಿಳಿದಿಲ್ಲ.
ಮಾನ ಕಾಯುವನವನು ಚಿಂತೆ ಬೇಡ ಮಗಳೆ.

**ಸೈರಂಧ್ರಿ** : (ತನಗೆ ತಾನೆ) ಏ ಸೈರಂಧ್ರಿ, ಪಾಪಿ ಜನ್ಮದವಳೆ.
ನಿನಗಾರು ಗತಿಯಿಲ್ಲ. ನಿನಗೆ ನೀನೇ ಗತಿ
ನಿನ್ನ ಹೆಣ್ಣು ಜನ್ಮವ ಸುಡು. ನಿನ್ನ ಮಾನಾಪ
ಮಾನಕ್ಕೆ ನೀನೇ ಹೊಣೆ. ಏಳು! ಎದ್ದೇಳು
ಯಾರ ಹಂಗು ಗಿಂಗಿನ ಗುಂಗು ಬೇಡ.

**ಮೇಳ** : ಏನ ನೀ ನಿನ್ನೊಳಗೆ ನುಡಿಯುತಿಹೆ?
ಶಾಂತಿ ಸೈರಣೆಯಿಂದ ಸಾಗು ಮುಂದಕೆ ಮಗಳೆ.
ಪಂಚ ಪರಾಕ್ರಮಿಗಳ ಮುದ್ದು ಮಡದಿ

ನಿನ್ನೊಳಗೆ ಹರಿಯುತಿದೆ ಕ್ಷಾತ್ರ ತೇಜ.
ಮರೆತಿರುವೆ ನಿನ್ನೊಳಿಹ ಸುಡುವ ಶಕ್ತಿ
ನೀನಲ್ಲವೇ ನಮ್ಮ ಬೆಂಕಿ ಮಗಳು.
ಹೋಗು ಕೀಚಕನರಮನೆಗೆ
ನಯದ ವಂಚನೆಯಲ್ಲಿ ಇರಿದುಕೊಲ್ಲು
ಕಾಳಗದಿ ಸೋಲದವ ಕಾಮಕ್ಕೆ ಸೋಲುವನು.
ಹೆಣ್ಣು ಗಂಡಿನ ದುರ್ಬಲತೆಯಾಗಿರಲು
ಅವನಿಂದಲೇ ಅವನ ನೀ ಕೊಲಿಸು ಮಗಳೆ.

ಸೈರಂಧ್ರಿ : ನಿಜವ ನುಡಿದಿರಿ ನೆಚ್ಚಿನಾ ಗೆಳತಿಯರೆ.
ನನ್ನ ನಾನೇ ಮರೆತು ಸುಯ್ವುದೇಕೆ.
ಹೆಣ್ಣು ಹೆಣ್ಣೆಂದರೆ ಅಬಲೆಯಲ್ಲ!
ಬಯಸಿದೊಡೆ ಬೆಟ್ಟಗಳ ಪುಡಿಗುಟ್ಟುವಳು
ಪ್ರಭಂಜನೆಯಾಗಿ ಪ್ರಪಂಚವನ್ನೇ ಗುಡಿಸಿ ಬಿಡುವಳು
ಅವಳೆದೆಯಲೇನುಂಟು ಏನಿಲ್ಲ?
ಕಡೆದರೆ ಕಾಣುವುದು ವಾತ್ಸಲ್ಯದೊರತೆ
ಜೊತೆಗೆ ಕಿಡಿ ಕೆಡಿಸಿದರೆ ಹಾಲಾಹಲ.
ನನ್ನ ತುಡುಕಿದ ಕೌರವ, ದುಶ್ಯಾಸನ
ಕೀಚಕರ ಸಾವ ಕಾಣಿಸಿದಲ್ಲದೆ ಬಿಡೆನು
ಕೀಚಕನ ಎದೆ ಬಗೆದು ಕಾಂತೆಯರ
ಬಯಸಿದೊಡೆ ಬರುವ ಪರಿಣಾಮ
ವೇನೆಂದು ತಿಳಿಸುವ ಶಾಸನವ ಬರೆಯುವೆನು.
ಗಂಡರು ಮೂರುಲೋಕದ ಗಂಡರು ಐವರು
ನನ್ನೊಬ್ಬಳನ್ನು ಕಾಯಲಾರದೆ ಹೋದರೇನು?
ಹೆಣ್ಣಾದರೇನು ಭಾವಿಸಲು ಗಂಡುರೂಪಾಗಿ
ಗಂಡರಿಗೆ ಗಂಡಸರಿಗೆ ಅಬಲೆಯೋರ್ವಳ
ಅಂತಃಶಕ್ತಿಯನ್ನು ತೋರಿ ಸಾರುವೆನು.
ರಾಜ್ಯ, ಭಂಡಾರ, ಪುರ, ಕರಿ, ತುರಗ, ರಥ, ಕಾಲಾಳು
ಕಡೆಗೆ ಸತಿಯನ್ನೂ ಕಸಿದುಕೊಂಡು, ಭಂಗಪಡಿಸಿ
ಭರಿಸಲಸಾಧ್ಯವಾದ ಬವಣೆಗಳನ್ನೊಡ್ಡಿ, ಪರದೇಸಿ
ಗಳಂತೆ ಅಡ್ಡಾಡಿಸಿ ಹಿಂಸಿಸಿದ ಶತ್ರುಗಳನ್ನೂ ಸಹಿಸಿ
ಕೊಳ್ಳುವ ನಪುಂಸಕರಿಗೆ ವೀರ, ಪರಮವೀರರೆಂಬ

ಬಿರುದುಗಳೇಕೆ? ಕೌರವನಾಯಿಗಳು, ಕೀಚಕ ಕುನ್ನಿ
ಗಳೂ ಅವರ ಅಸಹಾಯಕತೆಯ ದುರುಪಯೋಗ
ಮಾಡಿಕೊಂಡಲ್ಲವೇ ನನ್ನ ಮಾನ ಅಭಿಮಾನ ಶೀಲಗಳಿಗೆ
ಕೈ ಹಚ್ಚುವ ಸಾಹಸಕ್ಕೆ ತೊಡಗಿದ್ದು!

ಮೇಳ : ಹೋಗು ಮಗಳೇ ಹೋಗು.
ನಿರ್ಧಾರ ನಿನ್ನದು ದೃಢವಿರಲಿ.
ಕಲ್ಲಾಗು, ವಿಷವಾಗು, ಕೂರಲಗು ನೀನಾಗು.
ಕೀಚಕನ ಪಾಲಿನಾ ಯಮಪಾಶವಾಗು.
ಅಳಲನ್ನು ಒತ್ತಟ್ಟಿಗಿಟ್ಟು, ಮ್ಲಾನತೆಯ ಮರೆಮಾಚಿ
ನಗೆಯ ಸೋಗಿನಲಿ ಸಿಂಗಾರದ ಮೋಡಿಯಲ್ಲಿ
ಕೀಚಕನ ಸಿಲುಕಿಸಿ ಕೊಲ್ಲು....ಕೊಲ್ಲು ಮಗಳೆ.
ನಿನ್ನ ಕಾಡಿದ ಕುನ್ನಿಯ ಸಾವಿನಾ ಶುಭವಾರ್ತೆ
ಕೇಳಬಯಸುವೆವು....ದೈವವಿದೆ ನಿನ್ನ ಕಡೆ
ನಿನಗೆ ಗೆಲುವಕ್ಕೆ.....ನಿನಗೆ ಶುಭವಕ್ಕೆ.
(ಎಂದು ಹೇಳುತ್ತಾ ಹೋಗುವರು)

೦೦

# ದೃಶ್ಯ – ೭

(ಬೀದಿಯ ದೃಶ್ಯ. ಮೇಳ ಎರಡು ಭಾಗಗಳಲ್ಲಿ ಪ್ರವೇಶಿಸುತ್ತದೆ. ರಂಗದ ಎರಡು ಬದಿಗಳಲ್ಲಿ ಅರೆಮೇಳಗಳು ನಿಲ್ಲುತ್ತವೆ. ಅವರು ಮಾತನಾಡುವಾಗ ಲಯಬದ್ಧವಾಗಿರಬೇಕು. ಮೇಳದಲ್ಲಿನ ಒಬ್ಬೊಬ್ಬ ಹೆಂಗಸೂ ಒಂದೊಂದು ಸಂಭಾಷಣೆಯನ್ನು ಹೇಳಬೇಕು. ಕಡೆಯಲ್ಲಿ ಎರಡೂ ಅರೆಮೇಳಗಳು ವೃತ್ತಾಕಾರದಲ್ಲಿ ನಿಲ್ಲುತ್ತ ಮಾತನಾಡಬೇಕು.)

**ಎಡಮೇಳ :** ಕಡುಕಷ್ಟ ಕಡುಕಷ್ಟ ಕಾಮಿನಿಯ ಬದುಕು.
ಎಲ್ಲಿ ಹೋಗಲಿ ದುರ್ವಿಧಿ ಬೆನ್ನ ಬರುವುದು ಬಿಡದೆ.
ಕೀಚಕನ ಕಪಿಮುಷ್ಟಿ ಕಾಡಿ ಹಿಡಿದಿದೆ ಅವಳ
ಕಾಮಗಣ್ಣಿನ ಕೆಡುನೋಟ ಎದೆಯ ಕಲಕಿದೆ ಅವಳ

**ಬಲಮೇಳ :** ಬಲು ಹೆದರಿದ್ದಳು ಹೆಣ್ಣು
ಖೂಳ ಕೀಚಕನಿಂದ ಏನಾಗುವುದೋ
ದೈವವೇ ಅವಳನ್ನು ಕಾಯಬೇಕು.
ಪಾಪ ಬಡಪಾಯಿ ಹೆಣ್ಣು
ಕಷ್ಟಗಳ ಮೇಲೆ ಕಷ್ಟಗಳು.
ಮದುವೆಯಾದಂದಿನಿಂದಲೂ
ನವೆಯುವುದೆ ಅವಳ ಪಾಲಿನ ಬುತ್ತಿ.

**ಎಡಮೇಳ :** ಕಣ್ಣು ಕುಕ್ಕುವ ಚೆಲುವು
ಅವಳಿಗಾಯಿತು ಸಾವಿನಾ ಬಲೆಯು.
ಅಳಲಿದಳು ಬಳಲಿದಳು
ಹಲುಬಿ ಹಾರೈಸಿದಳು ಸಾವಿನೊಲವು.

**ಬಲಮೇಳ :** ನಾವೆಲ್ಲ ದೈವವನು ಪ್ರಾರ್ಥಿಸೋಣ
ಕೀಚಕನ ಕೊಲೆಗೈಯಲೊದಗಲಿ
ದೈವದಾ ಸಹಕಾರ. ಅಂಥ ಖೂಳರಿಗೆಲ್ಲ
ಇದುವೆ ಪಾಠವಾಗಲಿ. ಪಾಂಚಾಲಿ
ಸಾಹಸವು ಇತಿಹಾಸವಾಗಲಿ.
ಮಾನ ಪ್ರಾಣದ ರಕ್ಷೆಯಾಗಲಿ ಬರಲಿ.
ಬನ್ನಿ ಗೆಳತಿಯರೆ, ಪಾಂಚಾಲಿಯನೆ
ಕಂಡು ಧೈರ್ಯದಾ ನುಡಿ ನುಡಿವ
(ಮೇಳ ನಿರ್ಗಮಿಸುತ್ತದೆ.)

OO

# ದೃಶ್ಯ – ೮

(ಸುದೇಷ್ಣೆಯ ಅಂತಃಪುರ. ಸುದೇಷ್ಣೆ ಚಿಂತಾಕ್ರಾಂತಳಾಗಿ ಕುಳಿತಿದ್ದಾಳೆ. ಒಂದು ಕ್ಷಣದ ನಂತರ ಚಡಪಡಿಸುತ್ತಾಳೆ. ಎದ್ದು ಶತಪಥ ತಿರುಗುತ್ತಾಳೆ. ಸಖಿಯರಿಬ್ಬರು ಭಯದಿಂದ ಅಸಹಾಯಕತೆಯಿಂದ ಅವಳನ್ನೇ ವೀಕ್ಷಿಸುತ್ತಿದ್ದಾರೆ.)

**ಸುದೇಷ್ಣೆ** : (ಸ್ವಗತ)
ಏಕೆ ಬಂದನೋ ಈ ಕೀಚಕನು
ನನ್ನ ಬೆನ್ನಲಿ. ಏನು ಮಾಡಲಿ ನಾನು
ಅಸಹಾಯಕಳು. ಮಾತು ಮಾತಿಗೆ
ಸಾವಿನಾ ಹೆದರಿಕೆಯನ್ನು ಒಡ್ಡುತ್ತಾನೆ.
ತಿಳಿದೂ ತಿಳಿದೂ ನಾನು ಹೇಗೆ ತಾನೆ
ಅವನ ಸಾವನ್ನು ಬಯಸಲಿ? ಎಷ್ಟಾದರೂ
ಅವನು ನನ್ನ ತಮ್ಮನಲ್ಲವೇ?....
ತಮ್ಮ....ಹೌದು ತಮ್ಮ!..... ಆದರೆ..... ಆದರೆ
ನನ್ನ ಮೇಲೆ ನಂಬಿಕೆಯಿಟ್ಟು ನನ್ನನ್ನು
ಆಶ್ರಯಿಸಿ ಬಂದಿರುವ ಒಬ್ಬ ಅಸಹಾಯಕ
ಹೆಣ್ಣನ್ನು ಹೇಗೆ ತಾನೇ ಹೆಬ್ಬುಲಿಯ ಗುಹೆಗೆ
ಕಳಿಸಲು ತೀರ್ಮಾನಿಸಿದೆ? ನಾನೂ ಹೆಣ್ಣಲ್ಲವೆ?
.....ಛಿ! ಛಿ! ಸುಡಲಿ ನನ್ನೀ ಬದುಕು.
ಒಂದುವೇಳೆ ಅವನು ದುಸ್ಸಾಹಸಕ್ಕೆ ಹೊರಟು
ಅವಳ ಮೇಲೆ ಆಕ್ರಮಣ ಮಾಡಿದೆ?
.....ಮಾಡಿದರೆ ಏನು? ಮಾಡಿಯೇ
ಮಾಡುತ್ತಾನೆ.... ಅದರಿಂದ ಅವಳಿಗೇನಾದರೂ

ಮಾನಹಾನಿ ಪ್ರಾಣಹಾನಿ ಆದರೆ ನಾನು ಹೇಗೆ
ಮುಖ ತೋರಿಸಲಿ? ಅವಳ ಕಡೆಯವರು
ಯಾರಾದರೂ ಬಂದು ಕೇಳಿದರೆ ಏನೆಂದು
ಉತ್ತರಿಸಲಿ? ಅಯ್ಯೋ ದೈವವೇ ನಾನೇನು
ಮಾಡಲಿ? ಆಗುವ ಅನಾಹುತವನ್ನು ಹೇಗೆ
ತಡೆಯಲಿ?.... ಎಷ್ಟು ವಿಧದಲ್ಲಿ ಅವನಿಗೆ
ತಿಳಿಸಿ ಹೇಳಿದೆ. ಪರವಧುವನ್ನು ಬಯಸಿ
ಪ್ರಾಣಕ್ಕೆ ಸಂಚಕಾರ ತಂದುಕೊಳ್ಳಬೇಡವೆಂದೆ
ಕುಲಕಳಂಕಕ್ಕೆ ದಾರಿಮಾಡದಿರೆಂದು ಯಾಚಿಸಿದೆ,
ಉದ್ಧಟ!.... ಉದ್ಧಟ! ಹಿಡಿದ ಪಟ್ಟುಬಿಡದೆ
ಹೇಸಿಗೆಯ ಕೆಲಸಕ್ಕೆ ನನ್ನನ್ನು ಒತ್ತಾಯಿಸಿ ದೂಡಿದ,
ನಾನೇ ಅವಳನ್ನು ಒತ್ತಾಯಿಸಿ, ಸಿಂಗರಿಸಿ
ಪುಸಲಾಯಿಸಿ, ಧೈರ್ಯತುಂಬಿ ಕಳಿಸಿದೆ,
......ಸುದ್ದಿ ಏನು ಬರುವುದೊ ಕಾಣೆ!
ಪರಿಣಾಮವನ್ನು ಊಹಿಸಿಕೊಂಡಾಗ
ಮೈಯೆಲ್ಲ ಥರಥರ ನಡುಗುವುದು. ದೇವರೇ
ಅವಳನ್ನು ಕಾಪಾಡು! ಅವಳೊಬ್ಬ ಬಡಪಾಯಿ
ಅಸಹಾಯಕ ಹೆಣ್ಣು!..... ನಾನು ಮಾಡಿದ
ಆ ಕೃತ್ಯಕ್ಕಾಗಿ ನನ್ನನ್ನು ಕ್ಷಮಿಸು.

(ಮಾತನಾಡಿಕೊಳ್ಳುತ್ತಿರುವಷ್ಟರಲ್ಲಿ ಹಿನ್ನೆಲೆಯಲ್ಲಿ ಕೊಲೆ.....ಕೊಲೆ....ಕೀಚಕನ ಕೊಲೆಯಾಗಿದೆ ಎಂಬ ಮಾತುಗಳು ಕೇಳಿ ಬರುತ್ತವೆ.)

**ಸುದೇಷ್ಣೆ** : (ಗಾಭರಿಯಿಂದ) ಕಮಲಿನಿ! ಕಮಲಿನಿ! ನೋಡಮ್ಮೋ ಕೇಳು. ಕೊಲೆಯಂತೆ! ಕೀಚಕನ ಕೊಲೆಯಂತೆ!..... ಓಡಿ ಹೋಗಿ ನೋಡಿಕೊಂಡು ಬರುವೆಯಾ?

**ಕಮಲಿನಿ** : ಇಗೋ ಹೊರಟೆ. (ಎಂದು ಹೋಗುವಳು)

**ಸುದೇಷ್ಣೆ** : ಕೊಲೆ.....! ಕೊಲೆ! ನಿಜವಾಗಿಯೂ ಸೋದರನ ಕೊಲೆಯಾಗಿರಬಹುದೇ? ಅವಳೆಂದಂತೆ ಅವಳ ಕಡೆಯವರು ಯಾರಾದರೂ ಕೊಂದಿರಬಹುದೇ....? ಛೆ! ಛೆ! ಭದ್ರ ಕಾವಲನ್ನು ದಾಟಿಕೊಂಡು ಕೀಚಕನ ನಾಟ್ಯ ಶಾಲೆಯವರೆಗೆ ಬರುವ ಸಾಹಸ ಯಾರಿಗೆ ಸಾಧ್ಯ....? ಇದು ಸುಳ್ಳೇ ಇರಬೇಕು.

(ಕಮಲಿನಿ ಮ್ಲಾನವದನೆಯಾಗಿ, ನತಮಸ್ತಕಳಾಗಿ ಭಯಭಕ್ತಿಯಿಂದ ಕೂಡಿಬರುತ್ತಿರುವ ಸೈರಂಧ್ರಿಯೊಂದಿಗೆ ಪ್ರವೇಶಿಸುತ್ತಾಳೆ.)

**ಸುದೇಷ್ಣೆ** : (ಸಂಭ್ರಮಾಶ್ಚರ್ಯಗಳಿಂದ) ಸೈರಂಧ್ರಿ.... ಸೈರಂಧ್ರಿ.. ಬಂದೆಯಾ ಗೆಳತಿ.... ನಿನಗೇನೂ ಆಗಲಿಲ್ಲ ತಾನೇ? ಅಬ್ಬ! ಸದ್ಯ! ನಾನು ಬದುಕಿದೆ. ಕೀಚಕನಿಂದ ನಿನಗೇನೂ ತೊಂದರೆಯಾಗಲಿಲ್ಲ ತಾನೇ?

**ಸೈರಂಧ್ರಿ** : ಕ್ಷಮಿಸಬೇಕು. ಅವನಿಂದ ನನಗೆ ತೊಂದರೆಯಾಗಲಿಲ್ಲ. ನನ್ನಿಂದ ಅವನಿಗೆ ತೊಂದರೆಯಾಯಿತು ಅಷ್ಟೆ..! ನಾನೇ ಅವನ ಕೊಲೆ ಮಾಡಿದೆ.

**ಸುದೇಷ್ಣೆ** : ಸೈರಂಧ್ರಿ ಏನು ಹೇಳುತ್ತಿರುವೆ....? ನೀನು..... ನೀನು..... ಅವನನ್ನು ಕೊಂದೆಯಾ.....? ನನಗೆ ನಂಬುವುದಕ್ಕೇ ಆಗುತ್ತಿಲ್ಲ. ನಿಜವಾಗಿ ಹೇಳು ಸೈರಂಧ್ರಿ, ಅವನನ್ನು ನೀನು ಕೊಂದೆಯಾ?

**ಸೈರಂಧ್ರಿ** : ಹೌದು..... ಅವನನ್ನು ಕೊಲ್ಲದೆ ವಿಧಿಯಿರಲಿಲ್ಲ. ನಾನೆಷ್ಟು ಬಗೆಯಲ್ಲಿ ಬೇಡಿಕೊಂಡೆ. ನನ್ನ ತಂಟೆಗೆ ಬರಬೇಡವೆಂದು ಅಂಗಲಾಚಿದೆ ಆದರೆ.... ಆದರೆ ಅವನ ಆ ಅಸಹ್ಯ ಮಾತುಗಳು. ಅಸಹ್ಯ ವರ್ತನೆಯನ್ನು ಸಹಿಸಿಕೊಳ್ಳಲಾಗಲಿಲ್ಲ. ಕಾಮಾತುರನಾಗಿದ್ದ ಅವನಿಗೆ ಲಜ್ಜೆಯಾಗಲೀ, ಭಯವಾಗಲಿ ಉಳಿಯಲಿಲ್ಲ. 'ನಿನ್ನ ಕಾಮವೇ ನಿನಗೆ ಮೃತ್ಯುವಾಗುತ್ತದೆ. ಅಮೃತವೆಂದುಕೊಂಡಿರುವುದೇ ವಿಷವಾಗಿ ನಿನ್ನನ್ನು ಸುಡುತ್ತದೆ. ಹೂವೆಂದು ಬಳಿಗೆ ಬಂದರೆ ಹಾವಾಗಿ ಕೊಲ್ಲುತ್ತದೆ ದಯವಿಟ್ಟು ಅರ್ಥಮಾಡಿಕೋ ನನ್ನಿಂದ ದೂರವಿರು..... ಹತ್ತಿರ ಸುಳಿಯಬೇಡ. ನನ್ನನ್ನು ಸ್ಪರ್ಶಿಸಿದ ಕ್ಷಣ ನಾನು ಸಾಯುತ್ತೇನೆ. ಇಲ್ಲ ನಿನ್ನನ್ನು ಕೊಲ್ಲುತ್ತೇನೆ ಎಂದು ಹೇಳಿ ಹೆದರಿಸಿದರೂ ಕೇಳುವ ಮನಃಸ್ಥಿತಿಯೇ ಅವನಲ್ಲಿ ಇರಲಿಲ್ಲ. ನಾನೇನು ಮಾಡಲಿ.... ನನಗಿದ್ದುದೊಂದೇ ದಾರಿ, ಅವನನ್ನು ಕೊಲ್ಲುವುದು! ನಾನು ಸತ್ತರೆ, ನನ್ನಂತಹ ಅಬಲೆಯರು, ಅಸಹಾಯಕರು ಉಳಿದಂತೆ ಆಗುವುದಿಲ್ಲ ಮತ್ತೆ ಅವನಂತಹ ಖೂಳ ರಕ್ಕಸರ, ಕಾಮಪಿಪಾಸಿಗಳ ದೌರ್ಜನ್ಯದಿಂದ ನಲುಗಿ ಹೋಗುತ್ತಲೇ ಇರುತ್ತಾರೆ. ಆದ್ದರಿಂದ ನನ್ನ ಸಾವಿಗಿಂತ ಅವನ ಸಾವು ಎಲ್ಲರ ಒಳಿತನ್ನು ಸಾಧಿಸುವುದರಿಂದ ಅವನನ್ನು ಕೊಂದೆ.... ನನ್ನನ್ನು ಕ್ಷಮಿಸಿ.... ನೀವು ಇದಕ್ಕಾಗಿ ಏನು ಶಿಕ್ಷೆ ವಿಧಿಸಿದರೂ ಭರಿಸುತ್ತೇನೆ ಕ್ರೂರಿ ಕಾಮಿಯ ಕೈಸೆರೆಯಾಗಿ ಕಣ್‌ಸೆರೆಯಾಗಿ ದೈಹಿಕ ಮಾನಸಿಕ ಹಿಂಸೆ ಅನುಭವಿಸುವುದಕ್ಕಿಂತಲೂ ನನಗೆ ಮೆಚ್ಚುಗೆಯಾದ ನನ್ನ ಪ್ರೀತಿಯ ನೀವು ನೀಡುವ ಎಂತಹ ಭಯಂಕರ ಶಿಕ್ಷೆಯೂ ನನಗೆ ಹಿತವೇ!

**ಸುದೇಷ್ಣೆ** : (ಬೇಸರಗೊಂಡು ವ್ಯಂಗ್ಯವಾಗಿ) ಸಾಕು ತಾಯಿ, ಸಾಕು ನೀ ಮಾಡಿದುಪಕಾರವೆಮ್ಮಯ ಮನಸನು ಉರಿಸಿತು. ನೀನು ಮಾಡಿದ

ಕೆಲಸ ಜಗಜ್ಜಾಹಿರವಾಗಿ ನೂರು ಜನ ಊರು ಜನ ಉದ್ರೇಕಗೊಂಡು ಕೀಚಕನ ಕಡೆಯವರು, ಸ್ನೇಹಿತರು, ಆಪ್ತರು, ಬಂಧುಗಳು ಅವರ ಕೊಲೆಯ ರಹಸ್ಯ ತಿಳಿದು ನಿನ್ನಿಂದಲೇ ಆದುದೆಂದು ಊಹಿಸಿ ನಿನ್ನನ್ನು ಸಾಯೆ ಬಡಿಯುವರು.... ನೀನು ಎಲ್ಲಿಂದ ಬಂದೆಯೋ ಅಲ್ಲಿಗೇ ಹೊರಟು ಹೋಗಿ ನಮಗೊಂದು ಉಪಕಾರ ಮಾಡು ಅಷ್ಟಾದರೆ ಸಾಕು.... ನಿನಗೆ ಆಶ್ರಯ ಕೊಟ್ಟದ್ದು, ಬೀದಿ ಮಾರಿಯನ್ನು ಮನೆಗೆ ಹೊಗಿಸಿಕೊಂಡಂತೆ ಆಯಿತು. ನಮಗಾದ ನಷ್ಟವನ್ನು ನೀನು ಊಹಿಸಲಾರೆ. ಹೆಣ್ಣಿನ ಬಯಕೆಯೊಂದೇ ಅವನ ದೌರ್ಬಲ್ಯವಾಗಿದ್ದುದು! ಎಂತಹ ಪರಾಕ್ರಮಿ! ಎಂತಹ ಬಲಶಾಲಿ! ಕೌರವರು ಮೊದಲುಗೊಂಡು ಅವನ ಶತ್ರುಗಳಿಗೆ ಯಾರಿಗೂ ಅವನನ್ನು ತುಡುಕಲು ಆಗುತ್ತಿರಲಿಲ್ಲ. ಬಾಲ ಮುದುಡಿಕೊಂಡಿರುವ ಬೆಕ್ಕುಗಳಂತೆ ವಿರಾಟರಾಜ್ಯದಿಂದ ದೂರವೆಲ್ಲೋ ತಲೆಮರೆಸಿಕೊಂಡಿರುತ್ತಿದ್ದರು...... ಅಯ್ಯೋ ಇನ್ನು ನಮ್ಮ ರಾಜ್ಯದ ಗತಿಯೇನು? ನನ್ನ ಗಂಡನ ಸಾಹಸಕ್ಕಿಂತ ಅವನ ಕೀರ್ತಿ, ಸಾಹಸ, ಪರಾಕ್ರಮಗಳೇ ಶತ್ರುಗಳನ್ನು ಈ ನಾಡಿನೆಡೆಗೆ ಸುಳಿಯದಂತೆ ತಡೆದಿದ್ದವು. ಇನ್ನಾರು ನಮಗೆ ರಕ್ಷೆ?... ನಿನ್ನಿಂದ ನಾವು ಹಾಳಾದೆವು. ತಾಯಿ, ಮಹಾತಾಯಿ, ಇನ್ನೊಂದರೆ ಗಳಿಗೆಯೂ ಇಲ್ಲಿ ನಮ್ಮ ಮುಂದೆ ನಿಲ್ಲಬೇಡ, ನಿನ್ನ ಕಾಲು ಹಿಡಿದು ಬೇಡಿಕೊಳ್ಳುತ್ತೇನೆ.

**ಸೈರಂಧ್ರಿ** : ನೀವೇಕೆ ನನ್ನನ್ನು ದೂರುತ್ತೀರಿ. ನನ್ನ ರಕ್ಷಣೆಯ ಪ್ರಯತ್ನದಲ್ಲಿ ಅವನ ಸಾವಾಯಿತೇ ಹೊರತು, ಅವನ ಅಕೃತ್ಯಗಳು, ಅತಿಕಾಮುಕತೆಯೇ ಅವನನ್ನು ಕೊಲೆ ಮಾಡಿಸಿತು. ವಿನಾಕಾರಣ ಯಾರೂ ಅವನನ್ನು ಸಾಯಿಸಲಿಲ್ಲ. ನಿಮ್ಮ ಉಪಕಾರಕ್ಕೆ ಅಪಚಾರ ಮಾಡಬೇಕೆಂದು ನಮ್ಮ ಮತವಾಗಿರಲಿಲ್ಲ. ದುರ್ವ್ಯವಹಾರ, ದೌರ್ಜನ್ಯಗಳಿಂದ ನೀತಿಬಾಹಿರನಾದ ಅವನು ತನ್ನಿಂದ ತಾನೇ ಕೊಲೆಯಾದ.

**ಸುದೇಷ್ಣೆ** : ಇರಲಿ ಬಿಡು. ಅವನು ಅವನಿಂದಲೇ ಸತ್ತ ಎನ್ನುವುದನ್ನು ಒಪ್ಪಿಕೊಳ್ಳುತ್ತೇನೆ ನೀನು ಸಾಚಾ ನ್ಯಾಯವಂತಳು; ಮಾನ್ಯಳು, ಅಭಿಮಾನಿ. ನಿನ್ನಲ್ಲಿ ಯಾವುದೂ ತಪ್ಪಿಲ್ಲವಾದರೂ ನಿನ್ನನ್ನು ಕಂಡರೆ ನನಗೆ ಹೆದರಿಕೆಯಾಗುತ್ತದೆ. ನಿನ್ನ ದಮ್ಮಯ್ಯ ಇನ್ನು ನೀನು ನಮ್ಮಲ್ಲಿ ಇರುವುದು ಬೇಡ..... ಬೇಗ ಇಲ್ಲಿಂದ ದಯಮಾಡಿಸು.

**ಸೈರಂಧ್ರಿ** : ಇನ್ನೊಂದೆರಡು ದಿನ. ನೀವು ಇರಲು ಹೇಳಿದರೂ ನಾನು ಇರುವುದಿಲ್ಲ. ನನಗೂ ಅಭಿಮಾನವಿದೆ. ಜೊತೆಗೆ ನಾನು ಮಾಡಿದ ಕೃತ್ಯದ ಬಗ್ಗೆ ನನಗೆ ಸಂಕೋಚವಾಗಲೀ, ಪರಿತಾಪವಾಗಲಿ ಇಲ್ಲ. ಯಾಕೆಂದರೆ

ಅದು ನ್ಯಾಯಬದ್ಧವಾಗಿದೆ. ಧರ್ಮಯುತವಾಗಿದೆ. ನೀವು ಹೆದರಿಕೊಳ್ಳಬೇಕಾದ ಅಗತ್ಯವಿಲ್ಲ. ನಾವು ನಿಮಗೆ ಒಳ್ಳೆಯದನ್ನೇ ಮಾಡುತ್ತೇವೆ.

**ಸುದೇಷ್ಣೆ** : ಸೈರಂಧ್ರಿ, ನಿನ್ನನ್ನು ನೀನು ಎಷ್ಟೇ ಸಮರ್ಥಿಸಿಕೊಂಡರೂ ಪ್ರಯೋಜನವಿಲ್ಲ. ಅವನು ಎಷ್ಟೇ ಖೂಳನಾಗಿರಲಿ, ಕ್ರೂರಿಯಾಗಿರಲಿ, ಕಾಮುಕನಾಗಿರಲಿ..... ಅವನು ನನ್ನ ಸೋದರ. ಒಡಹುಟ್ಟಿದವ. ಒಂದೇ ರಕ್ತವನ್ನು ಹಂಚಿಕೊಂಡಿರುವವರು. ಅವನಿಗಾಗಿ ನಾನು ಅಳಲೇಬೇಕು ಕಂಬನಿಯ ಶ್ರದ್ಧಾಂಜಲಿಯನ್ನು ಈಯಲೇಬೇಕು. ನನಗೆ ಅವನು ಬೇಕಾದವನು......... ನಿನ್ನ ಉಪಸ್ಥಿತಿ, ಕ್ಷಣಕ್ಷಣಕ್ಕೂ ಅವನ ಸಾವಿನ ನೆನಪನ್ನು ತರುತ್ತಿರುತ್ತದೆ. ಜೊತೆಗೆ ಕೊಲೆಗಡುಕಿಯಾದ ನಿನ್ನ ಬಗ್ಗೆ ರೋಷದ ಹೊರತಾಗಿ, ಅನುಕಂಪ ಮೂಡುವುದಿಲ್ಲ ನಾನು ಒರಟಾಗುತ್ತೇನೆ; ನಿರ್ದಯಳಾಗುತ್ತೇನೆ.... ಯಾಕೆಂದರೆ ನಾನು ಕೇವಲ ಒಬ್ಬ ಮನುಷ್ಯಳು...... ಅರ್ಥವಾಯಿತೇ ಸೈರಂಧ್ರಿ?..... ಅರ್ಥವಾಯಿತೇ?

**ಸೈರಂಧ್ರಿ** : ನಿಮ್ಮ ಮನಸ್ಸನ್ನು ನೋಯಿಸಿದ್ದಕ್ಕೆ ನಾನು ಕ್ಷಮೆ ಬೇಡುತ್ತೇನೆ....ಈಗ ಸದ್ಯಕ್ಕೆ ನಾನು ಇಲ್ಲಿಂದ, ನಿಮ್ಮ ಸಮಾಧಾನಕ್ಕಾಗಿ ಎಲ್ಲಿಯೋ ಮರೆಯಾಗುತ್ತೇನೆ. ಮುಂದೆ ನಾನು ಯಾರೆಂದು ತಿಳಿದಾಗ ಪಶ್ಚಾತ್ತಾಪ ಪಡುತ್ತೀರಿ. ನನಗಾಗಿ ಹಂಬಲಿಸುತ್ತೀರಿ. ನಿಮ್ಮ ಈ ನಿರ್ಧಾರಕ್ಕಾಗಿ ನೀವೇ ನಾಚಿ ನನ್ನ ಕೈ ಕಾಲು ಹಿಡಿದು ಕ್ಷಮಿಸಲು ಬೇಡುತ್ತೀರಿ. ಆತ್ಮ ಧಿಕ್ಕಾರ ಮಾಡಿಕೊಳ್ಳುತ್ತೀರಿ.... ತಿಳಿಯಿತೇ?.... ನಾನು ಕೊಲೆಗಡುಕಿ ನಿಜ. ಆದರೆ ಅದರಲ್ಲಿ ನಿಮ್ಮದೂ ಪಾಲಿದೆ. ನೀವೇ ಅಲ್ಲವೆ, ನಾನು ಕಂಬನಿಗರೆದು ಅಂಗಲಾಚಿದರೂ ಒತ್ತಾಯಿಸಿ ಕಳಿಸಿದ್ದು. ನಿಮ್ಮ ಸೋದರನ ಕೃತ್ಯವನ್ನು ಪ್ರೋತ್ಸಾಹಿಸಿದ್ದು!

**ಸುದೇಷ್ಣೆ** : (ವ್ಯಂಗ್ಯವಾಗಿ) ಹೌದು ತಾಯೆ ಹೌದು ಒಪ್ಪಿಕೊಳ್ಳುತ್ತೇನೆ. ನಾವೇ ಕೇಡಿಗರು; ನಾವೇ ಪಾಪಿಗಳು! ನಾವೇ ದುರಾಚಾರಿಗಳು. ನಿನಗೆ ನೂರು ನಮಸ್ಕಾರಗಳು.... ದಯವಿಟ್ಟು ಹೋಗು... ನನ್ನೊಳಲ ಬೆಂಕಿ ನಿನ್ನನ್ನು ಸುಟ್ಟೀತು!.... ಹೊರಟು ಹೋಗು.

**ಸೈರಂಧ್ರಿ** : ಹೊರಡುತ್ತೇನೆ.... ಹೋಗುವಾಗ ಇಗೋ ನನ್ನನ್ನು ಕರೆದುಕೊಂಡು ಒಂದಷ್ಟು ದಿನ ನೆರಳು ನೀಡಿದ್ದಕ್ಕೆ ನನ್ನ ಕೃತಜ್ಞತೆಗಳು!! ಬರುತ್ತೇನೆ.... ಹೋಗಿ ಬರುತ್ತೇನೆ.... (ಎಂದು ನಿಧಾನವಾಗಿ ಅಲ್ಲಿಂದ ಹೊರಡುತ್ತಾಳೆ.)

**ಸುದೇಷ್ಣೆ** : (ಸಮಾಧಾನದ ನಿಟ್ಟುಸಿರು) ಸದ್ಯ, ಹೋದಳಲ್ಲ! ಇವಳನ್ನು ಇಲ್ಲಿ ಉಳಿಸಿಕೊಳ್ಳುವುದೆಂದರೆ ಕೆಂಡವನ್ನು ಸೆರಗಿನಲ್ಲಿರಿಸಿಕೊಂಡಂತೆಯೇ!

ಅಪಾಯ, ಅನಾಹುತಗಳನ್ನು ಆಹ್ವಾನಿಸಿದಂತೆಯೇ!.... ಬೇಡ! ಬೇಡ. ಇನ್ನವಳ ಸಹವಾಸವೇ ಬೇಡ. ಅಯ್ಯೋ ಪಾಪವೆಂದು ಅವಳನ್ನು ಮನ್ನಿಸಿ ನನ್ನ ಅಂತರಂಗಕ್ಕೆ ಹತ್ತಿರ ತಂದುಕೊಂಡಿದ್ದಕ್ಕೆ ನನ್ನ ತಮ್ಮನ ಸಾವನ್ನು ನಾನಾಗಿ ಬರಮಾಡಿಕೊಂಡಂತಾಯಿತು..... (ಕಮಲಿನ ಕಡೆಗೆ ತಿರುಗಿ) ಕಮಲಿನಿ.....ಕಮಲಿನಿ ನಡೆ. ನಮ್ಮ ತಮ್ಮಂದಿರ ಅಂತಿಮ ದರ್ಶನವನ್ನಾದರೂ ಪಡೆದು ಬರೋಣ. ಆ ವೀರನಿಗೆ (ಹೋಗುತ್ತಾರೆ)

(ಹಾಡುತ್ತಾ ಮೇಳ ಪ್ರವೇಶಿಸುತ್ತದೆ)

**ಮೇಳ** : ಕಡೆಗಾಯಿತು ಕೀಚಕನ ಸಾವು.
ಮಾದು ಮರೆಯಾಯಿತು ಪಾಂಚಾಲಿಯ ಬಾವು.
ಹೆಣ್ಣುಗಳ ಮೋರೆಯೊಳಗೆ ಮಿಂಚಿತು ಗೆಲುವು
ಲೋಕಕೆ ಲೋಕವೆ ತುಂಬಿತು ಸಂತಸವು.
ಒಂದೇ ಗಿಡದ ಹೂವಾದರೂ,
ಸುದೇಷ್ಣೆ, ಕೀಚಕರ ಸ್ವಭಾವಗಳೆಷ್ಟು ಬೇರೆ!
ದುಷ್ಟನಂತೆ ಅಷ್ಟ ಮದಗಳನ್ನೂ ಒಳಗೊಂಡವನು,
ಅಟ್ಟಹಾಸದಲಿ ಕೊಬ್ಬಿ ಕೆಡೆ ನಡೆದವನು,
ತಕ್ಕುದನೆ ಪಡೆದನು. ಸಾವನ್ನೆ ಕರೆದನು.
ದಾನವ ದುಷ್ಟರಿಗೆ ಸಂದುದನೆ ತಾನು ಪಡೆದ.
ಓ ಪಾಂಚಾಲಿ! ಬಾ ಹೆಣ್ಣೆ. ನಿನ್ನ ಕಾಣುವ
ತವಕ ನಮಗೆ ಕಾದಿಹುದು. ನಿನ್ನ ಧೈರ್ಯ
ಸಾಹಸ ಮತ್ತೊಳಗೆ ಹುದುಗಿರುವ
ಸೇಡಿನಾ ಉರಿಜ್ವಾಲೆ ನಮಗೆ ಕಾಣಲು ಬೇಕು.
ಎಲ್ಲಿರುವೆ ಪಾಂಚಾಲಿ....ಮರೆ ಏಕೆ ಬಾಲೆ.
ಬಾ ಬೇಗ.....ಬೇಗ ಬಾ ಮಗಳೆ.

**ಸೈರಂಧ್ರಿ** : (ಒಳಗಿನಿಂದ ಹೊರಗೆ ಬರುತ್ತ)
ಇಲ್ಲಿ ನನ್ನಕ್ಕ ತಂಗಿಯರೆ. ನನಗೊಂದು
ಸಹಾಯ ಮಾಡಿ..... ನನ್ನ ಕೃತ್ಯವನು
ಹೊಗಳೆದು ನನ್ನಿಂದ ಮುಖ ತಿರುಪದಿರಿ.
ನಾನು ಎಸಗಿಲ್ಲ ಅನ್ಯಾಯ, ಪಾಪಗಳ,
ಪಾಪಿಗಳನಷ್ಟೆ ಕೊಂದಿಹೆನು. ನನ್ನ ಎಡೆಯಲಿ
ನೀವು ಇದ್ದರೆ, ನೀವೇನ ಮಾಡುತ್ತಿರಿ ಹೇಳಿ!
ನನ್ನ ಉಳಿವಿಗೆ ನಾನೆ ಕೊಂದೆ. ಅಬಲೆ ಕುಲಕೆ
ಶುಭವ ತಂದೆ! ನಿಮ್ಮ ಕಾಣಲು ತುಡಿದು ಬಂದೆ!

**ಮೇಳ** : ಕೇಳಿ ಬಲ್ಲೆವು ಮಗಳೆ ನೀ ಗೈದುದನು.
ಪರಿತಾಪ ಬೇಡ. ಒಳ್ಳೆಯದನೆ ಮಾಡಿದೆ.
ಜಗವೆಲ್ಲ ಹೊಗಳುತಿದೆ. ಹಬ್ಬವನೆ
ಮಾಡುತಿದೆ. ವಿರಾಟದರಸರನ್ನೆ
ಮೂಲೆಗುಂಪಾಗಿಸಿ, ಅವನೆ ಮೆರೆಯು
ತಲಿದ್ದ. ರಾಜ್ಯವನು ಮೆರೆಸುತ್ತಿದ್ದ.
ಅವನಿಗಾಯಿತು ಶಾಸ್ತಿ. ಸಂತಾಪ ಬೇಡ.

**ಸೈರಂಧ್ರಿ** : ನೀವು ಮೆಚ್ಚಿದಿರಿ ಕೃತ್ಯವನು
ಸಾಕು ನನಗಷ್ಟೆ! ನನ್ನ ಮಾನವೇ 'ನಿಧಾನ'
ಅದನು ಗುಪ್ತವಾಗಿರಿಸಲು ಶತ್ರುವಿನೊ
ಡನೆ ಸೆಣಸಾಡಿದೆ. ಸೆಣಸಿ ಉಳಿದೆ.
ಒಡತಿ ಸುದೇಷ್ಣೆಯ ರೋಷವದು ಮನವ
ಇರಿಯುತಿದೆ. ಮಾಡಲೇನದನಿಳಿಸ ಹೇಳಿ.

**ಮೇಳ** : ಮಾಡಲಿದೆ ಬಹುವಾಗಿ
ಅದರಿಲ್ಲೀಗ ಈ ಮನೆಯೊಳಗೆ.
ಮರೆತೆಯೇನು ನಿಮ್ಮ ಕಟ್ಟಿ ಹಾಕಿದ
ವಿಧಿಯ?.... ಕಡುಕಷ್ಟಗಳಿಗಿನ್ನು ಕೊನೆ ಬಂದಿತು.
ಸಾರ್ವಭೌಮನಾಗುವ ನಿನ್ನವನ ಕನಸು
ನನಸಾಯಿತು! ಮುಗಿಯಿತಿಂದಿಗೆ ನಿಮ್ಮ
ಕಾನನವಾಸ, ಅಜ್ಞಾತವಾಸ. ಬಾ ಹೊರಗೆ ಪಾಂಚಾಲಿ
ಪಾಂಚಾಲಿಯಾಗಿ; ಪ್ರಕಟವಾಗಲಿ ನಿಮ್ಮವರ
ನಿಜಕಾಂತಿ ಮುಸುಕಿನೊಳಗಿಂದ।

**ಸೈರಂಧ್ರಿ** : ನಿಮ್ಮ ಬಯಕೆ, ಹಾರೈಕೆ ಸಲಲಿ ಬೇಗ
ಕೂಡುವೆನು ನನ್ನವರ ಭದ್ರ ಹೊರಗೆ.
ಹೋಗಿ ಬನ್ನಿರಿ ಹೆಣ್ಣುಗಳೆ ನಿಮಗೆ ಶುಭವಾಗಲಿ.

# ದೃಶ್ಯ – ೬

(ಕುಂತಿ ಮತ್ತು ಪಾಂಚಾಲಿ ಅಂತಃಪುರದಲ್ಲಿ ಒಂದು ಮಂಚದ ಮೇಲೆ ಕುಳಿತಿದ್ದಾರೆ. ಪಾಂಚಾಲಿ ಏನನ್ನೋ ಯೋಚಿಸುತ್ತಿದ್ದಾಳೆ. ಅವರಿಬ್ಬರ ನಡುವೆ ಆತ್ಮೀಯತೆ ಇರುವಂತೆ ಕಾಣುತ್ತದೆ. ಸ್ವಲ್ಪ ಹೊತ್ತು ನೀರವತೆ ಮತ್ತು ಪಾಂಚಾಲಿಯೇ ಕುಂತಿಯನ್ನು ಮಾತನಾಡಿಸುತ್ತಾಳೆ.)

**ಪಾಂಚಾಲಿ** : (ನಿಧಾನವಾಗಿ ಅತ್ತೆಯ ಸಮೀಪಕ್ಕೆ ಜರುಗುತ್ತ) ಅತ್ತೆ, ನಾವಿಲ್ಲದಿದ್ದಾಗ ನೀವೊಬ್ಬರೇ ಹೇಗೆ ಕಳಿದಿರಿ ಕಾಲವನ್ನು? ಇಲ್ಲಿ ನಿಮಗೆ ಯಾರೂ ತೊಂದರೆ ಕೊಡಲಿಲ್ಲವೇ? ಮಹಾರಾಣಿ ಗಾಂಧಾರಿಯವರು ತಮ್ಮ ಚುಚ್ಚುಮಾತುಗಳಿಂದ ಗೋಳಾಡಿಸಿರಬೇಕಲ್ಲವೇ?

**ಕುಂತಿ** : ಗೋಳಾಡಿಸುವುದಕ್ಕೆ ಮತ್ತೇನೂ ಕಾರಣ ಉಳಿದಿರಲಿಲ್ಲವಲ್ಲ? ನಾನಂತೂ ವಿದುರನ ಮನೆಯಿಂದ ಇಲ್ಲಿಗೆ ಬರುತ್ತಲೇ ಇರಲಿಲ್ಲ.... ನನಗೂ ನಿಮ್ಮದೇ ಚಿಂತೆ. ನನ್ನ ಮುದ್ದು ಸೊಸೆಗೆ ಕಾನನವಾಸ, ಅಜ್ಞಾತವಾಸಗಳಲ್ಲಿ ಎಷ್ಟು ಕಷ್ಟಗಳನ್ನು ಸಹಿಸಬೇಕಾಯಿತೋ ಏನೋ!

**ಪಾಂಚಾಲಿ** : ನಿಮ್ಮ ಮಕ್ಕಳು ಐದು ಮಂದಿಯ ರಕ್ಷಣೆ ನನಗಿರುವಾಗ, ನನಗೆ ತೊಂದರೆ ಏನಿದ್ದೀತು? ಆದರೆ ನನ್ನ ಮಕ್ಕಳ ನೆನಪು ಪದೇ ಪದೇ ನನ್ನನ್ನು ಕಾಡದೆ ಬಿಡುತ್ತಿರಲಿಲ್ಲ.

**ಕುಂತಿ** : ಹೆತ್ತ ಕರುಳಿನ ಸಂಕಟ ಅರ್ಥವಾಗುತ್ತದೆ. ಆದರೆ ನನ್ನಂತಹ ದೌರ್ಭಾಗ್ಯಳ ವಿಚಾರವೇ ಬೇರೆ! ಪಾಪಿ ಜನ್ಮದ ಹೆಣ್ಣು, ಯಾರಿಗೂ ಸುಖ ಕೊಡಲಿಲ್ಲ. ಕರುಳನ್ನು ಕೊಯ್ದುಕೊಂಡು ಇನ್ನೂ ಬದುಕುತ್ತಿದ್ದೇನೆ. ರಾಜ, ಮಹಾರಾಜರ, ದಾಯಾದಿಗಳ ಸ್ವಾರ್ಥ, ಸೇಡು, ಸಮರಗಳಲ್ಲಿ ನಮ್ಮ ಭಾವನೆಗಳಿಗೆ ಎಲ್ಲಿದೆ ಅವಕಾಶ?.... ನಾನೊಬ್ಬರಿಗೆ ಎಷ್ಟು ಅನ್ಯಾಯ ಮಾಡಿದ್ದೇನೆ. ಅದನ್ನು ನೆನಸಿಕೊಂಡರೆ ಸಾಕು, ಮೈ ನಡುಗುತ್ತದೆ.

ಒಳಗಿನಿಂದ ಚೀರೊಂದು ಕೇಳಿಸುತ್ತದೆ. ಕಣ್ಮುಂದೆಯೇ ಅವಮಾನ. ಅನ್ಯಾಯವಾಗುತ್ತಿದ್ದರೂ ಬಾಯಿಬಿಟ್ಟು ಪ್ರತಿಭಟಿಸುವ ಸಾಹಸವಿಲ್ಲ. ಸತ್ಯವನ್ನು ಒಪ್ಪಿಕೊಳ್ಳುವ ಧೈರ್ಯವಿಲ್ಲ. ನನ್ನಂತರಂಗದಲ್ಲಿ ದೊಡ್ಡದೊಂದು ಕೋಲಾಹಲದ ಬಿರುಗಾಳಿಯೆದ್ದಿದೆ.

**ಪಾಂಚಾಲಿ:** ಅತ್ತೆ, ನಾನು ಬಂದಾಗಿನಿಂದ ಮತ್ತು ಸಂಧಿ ಮುರಿದು ಸಮರವೇ ತೀರ್ಮಾನವಾದಾಗಿನಿಂದ ನೀವೊಂದು ರೀತಿ ದುಗುಡದಿಂದ ಇದ್ದೀರಿ. ಯಾಕೆ ನಿಮ್ಮ ಮನಸ್ಸು ಅಷ್ಟು ಅಸ್ವಸ್ಥಗೊಳ್ಳಬೇಕು? ಸಮರವೇನಾಗುವುದೋ ಎಂಬ ಭೀತಿಯೇ?

**ಕುಂತಿ :** ನನ್ನ ಭೀತಿ ಅದಲ್ಲ. ಸಂಧಿಯ ವಿಚಾರ ಗುರುಹಿರಿಯರಿಗೆ, ಕೃಷ್ಣನಿಗೆ ಸೇರಿದ ವಿಚಾರ. ಸಂಧಿಯೋ ಸಮರವೋ ಏನಾದರೇನು? ನನ್ನ [illegible] ಮಾತ್ರ ನಿಲ್ಲುವುದಿಲ್ಲ. ನನ್ನ ರಾತ್ರಿಗಳು ಎಷ್ಟು ಭಯಾನಕವೆನಿಸುತ್ತದೆ! ಏನೇನೋ ಕನಸುಗಳು!.... ಬೆಚ್ಚಿ ಬೀಳುವಂತೆನಿಸುತ್ತದೆ!

**ಪಾಂಚಾಲಿ:** ಅತ್ತೆ, ಮಾವಂದಿರಿಲ್ಲದೆ ಇವರನ್ನೆಲ್ಲ ಸಾಕುವುದು ನಿಮಗೆ ಕಷ್ಟವೆನಿಸಿರಬೇಕಲ್ಲ? ಆ ಕೆಟ್ಟ ಕೌರವರ ಮತ್ಸರ ನಿಮ್ಮನ್ನು ಕ್ಷಣಕ್ಷಣವೂ ಸುಡುತ್ತಲೇ ಇತ್ತೆಂದು ಕೇಳಿದ್ದೇನೆ. ನನ್ನ ಮದುವೆಯಾದ ಮೇಲಂತೂ ನಾನೇ ಖುದ್ದಾಗಿ ಅವರು ಕೊಟ್ಟ ಹಿಂಸೆಯನ್ನು ಕಂಡಿದ್ದೇನೆ. ಆ ದುಷ್ಟರ ಗುಂಪಿನಲ್ಲಿ ಕರ್ಣನೊಬ್ಬನೇ ಸ್ವಲ್ಪ ಬೇರೆಯಾಗಿ ಪ್ರತಿಭಟಿಸುತ್ತ ಬಂದಿದ್ದಾನೆ. ಅತ್ತೆ, ಅವನನ್ನು ನೋಡಿದಾಗಲೆಲ್ಲ ಏಕೋ ನನಗೆ ಆತ್ಮೀಯಭಾವ ಮೂಡುತ್ತಿತ್ತು. ಯಾವ ಸ[illegible] ಏನೋ!.... ಎಂತಹ ಪರಾಕ್ರಮಶಾಲಿ, ಎಷ್ಟು ರೂಪವಂಥ! ಎಂತಹ ದಾನಗುಣಿ!.... ಆದರೆ.... ಆದರೆ.... ಆ ದುಷ್ಟರ ಗುಂಪಿನಲ್ಲಿ ಹೇಗೆ ಸೇರಿಕೊಂಡನೋ!..... ಪ್ರಸಿದ್ಧ ರಾಜವಂಶದಲ್ಲಿ ಹುಟ್ಟಿರಬೇಕಿದ್ದ ಅವನು ಏಕೆ ಆ ಬೆಸ್ತರ ಕುಲದಲ್ಲಿ ಜನಿಸಿದನೊ!!.... ನನಗಿನ್ನೂ ನೆನಪಿದೆ, ನನ್ನ ಸ್ವಯಂವರದಲ್ಲಿ ಅವನ ಜಾತಿಯೊಂದು ಅಡ್ಡ ಬರದಿದ್ದರೆ ಅವನೇ ಗೆಲ್ಲುತ್ತಿದ್ದ, ಅವನನ್ನೇ ವರಿಸುತ್ತಿದ್ದೆನೇನೋ!

**ಕುಂತಿ :** ಪಾಂಚಾಲಿ.... ಪಾಂಚಾಲಿ..... ಅವನ ಬಗ್ಗೆ ಮಾತನಾಡಿ ನನ್ನ ಕರುಳನ್ನು ಉರಿಸಬೇಡ. ನಾನು ಮರೆಯಬೇಕೆಂದು ಪ್ರಯತ್ನಿಸುತ್ತಿರುವುದನ್ನು ನೀನು ನೆನಪಿಸುತ್ತಿರುವಿ.

**ಪಾಂಚಾಲಿ:** ಅತ್ತೆ, ಇದೇನು ನೀವಾಡುತ್ತಿರುವುದು. ನಾನು ಕರ್ಣನ ಬಗ್ಗೆ ಮಾತಾಡಿದರೆ ನಿಮಗೇಕೆ ಕರುಳುರಿಯಬೇಕು? ಅಲ್ಲದೆ ಈಗ ಅವನು ನಮ್ಮ ಶತ್ರು. ವಿರೋಧ ಪಕ್ಷದವನು!

**ಕುಂತಿ** : ವಿರೋಧ ಪಕ್ಷಕ್ಕೆ ಸೇರಿದರೇನು. ಸೇರಿದ ಮಾತ್ರಕ್ಕೆ ಪೂರ್ವ ಸಂಬಂಧಗಳು, ನಂಟು ಕಡಿದುಹೋಗುತ್ತದೆಯೇ? ಕರ್ಣನೊಬ್ಬ ದುರ್ದೈವಿ? ದೈವಪತ್ಯೆ? ವಿಧಿಯ ವಂಚನೆಗೆ ಗುರಿಯಾದವ. ಎಷ್ಟು ವಿಚಿತ್ರವಾಗಿ, ವಿಪರ್ಯಾಸವಾಗಿ ವಿಧಿ ವರ್ತಿಸುತ್ತೆಂದು ನಾನು ಊಹಿಸಿಯೇ ಇರಲಿಲ್ಲ!

**ಪಾಂಚಾಲಿ**: ಅತ್ತೆ, ನಾನು ನಿಮ್ಮ ಸೊಸೆ, ಕೇಳುತ್ತಿದ್ದೇನೆ. ನನಗೊಂದು ವಿಷಯ ಅರ್ಥವಾಗುತ್ತಿಲ್ಲ. ಕರ್ಣನ ವಿಚಾರ ಬಂದಾಗ, ಅವನ ಪ್ರಸ್ತಾಪ ಎತ್ತಿದಾಗ ನೀವೇಕೋ ಒಂದು ರೀತಿ ಬೆಚ್ಚುತ್ತೀರಿ. ಕೂಡಲೇ ದುಗುಡ ಕವಿಯುತ್ತದೆ.... ನಿಮ್ಮ ಮಗ ಅರ್ಜುನ ಕರ್ಣನನ್ನು ಕೊಲ್ಲುವ ಪ್ರತಿಜ್ಞೆ ಮಾಡಿದಾಗ ನಾನು ಗಮನಿಸಿದೆ...... ನೀವು ತೀರಾ ಉದ್ವಿಗ್ನಗೊಂಡಿದ್ದೀರಿ.... ನಿಮ್ಮ ಈ ವರ್ತನೆಗೆ ಹಿನ್ನೆಲೆಯಲ್ಲಿ ಏನೋ ಇರಬೇಕೆಂದು ಅಂದು ನಾನು ಊಹಿಸಿದೆ. ಹೇಳಿ ಅತ್ತೆ. ನಿಜವಾಗಿಯೂ ನಾನು ನಿಮ್ಮ ಸೊಸೆ ಎನ್ನುವ ಪ್ರೀತಿ ಇದ್ದರೆ, ನಿಮ್ಮ ಗುಟ್ಟನ್ನು ಕಾಯಬಲ್ಲೆ ಎನಿಸಿದರೆ, ನಿಮ್ಮ ನೋವನ್ನು ನನ್ನೊಡನೆ ಹಂಚಿಕೊಳ್ಳಿ. ನಾನು ಮಾತು ಕೊಡುತ್ತೇನೆ. ನೀವು ಹೇಳುವ ಈ ರಹಸ್ಯವನ್ನು ಯಾರಿಗೂ ಹೇಳುವುದಿಲ್ಲ. ನನ್ನ ಕಡೆಯುಸಿರು ಇರುವವರೆಗೆ ಹೊಟ್ಟೆಯಲ್ಲಿ ಬಚ್ಚಿಟ್ಟುಕೊಳ್ಳುತ್ತೇನೆ.

**ಕುಂತಿ** : ಹೌದು ಪಾಂಚಾಲಿ.... ನನ್ನನ್ನು ಒಳಗಿಂದೊಳಗೇ ಕೊರೆಯುತ್ತಿರುವ, ಸುಡುತ್ತಿರುವ ಈ ಸತ್ಯವನ್ನು, ರಹಸ್ಯವನ್ನು ಹೊರಗೆ ಕಾರಿಕೊಳ್ಳದೆ ನನಗೆ ನೆಮ್ಮದಿ ಶಾಂತಿ ಇರಲಾರದು. ನನ್ನ ಮಕ್ಕಳಿಗೆ ತಿಳಿಯದ ಈ ರಹಸ್ಯವನ್ನು ನಿನಗೆ ಹೇಳುತ್ತೇನೆ..... ಹೆಣ್ಣಿನ ಅಸಹಾಯಕತೆ, ದೌರ್ಬಲ್ಯದ ಕತೆಯದು. ದುಃಸ್ಥಿತಿಯ ಕತೆ ನಿನಗೆ ಹೇಳುತ್ತೇನೆ... ಆದರೆ ಇದು ಯಾರಿಗೂ, ನಾನಾಗಿ ಹೇಳುವವರೆಗೂ ನೀನು ನಿನ್ನಲ್ಲೇ ಇರಿಸಿಕೊಳ್ಳಬೇಕು. ನನ್ನ ಮಕ್ಕಳಿಗೆ ಈಗಲೇ ತಿಳಿದರೆ ಅವರ ಮುಂದೆ ನಾನೆಷ್ಟು ಸಣ್ಣವಳಾಗಿ ನಿಲ್ಲಬೇಕಾಗುತ್ತದೆ. ಗೊತ್ತೇ?

**ಪಾಂಚಾಲಿ**: ನಿಮಗೆ ಮಾತು ಕೊಡುತ್ತೇನೆ. ಖಂಡಿತ ನಾನು ಯಾರಿಗೂ ಹೇಳುವುದಿಲ್ಲ.

ಕುಂತಿ : ಮಗಳೆ, ಕರ್ಣ ಬೇರೆ ಯಾರೂ ಅಲ್ಲ. ನನ್ನ ಸ್ವಂತ ಮಗ. ಈ ದೇಹದ ಈ ಮನಸ್ಸಿನ ಒಂದು ಭಾಗ. ನನ್ನ ಕರುಳಲ್ಲಿ ಅರಳಿದ ಹೂವು.

**ಪಾಂಚಾಲಿ**: (ಆಶ್ಚರ್ಯದಿಂದ) ಅತ್ತೆ!..... ನೀವು ಹೇಳುತ್ತಿರುವುದು ನಿಜವೇ? ಇದು ನಿಜವಾದಲ್ಲಿ ಕರ್ಣನಿಗೆ ಎಷ್ಟೊಂದು ಅನ್ಯಾಯವೆಸಗಿದಿರಿ. ನಿಮ್ಮೀ

ಐದು ಜನರ ಗುಣ ಸ್ವಭಾವಗಳು ಅವನೊಬ್ಬನಲ್ಲಿಯೇ ಇದೆ. ಅವನನ್ನು ತೊರೆದು ನೀವೆಂತಹ ಪಾಪ ಮಾಡಿದಿರಿ?

**ಕುಂತಿ** : (ನಿಟ್ಟುಸಿರಿಟ್ಟು) ಅದೇ ನಾನು ಹೇಳಿದ ಹೆಣ್ಣಿನ ಅಸಹಾಯಕತೆ, ಎಂದು! ವಿವಾಹಪೂರ್ವದಲ್ಲಿ ತಂದೆಯಾಜ್ಞೆಯನ್ನು ನೆರವೇರಿಸಲು ದೂರ್ವಾಸ ಮುನಿವರರನ್ನು ಸೇವಿಸಿದೆ. ನನ್ನ ಸೇವೆಗೆ ಒಲಿದ ದೂರ್ವಾಸರು ಐದು ಮಂತ್ರಗಳನ್ನು ಉಪದೇಶಿಸಿದರು. ಸಹಜ ಕುತುಹಲದಿಂದ ಒಮ್ಮೆ ಗಂಗಾತೀರದಲ್ಲಿ ಹೊಳೆ ಹೊಳೆವ ಸೂರ್ಯಬಿಂಬವನ್ನು ಕಂಡು ಸೂರ್ಯನಂತೆ ತೇಜೋವಂತ ಮಗನನ್ನು ಪಡೆದರೆ ಹೇಗಿರಬಹುದೆಂದು ಸೂರ್ಯಮಂತ್ರ ಪಠಿಸಿದೆ. ಸೂರ್ಯದೇವನ ಆವಾಹನೆಯಾಯಿತು. ಹೆದರಿದೆ. ಚೀರಿದೆ. ಮಂತ್ರವನ್ನು ಹಿಂದಕ್ಕೆ ತೆಗೆದುಕೊಳ್ಳುತ್ತೇನೆಂದೆ. ಆದರೂ ಕೇಳಲಿಲ್ಲ, ಮಂತ್ರಕ್ಕೆ ಪ್ರತಿ ಮಂತ್ರವಿಲ್ಲದೆ ವಿವಶತೆಯಲ್ಲಿ ಅವನೊಂದಿಗೆ ಕೆಲವು ಕ್ಷಣಗಳನ್ನು ಕಳೆಯಲೇಬೇಕಾಯಿತು. ದಿನ ಕಳೆದಂತೆ ತಂದೆಗೆ ವಿಷಯ ತಿಳಿದು ಅದು ಬಹಿರಂಗವಾಗದಂತೆ ಎಚ್ಚರಿಕೆವಹಿಸಿ, ನನ್ನನ್ನೊಂದು ರಹಸ್ಯ ಮಂದಿರದಲ್ಲಿರಿಸಿದ. ಮಗುವಿನ ಜನನವಾದ ಕೂಡಲೇ ಗಂಗಾನದಿಯಲ್ಲಿ ಎಸೆದು ಬರುವ ವ್ಯವಸ್ಥೆ ಮಾಡಿದ. ನಾನೆಷ್ಟು ಬೇಡವೆಂದು ಬೇಡಿಕೊಂಡರೂ ವಂಶಮರ್ಯಾದೆ, ಸಮಾಜ ಗೌರವಕ್ಕಾಗಿ ಈ ಕ್ರೂರ ಕೃತ್ಯವನ್ನು ಮಾಡಲೇಬೇಕೆಂದ.... ಅಂದಿನಿಂದ ಇಂದಿನವರೆಗೆ ಅವನಿಗಾಗಿ ಎಷ್ಟು ಚಡಪಡಿಸಿದ್ದೇನೆ. ಮದುವೆ, ಮಕ್ಕಳಾದರೂ ಆ ಮೊದಲು ಅರಳಿದ ಕುಡಿಯನ್ನು ಮರೆಯಲಾರದೆ ಹೋದೆ. ಅವನೆಂದೋ ಸತ್ತು ಹೋಗಿರಬೇಕೆಂದುಕೊಂಡೆ..... ಆದರೆ..... ಆದರೆ ಕ್ರಮೇಣ ಸೂತನೊಬ್ಬನಿಗೆ ಗಂಗೆಯಲ್ಲಿ ಸಿಕ್ಕ ವಿಷಯ ತಿಳಿಯಿತು......ನನ್ನ ಮನಸ್ಸಿಗೆ ಹೇಗೆ ಹೇಗೊ ಆಯಿತು. ಈಗ ನೀನೇ ಹೇಳು ಮಕ್ಕಳಿಂದಲೇ ಮಕ್ಕಳ ಸಾವು...! ಕೇಳಿ ನಾನು ಹೇಗೆ ಸಹಿಸಲಿ? ನನ್ನ ಆರು ಜನ ಮಕ್ಕಳಲ್ಲಿ ಯಾರು ಸತ್ತರೂ ನನ್ನ ಕರುಳು ಕೊಯ್ದಂತೆಯೇ?

**ಪಾಂಚಾಲಿ**: ಅಬ್ಬ! ಇಂತಹ ಭಯಂಕರ ರಹಸ್ಯವನ್ನು ಹೇಗೆ ಬಸಿರಲಿ ಬಚ್ಚಿಟ್ಟುಕೊಂಡಿದ್ದಿರಿ.....? ಸಂಧಿ. ಸಮರ ಏನೆಂಬುದು ತೀರ್ಮಾನವಾಗುವುದಕ್ಕೆ ಮೊದಲೇ ಇದನ್ನು ಹೇಳಿದ್ದರೆ ಪರಿಸ್ಥಿತಿಗಳು ಬೇರೆಯಾಗಬಹುದಿತ್ತೇನೋ!

**ಕುಂತಿ** : ಛಿ! ಛಿ! ಈಗ ಈ ಗುಟ್ಟನ್ನು ಬಹಿರಂಗಪಡಿಸಿ ಲೋಕದ ಮುಂದೆ, ಗುರುಹಿರಿಯರ ಮುಂದೆ, ಗಾಂಧಾರಿ, ಗಾಂಧಾರಿ ಕುಮಾರರ ಮುಂದೆ ಅಪರಾಧಿಯಾಗಿ ನಿಲ್ಲಬೇಕೆ? ಹಾದರದವಳೆಂದು ಕರೆಸಿಕೊಳ್ಳಬೇಕೆ? ನನ್ನಿಂದ ಖಂಡಿತ ಸಾಧ್ಯವಿಲ್ಲ.

**ಪಾಂಚಾಲಿ**: ಹೆಣ್ಣಿನ ಬದುಕೇ ಇಷ್ಟು!.... ಈ ದಾಯಾದಿ ಮತ್ಸರದ ಬೆಂಕಿ ಎಂದಿಗೆ ತಣಿಯುವುದೋ!..... ನಮ್ಮನ್ನು ಇಷ್ಟು ಕಾಡಿದ ಆ ಕೌರವ ಕುಲವಿನಾಶವಾದಲ್ಲದೆ ನಮಗೆ ಶಾಂತಿಯಿಲ್ಲ.

**ಕುಂತಿ** : ಮಗಳೆ, ಸಮರದ ಪರಿಣಾಮಗಳು ಏನಾಗುವುವೋ? ಕೊಲೆಗೆ ಕೊಲೆ; ಹಿಂಸೆಗೆ ಹಿಂಸೆ; ರಕ್ತಕ್ಕೆ ರಕ್ತ!!..... ಸೇಡು ತೀರಿತೆಂಬ ಸಮಾಧಾನವೊಂದಲ್ಲದೆ ಇದರಿಂದ ನಮಗೆ ಸಿಗುವುದೇನೂ ಇಲ್ಲ. ಯಾಕೆ ಬೇಕಿತ್ತೋ ಈ ಸಮರ ಗಿಮರ!

**ಪಾಂಚಾಲಿ**: ಸಹನೆ, ಸಮಾಧಾನ, ಸ್ನೇಹಕ್ಕೆ ಬಗ್ಗದ ಕೌರವರಿಗೆ ಸಮರವೇ ಒಂದು ಪಾಠ!. ಸ್ವಾರ್ಥ, ಅನ್ಯಾಯ, ಅಧರ್ಮ, ದೌರ್ಜನ್ಯ, ದುರ್ನಡತೆಳಿಗೆ ಶಾಸ್ತಿಯಾಗಬೇಕು. ಒಂದು ಹೆಣ್ಣನ್ನು ಅವಮಾನಿಸಿದ್ದಕ್ಕಾಗಿ, ಕಪಟದ್ಯೂತದಲಿ ರಾಜ್ಯ, ಸಂಪತ್ತುಗಳನ್ನು ಕಸಿದುಕೊಂಡದ್ದಕ್ಕಾಗಿ ಏನು ದೊರೆಯಬಹುದೆಂಬುದರ ಕಲ್ಪನೆಯಿಲ್ಲ. ಶಾಂತಿ ಸಮಾಧಾನದ ಮಾತುಗಳಾಡಿ ಕಾಪುರುಷರೆಂದು, ಕೈಲಾಗದವರೆಂದು ಕರೆಸಿಕೊಳ್ಳುವುದಕ್ಕಿಂತ ಸಮರವನ್ನೆ ಆಹ್ವಾನಿಸಿ ಸಾಯುವುದೇ ಮೇಲು. ಕೌರವ ದುಶ್ಯಾಸನರನ್ನು ಕೊಂದಲ್ಲದೆ ನನ್ನ ಸೇಡು ತೀರದು. ನನ್ನ ಪ್ರತಿಜ್ಞೆ ಪೂರೈಸದು! ಸಂಧಿಯನ್ನೆಂದಿಗೂ ಪುರಸ್ಕರಿಸಬೇಡವೆಂದು ಕೃಷ್ಣನಲ್ಲಿ ಬೇಡಿಕೊಂಡಿದ್ದೇನೆ. ಪರಾಕ್ರಮಿ ಪುರುಷರಾದವರಿಗೆ ತಮ್ಮ ಮಡದಿಯ ಮಾನವೇ ಮುಖ್ಯವಾಗಬೇಕು!

**ಕುಂತಿ** : ಪಾಪ ಗಾಂಧಾರಿ! ಪುತ್ರ ಮೋಹದಲಿ ಶಿಸ್ತು ಕಲಿಸಲು ಮರೆತಳು. ಮೊದಲಿನಿಂದಲೂ ಅಸೂಯೆಯೇ ಅವಳನ್ನು ಹಾಳುಮಾಡಿತು. ಆದರೂ ಅವಳ ಬಗ್ಗೆ ನನ್ನ ಸಹಾನುಭೂತಿ ಇದೆ..... ಪಾಪದ ಹುಡುಗಿ! ತಾತ ಭೀಷ್ಮರ ರಾಜಕೀಯ ಚಾಣಾಕ್ಷತನದಿಂದ ಮತ್ತು ವಂಶದ ಕ್ಷೇಮ ಕಾತರತೆಯಿಂದ ಗಾಂಧಾರಿಯನ್ನು ಮೋಸದಿಂದ ಕುರುಡರಾದ ಧೃತರಾಷ್ಟ್ರ ಮಹಾರಾಜರಿಗೆ ಮದುವೆ ಮಾಡಿಸಿದರು! ಮದುವೆಯಾದ ಮೇಲೆ ನಿಜ ಏನೆಂದು ತಿಳಿದ ಗಾಂಧಾರಿ, ಪಾಪ ಎಷ್ಟೋ ದಿನ ದುಃಖಿಸುತ್ತ, ತನ್ನ ಹಣೆಬರಹವನ್ನು ಹಳಿದುಕೊಳ್ಳುತ್ತ ಕುಳಿತುಕೊಂಡಿದ್ದಳಂತೆ...! ಆದರೆ ಏನು ಮಾಡಲು ಸಾಧ್ಯ? ಪರಿಸ್ಥಿತಿಯೊಂದಿಗೆ ಹೊಂದಿಕೊಳ್ಳಲೇ ಬೇಕೆನಿಸಿ, ಅವನಿಗಿಲ್ಲದ ಸುಖ ನನಗೂ ಬೇಡವೆಂದು ಕಣ್ಣಿಗೆ ಪಟ್ಟಿ ಕಟ್ಟಿಕೊಂಡಳಂತೆ?

**ಪಾಂಚಾಲಿ**: ಇದೇ ಅತ್ತೆ, ನಮ್ಮ ಹೆಂಗಸರಲ್ಲಿರುವ ದೌರ್ಬಲ್ಯ ಮೊದಲೇ ಮೋಸಕ್ಕೆ ಗುರಿಯಾಗಿದ್ದರೂ ಮತ್ತೆ ತಮ್ಮನ್ನು ತಾವು ಮೋಸಗೊಳಿಸಿಕೊಳ್ಳುತ್ತಾರೆ.

ಯಾವ ಪಾಪಕ್ಕಾಗಿ ಬಯಸಿ ಅಂಧತ್ವವನ್ನು ತಂದುಕೊಳ್ಳಬೇಕು. ಅನುಭವಿಸುವ ಸುಖದ ಹಕ್ಕುಗಳನ್ನು ಬಿಟ್ಟುಕೊಡಬೇಕು. ದನಿಯಿಲ್ಲದೆ, ಸ್ವತಂತ್ರ ವ್ಯಕ್ತಿತ್ವವಿಲ್ಲದೆ, ಪುರುಷರು ನಡೆಸುವ ದಾರಿಗಳಲ್ಲಿಯೇ ನಡೆಯುತ್ತ, ಮುಳ್ಳುಗಳನ್ನು ತುಳಿಯುತ್ತಾ ಕುರುಡುಗತ್ತಲಿನಲ್ಲಿ ಬೆಳಕಿಲ್ಲದೆ ನಡೆಯುತ್ತ ನರಕದತ್ತ ಸಾಗಬೇಕೇಕೆ?.... ಇದರಿಂದ ನಮಗೆ ಬರುವುದೇನು?..... ಪತಿವ್ರತೆ! ಸತಿ ಶಿರೋಮಣಿ!!.... ಇಂತಹ ಬಿರುದುಗಳು!.... ನಮ್ಮ ಅನನ್ಯತೆಯನ್ನು ಬಲಿ ಕೊಡಬೇಕೆ?..... ಅತ್ತೆ, ನೀವಾದರೂ ಸ್ವಲ್ಪ ಧೈರ್ಯವಹಿಸಿ, ನಿಮ್ಮ ಮಗುವನ್ನು ರಕ್ಷಿಸಿಕೊಳ್ಳಬೇಕಿತ್ತು. ಅಲ್ಲದೆ ಕಾನೀನ ಪದ್ದತಿ ಇತ್ತಲ್ಲವೇ? ನಿಮ್ಮ ಮಗುವಿನೊಂದಿಗೇ ನಿಮ್ಮನ್ನು ಮದುವೆಯಾಗಬಲ್ಲ ಯಾವನಾದರೂ ರಾಜವಂಶದ ಯುವಕ ಬಂದೇ ಬರುತ್ತಿದ್ದ. ನೀವು ತಪ್ಪು ಮಾಡಿದಿರಿ ಅತ್ತೆ. ನಾನು ನಿಮ್ಮ ಸೊಸೆ. ಕಿರಿಯಳು. ನಿಮ್ಮನ್ನು ಪ್ರಶ್ನಿಸುವ ನಿರ್ದೇಶಿಸುವ ಸಾಹಸ ಮಾಡಬಾರದಿತ್ತೇನೋ. ಆದರೆ ನನಗೆ ನಮ್ಮ ಹೆಣ್ತನದ ಬಗ್ಗೆ ತುಂಬ ರೋಷವುಕ್ಕುತ್ತದೆ. ಹೆಣ್ಣಿಗೆ ಅನ್ಯಾಯವಾದುದನ್ನು ಕಂಡಾಗ, ಕೇಳಿದಾಗ ಸ್ಫೋಟಗೊಳ್ಳಬೇಕೆನಿಸುತ್ತದೆ. ನಾವು ಅಬಲೆಯರಲ್ಲ ಅತ್ತೆ..... ಅಬಲೆಯರಲ್ಲ....... ನಮಗೂ ಅಭಿಮಾನ, ಸ್ವಾಭಿಮಾನ, ವ್ಯಕ್ತಿತ್ವ, ನಮ್ಮತನಗಳಿವೆ. ನಮಗೂ ಮನಸ್ಸಿದೆ. ನಮಗೂ ಧ್ವನಿ ಇದೆ. ನಾವೂ ಅವರ ನಡತೆಯನ್ನು ಪ್ರಶ್ನಿಸಬೇಕು.

**ಕುಂತಿ** : ಮಗೂ ನಿನ್ನದು ಇನ್ನೂ ಬಿಸಿರಕ್ತ. ನೀನು ದಿಟ್ಟೆ. ನೀನು ಹೇಳುವುದೆಲ್ಲ ಸರಿಯೆ. ಆದರೆ ಅಂದು ನಾನೇನು ಮಾಡುತ್ತಿದ್ದೇನೆ. ಏನು ಮಾಡಬೇಕೆಂಬ ಕಲ್ಪನೆಯೂ ಸಾಧ್ಯವಿರಲಿಲ್ಲ.... ಕಿರಿಯ ವಯಸ್ಸಿನಲ್ಲಿಯೇ ಗಂಡನನ್ನು ಕಳೆದುಕೊಂಡು ಐದು ಮಕ್ಕಳ ಜವಾಬ್ದಾರಿ ಹೊತ್ತು ಸಾಕಿ, ಸಲಹಿದ್ದೇ ಅಲ್ಲದೇ ಈ ಕೌರವರು ಕೊಟ್ಟ ಕಾಟಗಳಿಂದ ಜರ್ಜರಿತಳಾಗಿದ್ದೇನೆ. ನಾನು ಜೀವನದಲ್ಲಿ ಬಹಳ ಸೋತು ಹೋಗಿದ್ದೇನೆ... ಸೋತು ಹೋಗಿದ್ದೇನೆ.

**ಪಾಂಚಾಲಿ**: ಅತ್ತೆ, ಆದದ್ದೆಲ್ಲ ಆಗಿ ಹೋಯಿತು. ಈಗ ಧೈರ್ಯವೊಂದೇ ನಮಗೆ ಬೇಕಾಗಿರುವುದು. ಯುದ್ಧದೊಂದಿಗೇ ಎಲ್ಲಕ್ಕೂ ಮುಗಿತಾಯ. ಯುದ್ಧದಿಂದಲೇ ಯುಗಾಂತ. ಇನ್ನು ಯೋಚನೆ ಬಿಡಿ ಅತ್ತೆ. ನಡೆಯಿರಿ. ಸಂಧಾನಕ್ಕೆಂದು ಹೋಗಿರುವ ಕೃಷ್ಣ ಹಿಂತಿರುಗಬೇಕು. ವಿಷಯವೆಲ್ಲ ತಿಳಿಯುತ್ತದೆ.

**ಕುಂತಿ** : ಪಾಂಚಾಲಿ, ನನಗೇಕೋ ಭಯವಾಗುತ್ತಿದೆ. ಆ ನನ್ನ ಮಗನ ಪ್ರತಿ ನನ್ನ ಮನಸ್ಸಿನಲ್ಲಿ ಎಂದೂ ಇಲ್ಲದ ಕೋಲಾಹಲವೆದ್ದಿದೆ. ಅವನ ಸಾವನ್ನು ನಾನು ಊಹಿಸಿಕೊಳ್ಳಲಾರೆ. ಅವನು ಹೇಗಾದರೂ ಉಳಿಯಬೇಕು. ಉಳಿಯಲೇಬೇಕು. ಅವಕಾಶವನ್ನು ನೋಡಿಕೊಂಡು ಓಡಿಹೋಗಿ ಅವನಿಗೆ ಹೇಳುತ್ತೇನೆ. ಮಗು ನಾನು ನಿನ್ನ ತಾಯಿ. ಈ ಯುದ್ಧ ಬೇಡ. ಹೇಗಾದರೂ ನೀನು ಯುದ್ಧದಿಂದ ದೂರ ಉಳಿ ಎಂದು ಹೇಳುತ್ತೇನೆ. ಪಾಂಚಾಲಿ ಅವನು ನನಗೆ ಬೇಕು....ನನಗೆ ಬೇಕೇ ಬೇಕು. ನೀನಾದರೂ ನನಗೆ ಸಹಾಯಮಾಡು.

**ಪಾಂಚಾಲಿ**: ಅತ್ತೆ, ಈಗ ನೀವು ಹೋಗಿ ದಿಢೀರನೆ ನೀವೇ ಅವನ ತಾಯಿ ಎಂದು ಹೇಳಿದರೆ, ಅವನೇಕೆ ಒಪ್ಪಿಕೊಳ್ಳುತ್ತಾನೆ? ಅಲ್ಲದೆ ಇಷ್ಟು ದಿನ ಇಲ್ಲದ ಮಮತೆ ಈಗ ಹೇಗೆ ಬಂತು?.... ನೀನು ನನಗೆ ತಾಯಿಯಲ್ಲ ಎಂದು ಧಿಕ್ಕರಿಸಿದರೆ ನೀವೇನು ಮಾಡುತ್ತೀರಿ?

**ಕುಂತಿ** : ಓ ದೈವವೇ..... ನಾನೇನು ಮಾಡಲಿ.....? ಮಗು..... ರಾಧೇಯ...... (ಎಂದು ಚೀರಿ ಕೆಳಗುರುಳುತ್ತಾಳೆ. ಪಾಂಚಾಲಿ ತಕ್ಷಣ ಓಡಿ ಬೀಳುತ್ತಿದ್ದ ಕುಂತಿಯನ್ನು ಹಿಡಿದುಕೊಳ್ಳುತ್ತಾಳೆ.)

೦೦

# ದೃಶ್ಯ – ೧೦

(ಯುದ್ಧ ಮುಗಿದಿದೆ. ಗಾಂಧಾರಿ ಅಂತಃಪುರ. ಗಾಂಧಾರಿ ಬಿಕ್ಕಿ ಬಿಕ್ಕಿ ಅಳುತ್ತಿದ್ದಾಳೆ. ಮೇಳ ಗಾಂಧಾರಿಯ ಸುತ್ತು ನಿಂತಿದೆ. ಗಾಂಧಾರಿಯನ್ನು ಸಮಾಧಾನ ಪಡಿಸುವ ದಾಟಿಯಲ್ಲಿ ಮಾತನಾಡುತ್ತಾರೆ.)

ಮೇಳ : ಧೃತರಾಷ್ಟ್ರ ಪ್ರಿಯಸತಿಯೆ
ಕೌರವೇಂದ್ರನ ತಾಯೆ
ಶೋಕವನು ಮರೆತು ಮುದವ ತಾಳು,
ಆದುದಾಯಿತು ಆಗಬೇಕಾದುದನು
ಚಿಂತಿಸುತ ಏಳು. ನೂರುಜನ
ಮಕ್ಕಳನು ಬರಿದೆ ಹೆತ್ತು
ರಣಕೆ ಆಹುತಿ ಇತ್ತೆ. ನಿನ್ನಳಲ
ಬೆಂಕಿಯದು ಬರಿ ಬೆಂಕಿಯಲ್ಲ
ಕುಲಕಡಲಿನೊಡಲಿಂದ
ಸಿಡಿದೆದ್ದ ಬಡಬಾಗ್ನಿ! ಸುಡುವು
ದೆಲ್ಲರ ಬಳಿಗೆ ಬಂದವರ.
ನೀನೊಬ್ಬಳೇ ಅಲ್ಲ ಲೆಕ್ಕವಿಲ್ಲದ
ಮಂದಿ ಕಳೆದುಕೊಂಡರು
ಮಕ್ಕಳನು ಮರಿಗಳನು ಮತ್ತವರ
ಪುರುಷರನು. ಕತ್ತಿಗಳ ಮಸೆವಾಟ
ರುಂಡಗಳ ಚೆಂಡಾಟ ರಕ್ತದೋಕುಳಿಯಾಟ
ನೆಣಕೊಬ್ಬು ರಂಗೋಲಿ
ರಣಪದ್ದು ಕಾಗೆಗಳ ಕಾದಾಟ!
ಭೂತ ಪ್ರೇತದ ಕುಣಿತ

ರುದ್ರಭೂಮಿಯ ಸಾಮ್ರಾಜ್ಯ.
ನರರ ಸ್ವಾರ್ಥಕ್ಕೆ ಮತ್ಸರದ
ಸೆಣಸಾಣಕ್ಕೆ ದೊರೆತ ಫಲವಿದು
ನೋಡು. ಮರೆ ತಾಯಿ ಎಲ್ಲವನು.
ಮರೆತು ಹೊಸ ಬದುಕನ್ನು
ಬದುಕುವುದ ಕಲಿ ನೀನು.
ಸಾವಿನೊಂದಿಗೆ ಸಾಯಲೀ ದ್ವೇಷ
ಕಳಚಿ ಎಸೆ ಈವರೆಗಿನೀ ನಿನ್ನ ವೇಷ.
ಬತ್ತಿ ಹೋದ ಕಂಬನಿಯ ಮತ್ತೆ
ಒತ್ತಿ ತರಿಸಲುಬೇಡ. ಸುಡುವೆದೆಯ
ಸುಡಿಸುತಲೆ ಬೂದಿಯಾಗಿಸಬೇಡ.

**ಗಾಂಧಾರಿ :** ಎಲೆ ಹೆಣ್ಣುಗಳೇ ನೀತಿಯಾ ನುಡಿಯದಿರಿ
ಕಂಬನಿಯ ಕಡಲಿಗೆ ಕಟ್ಟೆ ಕಟ್ಟದಿರಿ
ಹರಿಯಲೀ ಎನ್ನೆದೆಯ ಬೆಂಕಿ ಕಣ್ಣೀರಾಗಿ
ಕಿತ್ತುಬರಲೀ ನೆತ್ತರು ತಣ್ಣೀರಾಗಿ.
ಸುಲಭವದು ಹೇಳುವುದು.
ತಾಳಿಕೊಳ್ಳಲಿ ಎಂತು ಉಕ್ಕುವೀ ನೋವ.
ಒಂದಲ್ಲ ಎರಡಲ್ಲ ನೂರು ಮಕ್ಕಳ ಸಾವು
ನೊಂದವರು ಮಾತ್ರವೇ ಬಲ್ಲರಿದನು.
ಮಕ್ಕಳಗಲಿಕೆ ನೋವು,
ಸಂತೈಸಲೆಂತು ಆ ನನ್ನ ಅರಸನಾ.
ರಾಜ್ಯ ಸಾಮ್ರಾಜ್ಯದೊಡೆತನದ ಕನಸುಗಳ
ಕಟ್ಟಿಕೊಂಡೊಳಗೊಳಗೆ ನಲಿದವನ.
ಇನ್ನವನ ಅಳಲನ್ನು ಅಳಿಸಲೆಂತು
ಕಣ್ಣಿಲ್ಲದಾ ಈ ಕುರುಡು ಗಂಡ ಹೆಂಡಿರಿಗೆ
ದಿಕ್ಕಾರು ಕಾಯುವವರಾರೆಮ್ಮ ಮುಪ್ಪಿನಲಿ.

(ಈ ಮಾತು ನಡೆಯುತ್ತಿರಬೇಕಾದರೆ ಕುಂತಿ, ಪಾಂಚಾಲಿಯರು ಪ್ರವೇಶಿಸುತ್ತಾರೆ. ಮೇಳದವರು ಅವರನ್ನು ಗಮನಿಸಿ ಗಾಂಧಾರಿಗೆ ತಿಳಿಸುತ್ತಾರೆ.)

**ಮೇಳ :** ತಾಯೆ, ಗಾಂಧಾರಿ, ಸಾಕು ನಿಲ್ಲಿಸು ನಿನ್ನ
ದಹಿಸುತಿಹ ಈ ಅಳಲನ್ನು. ಇದೊ ನೋಡು
ನಿನ್ನ ಕಾಣಲು ಬಂದಿಹರು ಪಾಂಚಾಲಿ ಕುಂತಿಯರು.

ನಿನ್ನ ತಣಿಸಲು, ನಿನ್ನ ಒಲಿಸಲು ಬಂದಿಹರು
ಕರೆದವರ ಮನ್ನಿಸು. ತೋರದಿರು ಸಿಡಿ ಮುನಿಸು.
ಸಾವು ಅವರನ್ನೂ ಕಲಕಿದೆ. ವಿಧಿಯೂ ಕೆಣಕಿದೆ.
ಆದರದನೆಲ್ಲ ಮರೆತು ನಿನ್ನಡಿಗೆ ಬಂದಿಹರು.
ಬರಹೇಳು ತಾಯೆ.

**ಕುಂತಿ** : ಅಕ್ಕ ನಾನು ಕುಂತಿ. ನಿನ್ನ
ಪ್ರೀತಿಯ ಕುಂತಿ. ಮನ್ನಿಸು ನಮ್ಮೆಲ್ಲರನು
ಬಯಸದೆಯೂ ಬಂದ ಅವಘಡದ
ಪರಿಣಾಮವಾಯಿತು ಸಾವು ಬಂಧುಬಾಂಧವರ.
ನಾವು ನಿಮಿತ್ತರಾದೆವಷ್ಟೆ. ಇದು ವಿಧಿಯ ಲೀಲೆ.

**ಗಾಂಧಾರಿ** : ಕುಂತೀ. ಬಾ ಹತ್ತಿರ ಬಾ. ನಿನ್ನನ್ನು
ಸ್ಪರ್ಶಿಸಿಯಾದರೂ ಮುಂದಿನ ಜನ್ಮಕೆ
ಪುಣ್ಯಗರ್ಭೆ ಎನಿಸಿಕೊಳುವೆ.
ನೂರು ಮಕ್ಕಳನು ಹೆತ್ತರೇನು ಉಳಿಯ
ಲಿಲ್ಲ ವಂಶದಲಿ ಒಂದು ಕುಡಿಯೂ.
ಇನ್ನೆಮಗೆ ಇರಲು ಏನುಂಟು
ಬನ್ನಗಳಲ್ಲದೆ ಸುಖವಿನಿತಿಲ್ಲ
ನಮಗಾರು ಇಲ್ಲ. ದಿಕ್ಕಿಲ್ಲದ ಪರದೇಶಿಗಳು ನಾವು.
ನೀನು ಭೂಪಾಲಕನ ರಾಜಮಾತೆ
ಎಲ್ಲ ವಿಭವದಿ ಮೆರೆವ ಸರದಿಯು ನಿನದು
ಅಂಧಕರು ಮುದಿಗೂಬೆಗಳು.
ನಿಮ್ಮ ಆಳ್ವಿಕೆಯಲ್ಲಿ ಈ ಬೆಂದೊಡಲನ್ನು
ಹೊರೆವವರು ನಾವು. ನಮ್ಮನ್ನು
ಮಾತನಾಡಿಸಲು ನೀವೇಕೆ ಇಲ್ಲಿ ಬಂದಿರಿ?

**ಕುಂತಿ** : ಅಕ್ಕ ಹಾಗೆಲ್ಲ ಮಾತನಾಡದಿರು.
ಪಾಂಡವರು ನನ್ನ ಮಕ್ಕಳಲ್ಲ ನಿನ್ನ ಮಕ್ಕಳು
ಅವರ ಮೇಲೆ ನಿನಗೆ ಅಧಿಕಾರವಿದೆ.
ಅವರನ್ನು ಆದೇಶಿಸು. ನಮಗೆ ರಾಜ್ಯ ಬೇಡ.
ರಾಜ್ಯಕ್ಕಾಗಿ ನಾವು ಕಾದಾಡಲಿಲ್ಲ.
ಕಾದಾಡುವುದು ಅನಿವಾರ್ಯವೆಂಬಂತೆ

ನಿನ್ನ ಮಕ್ಕಳು ವರ್ತಿಸಿದರು.
ನೋಡು ನಿನ್ನ ಸೊಸೆ ಪಾಂಚಾಲಿ
ನಿನಗೆ ನಮಿಸಲು ನಿನ್ನ ಸೇವಿಸಲು
ಬಂದಿಹಳು. ಅವಳನ್ನು ಮನ್ನಿಸು.

**ಪಾಂಚಾಲಿ:** ಅಮ್ಮ ನಾನು ಏನೇನೋ ನುಡಿದೆನೆಂದು
ನನ್ನ ಮೇಲಿದೆ ನಿಮ್ಮ ಕೋಪ
ನಿಮ್ಮ ಬಸಿರ ಬೆಂಕಿಯ
ಕಲ್ಪನೆಯು ನನಗಿದೆ ಆದರೆನ್ನ
ಮಾನ ಅಭಿಮಾನಗಳನ್ನು
ರಕ್ಷಿಸಿಕೊಳ್ಳುವುದೂ ನನ್ನ ಕರ್ತವ್ಯ
ವಾಯಿತು. ನಿಮ್ಮ ಮಕ್ಕಳ ಸಾವಿಗೆ
ನಾನು ಕಾರಣವೆಂದು ನಿಮ್ಮ ಅಂತರಂಗಕ್ಕೆ
ಗೊತ್ತು. ಅದಕ್ಕೇ ನನ್ನ ಮೇಲೆ ನಿಮ್ಮ ಕೋಪ.

**ಗಾಂಧಾರಿ :** ಜಾಣೆಯಂತೆ ಮಾತನಾಡುತ್ತಿರುವಿ
ಪಾಂಚಾಲಿ. ರಣರಂಗದಲ್ಲಿ ನಡೆದ
ಸಂಗತಿಗಳನ್ನು ಕೇಳಿದ್ದೇನೆ. ನೀನು
ಮನುಷ್ಯಳಲ್ಲ ರಾಕ್ಷಸಿ. ನರ ಪಿಶಾಚಿನಿ.
ನನ್ನ ಮಗನ ಎದೆ ಬಗೆದು ಮೊಗೆ ಮೊಗೆದು
ರಕ್ತ ಕುಡಿಯುವ, ತಲೆಗೆ ಸವರಿಕೊಳ್ಳುವ
ಹಲ್ಲಿನ ಹಣಿಗೆಯಲಿ ಕುರುಳ ತಿದ್ದುವ
ಎಳೆದೆಳೆದು ಸುತ್ತಿದ ಕರುಳ ದಂಡೆ ಮುಡಿವ
ಭೀಭತ್ಸ ಕೃತ್ಯಗಳನ್ನು ಮಾಡುವವಳು
ಮನುಷ್ಯಳು ಹೇಗಾದಾಳು? ನೀನು.... ನೀನು
ನಿಜವಾಗಿಯೂ ಶಾಕಿನಿ ಡಾಕಿನಿಯೇ ಇರಬೇಕು.
ಹೋಗು... ನನ್ನಿಂದ ದೂರ ಹೊರಟು ಹೋಗು.
ನಿನ್ನ ಸಾಮೀಪ್ಯ ನನ್ನನ್ನು ಕೆರಳಿಸುತ್ತದೆ.
ನೀವು ಮಾಡಿದ ಕೃತ್ಯಗಳೆಲ್ಲ ಮೋಸದ ಕೃತ್ಯಗಳು.
ದಯವಿಟ್ಟು ನೀವಿಬ್ಬರೂ ಇಲ್ಲಿ ನಿಲ್ಲಬೇಡಿ.
ನನ್ನ ಪಾಡಿಗೆ ನನ್ನ ಹಣೆಬರಹಕ್ಕೆ ನನ್ನನ್ನು
ಬಿಟ್ಟು ಬಿಡಿ. ನಿಮ್ಮ ಸಾಂತ್ವನ ಗೀಂತ್ವನಗಳು
ನನಗೆ ಬೇಕಿಲ್ಲ......

**ಪಾಂಚಾಲಿ:** ಅಮ್ಮ ಸುಮ್ಮನೆ ನಮ್ಮನೇಕೆ ದೂರುವಿರಿ.
ನಾವೇನು ನಿಮಗೆ ಮೋಸ ಮಾಡಿದೆವು.
ನೀವು ಮಾಡಿದ ಮೋಸಗಳನ್ನು
ಮರೆತು ಬಿಟ್ಟಿರಾ ಹೇಗೆ? ಅರಗಿನರಮನೆ
ಯಲ್ಲಿರಿಸಿ ಸುಡಲು ಯತ್ನಿಸಿದ್ದು, ಕಪಟ
ದ್ಯೂತದಲಿ ಸಿರಿ ಸಂಪದಗಳನ್ನು ಕಡೆಗೆ
ಈ ವಂಶದ ಹಿರಿಸೊಸೆಯ ಮಾನವನ್ನೇ ಕಸಿದದ್ದು
ತುಂಬಿದ ಸಭೆಗೆ ಎಳೆದು ತಂದು
ವಿವಸ್ತ್ರಳಾಗಿಸಲು ಯತ್ನಿಸಿದ್ದು
ಇವೆಲ್ಲವೂ ನಿಮಗೆ ನ್ಯಾಯವೆನಿಸುತ್ತಿದೆಯೇ?
ತಾವು ಮಾಡಿದ ಅನ್ಯಾಯ ಅಧರ್ಮಗಳನ್ನು
ಮುಚ್ಚಿಹಾಕಿ, ನಮ್ಮನ್ನೇ ಅಧರ್ಮಿಗಳಾಗಿ
ನಿಲ್ಲಿಸುತ್ತಿದ್ದೀರಿ. ಇದು ತಮಗೆ ಸರಿ ಎನಿಸುವುದೇ?

**ಗಾಂಧಾರಿ :** ಸಾಕು ಬಾಯಿ ಮುಚ್ಚು ಪಾಂಚಾಲಿ.
ಪಂಚವಲ್ಲಭೆಯೆನ್ನುವ ಹಮ್ಮು
ಈ ಕದನ ದಿಗ್ವಿಜಯ ನಿಮ್ಮೆಲ್ಲರ ತಲೆತಿರುಗಿಸಿದೆ.
ಅದರಲ್ಲಿಯೂ ಹೆಣ್ಣಿನ ನಡತೆ ಮೀರಿ
ಉದ್ಧಟಳಾಗಿ ಮಾತನಾಡುತ್ತಿರುವೆ.
ನಿನಗೇನೂ ಕಾಣಿಸುವುದಿಲ್ಲ. ನಿನ್ನ ಕಣ್ಣು
ನೆತ್ತಿಯ ಮೇಲಿದೆ. ಅದಕ್ಕೇ ನೀನು ಹೀಗೆ
ಮೆರೆಯುತ್ತಿರುವೆ. ನಿನ್ನೊಂದಿಗೆ
ಬಾಯಿ ಕೊಡುವುದೂ ತಪ್ಪು. ಹೋಗು
ನಿನ್ನೊಂದಿಗೆ ನನ್ನದೇನು ಮಾತು.
ನಿನ್ನ ಆ ಧರ್ಮವಂತ ಗಂಡನ ಕರೆ
ಅವನನ್ನೇ ನಿಲ್ಲಿಸಿ ಕೇಳುತ್ತೇನೆ.
ಅವನು ಮಾಡಿದ್ದು ಎಷ್ಟರಮಟ್ಟಿಗೆ ಸರಿ, ಎಂದು.

**ಪಾಂಚಾಲಿ:** ಅವರೇಕೆ ಬರಬೇಕು? ಅವರ
ಸಹನೆ, ಶಾಂತಿ, ಧರ್ಮ, ನೀತಿಗಳೇ
ನಮ್ಮನ್ನು ಈ ದೀನ ಸ್ಥಿತಿಗೆ ತಂದದ್ದು
ಧರ್ಮ, ಧರ್ಮ ಎಂದು ಧರ್ಮಕ್ಕಾಗಿ
ಎಲ್ಲಿಯವರೆಗೆ ತ್ಯಾಗ ಮಾಡಿದರೆಂಬುದು
ಲೋಕಕ್ಕೇ ತಿಳಿದಿದೆ, ಮುಂದೆ ಬರುವ

ಜನಾಂಗ ಅವರ 'ಧರ್ಮ'ವನ್ನು ಎತ್ತಿ
ಹಿಡಿದು ಹಾಡಿ ಹೊಗಳುವುದಕ್ಕಿಂತ
ಬುದ್ಧಿ ಇಲ್ಲದ ಮರುಳ, ಅಸಮರ್ಥ,
ರಾಜನೀತಿಯಲ್ಲಿ ಅಜ್ಞ, ಮುಗ್ಧ, ನರ ಸತ್ತವನು
ಎಂದು ಆಡಿಕೊಳ್ಳುತ್ತಾರೆ. ಅಂದೇ ಮುಂದಾಗುವು
ದನ್ನು ಯೋಚಿಸಿ ದ್ಯೂತದ ಬಲೆಯಲ್ಲಿ ಬೀಳದಿದ್ದರೆ
ಇಷ್ಟು ವರುಷಗಳು ಅನುಭವಿಸ
ಬೇಕಾಗುತ್ತಿರಲಿಲ್ಲ. ಸ್ವಂತ ಬಲದಿಂದ
ಬುದ್ಧಿಯಿಂದ ಕಟ್ಟಿಕೊಂಡ ರಾಜ್ಯವನ್ನೂ
ಕಸಿದುಕೊಳ್ಳುವ ಹುನ್ನಾರದಲ್ಲಿ
ನಿಮ್ಮ ಪಾಲು ಇರಲಿಲ್ಲವೇನು. ಮಕ್ಕಳ
ಅಂದಿನ ಉದ್ಧಟತನವನ್ನು ನಿಲ್ಲಿಸಿದ್ದರೆ,
ಮಕ್ಕಳನ್ನು ಕಳೆದುಕೊಳ್ಳುವ ಪ್ರಸಂಗ
ಏಕೆ ಇರುತ್ತಿತ್ತು? ಇದೆಲ್ಲವೂ ಸ್ವಯಂ
ಕೃತಾಪರಾಧವಲ್ಲವೇ. ನೀವೇ ಯೋಚಿಸಿ.
ಅವರು ಮಾಡುವುದೆಲ್ಲವೂ ನಿಮಗೆ
ಹಿತವೆನಿಸಿತ್ತು. ನಿಮಗೆ ಒಪ್ಪಿಗೆಯಾಗಿತ್ತು.
ಏಕೆಂದರೆ ದೋಚಿಕೊಂಡದ್ದು ನಿಮ್ಮ
ಮಕ್ಕಳು ತಾನೇ? ಇಷ್ಟೆಲ್ಲ ಅಪರಾಧಗಳು
ಸ್ಪಷ್ಟವಾಗಿ ಕಣ್ಣು ಮುಂದಿದ್ದರೂ
ಕೊಲೆಗಡುಕರು ನಾವೇ ಎಂದು ದೂರುವುದು
ಹಿರಿಯರಾದ, ಬಲ್ಲವರಾದ ನಿಮಗೆ ಸರಿಯಲ್ಲ.

**ಕುಂತಿ** : ಪಾಂಚಾಲಿ. ಸಾಕು ನಿಲ್ಲಿಸು ನಿನ್ನ ವಾದ.
ನೊಂದವರನಿನ್ನಷ್ಟು ನೋಯಿಸುವುದು
ನ್ಯಾಯವಲ್ಲ ಮಗಳೆ. ಸಾವು ಸಮರಗಳು
ಮುಗಿದಿವೆ. ಅವುಗಳೊಂದಿಗೇ ವಿರಸಗಳು
ಕಡೆಯಾಗಬೇಕು. ಮನುಷ್ಯ, ಐಶ್ವರ್ಯ,
ಸಂಪತ್ತು, ಈ ರಾಜ್ಯ ಯಾವುದೂ ಚಿರವಲ್ಲ.
ಇಂದು ನಾವು ಗೆದ್ದ ಭೂಮಿ ನಮ್ಮದೆಂದು
ಭಾವಿಸುವುದು ಮೂರ್ಖತನ! ಭೂಮಿಯ
ನ್ನಾಳುವವರು ಎಷ್ಟೋ ಮಂದಿ! ಭೂಮಿ
ಮಾತ್ರ ಇರುತ್ತದೆ. ಭೂಮಿಯೊಡೆಯರು

ಮಾತ್ರ ಸರದಿಯಂತೆ ಆಳಿ ಹೋಗುತ್ತಾರೆ.
ಸುಮ್ಮನೆ ಮಾತನಾಡಿ ಪ್ರಯೋಜನವೇನು.
ಪಾಂಚಾಲಿ, ನಾನು ನಿನಗೆ ಹೇಗೊ ಈ ನನ್ನ
ಅಕ್ಕ ಗಾಂಧಾರಿಯೂ ನಿನಗಷ್ಟೆ ಕ್ಷಮೆಯ
ತೋರು ಮಗಳೆ, ಕ್ಷಮೆಯ ತೋರು.

(ಗಾಂಧಾರಿಯನ್ನು ಕುರಿತು)

ಅಕ್ಕ, ಪಾಂಚಾಲಿಯ ಮಾತುಗಳನ್ನು
ಮನಸ್ಸಿಗೆ ಹಚ್ಚಿಕೊಳ್ಳಬೇಡ.
ಅವಳ ನಾಲಿಗೆ ಮಾತ್ರವೇ ಹರಿತ
ಮನಸ್ಸು ತುಂಬ ಮೃದು.. ಆದರೆ
ತೋರಿಸಿಕೊಳ್ಳುವುದಿಲ್ಲ. ಅವಳು
ಮಾತ್ರ ತನ್ನೈವರು ಮಕ್ಕಳನ್ನು ಏಕಕಾಲದಲ್ಲಿ
ಕಳೆದುಕೊಳ್ಳಲಿಲ್ಲವೇ. ಮುಗ್ಧರಾದ ಆ
ಬಾಲಕರನ್ನು ಅಮಾನುಷವಾಗಿ
ಕೊಲೆಗೈಯ್ಯಲಿಲ್ಲವೇ ಅಶ್ವತ್ಥಾಮ?
ಎಲ್ಲರೂ ನೊಂದವರೆ. ನೋಯದಿರುವವ
ರಿಗಿಂತಲೂ ನೊಂದವರ ಸಂಖ್ಯೆಯೇ ಅಪಾರ.

ಮೇಳ : ಸತ್ಯವನೆ ನುಡಿಯುತಿಹರು
ಮನದೊಳಗೆ ಚಿಂತಿಸು ಸಮಾಧಾನದಲಿ.
ಪಾಂಡುಸುತರು ವಿನಯವಂತರು
ನಿಮ್ಮ ಮೀರುವವರಲ್ಲ. ಹಿರಿಯರು ನಿಮ್ಮಾಣತಿ
ಯೊಳಗೆ ನಡೆಯುವರು. ರಾಜ್ಯ ಸಿರಿಗಳ ಮೋಹ
ಪಟ್ಟ ಪದವಿಯ ಮೋಹ ಅವರಿಗಿಲ್ಲ ತಾಯೆ,
ಹಿರಿತಂದೆ ಧೃತರಾಷ್ಟ್ರನರಸುತನಲಿ
ಓಲಗಿಸಲೊಪ್ಪಿಹರು ಅವರು ದಿಟ.
ಧರ್ಮವೇ ಉಸಿರು ಧರ್ಮವೇ ಸರ್ವಸಿರಿ
ಧರ್ಮಕ್ಕಿಂತಲು ಮಿಗಿಲು ಅವರಿಗಿಲ್ಲವು ಏನು.

ಗಾಂಧಾರಿ : ಅಹುದಹುದು ನುಡಿವಿರಿ ಹೆಣ್ಣುಗಳೆ
ನೀವೆಂದಂತೆ ಧರ್ಮವವರದು
ಕರ್ಮ ನಮ್ಮದು. ದುರ್ಮತಿಗಳು
ಅನ್ಯಾಯಶೀಲರು ನಮ್ಮ ಮಕ್ಕಳು
ಆದರವರೀ ಐವರು ಸಾಧುಸಂಗತರು
ವಿಮಳ ಮತಿಗಳು ನಿರ್ಮಳರು

ಅದಕ್ಕೆ ನಮಗೇನೀ ಲೋಕದಲಿ ಕಾರ್ಯ
ಸಾವನೊಲಿದು ಸೇರುವೆವೆಮ್ಮ ಸಂತತಿಯ.

(ಎಂದು ದುಃಖಿಸಿ)

ಆದುದಾಯಿತು ವಾದ ಬೇಡಿನ್ನು
ಬನ್ನಿ ಓ ಹೆಣ್ಣುಗಳೆ ನಡೆಯಿಸಿರಿ
ಕೊಳಗುಳಕೆ ಕಾಣಬೇಕಿದೆ ನನಗೆ
ನನ್ನ ಪ್ರಿಯಸುತರ. ಶೋಕ ತರ್ಪಣ
ದಿಂದ ವಾತ್ಸಲ್ಯ ಋಣವನ್ನು ಸಲ್ಲಿಸುವೆನು.
ಹೆಣರಾಶಿಗಳ ನಡುವೆ ಕಾಣಬಹುದೆ
ನನ್ನ ಪ್ರಿಯ ದುರ್ಯೋಧನನ? ದುಶ್ಯಾಸನನ?
ಸಾವ ಕ್ಷಣಗಳಲಿ ಎಷ್ಟು ಹಲುಬಿದನೋ
ಈ ದುರ್ದೈವಿ ತಾಯ್ಗಾಗಿ. ಕಲಿಯವನು
ಬಲಿದವನು ಸಾವನೆಂತಪ್ಪಿದನೊ
ಸೋಲನೆಂತೊಪ್ಪಿದನೋ!...... ನನ್ನವನು
ಅಭಿಮಾನಿ, ಛಲಗಾರ, ವೀರ, ಪರಮವೀರ.
ದೈವಹತನಾದನಲ್ಲದೆ ಶತ್ರುಹತನಲ್ಲವನು.
ಬನ್ನಿ ಬೇಗದಿ ಹೆಣ್ಣುಗಳೆ. ಇವರು ಈ
ಪಾಂಡವರು, ಪಾಂಚಾಲಿ ಕುಂತಿಯರು
ಇರಲಿ, ಮೆರೆಯಲಿ ಸ್ಮಶಾನವಾದ ಈ
ಸಾಮ್ರಾಜ್ಯವಾಳಲಿ. ಬೇಡೆಮಗೆ ಇವರ ದಯಾಭಿಕ್ಷೆ.
ಪಾಂಚಾಲಿ ಪೌರುಷವೆ ಜಗವಾಳಲಿ.
ಆಳು ಮೋರೆ ಹೆಂಗಸರು ನಮಗಿದೇ ಪಾಡು
ನೊಂದಿದ್ದರೂ ನಿನಗೆ ಓ ಪಾಂಚಾಲಿ
ಕಡೆಯಲ್ಲಿ ಹರಕೆಯನು ನೀಡುವೆನು ನಿನಗೆ.
ನಿನ್ನಂಥ ಹೆಣ್ಣುಗಳು ಶಾಪಗಳು
ಸಮರಗಳಾಗಿ ಸೃಷ್ಟಿಯನು ಸಮೆಯದಿರಲಿ
ನರಮೇಧದಲಿ ಭೂಮಿ ನವೆಯದಿರಲಿ.

(ಎಂದು ಹೇಳುತ್ತಾ ಹೊರಡುವಳು. ಮೇಳವೂ ಅವಳನ್ನೇ ಹಿಂಬಾಲಿಸುತ್ತದೆ. ಕುಂತಿ. ಪಾಂಚಾಲಿಯರು ಅವರು ಹೋದತ್ತಲೇ ಶೂನ್ಯದೃಷ್ಟಿಯಿಂದ ನೋಡುತ್ತಾ ನಿಲ್ಲುತ್ತಾರೆ).

OO

# ಪಾತ್ರವರ್ಗ

| | | |
|---|---|---|
| ತಾಯಿ | : | ಪಾದ್ರಿಯ ತಾಯಿ |
| ಪಾಲ್ | : | ಪಾದ್ರಿ (ಏಗ್ನೀಸ್‌ಳ ಪ್ರಿಯಕರ) |
| ಏಗ್ನೀಸ್ | : | ಪಾದ್ರಿಯ ಪ್ರೇಯಸಿ |
| ಆ್ಯಂಟಿಯೋಕಸ್ | : | ಪಾರುಪತ್ತೆಗಾರ (ಪಾದ್ರಿಯ ಸಹಾಯಕ) |
| ಮಿಸೆಸ್ ಮಾರ್ಟಿನ್ | : | ಆ್ಯಂಟಿಯೋಕಸ್‌ನ ತಾಯಿ |
| ಕಿಂಗ್ ನಿಕೊಡಿಮಸ್ | : | ಮುದುಕ ಶಿಕಾರಿ |
| ಕಾವಲುಗಾರ | : | |

ಮೇಳ

ಊರಿನ ಜನಗಳು

ಏಗ್ನೀಸ್‌ಳ ಕೆಲಸದವಳು

ನೀನಾಮಾಸಿಯಾಳ ತಾಯಿ

ನಿಕೋಡಿಮಸ್ ಪಾನಿಯ

ಮೊಮ್ಮಗಳು ಮತ್ತು ಇತರರು

# ಅಂಕ – ೧

## ದೃಶ್ಯ – ೧

(ಒಂದು ನೀರವ ರಾತ್ರಿ. ಒಂದಕ್ಕೊಂದು ಹೊಂದಿಕೊಂಡಂತೆ ಎರಡು ಕೋಣೆಗಳು. ಹೊರಗಡೆ ಸುಯ್ಯೆಂದು ಬೀಸುತ್ತಿರುವ ಗಾಳಿ. ಇಡೀ ಪರಿಸರದಲ್ಲಿ ಒಂದು ಬಗೆಯ ಭೀತಿ ಆವರಿಸಿದಂತಿದೆ. ಒಂದು ಕೋಣೆಯಲ್ಲಿ ತಾಯಿ ಮಂಚದ ಮೇಲಿಂದ ಎದ್ದು ಕೈ ದೀಪವನ್ನು ತೆಗೆದುಕೊಳ್ಳುತ್ತಾಳೆ. ಇನ್ನೊಂದು ಕೋಣೆಯ ಬಾಗಿಲಿನ ಬಳಿಗೆ ಮೆಲ್ಲಗೆ ಹೆಜ್ಜೆಯಿಡುತ್ತ ಬಂದು ಬಾಗಿಲಿಗೆ ಕಿವಿಯಾನಿಸಿ ಕೇಳುತ್ತಾಳೆ. ಮರಳಿ ತನ್ನ ಹಾಸಿಗೆಯೆಡೆಗೆ ಹಿಂದಿರುಗುತ್ತಾಳೆ.)

**ತಾಯಿ** : (ಯೋಚನಾಮಗ್ನ ಗುಂಗಿನಲ್ಲಿ) ಹೌದು! ಹೌದು! ಇಂತಹದೇ ಬೀಸುವ ಗಾಳಿಯ ರಾತ್ರಿಗಳಲ್ಲೇ ಸೈತಾನ ಆತ್ಮಗಳನ್ನು ಹುಡುಕಿಕೊಂಡು ಬರುತ್ತಾನೆ! ಇಲ್ಲ! ಇಲ್ಲ! ಸೈತಾನ ಈಗಾಗಲೇ ನನ್ನ ಮನೆ ಹೊಕ್ಕು ನನ್ನ ಪಾಲ್‌ನ ಬಟ್ಟಲಿನಿಂದಲೇ ರಸ ಹೀರುತ್ತಿದ್ದಾನೆ. ಅದೇಕೆ ನನ್ನ ಪಾಲ್ ಇತ್ತೀಚೆಗೆ ಇಷ್ಟೊಂದು ಬದಲಾಯಿಸಿದ್ದಾನೆ? ಪಾದ್ರಿಗಳಿಗೆ ವಿರುದ್ಧವಾದ, ಸಲ್ಲದ ಕೇಶಾಲಂಕಾರಗಳಲ್ಲಿ ಗಂಟೆಗಟ್ಟಲೆ ಹೆಂಗಸಿನಂತೆ ಕಾಲ ಕಳೆಯುತ್ತಾನೆ. ಉಗುರುಗಳನ್ನು ಸ್ವಚ್ಛಗೊಳಿಸಿ ಬಣ್ಣ ಹಚ್ಚಿಕೊಳ್ಳುತ್ತಾನೆ. ಕೇಶ ಮುಂಡನದ ಪವಿತ್ರ ಗುರುತನ್ನು ಮರೆಮಾಚುವಂತೆ ಬಾಚಿಕೊಳ್ಳುತ್ತಾ ಕನ್ನಡಿಯ ಮುಂದೆ ನಿಲ್ಲುತ್ತಾನೆ. ಪರಿಮಳ ದ್ರವ್ಯಗಳನ್ನು ಸಿಂಪಡಿಸಿಕೊಂಡು ಗಮಗಮಿಸುತ್ತಾನೆ.... ಅಗೋ ಎಷ್ಟು ನಿಚ್ಚಳವಾಗಿ ಕಾಣುತ್ತಿದ್ದಾನೆ! ಆಹ್! ನನ್ನ ಪಾಲ್ ನಿಜಕ್ಕೂ ಕಣ್‌ಕುಕ್ಕುವ ರೂಪವಂತ. ನಾನೆಂದೂ ಅವನನ್ನು ಇಷ್ಟು ಸುಂದರವಾಗಿ ಕಾಣುವುದನ್ನು ನೋಡಿರಲಿಲ್ಲ..... ಅರೆ, ಕಳ್ಳ ಹೆಜ್ಜೆಗಳಿಟ್ಟು ಅವನ ಕೆಲಸಕ್ಕೆ ತೊಡಗಿದ್ದಾನೆ. ಸೈತಾನ. ಹೌದು... ಅನುಮಾನವೇ ಇಲ್ಲ. ಸೈತಾನ ನಿಜಕ್ಕೂ ಪ್ರವೇಶಿಸುತ್ತಿದ್ದಾನೆ. ಆ ಪಿಶಾಚನಿಯ ಬಳಿಗೇ ಹೊರಟಿರಬೇಕು!.... ನನ್ನ ಪಾಲ್‌ನನ್ನು

ತಡೆಯಲೇಬೇಕು.... ಅವನು ಅಧಃಪತನ ಆಗುವದನ್ನು ತಡೆಗಟ್ಟಲೇಬೇಕು... ಅದೋ ಬೀಸುವ ಗಾಳಿ ಜೋರಾಗುತ್ತಿದೆ..... ಅನುಮಾನವೇ ಇಲ್ಲ. ಅವನೆ...... ಅವನೆ..... ಏನಾದರೂ ಮಾಡಿ ಸೈತಾನನನ್ನು ಎದುರಿಸಿ ನನ್ನ ಮಗನನ್ನು ಉಳಿಸಿಕೊಳ್ಳಲೇಬೇಕು...ಅವನು ಯಾವ ನರಕಕ್ಕೆ ಹೋದರೂ ನಾನು ಅವನ ಹಿಂದೆ ಹೋಗುತ್ತೇನೆ. (ಎಂದು ದೀಪವನ್ನು ಮತ್ತೆ ಮೇಜಿನ ಮೇಲಿಟ್ಟು ಮೆಟ್ಟಿಲಿಳಿದು ಪಾಲ್‌ನನ್ನು ಅನುಸರಿಸುತ್ತಾಳೆ. ಹಿತ್ತಿಲಿನಿಂದ ಹೆಜ್ಜೆ ಸಪ್ಪಳ ಕೇಳಿಸುತ್ತದೆ)

(ರಂಗದ ಮೇಲೆ ಸ್ವಲ್ಪ ಹೊತ್ತು ನಿಶ್ಯಬ್ಧ ಪರಿಸರ. ಮೋಡಗಳ ಮರೆಯಿಂದ ಮೂಡುವ ಚಂದ್ರ ಕಾಣಿಸುತ್ತಿರುತ್ತದೆ....ತಾಯಿಯ ಮರು ಪ್ರವೇಶ....ತುಂಬ ದಣಿದಿದ್ದಾಳೆ. ಬಂದವಳೇ ಮೆಟ್ಟಿಲ ಮೇಲೆ ಕುಸಿದು ಕೂರುತ್ತಾಳೆ. ದುಃಖ ಉಕ್ಕಿ ಬರುತ್ತದೆ)

**ತಾಯಿ** : (ಆರ್ತನಾಗಿ) ಓ ದೇವರೇ! ದೇವರೇ ರಕ್ಷಿಸು (ಎಂದು ತನ್ನ ನೆರಳನ್ನೇ ನೋಡಿ ಬೇರೆ ಯಾರೋ ಎಂದು ಭ್ರಮಿಸಿ ಆತನೊಂದಿಗೆ ಮಾತನಾಡುವವಳಂತೆ)... ಅವನನ್ನು ಉಳಿಸಲು ನಾನೇನು ಮಾಡಬೇಕು?

**ಧ್ವನಿ** : ಏನು ಮಾಡಬೇಕೆಂದರೆ?.... ಅವನು ಬರುವವರೆಗೆ ಇಲ್ಲೇ ಕುಳಿತಿರು, ಮಾರಿಯಾ. ಅವನು ಬಂದ ಕೂಡಲೇ ಸ್ವಲ್ಪವೂ ಹಿಂಜರಿಯದೆ ನಿನಗೆ ಹೇಳಬೇಕಾದ್ದನ್ನು ಅವನೊಂದಿಗೆ ಹೇಳಿ ಬಿಡು. ಮನಸ್ಸಿನಲ್ಲಿಯೇ ಚಿಂತಿಸಿ ಕೊರಗಬೇಡ. ಅದುಮಿಟ್ಟುಕೊಳ್ಳುವ ಕೊರಗು ಅಪಾಯವಾದೀತು!

**ತಾಯಿ** : ಸಾಧ್ಯವಿಲ್ಲ. ಅವನು ಕೋಪಗೊಳ್ಳುತ್ತಾನೆ. ನನ್ನ ಮಾತುಗಳು ಅನುಮಾನಗಳು ಸುಳ್ಳೆಂದು ನಿರಾಕರಿಸುತ್ತಾನೆ.... ಅದಕ್ಕಿಂತ ಬಿಷಪ್ಪರ ಬಳಿಗೆ ಹೋಗಿ ನಮ್ಮನ್ನು ಈ ಅಧೋಗತಿಗಿಳಿಸುತ್ತಿರುವ ಜಾಗದಿಂದ ದೂರ ಕಳಿಸುವಂತೆ ಬೇಡಿಕೊಳ್ಳುತ್ತೇನೆ. ಅವರಿಗೆ ನಾನು ಹೇಳುವುದೆಲ್ಲ ಅರ್ಥವಾಗುತ್ತದೆ. ದೇವರ ಪ್ರತಿನಿಧಿಯಾದ ಅವರಿಗೆ ತಿಳಿಯದ್ದು ಯಾವುದೂ ಇಲ್ಲ.... ಅವರ ಪಾದಗಳ ಮೇಲೆ ಬಿದ್ದು ಬೇಡಿಕೊಳ್ಳುತ್ತೇನೆ..... ನನಗೆ ಅವರು ಏಸುಪ್ರಭುವಿನಂತೆಯೇ ಕಾಣಿಸುತ್ತಾರೆ. ದರಿದ್ರ ಪ್ರದೇಶವಾಗಿದ್ದ ಈ ಜಾಗಕ್ಕೆ ಸುಮಾರು ನೂರು ವರುಷವಾದರೂ ಒಬ್ಬ ಪಾದ್ರಿ ಬರಲಿಲ್ಲ, ಆದ್ದರಿಂದಲೇ ಜನರು ದೇವರನ್ನೇ ಮರೆತುಬಿಟ್ಟಿದ್ದರು. ಕೊನೆಗೊಬ್ಬ ಪಾದ್ರಿ ಬಂದ. ಆರಂಭದಲ್ಲಿ ಆತ ಎಂತಹ ಆದರ್ಶ ವ್ಯಕ್ತಿಯಾಗಿದ್ದ. ೫೦ ರ ಪ್ರಾಯವಾಗುತ್ತಿದ್ದಂತೆ ಸೈತಾನನ ಪ್ರತಿರೂಪವಾಗಿಬಿಟ್ಟಿದ್ದ. ಕೋಪ, ತಾಪ, ದರ್ಪಗಳಿಂದ ಕೂಡಿದ ದುಷ್ಟ ಶಕ್ತಿಯಾಗಿಬಿಟ್ಟಿದ್ದ. ಅವನ ಉದ್ಧಟತೆ, ಸ್ವೇಚ್ಛಾಚಾರಗಳನ್ನು ತಡೆಯುವವರೇ ಇಲ್ಲದೆ ಹೋದರು. ಏಕೆಂದರೆ ಸೈತಾನನೇ ಅವನನ್ನು

ರಕ್ಷಿಸುತ್ತಿದ್ದಾನೆಂದು ಜನ ನಂಬಿದ್ದರು. ಕೊನೆಗೆ ಒಂದು ದಿನ ಆತ ಕಾಯಿಲೆಯಿಂದ ನರಳುತ್ತ ಸತ್ತ. ಜನ ಹೆದರಿ ಅವನ ಸಹಾಯಕ್ಕೆ ಹೋಗಲಿಲ್ಲ. ಸೈತಾನನೇ ಅವನ ಅಂತ್ಯ ಸಂಸ್ಕಾರ ಮಾಡಿ ಅಸ್ಥಿಗಳನ್ನು ಸಾಗಿಸಲು ಸುರಂಗ ಕೊರೆದಿದ್ದಾನೆ. ತನ್ನ ನಂತರ ಯಾವೊಬ್ಬ ಪಾದ್ರಿಯೂ ಈ ಮನೆಗೆ ಬರದಿರಲೆಂದು ಪ್ರೇತಾತ್ಮ ಈಗ ಅಂತರ್‌ಪಿಶಾಚಿಯಾಗಿ ಅಲೆಯುತ್ತಿದೆಯಂತೆ..... ಅವರು ಹೇಳುವುದು ನಿಜವಿರಬೇಕು. ನನ್ನ ಪಾಲಿಗೆ ಶಾಪ ತಟ್ಟಿದೆ, ಒಬ್ಬ ಹೆಂಗಸಿನ ಬಲೆಗೆ ಬಿದ್ದು ನಾಶವಾಗುವುದನ್ನು ತಪ್ಪಿಸಲು ನಮ್ಮನ್ನು ಇಲ್ಲಿಂದ ಕಳಿಸಿಬಿಡಿ ಎಂದು ಬೇಡಿಕೊಳ್ಳುತ್ತೇನೆ..... ಈಗ ಅವನು ಬರಲಿ.... ನಿಲ್ಲಿಸಿ ಕೇಳುತ್ತೇನೆ, ಎಲ್ಲಿಗೆ ಹೋಗಿದ್ದ? ಎಂದು

(ಆ ಮಾತು ಮುಂದುವರಿಯುವಷ್ಟರಲ್ಲಿ ಜೋರಾಗಿ ಗಾಳಿ ಬೀಸುತ್ತದೆ. ಯಾರದೋ ಹೆಜ್ಜೆ ಸಪ್ಪಳ.... ನಿಧಾನವಾಗಿ ಹತ್ತಿರವಾಗುತ್ತಿದೆ. ಆ ದಿಕ್ಕಿನಲ್ಲಿ ಬೆಳಕು ಬೀಳುತ್ತದೆ. ಬೆಳಕಿನಲ್ಲಿ ಮನುಷ್ಯನ ಆಕಾರ ಸ್ಪಷ್ಟವಾಗುತ್ತದೆ. ತಾಯಿಯ ಕಣ್ಣಿಗೆ ಆ ವ್ಯಕ್ತಿ ಬಿದ್ದದ್ದೇ ಚಿಟ್ಟನೆ ಚೀರುತ್ತಾಳೆ.)

**ತಾಯಿ** : (ಭಯದಿಂದ) ಯಾರು..... ಯಾರದು.... ನಿಲ್ಲು..... ನಿಲ್ಲು ಇಲ್ಲಿಗೆ ಬರಬೇಡ, ಬರಬೇಡ (ಎಂದು ಕಿರುಚಿ ಹೇಳುತ್ತಿದ್ದರೂ ಆ ವ್ಯಕ್ತಿ ಮೆಲ್ಲ ಮೆಲ್ಲನೆ ಹತ್ತಿರವಾಗುತ್ತಾನೆ. ಕುರುಚಲು ಗಡ್ಡ, ಕೊಳಕು ಬಟ್ಟೆ, ವಿಕಾರವಾದ ಮುಖ, ಕುಳ್ಳಗೆ, ದಪ್ಪಕ್ಕೆ ಇರುವ ದೇಹ, ಸಿಗರೇಟು ಸೇದಿ ಹಳದಿಗಟ್ಟಿದ ಹಲ್ಲು, ತುಟಿಗಳಿಂದ ಹೊಮ್ಮುತ್ತಿರುವ ವಿಕಾರವಾದ ನಗೆ. ಆತ ಹಿಂದಿನ ಪಾದ್ರಿ ಎಂಬುದನ್ನು ತಾಯಿ ಗುರುತಿಸುತ್ತಾಳೆ.) ನೀನು!..... ನೀನು! ಸತ್ತು ಹೋಗಿರುವೆಯಲ್ಲ!!

**ವ್ಯಕ್ತಿ** : ಮಾರಿಯಾ, ನೀನೇನೋ ಕನಸು ಕಾಣುತ್ತಿಲ್ಲವಷ್ಟೇ! ನೀನು ಬದುಕಿರುವುದು ಎಷ್ಟು ಸತ್ಯವೋ ನಾನು ಬದುಕಿರುವುದೂ ಅಷ್ಟೇ ಸತ್ಯ. ನಿನ್ನನ್ನು ಮೋಸ ಮಾಡಿಕೊಳ್ಳಲು ಹೀಗೆ ಹೇಳುತ್ತಿರುವೆಯೆಂಬುದು ನನಗೆ ಗೊತ್ತು..... ಯಾಕೆ ನಂಬಿಕೆ ಬರುತ್ತಿಲ್ಲವೇನು?.... ಇರಲಿ. ಅತಿಥಿಯನ್ನು ಕುಳಿತುಕೊಳ್ಳಲು ಹೇಳುವುದಿಲ್ಲವೇ ಮಾರಿಯಾ?! (ವ್ಯಂಗ್ಯನಗೆ)

**ತಾಯಿ** : (ಸ್ತಬ್ಧಳಾಗಿದ್ದರೂ ಯಾಂತ್ರಿಕವಾಗಿ ಒಂದು ಸ್ಟೂಲನ್ನು ಎಳೆದು ಬೆಂಕಿಯ ಪಕ್ಕದಲ್ಲಿ ಹಾಕಿ) ಕುಳಿತುಕೋ.

**ವ್ಯಕ್ತಿ** : ಧನ್ಯವಾದಗಳು..... ಮಾರಿಯಾ ಹೇಗಿದ್ದರೂ ನಿನಗೇನೂ ಈಗ ಕೆಲಸವಿಲ್ಲ. ನನ್ನ ಈ ಕಾಲುಚೀಲಗಳನ್ನಾದರೂ ಸ್ವಲ್ಪ ಸರಿಮಾಡಿಕೊಡು. ನನ್ನ ನೋಡಿಕೊಳ್ಳದ ಯಾವ ಹೆಣ್ಣೂ ಇಲ್ಲ.

**ತಾಯಿ** : (ಸ್ವಗತ) ಇವನು ಸೈತಾನನೇ ಸರಿ. ಆದರೆ ತಾನು ಬದುಕಿದ್ದೇನೆಂದು ಹೇಳುತ್ತಿದ್ದಾನೆ. ನಾನೇನೂ ಕನಸು ಕಾಣುತ್ತಿಲ್ಲವಷ್ಟೆ? ಇಲ್ಲ.... ಇಲ್ಲ.... ಸಾಧ್ಯವಿಲ್ಲ. ಇದು ಖಂಡಿತ ದೆವ್ವವೇ. ಪಾದ್ರಿಯ ವೇಷ ತೊಟ್ಟು ನನ್ನನ್ನು ವಂಚಿಸಲು ಬಂದಿದೆ. (ಪ್ರಕಟ) ನಿನಗೇಕೆ ಕಾಲುಚೀಲಗಳು? ನೀನು ಖಂಡಿತವಾಗಿ ಸತ್ತು ಹೋಗಿದ್ದೀಯ. ಜಗತ್ತೇ ಅದನ್ನು ಸಾರಿ ಹೇಳುತ್ತಿದೆ.

**ವ್ಯಕ್ತಿ** : (ಕೋಪದಿಂದ) ನಿನಗೆಲ್ಲೋ ತಲೆ ಕೆಟ್ಟಿರಬೇಕು. ನಾನು ಸತ್ತಿದ್ದೇನೆಂದು ನಿನಗೆ ಹೇಗೆ ಗೊತ್ತು?...ಮೊದಲೇ ಹೇಳಿಲ್ಲವೇ ನೀನು ಬದುಕಿರುವಷ್ಟೆ ಸತ್ಯ. ನಾನು ಬದುಕಿರುವುದು! ನಿನ್ನ ಎದುರಿಗೇ ಕುಳಿತಿದ್ದೇನಲ್ಲ! ನಿನಗೆ ನಂಬಿಕೆ ಬರುತ್ತಿಲ್ಲವಾದರೆ, ಇನ್ನು ಸ್ವಲ್ಪ ಕಾಲದಲ್ಲಿಯೇ ನಿನ್ನನ್ನೂ ನಿನ್ನ ಮಗನನ್ನೂ ಈ ಪ್ಯಾರಿಷ್‌ನಿಂದ ಹೊರದೂಡುತ್ತೇನೆ. ಆಗಲಾದರೂ ನಿನಗೆ ನಾನು ಬದುಕಿರುವುದರಲ್ಲಿ ವಿಶ್ವಾಸ ಬಂದೀತು.... ಮಾರಿಯಾ ನಿನ್ನ ದುರಾಸೆಯ ಫಲ ಏನಾದೀತೆಂಬುದನ್ನು ನೋಡುತ್ತಿರು. ನಿನ್ನ ಮಗನಿಗೆ ನಿನ್ನ ಗಂಡನ ಕಸುಬನ್ನೇ ಕಲಿಸಿ ನೀವಿರುವ ಜಾಗದಲ್ಲೇ ನೆಮ್ಮದಿಯಾಗಿ ಇರಬೇಕಾಗಿತ್ತು. ಆದರೆ ನಿನ್ನ ಮಹತ್ವಾಕಾಂಕ್ಷೆ, ಸೇವಕಿಯಾಗಿದ್ದವಳು ಒಡತಿಯಾಗುವ ಪ್ರಯತ್ನದತ್ತ ತಳ್ಳಿತು. ನಿನ್ನ ಸ್ವಾರ್ಥ, ನಿನ್ನ ಮಹಾತ್ವಾಕಾಂಕ್ಷೆಗಳು ನಿನ್ನ ಮಗನನ್ನು ಬಲಿ ತೆಗೆದುಕೊಳ್ಳದೆ ಬಿಡದು.... ಈಗ ನೋಡುತ್ತಿರು, ನಿಮ್ಮ ಕಥೆ ಯಾವ ಕೊನೆ ಮುಟ್ಟುತ್ತದೆಯೋ!

**ತಾಯಿ** : (ವಿನಯದಿಂದ) ಬೇಡ, ಬೇಡ! ನನ್ನ ಮಗನನ್ನು ಏನೂ ಮಾಡಬೇಡ. ತೊಂದರೆ ತಾಪತ್ರಯಗಳನ್ನು ಮೈಮೇಲೆ ಹಾಕಿಕೊಂಡು ಇಲ್ಲಿಯೇ ಇರಬಕೆಂಬುದು ನಮ್ಮಾಸೆಯಲ್ಲ. ನಮಗೂ ಆದಷ್ಟು ಬೇಗ ಇಲ್ಲಿಂದ ಹೋಗಬೇಕೆಂದಿದೆ. ನೀನು ಭೂತವಾದರೂ ಆಗಿರು; ಮನುಷ್ಯನಾದರೂ ಆಗಿರು. ಏನಾದರೂ ಸರಿ. ಕೆಲವೇ ದಿನ; ತಾಳ್ಮೆಯಿಂದಿರು. ನಾವು ಖಂಡಿತ ಹೊರಟು ಹೋಗುತ್ತೇವೆ. ನಮ್ಮ ಮೇಲೆ ಸೇಡು ತೀರಿಸಿಕೊಳ್ಳುವ ಛಲ ಬೇಡ.

**ವ್ಯಕ್ತಿ** : ಎಲ್ಲಿಗೇಂತ ಹೋಗ್ತೀಯಾ, ಮೊದಲು ಅದನ್ನು ಹೇಳು. ಎಲ್ಲಿ ಹೋದರೂ ಇದೇ ರೀತಿ ಆಗುತ್ತದೆ. ಆದ್ದರಿಂದ ಎಲ್ಲವನ್ನೂ ತಿಳಿದಂಥವರ, ತಾನೇನು ಮಾಡುತ್ತಿದ್ದೇನೆಂದು ಅರ್ಥಮಾಡಿಕೊಳ್ಳುವಂಥವರ ಬಳಿಗೆ ಹೋಗಿ ಅವರ ಸಲಹೆ ಕೇಳು. ನಿನ್ನ ಇಷ್ಟದಂತೆ ಎಲ್ಲವನ್ನು ತಿದ್ದುವುದಕ್ಕೆ ಹೋಗಬೇಡ. ಪಾಲ್‌ನ ತಂಟೆಗಂತೂ ಮೊದಲೇ ಹೋಗಬೇಡ. ಅವನ

ಪಾಡಿಗೆ ಅವನನ್ನು ಬಿಟ್ಟುಬಿಡು. ಅವನು ಹೆಂಗಸಿನ ಸಹವಾಸ ಮಾಡುತ್ತಿದ್ದರೆ ಮಾಡಲಿ. ಇಲ್ಲದೆ ಇದ್ದರೆ ಅವನಿಗೂ ನನ್ನದೇ ಗತಿ ಬರುತ್ತದೆ. ಸಣ್ಣವನಿದ್ದಾಗ ನನಗೆ ಹೆಂಗಸರ ನೆರಳೂ ಬೀಳುತ್ತಿರಲಿಲ್ಲ. ನನಗೆ ಯಾವುದೇ ಸುಖ ಭೋಗಗಳ ಆಮಿಷವಿರಲಿಲ್ಲ. ನನ್ನೆಲ್ಲ ಧ್ಯೇಯವೂ ಸ್ವರ್ಗವನ್ನು ಪಡೆಯುವುದರ ಕಡೆಗೇ ಇತ್ತು. ಅದನ್ನು ಪಡೆಯಲು ದೇವರನ್ನು ಆರಾಧಿಸಿದೆ. ಅವನನ್ನು ದಲ್ಲಾಳಿಯಾಗಿ ಮಾಡಿಕೊಳ್ಳಬೇಕಾಯಿತು. ಆದರೆ ಈ ಭೂಮಿಯಲ್ಲೇ ಸ್ವರ್ಗ ಇದೆ, ಎನ್ನುವುದನ್ನು ಎಷ್ಟೋ ಕಾಲ ಅರಿಯದೆ ಹೋದೆ. ಅದು ಅರಿವಿಗೆ ಬರುವಷ್ಟರಲ್ಲಿ ಕಾಲ ಮಿಂಚಿ ಹೋಗಿತ್ತು. ನನ್ನಲ್ಲಿ ಸ್ವಲ್ಪವೂ ಪ್ರಾಣವಿರಲಿಲ್ಲ. ಆ ಸ್ವರ್ಗವನ್ನು ಕೈಗೆಟುಕಿಸಿಕೊಳ್ಳಬೇಕೆಂದು ಒಂದೇ ಥಲ ಮೂಡಿ ವೈನ್ ಕುಡಿಯಲು ಆರಂಭಿಸಿದೆ. ಈ ಪ್ರದೇಶದ ಎಲ್ಲ ಪುಂಡುಪೋಕರಿಗಳನ್ನು ಗುಡ್ಡೇ ಹಾಕಿಕೊಂಡು ಸಿಗರೇಟು ಸೇದುವ, ಇಸ್ಪೀಟು ಆಡುವ, ಹಾದರ ಮಾಡುವ – ಎಲ್ಲ ಬಗೆಯ ಚಟಗಳಿಗೆ ಜೋತುಬಿದ್ದೆ. ಇದರಿಂದ ನನಗೇನೂ ದುಃಖವೆನಿಸಲಿಲ್ಲ. ಬದಲಾಗಿ ಅವರ ಸಹವಾಸದಲ್ಲಿ ನಾನೆಷ್ಟೋ ಸುಖಿಯಾಗಿದ್ದೇನೆ ಎನಿಸಿತು. ನನ್ನ ದೃಷ್ಟಿಯಲ್ಲಿ ಆ ಹುಡುಗರು ತಮ್ಮ ಎಟುಕಿಗೆ ಸಿಗುವಂತಹ ಎಲ್ಲ ಬಗೆಯ ಜೀವನಾನುಭವಗಳನ್ನು ಸ್ವೀಕರಿಸಿ ಸಂತೋಷದಿಂದ ಬದುಕುತ್ತಿರುವ ಪ್ರಾಮಾಣಿಕರು ಎನಿಸಿತು. ಅವರ ಜೊತೆಗೆ ಇದ್ದಷ್ಟು ಕಾಲವೂ ನನಗೆ ಸ್ವರ್ಗದ ಅನುಭವವೇ ಆಗುತ್ತಿತ್ತು. ಜೀವನದ ಯಾವುದೇ ಬಗೆಯ ಆತಂಕಗಳನ್ನು ಹಚ್ಚಿಕೊಳ್ಳದೇ ಮುಕ್ತವಾಗಿ, ಉಲ್ಲಾಸವಾಗಿ ದಿನಗಳನ್ನು ಕಳೆಯುತ್ತಿದ್ದರು. ಅವರಲ್ಲಿ ಯಾರೂ ಶಾಲೆಗೆ ಹೋಗುವ ಚಿಂತೆಯನ್ನು ಹೊಂದಿರಲಿಲ್ಲ. ಅದಕ್ಕೇ ಅವರ ಖುಷಿಗೆ ಕೊನೆ ಮೊದಲಿರಲಿಲ್ಲ.

**ತಾಯಿ** : (ಅರ್ಥವಾಗದಂತೆ) ಈ ಪುರಾಣವನ್ನೆಲ್ಲ ನನಗೇಕೆ ಹೇಳುತ್ತಿದ್ದಿ? ನಿನ್ನ ಜೀವನದ ಬಗ್ಗೆ ನಾನೇನೂ ಪ್ರಶ್ನಿಸಲಿಲ್ಲ.... ಆದರು ನೀನು ಹೇಳುವುದೆಲ್ಲ ನಿಜವಿರಲೂಬಹುದು.... ಬರೀ ಸೋಗು ಆಗಿರಲೂಬಹುದು. ನಾನೇನೂ ಅಷ್ಟು ತಿಳಿವಳಿಕೆ ಇರುವ ಹೆಂಗಸಲ್ಲ. ಇದೆಲ್ಲ ನನಗೆ ಅರ್ಥವಾಗುವುದಿಲ್ಲ. ನನಗೆ ತಿಳಿದ ಮಟ್ಟಿಗೆ ದೇವರು ನಮ್ಮನ್ನು ಈ ಜಗತ್ತಿಗೆ ಕಷ್ಟ ಪಡಲೆಂದು ಕಳಿಸಿದ್ದಾನೆ. ಆದ್ದರಿಂದ ಸ್ವಲ್ಪವೂ ಗೊಣಗಾಟವಿಲ್ಲದೆ ಅನುಭವಿಸುವುದಷ್ಟೇ ನಮ್ಮ ಕೆಲಸ. ಅದಕ್ಕಿಂತ ಬೇರೇನೂ ನನಗೆ ತಿಳಿಯುವುದಿಲ್ಲ.

**ವ್ಯಕ್ತಿ** : ಇಲ್ಲ ಮಾರಿಯಾ ನೀನು ತಪ್ಪು ತಿಳಿದಿದ್ದೀ. ಈ ಜಗತ್ತಿನಲ್ಲಿರುವ ಸುಖವನ್ನು ಹನಿಹನಿಯಾಗಿ ಪೂರ್ತಿಯಾಗಿ ಅನುಭವಿಸಲೆಂದೇ

ದೇವರು ನಮ್ಮನ್ನು ಇಲ್ಲಿಗೆ ಕಳಿಸಿರುವುದು. ಅದನ್ನು ಅನುಭವಿಸಿ ಆನಂದಿಸಲು ಬಾರದವರನ್ನು ಮಾತ್ರವೇ ಅವನು ಶಿಕ್ಷಿಸುತ್ತಾನೆ; ಸಹಿಸಲಾಗದ ಕಷ್ಟಗಳನ್ನು ಕೊಡುತ್ತಾನೆ. ನೀನೊಬ್ಬ ಮೂರ್ಖ ಹೆಂಗಸು. ಸುಂದರವಾದ ಜಗತ್ತನ್ನು ಸೃಷ್ಟಿಸಿ ಮನುಷ್ಯನ ಆನಂದಕ್ಕೆಂದೇ ಬಿಟ್ಟಿದ್ದಾನೆ. ಆದರೆ ಅದನ್ನು ನಿನ್ನಂತಹ ದಡ್ಡ ಮಂದಿ ಅರ್ಥ ಮಾಡಿಕೊಳ್ಳಲಾಗದೆ ಹೆಣಗಾಡುತ್ತಿದ್ದಾರೆ. ನಮಗಾಗಿ ತಿಳಿಯಲಾಗದ್ದನ್ನು ತಿಳಿಸಿಕೊಡಲೆಂದೇ ಬಂದಿದ್ದೇನೆ. ಅದರ ಮೇಲೆ ನಿನ್ನಿಷ್ಟ....ಹೋಗುವುದಕ್ಕೆ ಮೊದಲು ಮತ್ತೊಮ್ಮೆ ಎಚ್ಚರಿಸಿ ಹೇಳುತ್ತಿದ್ದೇನೆ. ನೀನು ಮತ್ತು ನಿನ್ನ ಪಾಲ್ ಈ ಜಾಗವನ್ನು ಬಿಟ್ಟು ಹೋಗದಿದ್ದರೆ ನಿಮಗೆ ತೊಂದರೆ ತಪ್ಪಿದ್ದಲ್ಲ.

ತಾಯಿ : (ಹೆದರಿ ನಡುಗುತ್ತ, ತನ್ನಲ್ಲಿಯೇ) ದೇವರಾಣೆಗೂ ಇವನನ್ನು ಸೈತಾನನೇ ಕಳಿಸಿರಬೇಕು, ಪಾಲ್ ಹಾಳಾಗಲೆಂಬಂತೆ....! 'ಅವನನ್ನು ಅವನ ಪಾಡಿಗೆ ಬಿಟ್ಟುಬಿಡು' ಎಂದು ಪುಸಲಾಯಿಸುತ್ತಿದ್ದಾನೆ! (ಪ್ರಕಟ)...ಇಲ್ಲ, ನೀನು ಮತ್ತೆ ಮತ್ತೆ ಏನನ್ನೋ ಹೇಳಿ ಹೆದರಿಕೆ ಹುಟ್ಟಿಸಬೇಡ. ನಿನಗ ಚಿಂತೆ ಬೇಡ, ಆದಷ್ಟು ಬೇಗ ನಾವು ಇಲ್ಲಿಂದ ಹೋಗಲು ಪ್ರಯತ್ನಿಸುತ್ತೇವೆ. ನಿನಗೆ ಇದೊ ಮಾತು ಕೊಡುತ್ತೇನೆ.

ವ್ಯಕ್ತಿ : ನಿನ್ನ ಮಾತಿನಲ್ಲಿ ನನಗೆ ನಂಬಿಕೆಯಿಲ್ಲ. ಕೇವಲ ಹೆದರಿಕೊಂಡು ಈ ಮಾತುಗಳನ್ನಾಡುತ್ತಿರುವಿ. ನಿನ್ನ ಭೀತಿಗೆ, ಈ ಭಯಂಕರ ಗಾಳಿಯ ಸುಯ್ಯಲಿಗೆ ನಾನೇ ಕಾರಣವೆಂದು ಭಾವಿಸಿರುವಿ. ಅದು ನಿಜವಿದ್ದರೂ ಇರಬಹುದು. ಆದರೆ ನಿನಗಾಗಲೀ, ನಿನ್ನ ಪಾಲ್‌ಗಾಗಲೀ ತೊಂದರೆ ಕೊಡಬೇಕೆಂಬುದು ನನ್ನ ಇಚ್ಛೆಯಲ್ಲ. ಒಟ್ಟಿನಲ್ಲಿ ನೀವು ಇಲ್ಲಿಂದ ಹೋಗಬೇಕು. ಅದಷ್ಟೇ ನನಗೆ ಬೇಕಾದ್ದು. ನೋಡು ಕೊನೆಯ ಸಲ ಹೇಳುತ್ತೇನೆ, ನಿನ್ನ ಮಾತಿನಂತೆ ನಡೆದುಕೊಳ್ಳದಿದ್ದ ಪಕ್ಷದಲ್ಲಿ ತೊಂದರೆ ತಪ್ಪಿದ್ದಲ್ಲ. ಆಮೇಲೆ ಪಶ್ಚಾತ್ತಾಪಪಡಬೇಕಾಗುತ್ತದೆ..... ಇನ್ನು ಬರುತ್ತೇನೆ. ಮತ್ತೊಮ್ಮೆ ನಿನ್ನನ್ನು ಕಾಣುತ್ತೇನೆ. ಈಗ ಈ ಕಾಲುಚೀಲಗಳನ್ನು ಇಲ್ಲಿಯೇ ಬಿಟ್ಟು ಹೋಗುತ್ತೇನೆ. ಹೊಲಿದು ಸರಿ ಮಾಡಿಡು.

ತಾಯಿ : ತಪ್ಪದೆ ಸರಿ ಮಾಡಿಕೊಡುತ್ತೇನೆ.

ವ್ಯಕ್ತಿ : ಹಾಗಾದರೆ, ನಾನಿನ್ನು ಬರುತ್ತೇನೆ. ನೀನು ಕಣ್ಣು ಮುಚ್ಚಿಕೋ ನನ್ನ ಬರಿಗಾಲನ್ನು ನೀನು ನೋಡುವುದು ನನಗಿಷ್ಟವಲ್ಲ. (ಎಂದು ಕಾಲಿನಿಂದ ಕಾಲುಚೀಲಗಳನ್ನು ಬಿಚ್ಚಿಕೊಡುತ್ತಾನೆ.) ಇಲ್ಲಿಯವರೆಗೂ ಯಾರೂ, ಯಾವ ಹೆಣ್ಣೂ ನನ್ನ ಬರಿ ತೊಗಲನ್ನು ನೋಡಿಲ್ಲ. ನೀನೋ ಈಗ ಮುದುಕಿ;

ಕುರೂಪಿ. ನನ್ನ ಬರಿ ತೊಗಲನ್ನು ನೋಡುವ ಮೊದಲ ಹೆಣ್ಣು ನೀನಾಗಬಾರದು....ಅದಕ್ಕೆಂದೇ ಕಣ್ಣು ಮುಚ್ಚಲು ಹೇಳಿದೆ. (ಕ್ರಮೇಣ ನಡೆದು ಹೋಗುವ ಹೆಜ್ಜೆ ಸಪ್ಪಳ ಕೇಳಿಸುತ್ತ, ಅಸ್ಪಷ್ಟವಾಗುತ್ತದೆ. ತಾಯಿ ಬೆಚ್ಚಿಬಿದ್ದು ಕಣ್ಣು ತೆರೆಯುತ್ತಾಳೆ. ಅಡುಗ ಮನೆಯಲ್ಲಿ ಯಾರೂ ಕಾಣುವುದಿಲ್ಲ. ಒಂಟಿಯಾಗಿರುವ ನೆನಪು ಬಂದು ನಡುಗುತ್ತಾಳೆ. ಸುತ್ತಲೂ ಸುಯ್ಯುವ ಗಾಳಿ.) 'ಓ ದೇವರೆ! ಎಂಥ ಭಯಂಕರ ಕನಸು!'– ಎಂದು ಉದ್ಗರಿಸುತ್ತಾಳೆ.

OO

# ದೃಶ್ಯ – ೨

(ಅಡುಗೆ ಕೋಣೆಯಿಂದ ಹೊರಹೊಮ್ಮಿದ ಬೆಳಕಿನ ಗೆರೆಯೊಂದು ಪ್ರವೇಶ ಭಾಗದಲ್ಲಿರುವ ಹಾಲಿನಲ್ಲಿರುವ ಚಿಕ್ಕ ಊಟದ ಕೋಣೆಯನ್ನು ಆಲೋಕಿಸಿದೆ. ತಾಯಿ ತಣ್ಣಗಾದ ಬೂದಿಯ ಪಕ್ಕ ಹೆಣವೊಂದನ್ನು ನೋಡುತ್ತಾ ಕಳಿತಿರುವಂತಿದ್ದಾಳೆ. ಕಳ್ಳ ಹೆಜ್ಜೆಗಳಲ್ಲಿ ಪ್ರವೇಶಿದ ಪಾಲ್ ಶೂನ್ಯದೃಷ್ಟಿಯಿಂದ ನಿಶ್ಚಲಳಾಗಿ ಕುಳಿತ ತಾಯಿಯನ್ನು ನೋಡುತ್ತಾನೆ. ದುಃಖ, ವಿಷಾದ ಭಾವಗಳು ಉಕ್ಕಿ ಬಂದಂತಾಗುತ್ತದೆ)

**ಪಾಲ್** : (ಮೆದುವಾಗಿ) ಅಮ್ಮ ಇನ್ನೂ ಮಲಗಲಿಲ್ಲವೇಕೆ?

**ತಾಯಿ** : (ದುಃಸ್ವಪ್ನದಿಂದ ಉಂಟಾದ ಭೀತಿಯಿಂದ ಬಿಳುಚಿಕೊಂಡಿದ್ದರೂ ನಿಷ್ಠುರವಾದ ದನಿಯಲ್ಲಿ) ಪಾಲ್, ನಿನಗಾಗಿ ಕಾದು ಕುಳಿತಿದ್ದೆ. ಈ ನೀರವ ರಾತ್ರಿಯಲ್ಲಿ ನೀನೆಲ್ಲಿಗೆ ಹೋಗಿದ್ದೆ?

**ಪಾಲ್** : ಕಾಹಿಲೆ ಬಿದ್ದ ಒಬ್ಬ ವ್ಯಕ್ತಿಯ ಬಳಿಗೆ ಹೋಗಿದ್ದೆ.

**ತಾಯಿ** : (ಗೆಲುವಾಗಿ) ಪಾಲ್, ನನ್ನ ಹತ್ತಿರ ಬಾ. ನಾನು ನಿನಗೆ ಏನೋ ಹೇಳಬೇಕಾಗಿದೆ.... (ಪಿಸುದನಿಯಲ್ಲಿ) ನನಗೆ ಗೊತ್ತು ನೀನು ಎಲ್ಲಿಗೆ ಹೋಗಿದ್ದೆ ಅಂತ! ಇತ್ತೀಚೆಗೆ ಪ್ರತಿದಿನ ರಾತ್ರಿ ನೀನು ಹೊರಗೆ ಹೋಗುತ್ತಿರುವ ಸದ್ದು ನನಗೆ ತಿಳಿದಿದೆ, ನೀನೆಲ್ಲಿಗೆ ಹೋಗುತ್ತಿರುವಿ ಎಂದು. ಈ ದಿನ ನಿನ್ನ ಹಿಂದೆಯೇ ಬಂದು ನೀನೆಲ್ಲಿಗೆ ಹೋದೆ ಎಂಬುದನ್ನು. ಖುದ್ದಾಗಿ ಕಂಡುಕೊಂಡೆ. ನನ್ನ ಪ್ರೀತಿಯ ಪಾಲ್ ನೀನೇನು ಮಾಡುತ್ತಿರುವಿ ಎಂಬುದನ್ನು ಸ್ವಲ್ಪವಾದರೂ ಯೋಚಿಸು. (ಪಾಲ್ ಮೌನ) ಯಾಕೆ ಪಾಲ್ ಉತ್ತರ ನೀಡುತ್ತಿಲ್ಲ. ಹೇಳು. ಮಾತಾಡು.... ನಾನು ಹೇಳಿದ್ದೆಲ್ಲ ಸುಳ್ಳೆಂದು; ನೀನು ನಿರ್ದೋಷಿ ಎಂದು ಗಟ್ಟಿಯಾಗಿ ಕೂಗಿ ಹೇಳು....ಅದನ್ನು ಕೇಳಬೇಕೆಂಬುದೇ ನನ್ನ ಆಸೆಯಾಗಿದೆ.

**ಪಾಲ್** : (ಕೋಪ ಬಂದರೂ ಅದನ್ನು ತೋರಿಸಿಕೊಳ್ಳದೆ ಸಮಾಧಾನವಾಗಿಯೇ ತಾಯಿಯ ಬಳಿ ಸಾರಿ ಅವಳ ತಲೆಯ ಮೇಲೆ ಕೈಯಿರಿಸಿ) ಅಮ್ಮ ಹೇಳುತ್ತಿದ್ದೇನಲ್ಲ, ಕಾಯಿಲೆಯಾಗಿರುವ ಒಬ್ಬರನ್ನು ನೋಡಲು ಹೋಗಿದ್ದೆ, ಅಂತ.

**ತಾಯಿ** : ನೀನು ಹೋದ ಮನೆಯಲ್ಲಿ ಕಾಯಿಲೆಯಾದವರು ಯಾರೂ ಇಲ್ಲ.

**ಪಾಲ್** : ಕಾಯಿಲೆಯಾದವರು ಹಾಸಿಗೆಯಲ್ಲಿಯೇ ಮಲಗಿರಬೇಕೆಂದೇನೂ ಇಲ್ಲವಲ್ಲ.

**ತಾಯಿ** : ಹಾಗಾದರೆ, ನೀನು ನೋಡಲು ಹೋದ ಹೆಣ್ಣಿಗಿಂತ ಹೆಚ್ಚು ಅಸ್ವಸ್ಥನಾಗಿರುವವನು ನೀನೇ! ಆದ್ದರಿಂದ ಮೊದಲು ನಿನ್ನ ಆರೋಗ್ಯವನ್ನು ಸರಿಯಾಗಿ ನೋಡಿಕೋ.... (ದೈನ್ಯದಿಂದ) ಪಾಲ್ ನಾನೊಬ್ಬ ಅಜ್ಞಳು. ಏನೂ ತಿಳಿಯದ ಹೆಂಗಸು ನಿಜ. ಆದರೆ ನಾನು ನಿನ್ನ ತಾಯಿ. ಪಾಪ ಮಾಡುವುದು ಉಳಿದೆಲ್ಲ ಕಾಯಿಲೆಗಳಿಗಿಂತಲೂ ಕೆಟ್ಟುದು ಎಂದು ಮಾತ್ರ ಹೇಳಬಲ್ಲೆ. ಯಾಕೆಂದರೆ ಅದು ಆತ್ಮವನ್ನೇ ಘಾಸಿಗೊಳಿಸುತ್ತದೆ.... ಅಲ್ಲದೆ ನೀನು ನಿನ್ನೊಬ್ಬನನ್ನು ಮಾತ್ರವೇ ಅಲ್ಲ ರಕ್ಷಿಸಬೇಕಾದ್ದು.... ಓ ದೇವರ ಶಿಶುವೇ..... ಆಕೆಯ ಆತ್ಮವನ್ನು ನೀನು ನಾಶಮಾಡಬಾರದೆಂಬುದನ್ನೂ ನೆನಪಿಡು. ಅವಳಿಗೆ ಅವಳ ಈ ಬದುಕಿನಲ್ಲಿ ಏನೂ ಕೇಡಾಗದಂತೆ ನೋಡಿಕೊಳ್ಳಬೇಕಾದ್ದೂ ನಿನ್ನ ಧರ್ಮ ಮತ್ತು ಕರ್ತವ್ಯ. ಇದನ್ನು ನೀನು ಖಂಡಿತ ಮರೆಯಬಾರದು.... (ಎಂದು ಕೈಗಳನ್ನು ಬಿಗಿಯಾಗಿ ಹಿಡಿದುಕೊಳ್ಳುತ್ತಾಳೆ.)

**ಪಾಲ್** : (ಉದ್ವಿಗ್ನನಾಗಿ) ಬಿಡು.... ಬಿಡು.... ನನ್ನನ್ನು ನನ್ನ ಪಾಡಿಗೆ ಬಿಟ್ಟುಬಿಡು. ನೀನು ನನಗೆ ತಾಯಿಯೇ ಇರಬಹುದು. ಆದರೆ ನಾನೇನೂ ಇನ್ನೂ ಚಿಕ್ಕ ಹುಡುಗನಲ್ಲ. ನನಗೆ ಯಾವುದು ಒಳ್ಳೆಯದು. ಯಾವುದು ಕೆಟ್ಟುದು ಎಂಬುದರ ಪ್ರಜ್ಞೆ ಇದೆ.

**ತಾಯಿ** : ಇಲ್ಲ.... ಇಲ್ಲ. ನೀನೇನು ತಪ್ಪು ಮಾಡುತ್ತಿರುವಿ ಎಂಬುದು ನಿನಗೆ ಕಾಣಿಸುತ್ತಿಲ್ಲ. ಅದು ಕಂಡಿದ್ದರೆ ನೀನು ಹೀಗೆಲ್ಲ ಖಂಡಿತ ಮಾತನಾಡುತ್ತಿರಲಿಲ್ಲ.

**ಪಾಲ್** : (ಒರಟಾಗಿ) ಹಾಗಾದರೆ ನಾನು ಇನ್ನು ಹೇಗೆ ಮಾತನಾಡಬೇಕಿತ್ತು?

**ತಾಯಿ** : ಇಷ್ಟೊಂದು ಉದ್ವಿಗ್ನತೆಯಿಂದ. ಹೀಗೆ ಅಸ್ವಸ್ಥನಾದವನಂತೆ ಮಾತಾಡುತ್ತಿರಲಿಲ್ಲ. ಸಮಾಧಾನವಾಗಿ ನಿನ್ನ ಮತ್ತು ಆ ಹೆಂಗಸಿನ ನಡುವೆ ಅಂಥದ್ದೇನೂ ಆಗಿಲ್ಲವೆಂಬ ಭರವಸೆ ಮೂಡಿಸುವವನಂತೆ ಮಾತನಾಡುತ್ತಿದ್ದೆ; ತಿಳಿಸಿ ಹೇಳುತ್ತಿದ್ದೆ. ಆದರೆ ಅದು ಹೇಳಲು ನಿನ್ನಿಂದ ಸಾಧ್ಯವಿಲ್ಲ. ಹೋಗಲಿ

ಬಿಡು, ನೀನೇನೂ ಹೇಳಬೇಡ. ಈಗ ಹೇಳದಿರುವುದೇ, ಇದ್ದುದರಲ್ಲಿ ಒಳ್ಳೆಯದು. ಒಂದು ಮಾತೂ ನಿನ್ನಿಂದ ನಿರೀಕ್ಷಿಸುವುದಿಲ್ಲ.... ಆದರೆ ಪಾಲ್ ನೀನೇನಾಗುತ್ತಿರುವಿ ಎಂದು ಮತ್ರ ಯೋಚಿಸು (ಮೌನ..... ಮತ್ತೆ ಮಾತು ಮುಂದುವರಿಯುತ್ತದೆ) ಪಾಲ್, ನಿನಗೆ ನಾನು ಹೇಳಲು ಇನ್ನು ನನ್ನಲ್ಲಿ ಏನೂ ಉಳಿದಿಲ್ಲ.... ಜೊತೆಗೆ ಹೆಚ್ಚಿಗೆ ಮಾತಾಡುವ ಇಚ್ಛೆಯೂ ಇಲ್ಲ..... ಆದರೆ...... ಎಷ್ಟಾದರೂ ನೀನು ನನ್ನ ಕರುಳಕುಡಿ..... ನಿನಗೆ ಕೇಡಾಗುವುದನ್ನು ನಾನು ನೋಡಲಾರೆ.... ಈಗ ನನಗೆ ಉಳಿದಿರುವುದೆಂದರೆ, ದೇವರಲ್ಲಿ ಮೊರೆ ಇಡುವುದು..... 'ದೇವರೇ ನನ್ನ ಮಗನನ್ನು ಅಧಃಪತನದಿಂದ ಪಾರು ಮಾಡು' ಎಂದು ಬೇಡಿಕೊಳ್ಳುವುದು.

**ಪಾಲ್** : (ಕೋಪದಿಂದ. ಏರಿದ ಧ್ವನಿಯಲ್ಲಿ) ಸಾಕು.... ಸಾಕು.... ಓ ವಿಷಯವನ್ನು ನನ್ನೊಡನೆಯಾಗಲೀ, ಬೇರೆಯವರೊಡನೆಯಾಗಲಿ ಮಾತನಾಡುವುದು ಒಳ್ಳೆಯದೆನಿಸುವುದಿಲ್ಲ, ಮತ್ತು ಅದರ ಅವಶ್ಯಕತೆಯೂ ಇಲ್ಲ. ನಿನ್ನ ಆಲೋಚನೆಗಳು ಭ್ರಮೆಗಳು ನಿನ್ನೊಳಗೇ ಇರಲಿ, ಇನ್ನೊಬ್ಬರ ಮೇಲೆ ಹೇರುವುದಕ್ಕೆ ಪ್ರಯತ್ನಿಸಬೇಡ.

(ಈ ಮಾತುಗಳಿಂದ ನೊಂದ ತಾಯಿ ಎದ್ದು ಅವನ ಬಳಿಸಾರಿ ಅವನ ತೋಳು ಹಿಡಿದು ತನ್ನತ್ತ ತಿರುಗಿಸಿಕೊಂಡು ಅವನನ್ನು ನೇರವಾಗಿ ತನ್ನ ಕಣ್ಣುಗಳೊಳಗೇ ನೋಡುವಂತೆ ಮಾಡುತ್ತಾಳೆ. ಮತ್ತೆ ಅವನನ್ನು ಬಿಟ್ಟು ತನ್ನ ಜಾಗದಲ್ಲಿ ಹೋಗಿ ಕೂರುತ್ತಾಳೆ. ಪಾಲ್ ಅಸ್ವಸ್ಥನಂತೆ ಅಡುಗೆ ಕೋಣೆಯಲ್ಲಿಯೇ ಅತ್ತಿಂದಿತ್ತ ಇತ್ತಿಂದತ್ತ ಶತಪಥ ಹಾಕುತ್ತಾನೆ. ಉದ್ವಿಗ್ನತೆ ಮುಖದ ಮೇಲಿದ್ದರೂ ತಾಯಿಯ ಬಳಿಗೆ ಬಂದು)

**ಪಾಲ್** : ಹೋಗು. ಈಗಾಗಲೇ ತುಂಬಾ ಹೊತ್ತಾಗಿದೆ. ನೆಮ್ಮದಿಯಿಂದ ಮಲಗಿಕೋ. ಇಲ್ಲದ್ದನ್ನು ತಲೆಗೆ ಹಚ್ಚಿಕೊಂಡು ಸುಮ್ಮನೆ ನನ್ನ ಪ್ರಾಣ ತೆಗೆಯಬೇಡ.

**ತಾಯಿ** : (ಕಣ್ಣೀರಿಡುತ್ತಾ) ಪಾಲ್..... ಪಾಲ್ (ಎಂದು ಬಿಕ್ಕುವಳು.)

**ಪಾಲ್** : (ನೊಂದವನಂತೆ ಹತ್ತಿರ ಬಂದು ಪ್ರೀತಿಯಿಂದ ಮೆದುವಾಗಿ) ಅಮ್ಮ.

**ತಾಯಿ** : (ಕುಳಿತೆಡೆಯಿಂದ ಕದಲದೆ) ಇಲ್ಲ. ಈ ವಿಷಯವನ್ನು ನಾನು ಯಾರೊಂದಿಗೂ ಪ್ರಸ್ತಾಪಿಸುವುದಿಲ್ಲ. ಆದರೆ ಈ ಹಳ್ಳಿಯನ್ನು ತೊರೆದು ಹೋಗುವುದಕ್ಕಲ್ಲದೆ ಬೇರೆ ಯಾವುದಕ್ಕೂ ನಾನು ಇಲ್ಲಿಂದ ಕದಲುವುದಿಲ್ಲ. ಒಂದು ವೇಳೆ ನೀನು ಆ ಮನೆಯ ಕಡೆ ಸುಳಿಯುವುದಿಲ್ಲವೆಂದು ಮಾತು ಕೊಟ್ಟರೆ, ನಾನು ಇಲ್ಲಿಂದ ಏಳಲು ಪ್ರಯತ್ನಿಸುತ್ತೇನೆ.

**ಪಾಲ್** : (ಯೋಚಿಸಿದಂತೆ ಮಾಡಿ, ಸ್ವಗತ) ಹೇಗಿದ್ದರೂ ಇವಳಿಗೆ ನಾನು ಹೇಳುವುದು ಅರ್ಥವಾಗುವುದಿಲ್ಲ. ಸುಮ್ಮನೆ ಅವಳೊಂದಿಗೆ ಏಕೆ ಈ ತಕರಾರು? (ಪ್ರಕಟ) ಆಯಿತು ಅಮ್ಮ. ನೀನು ಬಯಸುವಂತೆ ನಾನು ಆ ಮನೆಯ ಕಡೆ ಹೆಜ್ಜೆ ಹಾಕುವುದಿಲ್ಲ. ಸಮಾಧಾನವಾಯಿತು ತಾನೆ? (ಎಂದು ಕೋಣೆಯತ್ತ ಸಾಗುತ್ತಾನೆ)

(ಕೋಣೆಯೂ ಕಾಣುವಂತಿರಬೇಕು. ಕೋಣೆಯಲ್ಲಿ ಒಂದು ಕನ್ನಡಿ ನೇತು ಹಾಕಿದೆ. ಅದರ ಮುಂದೆ ಮೇಜಿನ ಮೇಲೆ ಎಲ್ಲ ಬಗೆಯ ಅಲಂಕಾರ ಸಾಮಗ್ರಿಗಳು ಹರಡಿವೆ. ಪಾಲ್ ಉದ್ವಿಗ್ನ ಸ್ಥಿತಿಯಲ್ಲಿ ಏನೇನೋ ಬಡಬಡಿಸುತ್ತಾನೆ.)

**ಪಾಲ್** : (ತನ್ನಷ್ಟಕ್ಕೆ) ಅಮ್ಮನ ಮನಸ್ಸನ್ನು ನೋಯಿಸಬಾರದಾಗಿತ್ತು. ನನಗೆ ಗೊತ್ತು. ನನ್ನ ವಿಚಾರದಲ್ಲಿ ಅವಳೆಷ್ಟು ದುಃಖಿತಳಾಗಿದ್ದಾಳೆಂದು. ಅವಳ ಮುಂದೆ ಇಂದು ನಾನಾಡಿದ ಮಾತುಗಳು ಆತ್ಮವಂಚನೆಯ ಮಾತುಗಳಾಗಿವೆ. ಆದರೇನು ಮಾಡಲಿ? ಆ ಹೆಣ್ಣಿನ ಕಣ್ಣುಗಳು..... ಕೈಗಳು ನನ್ನನ್ನು ಬಿಡದೆ ಕಾಡುತ್ತವೆ ಅಮ್ಮನ ಮುಂದೆ ಶಪಥ ಮಾಡಿದಂತೆ ನಡೆಯಬಲ್ಲನೇನು? ..... ಶಪಥ...... ಹೂಂ! ಶಪಥ!........ ನನಗೆಲ್ಲೋ ಹುಚ್ಚು..... ಹೌದು..... ಶಪಥದ ಅಗತ್ಯವಾದರೂ ಏನಿತ್ತು? ಗಟ್ಟಿ ಮನಸ್ಸಿನ ಗಂಡಸಿಗೆ ಆಣೆ ಪ್ರಮಾಣಗಳ ಅವಶ್ಯಕತೆ ಇರುವುದಿಲ್ಲ..... ಆದರೆ ನಾನು?..... ದುರ್ಬಲ!..... ಪ್ರಮಾಣ ಮಾಡಿದಷ್ಟೇ ಆತುರದಲ್ಲಿ...... ಅವಿವೇಕದಲ್ಲಿ ಅದನ್ನು ಮರೆಯಲೂ ಬಲ್ಲೆ.... ನೆನೆಸಿಕೊಂಡರೆ ಮೈ ನಡುಗುತ್ತದೆ. ನನ್ನ ಹೋರಾಟದ ಆರಂಭ ಇದೋ ಈಗಲೇ..... ಇಲ್ಲಿಂದಲೇ ಪ್ರಾರಂಭ... (ಎಂದು ಕನ್ನಡಿಯಲ್ಲಿ ಮುಖ ನೋಡಿಕೊಳ್ಳುತ್ತಾನೆ.)

**ಧ್ವನಿ** : (ಅವನದೇ ಪ್ರತಿಬಿಂಬ).... ಓಹೋ ಇಲ್ಲಿಯೇ ನಿಂತಿದ್ದೀಯ ನೀನು? ಮರೆತು ಹೋದೆಯೇನು?.... ಇಲ್ಲಿಗೆ ನಿನ್ನನ್ನು ದೇವರು ಕಳಿಸಿಕೊಟ್ಟಿದ್ದಾನೆ. ಇಲ್ಲಿನ ಜನರ ಪಾಪಗಳನ್ನು ನಿವಾರಿಸುವ ಜವಾಬ್ದಾರಿಗಾಗಿ ನಿನ್ನನ್ನು ನೇಮಿಸಿದ್ದಾನೆ. ದೇವರ ಸೇವೆಗಾಗಿ, ಜನತೆಯ ಸೇವೆಗಾಗಿ ಸಂಪೂರ್ಣವಾಗಿ ನಿನ್ನನ್ನು ಅರ್ಪಿಸಿಕೊಳ್ಳದಿದ್ದ ಪಕ್ಷದಲ್ಲಿ ದುಷ್ಟಶಕ್ತಿಗಳು ತಮ್ಮ ಹಿಡಿತಕ್ಕೆ ತೆಗೆದುಕೊಂಡು ಪಾಪದ ಘೋರ ಕತ್ತಲಕೂಪಕ್ಕೆ ತಳ್ಳದೆ ಬಿಡುವುದಿಲ್ಲ.

**ಪಾಲ್** : (ತೂರಾಡುತ್ತಾ, ಆಯಾಸಗೊಂಡವನಂತೆ ಮತ್ತು ಮತ್ತಷ್ಟು ಉದ್ರಿಕ್ತನಾಗಿ) ನೀನಾರು? ನನ್ನ ಅಂತರಾತ್ಮವೇ? ಅಥವಾ ನನ್ನನ್ನು ಎಚ್ಚರಿಸಲು ಬಂದ ದೇವದೂತನೇ! ಸಾಕುಮಾಡು ನಿನ್ನ ಮಾತು. ಇದೆಲ್ಲವನ್ನು ಎದುರಿಸುವ ತ್ರಾಣವಿಲ್ಲವಾಗುತ್ತಿದೆ. ಆಸೆ, ಹಂಬಲಗಳ ಪ್ರೀತಿ ಕರ್ತವ್ಯಗಳ ಅಡಕತ್ತರಿಯಲ್ಲಿ ಸಿಲುಕಿ ನಲುಗಿ ಹೋಗುತ್ತಿದ್ದೇನೆ. ಪ್ರೀತಿಸುವುದು

ಅಪರಾಧವೆದಾದರೆ, ಪಾಪವೆಂದಾದರೆ, ಪ್ರೀತಿಸುವ ಮನಸ್ಸನ್ನೇಕೆ ಕೊಟ್ಟೆ....ಓ ದೇವರೇ ......ನನಗೆ ಈ ಹೋರಾಟ ಸಾಕಾಗಿದೆ. ನನ್ನನ್ನು ಒಪ್ಪಿಸಿಕೊಂಡು ಎಲ್ಲ ಸಂದಿಗ್ಧಗಳಿಂದ ದೂರಮಾಡು. (ಬಿಕ್ಕಿ ಬಿಕ್ಕಿ ಅಳುತ್ತಾನೆ) ಅಳುವಿನ ಸದ್ದು ಕೇಳಿ ತಾಯಿ ಬಾಗಿಲ ಬಳಿ ಕಾಣಿಸಿಕೊಳ್ಳುತ್ತಾಳೆ.)

**ತಾಯಿ** : (ಪ್ರೀತಿಯಿಂದ) ಪಾಲ್, ಮಗು. ಈ ನಡುರಾತ್ರಿಯಲ್ಲಿ ಎಚ್ಚರಿದ್ದು ಇದೇನು ಮಾಡುತ್ತಿರುವೆ? ಅಮ್ಮ ನನ್ನ ಕರುಳ ಕುಡಿ ಅಶಾಂತವಾಗಿ ಚಡಪಡಿಸುತ್ತಿರುವಾಗ ನನಗೆ ಹೇಗೆ ನಿದ್ದೆ ಬಂದೀತು?

**ಪಾಲ್** : ನಿನ್ನ ಈ ಅಪಾರವಾದ, ಆಳವಾದ ಪ್ರೀತಿಯೇ ಪ್ರತಿಕ್ಷಣವೂ ನನ್ನನ್ನು ಅಪರಾಧಿ ಎಂದು ಗುರುತಿಸಿ ಕೊಲ್ಲುತ್ತಿದೆ. ಆದರೆ ಮನುಷ್ಯರಾರೂ ಮಾಡಬಾರದಂತಹ ಅಪರಾಧಗಳನ್ನೇನೂ ನಾನು ಮಾಡುತ್ತಿಲ್ಲವೆಂದು ನನ್ನ ಅಂತರಾತ್ಮ ಸಾರಿ ಸಾರಿ ಹೇಳುತ್ತಿದೆ.

**ತಾಯಿ** : ನನಗೆ ಗೊತ್ತು ಮಗು. ನೀನು ಉದ್ದೇಶಪೂರ್ವಕವಾಗಿ ಏನನ್ನೂ ಮಾಡುವುದಿಲ್ಲವೆಂದು!,.....ಆ ದುಷ್ಟ ಸೈತಾನನೇ ನಿನ್ನಿಂದ ಈ ನಾಟಕವಾಡಿಸುತ್ತಿದ್ದಾನೆ....ಆದರೂ ಹೆದರಬೇಡ ಮಗು.....ನಿನಗೆಂದೂ ಸೋಲು ಸಂಭವಿಸುವುದಿಲ್ಲ. (ಯೋಚಿಸುವ ರೀತಿಯಲ್ಲಿ) ನಿನಗೆ ನೆನಪಿರಬಹುದಲ್ಲವೇ....ನಮ್ಮ ಈ ಪುಟ್ಟ ಮನೆ....ಶ್ರೀಮಂತರ ಬದುಕಿನ ನಡುವೆ ದರಿದ್ರ ಸ್ಥಿತಿಯಲ್ಲಿ .....ಜನರ ದೃಷ್ಟಿಯಲ್ಲಿ ನಿಕೃಷ್ಟರಾಗಿ.... ಸೆಮೆನರಿಯ ಅಡುಗೆ ಮನೆಯಲ್ಲಿ ತೊತ್ತಾಗಿ ದುಡಿಯುತ್ತಿದ್ದವಳು ನಾನು.

**ಪಾಲ್** : ಹೌದು, ಎಲ್ಲವೂ ನೆನಪಾಗುತ್ತಿದೆ. ನಿನ್ನ ಮತ್ತು ನಮ್ಮ ದರಿದ್ರ ಸ್ಥಿತಿಗಾಗಿ, ಹೀನಸ್ಥಿತಿಗಾಗಿ ನಾನೆಷ್ಟೋ ಸಲ ನಾಚಿ ನೀರಾಗಿದ್ದೆ. ನನ್ನ ತಾರುಣ್ಯದ ದಿನಗಳಲ್ಲಿ ನಾನು ಎದುರಿಸಿದ ಅವಮಾನಕರ ಪ್ರಸಂಗಗಳೂ ನೆನಪಾಗುತ್ತಿವೆ. ಆದರೆ ಇವೆಲ್ಲವನ್ನೂ, ನನ್ನ ಸಲುವಾಗಿಯೇ ನೀನು ದುಡಿಯುತ್ತಿರುವೆಯೆಂದು ತಿಳಿದು ಸಹಿಸಿಕೊಂಡೆ. ತಪ್ಪೊಪ್ಪಿಗೆ ಮತ್ತು ಕಮ್ಯೂನಿಯನ್‌ಗೆ ಹೋದ ದಿನಗಳಂದು ನಮ್ಮ ಹಿರಿಯ ಧರ್ಮಾಧಿಕಾರಿಗಳು ನಿನ್ನ ಕೈಗಳನ್ನು ಚುಂಬಿಸಲು ಮತ್ತು ನನ್ನ ತಪ್ಪುಗಳನ್ನು ಕ್ಷಮಿಸಲು ಕೇಳುವಂತೆ ಆದೇಶಿಸುತ್ತಿದ್ದರು. ನೀನು ಅವಸರದಿಂದ ಅದಕ್ಕಾಗಿ ಓಡಿ ಬಂದು ನೀಡಿದ ಕೈಗಳು ಸಾಬೂನಿನ ವಾಸನೆಯಿಂದ ದುಡಿದುಡಿದು ನಿರಿಗೆಗಟ್ಟಿ ವಿಕಾರವಾಗಿದ್ದುದರಿಂದ ಅಸಹ್ಯಗೊಂಡು ಕೋಪಿಸಿಕೊಳ್ಳುತ್ತಿದ್ದೆ. ನಿನ್ನಲ್ಲಿ ಕ್ಷಮಾಯಾಚನೆ ಸಾಧ್ಯವಾಗದೆ ದೇವರಿಗೆ ಮೊರೆಯಿಡುತ್ತಿದ್ದೆ. ಅಡುಗೆ ಮನೆಯಲ್ಲಿ ನಿನ್ನ ಹಿಂದೆ ಒಂದೆ ಇದ್ದೇ ದೇವರ ಸಾಕ್ಷಾತ್ಕಾರ ಮಾಡಿಕೊಂಡಿದ್ದೆ.

**ತಾಯಿ** : ಪಾಲ್! ಅಷ್ಟೇ ಅಲ್ಲ. ನೀನು ಎಷ್ಟೋ ಸಲ ನಿನ್ನ ಪುಟ್ಟ ಕೋಣೆಯಲ್ಲಿ ಮಲಗಿ ಶೂನ್ಯ ಕತ್ತಲಲ್ಲಿ ಏನನ್ನೋ ನೋಡುತ್ತ "ನಾನು ಪಾದ್ರಿಯಾಗುತ್ತೇನೆ.... ರೊಟ್ಟಿಯನ್ನು ಸಂಸ್ಕರಿಸಿ, ಪವಿತ್ರಗೊಳಿಸಿ ದೇವರನ್ನಾಗಿ ಪರಿವರ್ತಿಸುತ್ತೇನೆ"– ಎಂದೆಲ್ಲ ಕನಸು ಕಾಣುತ್ತಿದ್ದೆ.

**ಪಾಲ್** : (ತನ್ನೊಳಗೇ ವ್ಯಂಗ್ಯ ನಗೆ ನಕ್ಕು) ಹುಂ!..... ನಿಜ ಎಲ್ಲವೂ ನೆನಪಾಗುತ್ತಿದೆ. ನನ್ನನ್ನು ಪಾದ್ರಿಯಾಗಿ ಪರಿವರ್ತಿಸಿ... ನನ್ನ ಈ ಮಹಾನ್ ಸ್ಥಿತಿಗೆ ಆಕೆಯೇ ಕಾರಣವೆಂದೂ ಯೋಚಿಸುತ್ತಿದೆ... ಆದರೆ... ಆದರೆ ಇದು ನಿಜವಲ್ಲ. ನನ್ನಮ್ಮನ ಆಸೆಗೆ ನಾನು ಧ್ವನಿ ಕೊಟ್ಟೆ ಅಷ್ಟೆ!..... ನಿಜವಾಗಿಯೂ ನಾನು ಪಾದ್ರಿಯಾಗಬೇಕೆಂದು ಆಸೆ ಪಟ್ಟಿದ್ದೇನೆ?...... (ಮೌನ)

**ತಾಯಿ** : ಯಾಕೆ ಪಾಲ್ ಸುಮ್ಮನಾದೆ. ನಾನಿದನ್ನೆಲ್ಲ ಸುಳ್ಳೇ ಹೇಳಿದ್ದೇನೆಂದು ನಿನ್ನ ಭಾವನೆಯೇ?

**ಪಾಲ್** : (ಎಚ್ಚೆತ್ತವನಂತೆ) ಇಲ್ಲ.... ಇಲ್ಲ.... ಬಾಲ್ಯಾವಸ್ಥೆಯಲ್ಲಿ ಜನ ನನ್ನನ್ನು, ಅವರ ಮನೆಗಳಿಗೆ ಹೋದಾಗಲೆಲ್ಲ. 'ಪಾದ್ರಿ, ಪಾದ್ರಿ' ಎಂದೇ ಸಂಬೋಧಿಸಿ ಕೀಟಲೆಯ ನಗೆ ನಕ್ಕದ್ದನ್ನು ನೆನಪು ಮಾಡಿಕೊಳ್ಳುತ್ತಿದ್ದೆ. ಆದರೆ ಆ ಕೀಟಲೆಯಲ್ಲಿ ಕ್ಷುಲ್ಲಕತೆಯಿರಲಿಲ್ಲ. ನಿಜವಾದ ಪಾದ್ರಿಗೆ ನೀಡುವ ಗೌರವವನ್ನೇ ನೀಡುತ್ತಿದ್ದರು. ಅದರಲ್ಲೂ ನನ್ನ ದಾದಿ ಮಾರಿಲೀನಳ ನೆನಪು ಮರೆಯುವ ಹಾಗೇ ಇಲ್ಲ.

**ತಾಯಿ** : ಹೌದು ಮಗು. ನಮ್ಮ ನೆನಪಿನ ಕೋಶದಲ್ಲಿ ಹೇಳಲಾಗದ ಸಂಖ್ಯೆಯಲ್ಲಿ ಸಂಗತಿಗಳು ಅವಿತು ಕುಳಿತಿರುತ್ತವೆ. ಒಮ್ಮೊಮ್ಮೆ ಅವೇ ನೆನಪುಗಳು ಕ್ರೂರವಾಗಿ ಕಾಡಿ ನಮ್ಮ ವರ್ತಮಾನವನ್ನು ಅಲುಗಾಡಿಸಿಬಿಡುತ್ತವೆ. ಅವುಗಳನ್ನು ಅವುಗಳ ಪಾಡಿಗೆ ಬಿಟ್ಟುಬಿಡು. ದೇವರನ್ನು ನಂಬಿ ನಿನ್ನ ಆತ್ಮಕ್ಕೆ ಊರ್ಧ್ವಗಾಮಿ ಪಥವನ್ನು ಕಾಣಿಸು. ಸೈತಾನನ ಚಾಲಾಕಿಗೆ ಬಲಿಬಿದ್ದು ಇಲ್ಲಿಯವರೆಗೆ ಸಾಧಿಸಿದ್ದನ್ನು ಹಾಳುಗೆಡವ ಬೇಡ.... ಏಳು, ಈಗಲೇ ಬೆಳಗಾಗುವಂತಿದೆ. ದೂರ ಪ್ರಯಾಣಕ್ಕೆ ಬೇರೆ ಹೊರಡಬೇಕು, ಎಚ್ಚರಿಸು ಎಂದು ನೀನೇ ಹೇಳಿದ್ದೆ. ಆದರೆ ಹೊತ್ತು ಮೀರಿ ಹೋಗಿದೆ, ನಿದ್ದೆಗೆ ಬಿದ್ದರೆ ಮತ್ತೆ ಏಳುವುದು ಕಷ್ಟವಾದೀತು. ಒಂದಿಷ್ಟು ಬಿಸಿ ಚಹಾ ಮಾಡಿ ತರುತ್ತೇನೆ. (ಹೋಗುವಳು)

○○

# ದೃಶ್ಯ – ೩

(ರಂಗದ ಮೇಲೆ ಮೇಳ ಎರಡು ಭಾಗಗಳಲ್ಲಿ, ಎರಡೂ ಬದಿಯಿಂದ ನಿಧಾನವಾಗಿ ಹೆಜ್ಜೆ ಇಡುತ್ತಾ ನಿರ್ಭಾವುಕತೆಯಿಂದ ಒಟ್ಟಿಗೆ ಗೀತವೊಂದನ್ನು ಹಾಡುತ್ತಾರೆ.)

ಅವನೊಬ್ಬ ಪಾದ್ರಿ
ದೇವರ ಸೇವಕ
ಚರ್ಚಿಗೆ ಕಟ್ಟುಬಿದ್ದವನು
ಬ್ರಹ್ಮಚರ್ಯವೇ ವ್ರತ
ಮದುವೆಯಾದವರಂತೆ, ಮಡದಿಯರ
ವಂಚಿಸೆ ತನಗಿಲ್ಲ ಹಕ್ಕು
ಆದರೂ ಆ ಪ್ರಾಯದ ಕನಸುಗಳು
ತೃಪ್ತವಾಗದ ಆಸೆಗಳು
ಸೈತಾನನ ಚಾಲುಗಳು
ದೂಡಿದವು ಹೆಣ್ಣೊಬ್ಬಳ
ಪ್ರೀತಿಯ ಸೆರೆಗೆ
ದೂರವಾಗುವನೇನೋ
ದೇವರ ಹೊರೆಗೆ
ಪ್ರೀತಿ ಪ್ರೇಮ ವಂಚಿತ ಹುಡುಗಿ
ತನ್ನ ಮನೆಯೊಳಗೇ ಸೆರೆಯಾದ ಬೆಡಗಿ
ಪಾದ್ರಿ ಪಾಲ್‌ನ ಕರುಣೆ ಕಣ್ಣಿಗೆ
ಬೇಟವಾದಳು
ಸ್ನೇಹದಾ ಸೋಗಿನಲಿ ನಲಿನಲಿದು
ಅವನೆದೆ ತುಂಬ ತುಂಬಿದಳು.

(ಮೇಳದವರಲ್ಲಿ ಒಬ್ಬೊಬ್ಬರು ಒಂದೊಂದು ಸಾಲನ್ನು ಹೇಳುತ್ತಾ ಹೋಗಬೇಕು.)

**೧ ನೆಯವ:** ಮುಗುಳ್ನಗೆಯ ಮಿಂಚುಗಳು ಪ್ರೇಮದೋರೆ ನೋಟಗಳು ಸೆಳೆದವವರನು ಬಳಿಗೆ ಬಳಿಗೆ

**೨ ನೆಯವ:** ಭಾವನಿರ್ವಿಕಾರದಪ್ಪುಗೆಯಲ್ಲಿ ಕಾಮಕುಸುಮಾಯುಧವು ಸೇರಿ ಇರಿಯಿತು ಅವರ.

**೩ ನೆಯವ:** ಗಂಗೆಯಾಯಿತು ಈಗ ಕೆಸರ ಮಡುವು.

**೪ ನೆಯವ:** ನೋವು, ವೇದನೆ, ಆತ್ಮವಂಚನೆ ಪಾದ್ರಿಗಾಯಿತು ಗೆಳೆತನ.

**೫ ನೆಯವ:** ಹೆಣ್ಣ ಸೆಳೆತದ ಬಿಗಿಯ ಬಂಧನ ಎಂದೂ ಕಾಣದ ರೋಮಾಂಚನ.

**೬ ನೆಯವ:** ಹೆಣ್ಣ ಸಂಗತಿ ಜೀವವಾಯಿತು. ಅದುವೆ ಜೀವನದರ್ಥವೆನಿಸಿತು. ಒಲವ ಕ್ಷಣಗಳು ಸ್ವರ್ಗವಾಯಿತು. ಮರ್ತ್ಯ ಬದುಕದು ಮರುಳುಗಾಡು. ಅಲ್ಲಿ ಇವಳೆ ಪ್ರೇಮದೂಟೆ.

**ಎಲ್ಲರೂ ಒಟ್ಟಿಗೆ:** ಒಂಟಿತನದ ಭೀತಿ ಜಾರಿತು
ನಿಮಿಷ ನಿಮಿಷವು ಸಂಗ ಬಯಸಿತು,
ಅಷ್ಟಪದಿಯ ಬಾಹುಬಂಧನ
ಎದೆಯ ಅಂಗಳವದುವೆ ನಂದನ
ಸ್ಪರ್ಷವವಳದು ಶೀತ ಚಂದನ.
ಕಾಣದಾತ್ಮದ ಕರೆಯ ಜೊತೆಯಲಿ
ಕಂಡ ಸುಖವೆ ಸತ್ಯವೆನಿಸಿತು
ಅನುಭವಿಸಲೆಂದೇ ದೇಹವಿರುವುದು
ಹಾಳು ಮಾಡುವುದೇತಕದನು
ಕಣ್ಣು ಕಾಣುವ ಚೆಲುವೆ ಸತ್ಯ
ಇನಿದು ದನಿಗಳಿಗಿಹುದು ಕಿವಿಯು
ಹೂವ ಜೇನಿನ ಸವಿಗೆ ತುಟಿಯು
ಸ್ಪರ್ಶ ಸುಖಕೀ ಒಡಲು ಮೀಸಲು
ಕೈಗೆ ದಕ್ಕುವ ಸುಖವೆ ಸತ್ಯ
ಕಾಣಬರುವುದೆ ಪರಮ ನಿತ್ಯ,
ಕಾಣದೆಲ್ಲವು ಬರಿಯ ಮಿಥ್ಯೆ.
ಎಂದೆ ನಂಬಿದ ನಮ್ಮ ಮಿತ್ರ

(ಎಂದು ಎರಡು ಭಾಗಗಳಲ್ಲಿ ನಿಲ್ಲುತ್ತಾರೆ.)

ಒಬ್ಬ : ಅದೋ ನಮ್ಮ ತಂದೆ ಇತ್ತಲೇ ಬರುತ್ತಿದ್ದಾನೆ. ಆತನ ಮುಖದಲ್ಲಿ ದುಗುಡದ ಮೋಡಗಳು ಕವಿದಿವೆ. ಪಾಪ! ಯಾವ ಸೈತಾನನ ಕೈಯ್ಯ ಗೊಂಬೆಯಾಗಿಯೋ ಆ ಪಾಪಿ ಹೆಣ್ಣಿನ ಬಲೆಗೆ ಬಿದ್ದ.

೨ ನೆಯವ: ಹೌದು! ಸಾಧಾರಣ ಸೈತಾನ ಅಲ್ಲ. ನಯ ನುಣುಪಿನ ರೇಶಿಮೆಯ ಬಲೆ ಹೆಣೆದು ತನ್ನ ಹೊಳೆವ ಕಣ್ಣುಗಳಿಂದ ಬಳುಕುವ ಬಳ್ಳಿ ಒಡಲಿಂದ, ನಗೆ ಮಿಂಚುವ ತುಟಿಗಳಿಂದ ಎಷ್ಟು ಚೆನ್ನಾಗಿ ಸೆಳೆದುಕೊಂಡಳು. ಮನೆಗೆ ಬಂದು ಹರಸಬೇಕೆಂದು ಪ್ರಾರ್ಥಿಸುವ ನೆಪದಲ್ಲಿ ಬರಿಸಿ ಕಾಮಕೂಪದಲಿ ಕೆಡವಿಕೊಂಡಳು.

೩ ನೆಯವ: ಏಯ್ ಸುಮ್ಮನಿರು. ಕನಸು ಕಾಣುತ್ತಲೇ ಬರುತ್ತಿದ್ದಾನೆ. ನಡೆಯಿರಿ. ನಾವಿಲ್ಲಿಂದ ಮರೆಯಾಗೋಣ.

(ಎಲ್ಲರೂ ಹೋಗುವರು.)

(ಪಾಲ್ ಪ್ರವೇಶಿಸುತ್ತಾನೆ. ಮುಖದಲ್ಲಿ ಉದ್ವಿಗ್ನತೆ. ತನ್ನಲ್ಲಿ ತಾನು ಮಾತನಾಡಿಕೊಳ್ಳುತ್ತಾನೆ.)

ಪಾಲ್ : (ತನ್ನಲ್ಲಿ ತಾನೇ) ಇದೇಕೇ ದೇವರೇ ನನ್ನನ್ನು ಹೀಗೆ ಹಿಂಸಿಸುತ್ತಿದ್ದೀಯೆ, ನಾನು ಮಾಡಿದ ತಪ್ಪಾದರೂ ಏನು? ನಾನೆಂದೂ ಯಾವ ಹೆಣ್ಣನ್ನೂ ಕಾಮುಕ ದೃಷ್ಟಿಯಿಂದ ನೋಡಿದವನಲ್ಲ. ಮನೆಗೆ ಬಂದು ಹರಸಬೇಕೆಂದು ಕೇಳಿಕೊಂಡ ಮಾರಿಯಾ ಪಾಸ್ಕಾಳನ್ನು ತಿರಸ್ಕರಿಸಬೇಕೆಂದೇ ಪ್ರಯತ್ನಿಸಿದೆ. ಆದರೆ ಆದರೆ ಆ ಹೆಣ್ಣಿನ ಕಣ್ಣುಗಳೇ ನನ್ನನ್ನು ತಿವಿಯುವಂತೆ ನೋಡುತ್ತಿವೆ ಎಂದೆನಿಸುತ್ತಿತ್ತು. ಅದರಿಂದ ತಪ್ಪಿಸಿಕೊಳ್ಳಲು ಯತ್ನಿಸಿದೆ. ಆ ಪತಿತ ಹೆಣ್ಣು ನನಗೆ ಮಾರಿಯಾ ಮಾಗ್ದಲೀನಳಂತೆ ಕಾಣಿಸಿದಾಗ ಕ್ರಿಸ್ತನಂತೆ ನಾನೂ ಅವಳನ್ನು ಕ್ಷಮಿಸಬೇಕೆಂದು ಯೋಚಿಸಿದೆ. ಅವಳನ್ನು ಉದ್ಧರಿಸಬೇಕೆಂದೇ ತೀರ್ಮಾನಿಸಿದ್ದೆ. ಆದರೆ.... ಆದರೆ ಆ ಹೆಣ್ಣು ಛಿ! ಛಿ!..... ಅವಳ ಕಣ್ಣುಗಳಲ್ಲಿ ಕಂಡದ್ದು ಈ ಮಣ್ಣಿನ ಬದುಕನ್ನು. ನನಗೆ ಸಂದಿಗ್ಧ.... ಇದೇ ಬದುಕಿನ ಅಸಲಿತನವಿರಬಹುದೇನೋ ಎನಿಸಿತು... ನನ್ನನ್ನು ಸಾವರಿಸಿಕೊಂಡೆ. ನಿಜವಾದ ಬ್ರಹ್ಮಚರ್ಯವನ್ನು ಸಾಧಿಸತೊಡಗಿದೆ.... ಆದರೆ ನನಗೆ ಯಾವುದೂ ಅರಿಯಲಾಗುತ್ತಿಲ್ಲ. ನನ್ನನ್ನು ನಾನು ವಂಚಿಸಿಕೊಳ್ಳುತ್ತಿರಬಹುದೆಂಬ ಅನುಮಾನ ಗಾಢವಾಯಿತು. ನನ್ನ ಹಿರಿಯರು, ನನ್ನ ತಂದೆಯವರಂತೆ ಪ್ರಬಲವಾದ ಸಹಜ ಪ್ರವೃತ್ತಿಗಳಿಗೆ ಸ್ಪಂದಿಸಲಾಗದ ನನ್ನ ಅಸಹಾಯಕತನಕ್ಕೆ ಯಾತನೆಯೇ ನನ್ನ ಪಾಲಿನ ಬುತ್ತಿಯಾಗಿದೆ. ಸಾಮಾನ್ಯ ಮನುಷ್ಯನಾಗಿ, ಸಾಮಾನ್ಯ ಮನುಷ್ಯನ ಸಹಜ ಬದುಕಿನ ಅನಿವಾರ್ಯ ಅಂಗಗಳಾದ

ಪ್ರೀತಿ, ಪ್ರೇಮ, ಸಂತೋಷಗಳನ್ನು ಅನುಭವಿಸಲಾಗದಂತೆ, ಮಾನವನ ಬದುಕಿನ ಸಹಜ ಗುರಿಯನ್ನು ಪರಿಪೂರ್ಣ ಮಾಡಿಕೊಳ್ಳಲಾಗದಂತೆ ನನಗೆ ವಿಧಿಸಿರುವ ಈ ನಿಷೇಧವೇ ನನ್ನ ಬದುಕಿಗೊಂದು ಉರುಲಾಗಿದೆ. ಪಾಸ್ಕಾಳಿಂದ ತಪ್ಪಿಸಿಕೊಂಡವನು ಏಗ್ನೀಸಳ ಬಲೆಗೆ ಬಿದ್ದೆ.

(ಹಿನ್ನೆಲೆಯಲ್ಲಿ 'ಫಾದರ್, ಫಾದರ್' ಎಂಬ ಕೂಗು ಕೇಳಿ ಬರುತ್ತದೆ. ಆ್ಯಂಟಿಯೋಕಸ್ ಆತುರದಲ್ಲಿ ಬರುತ್ತಿದ್ದಾನೆ)

**ಪಾಲ್ (ಪಾದ್ರಿ):** (ಗಾಬರಿಯಿಂದ) ಯಾರಿದು?.... ನನ್ನನ್ನೇ ಕೂಗುತ್ತಿರುವುದು (ಕೇಳಿಸಿಕೊಂಡು) ಹೌದು.... ಹೌದು ಯಾರೋ ಬರುತ್ತಿರುವಂತಿದೆ.

(ಆ್ಯಂಟಿಯೋಕಸ್‌ನ ಪ್ರವೇಶ)

**ಪಾಲ್ :** ಓಹ್ ಆ್ಯಂಟಿಯೋಕಸ್.........ನೀನೇಕೆ ಇಲ್ಲಿಗೆ ಬಂದೆ?

**ಆ್ಯಂಟಿಯೋಕಸ್:** ಫಾದರ್ ನಿಮ್ಮನ್ನೇ ನೆರಳಿನಂತೆ ಅನುಸರಿಸಬೇಕಾದವನು. ಜೊತೆಗೆ ಈ ದಿನ ತಾವೆಲ್ಲಿಗೋ ದೂರ ಪ್ರಯಾಣಕ್ಕೆ ಹೊರಡಬೇಕೆಂದಿದ್ದಿರಿ. ಅದನ್ನು ನೆನಪಿಸಲು ತಾಯಿಯವರಿಗೆ ಹೇಳಿದ್ದಿರಂತೆ. ನಾನು ಮನೆಯ ಕಡೆ ಹೊರಟಾಗ, ನೀವು ಆಗಲೇ ಅಲ್ಲಿಂದ ಹೊರಟು ಬಿಟ್ಟಿದ್ದರಿಂದ ನಿಮ್ಮನ್ನು ಕಂಡು ತಿಳಿಸಲು ಹೇಳಿದರು.

**ಪಾಲ್ :** ಹೌದು ಆ್ಯಂಟಿ. ನಾನು ಮರೆತಿದ್ದೆ. ಬೆಳಗಿನ ಈ ಸುಂದರ ವಾತಾವರಣ ನನ್ನನ್ನು ಆಕರ್ಷಿಸಿತು. ಹಕ್ಕಿಗಳ ಕಲರವದಿಂದ ಜೀವಂತಗೊಂಡ ಬೆಟ್ಟದ ಬದಿಯ ಕಾಡಿನ ಮರಗಳು!....ನೋಡು ಮುಂಜಾನೆಯ ಸೂರ್ಯನ ಬೆಳಕಿನಲ್ಲಿ ಫಳಫಳ ಹೊಳೆಯುತ್ತಿವೆ! ಹಿತವಾದ ಗಾಳಿಯ ಮೊರೆತವನ್ನು ಮೀರಿ ಚರ್ಚಿನ ಗಂಟೆಯ ಸದ್ದೂ ಎಷ್ಟು ಇಂಪಾಗಿ ಕೇಳಿಬರುತ್ತಿದೆಯಲ್ಲವೇ?

**ಆ್ಯಂಟಿಯೋ:** (ಬೆಕ್ಕಸಬೆರಗಾಗಿ) ಫಾಧರ್, ಇಂದೇಕೆ ನೀವು ಇಷ್ಟೊಂದು ಭಾವುಕರಾಗದ್ದೀರಿ? ಎರಡನೆ ಗಂಟೆ ಬಾರಿಸುತ್ತಿದೆ. ನಾವಿನ್ನು ಚರ್ಚಿಗೆ ಹೋಗಬೇಕಲ್ಲವೇ?

**ಪಾಲ್ :** ಹೌದು ಆ್ಯಂಟಿ. ನಡೆ ಮನೆಕಡೆ ಹೋಗಿ ಚರ್ಚಿನ ಉಡುಪನ್ನು ಧರಿಸಿ ಹೋಗೋಣ. ತಾಯಿ ನಮಗಾಗಿ ಕಾಯುತ್ತಿರಬಹುದು.

(ಇಬ್ಬರೂ ಹೋಗುವರು)

(ಚರ್ಚಿನ ದೃಶ್ಯ. ಬಣ್ಣಬಣ್ಣದ ಬಟ್ಟೆಗಳನ್ನು ಧರಿಸಿದ ನಾಗರಿಕರು ಚರ್ಚಿನ ಬೆಂಚುಗಳ ಮೇಲೆ ಕುಳಿತಿದ್ದಾರೆ. ಪಾದ್ರಿಯ ನಿರೀಕ್ಷೆಯಲ್ಲಿದ್ದಾರೆ. ಪಾದ್ರಿ ಪ್ರವೇಶಿಸುತ್ತಾ, ತನ್ನ ಒಂದೆ ಒಂದೆ ಬರುತ್ತಿದ್ದ ತಾಯಿಯನ್ನು ಪಕ್ಕಕ್ಕೆ ಕರೆದು ಏನನ್ನೋ ಹೇಳುತ್ತಾನೆ.)

ಪಾದ್ರಿ (ಪಾಲ್): ಅಮ್ಮ ಈ ಪತ್ರವನ್ನು ಅವಳಿಗೆ ತಲುಪಿಸಿಬಿಡು. ಎಚ್ಚರಿಕೆ! ಅವಳ ಕೈಗೇ ಸೇರಬೇಕು ಈ ಪತ್ರ ಕೊಟ್ಟ ಕೂಡಲೇ ಹಿಂದಿರುಗಿ ಬಂದುಬಿಡು. ಅವಳೊಂದಿಗೆ ನಿನ್ನ ಕಾಡು ಹರಟೆಗೆ ನಿಲ್ಲಬೇಡ.

ತಾಯಿ : ಆಯಿತು ಮಗು. ನೀನೆಂದಂತೆ ಅವಳನ್ನು ಕಂಡು ಇದನ್ನು ತಲುಪಿಸಿ ಬಿಡುತ್ತೇನೆ. ಇದಕ್ಕೆ ಅನುಮಾನ ಬೇಡ. ನಿಶ್ಚಿಂತನಾಗಿ ನಿನ್ನ ಪ್ರಾರ್ಥನೆಯನ್ನು ನೀನು ಮಾಡು. (ಹೊರಡುತ್ತಾಳೆ)

ಆ್ಯಂಟಿಯೋ: (ಪ್ರವೇಶಿಸಿ) ಫಾದರ್ ಎಲ್ಲರೂ ಬಂದಾಗಿದೆ. ನಿಮಗಾಗಿ ಒಳಗೆ ಕಾಯುತ್ತಿದ್ದಾರೆ.

ಪಾದ್ರಿ : ಆ್ಯಂಟಿ ನೀನು ಮುಂದೆ ನಡಿ. ಈಗಲೇ ಬರುತ್ತೇನೆ. (ಆ್ಯಂಟಿ ಹೊರಡಲು, ತನ್ನಷ್ಟಕ್ಕೆ).... ಅಮ್ಮ ಇನ್ನೇನು ಪತ್ರ ತಲುಪಿಸಿಬಿಡುತ್ತಾಳೆ. ನನ್ನ ತ್ಯಾಗ ಪೂರ್ಣಗೊಂಡಂತಾಗುತ್ತದೆ..... ಅವಳೀಗ ಪತ್ರವನ್ನು ಓದುತ್ತಿರಬಹುದು. ಆದರೆ ಈ ಪತ್ರದ ಪರಿಣಾಮ ಏನಾಗುವುದೋ! ಒಂದು ವೇಳೆ ಆ ಕೋಮಲವಾದ ಹೆಣ್ಣು ನನ್ನ ಕಠೋರ ನಿರ್ಧಾರಗಳ ಆಘಾತಕ್ಕೆ ಸಿಕ್ಕಿ ಕುಸಿದು ಬಿದ್ದರೆ?.... ಆ ಪಾಪಕ್ಕೆ ನಾನು ಹೊಣೆಯಾಗಬೇಕಾಗುವುದಲ್ಲವೆ?..... ಅಯ್ಯೋ ದೇವರೇ!..... ಎಂತಹ ಸಂದಿಗ್ಧಗಳನ್ನು ನನ್ನೆದುರಿಗೆ ತಂದು ಒಡ್ಡುತ್ತಿರುವೆ?.... ಅಸ್ವಸ್ಥವಾದ ಈ ಮನಸ್ಸು ನಿನಗೆ ಪ್ರಾರ್ಥನೆಯಾದರೂ ಸಲ್ಲಿಸುವುದು ಹೇಗೆ?..... ಬೇಡ, ಬೇಡ!.... ಈ ಆತ್ಮವಂಚನೆಯ ಕೆಲಸಗಳಲ್ಲಿ ನನ್ನನ್ನು ದೂಡಿ ಕೊಲ್ಲಬೇಡ.... ನನ್ನ ಕೈಯಲ್ಲಿ ಈ ಪಾದ್ರಿಯ ಕೆಲಸ ಸಾಧ್ಯವಿಲ್ಲ. ಧರ್ಮದ ಹಲ್ಲಣ ಹೊತ್ತು ಹೆಣಗುವುದನ್ನು ತಪ್ಪಿಸಿಕೊಳ್ಳುವ ಬಗೆಯಾದರೂ ಹೇಗೆ?... ನನಗೆ ಈ ಜನ, ಈ ಚರ್ಚು, ಈ ಪಾದ್ರಿ ಪಟ್ಟದಿಂದ ದೂರ..... ದೂರ ಓಡಿ ಹೋಗಬೇಕೆನಿಸುತ್ತಿದೆ.

(ಒಳಗಿನಿಂದ 'ಫಾದರ್ ಬೇಗ ಬನ್ನಿ, ಜನ ನಿಮಗಾಗಿ ಕಾಯುತ್ತಿದ್ದಾರೆ.' ಎಂದು ಕರೆಯುವುದು ಕೇಳಿ ಬರುತ್ತದೆ. ಪಾದ್ರಿ ಗುಂಗಿನಿಂದ ಹೊರಬಂದು, ಅಯ್ಯಯ್ಯೋ ತಡಮಾಡಿ ಬಿಟ್ಟೆ' ಎಂದು ಬಿರುಸಿನಿಂದ ಒಳಗೆ ಹೋಗುವನು.)

ಪಾದ್ರಿ : (ವೇದಿಕೆಯ ಮೇಲಿನಿಂದ ಜನರನ್ನು ಉದ್ದೇಶಿಸಿ)

ಪ್ರಿಯ ಬಂಧುಗಳೇ, ಇತ್ತೀಚೆಗೆ ಇಲ್ಲಿ ಬರುತ್ತಿರುವ ನಿಮ್ಮ ಸಂಖ್ಯೆ ಬಹಳ ಕಡಿಮೆಯಾಗುತ್ತಿದೆ. ದಿನದಿನಕ್ಕೆ ಬರುವವರು ಕಡಿಮೆಯಾಗುವುದನ್ನು ನೋಡಿ ನನಗೇ ನಾಚಿಕೆಯಾಗುತ್ತಿದೆ. ಕುರಿಗಳನ್ನು ಕಳೆದುಕೊಂಡ ಕುರುಬನಂತಾಗಿದೆ ನನ್ನ ಸ್ಥಿತಿ. ಭಾನುವಾರ ಮಾತ್ರವೇ ಚರ್ಚು ಸ್ವಲ್ಪ ತುಂಬಿರುತ್ತದೆ. ನಿಮಗೆ ಚರ್ಚಿನಲ್ಲಿ ನಂಬಿಕೆ ಕಡಿಮೆಯಾಗುತ್ತಿದೆ.

ದೇವರ ಭಯವೂ ಇಲ್ಲದಾಯಿತೇನೋ ಎನಿಸುತ್ತಿದೆ. ಹೆದರಿಕೆಯಿಂದಾಗಿಯೋ, ಅಭ್ಯಾಸಬಲದಿಂದಾಗಿಯೋ ಕೆಲವರು ಇಲ್ಲಿಗೆ ಬರುತ್ತಿದ್ದೀರಿ. ಅಮರರಾಗಲು ಇದು ಸಮಯ. ಕುಟುಂಬದ ತಾಯಂದಿರು ಅಥವಾ ಮುಂಜಾನೆಯೇ ಎದ್ದು ಕೆಲಸಕ್ಕೆ ಹೋಗಬೇಕಾದವರನ್ನು ದಿನಾ ಇಲ್ಲಿಗೆ ಬರಬೇಕೆಂದು ಒತ್ತಾಯಿಸುವುದಿಲ್ಲ; ಶಾಸಿಸುವುದಿಲ್ಲ. ಕೆಲಸಕ್ಕೆ ಹೋಗಬೇಕಾಗಿರುವ ಗಂಡಸರೂ ಇಲ್ಲಿಗೆ ಬರಲೇಬೇಕೆಂದು ನಾನು ನಿರೀಕ್ಷಿಸುವುದೂ ಇಲ್ಲ. ಆದರೆ ಮನೆಯಲ್ಲೇ ಉಳಿಯುವ ಯುವತಿಯರು, ವೃದ್ಧರು, ಮಕ್ಕಳು ಮೊದಲಾದವರು ದಿನವನ್ನು ದೇವರ ಸನ್ನಿಧಿಗೆ ಬಂದು ಆರಂಭಿಸಬೇಕೆಂದು ಬಯಸುತ್ತೇನೆ. ಆತನ ಮನೆಗೆ ಬಂದು ಆತನನ್ನು ಪ್ರಾರ್ಥಿಸಿ ಶಕ್ತಿ ಪಡೆದು ಸನ್ಮಾರ್ಗದಲ್ಲಿ ಹೆಜ್ಜೆ ಹಾಕಬೇಕು. ನಿಮ್ಮನ್ನು ಕಾಡುತ್ತಿರುವ ಬಡತನ ಮಾಯವಾಗುತ್ತದೆ. ದುಷ್ಟ ಹವ್ಯಾಸಗಳು, ದೈಹಿಕ ಆಮಿಷಗಳು ನಿಮಗೆ ತೊಂದರೆ ಮಾಡುವುದಿಲ್ಲ. ಭಾನುವಾರ ಮಾತ್ರವಲ್ಲ; ಪ್ರತಿದಿನಾ ನಿಮ್ಮನ್ನು ನಿರೀಕ್ಷಿಸುತ್ತೇನೆ. ನಾವೆಲ್ಲರೂ ಒಟ್ಟಿಗೆ ಪ್ರಾರ್ಥಿಸೋಣ. ದೇವರು ನಮ್ಮನ್ನೂ, ನಮ್ಮ ಈ ಹಳ್ಳಿಯನ್ನೂ ಕೈ ಬಿಡುವುದಿಲ್ಲ. ಕಾಯಿಲೆ ಕಸಾಲೆಗಳಿಂದ ನರಳುವ ಮತ್ತು ದುರ್ಬಲತೆಯಿಂದ ಬರಲಾಗದವರ ಪರವಾಗಿಯೂ ನಾವು ಪ್ರಾರ್ಥಿಸೋಣ.

(ಚರ್ಚಿನಲ್ಲಿ ಹೆಪ್ಪುಗಟ್ಟಿದ ಮೌನ. ಪಾಲ್ ಮತ್ತು ಪಾರುಪತ್ತೇಗಾರ ಹುಡುಗ ಆ್ಯಂಟಿಯೋಕಸ್ ತೀಕ್ಷ್ಣವಾದ ಆಸಕ್ತಿಯಿಂದ ನೋಡುತ್ತಾರೆ. ಅಷ್ಟರಲ್ಲಿ ಒಬ್ಬ ಹೆಂಗಸು ಪಾದ್ರಿಯನ್ನು ಸಮೀಪಿಸಿ)

**ಹೆಂಗಸು** : ತಂದೆ, ಕಿಂಗ್ ನಿಕೋಡಿಮಸ್ ಅತ್ಯಂತ ಕರುಣಾಜನಕ ಸ್ಥಿತಿಯಲ್ಲಿದ್ದಾನೆ. ಆತನ ಆತ್ಮನಿವೇದನೆಯನ್ನು ಕೇಳಲು ತಾವು ಬರಬೇಕು.

**ಪಾದ್ರಿ** : ಯಾರು ಈ ಕಿಂಗ್ ನಿಕೋಡಿಮಸ್? ಬೆಟ್ಟದ ತುದಿಯಲ್ಲಿ ವಾಸವಾಗಿರುವ ಆ ಅದ್ಭುತ ಬೇಟೆಗಾರನೇನು?

**ಹೆಂಗಸು** : ಹೌದು ತಂದೆ. ಆತನನ್ನು ನೋಡಲು ನೀವು ಬೆಟ್ಟವೇರುವ ಶ್ರಮಪಡಬೇಕದ್ದಿಲ್ಲ. ಆತನ ಬಂಧುಗಳು ಅತನನ್ನು ಹಳ್ಳಿಗೇ ಕರೆ ತಂದಿದ್ದಾರೆ.

**ಪಾದ್ರಿ** : ಆಗಲಿ ತಾಯಿ. ನೀನು ಹೊರಡು.

**ಪಾದ್ರಿ** : (ಜನರ ಕಡೆ ತಿರುಗಿ) ಬಂಧುಗಳೇ ನಾ ಹೇಳಿದ್ದು ನಿಮಗೆ ನೆನಪಿರಲಿ. ನಿಮಗೆ ಅವಕಾಶವಾದಾಗಲೆಲ್ಲ ಆ ಕರುಣಾಮಯಿ ಭಗವಂತನನ್ನು

ಪ್ರಾರ್ಥಿಸಬೇಕು. ಈ ನೀರು, ಈ ಗಾಳಿ, ಈ ಬದುಕು ಎಲ್ಲವೂ ಆತನ ಕರುಣೆಯ ಫಲ. ಇದನ್ನು ಮರೆಯಬೇಡಿ. ಇಂದಿಗಿಷ್ಟು ಸಾಕು ನೀವು ಪ್ರಾರ್ಥನೆ ಮುಗಿಸಿ. ದೇವರು ಒಳ್ಳೆಯದು ಮಾಡಲಿ. ಅಮೆನ್.

(ಪಾದ್ರಿ ಹೊರಪುತ್ತಾನೆ. ಜನ ಗುಜು ಗುಜು ಸದ್ದಿನೊಂದಿಗೆ ಚದುರುತ್ತಾರೆ. ಕೊನೆಯ ಬೆಂಚಿನ ಮೇಲ ಚಿಂತಾಮಗ್ನಳಾಗಿ ಕುಳಿತಿರುವ ತಾಯಿಯ ಬಳಿಗೆ ಹೋಗಿ ನಿಲ್ಲುತ್ತಾನೆ. ಮಗನ ಹೆಜ್ಜೆ ಸಪ್ಪಳ ಕೇಳಿ ತಾಯಿ ತಲೆ ಎತ್ತುತ್ತಾಳೆ.)

**ತಾಯಿ** : ಪಾಲ್, ಅಲ್ಲಿಗೆ ಹೋಗುವ ಮೊದಲು ಮನೆಗೆ ಬಂದು ಚಹಾ ಕುಡಿದು ಹೋಗು.

**ಪಾದ್ರಿ** : ಆಗಲಿ. ಸಾಧ್ಯವಾದರೆ ಬರುತ್ತೇನೆ. ನಾನು 'ಚಹ' ಕ್ಕೆಂದು ತಡಮಾಡಿದರೆ ಸಾವು. ನಿಕೋಡಿಮಸ್‌ನ ಆತ್ಮನಿವೇದನೆ ಆಗುವವರೆಗೂ ಕಾಯುವುದಿಲ್ಲ.

**ಆ್ಯಂಟಿಯೋಕಸ್**: ಹೋಗಲಿ ಬಿಡಿ ಅಮ್ಮ. ಪಾದ್ರಿ ಅಂದಮೇಲೆ ಎಲ್ಲಕ್ಕೂ ಒಗ್ಗಿಕೊಳ್ಳಬೇಕು. (ಎಂದು ಸುಮ್ಮನಾಗುವನು. ಮತ್ತೆ ಎರಡು ಗಳಿಗೆಯ ನಂತರ ತನ್ನಲ್ಲಿ ತಾನೇ) ಫಾದರ್ ನನ್ನ ಮೇಲೆ ಕೋಪಗೊಂಡಿರಬೇಕು. ನಾನು ಸರಿಯಾಗಿ ಕೆಲಸ ಮಾಡುತ್ತಿಲ್ಲವೆಂದಿರಬೇಕು. ಆದರೆ ನಾನು ಹಾಗೆಂದು ತಿಳಿಯುವುದು ಸರಿಯಲ್ಲ....ಅವರು ಉಪದೇಶ ಮಾಡುತ್ತಿದ್ದಾಗ ನನಗೇ ನಗು ಬರುತ್ತಿತ್ತು. ಯಾಕೆಂದರೆ ಅವರ ಉಪದೇಶ ಯಾರಿಗೂ ಅರ್ಥವಾದಂತೆ ಕಾಣಲಿಲ್ಲ. ಸ್ವಲ್ಪವಾದರೂ ಹೇಳಿದ್ದು ಅವರ ತಲೆಗೆ ಹೋಗಿದ್ದರೆ ನನ್ನ ಮೇಲಾಣೆ. ಸುಮ್ಮನೆ ಬಾಯಿಬಿಟ್ಟುಕೊಂಡು ಕುಳಿತಿದ್ದರು, ಅಷ್ಟೇ....! ಆ ಮಾರ್ಕೋಪನಿಜ್ಜಾ ಇದ್ದಾನಲ್ಲ, ಈಸ್ಟರ್ ಮತ್ತು ಕ್ರಿಸ್‌ಮಸ್ ದಿನಗಳನ್ನು ಬಿಟ್ಟರೆ ಮುಖ ತೊಳೆಯುವುದೇ ಇಲ್ಲ. ಆದರೆ ಇನ್ನು ಮೇಲೆ ದಿನಾ ಮುಖ ತೊಳೆದುಕೊಂಡು ಚರ್ಚಿಗೆ ಬರುತ್ತಾರೆ. ಬಡತನ ದೂರವಾಗುತ್ತೇಂತ ಫಾದರ್ ಹೇಳಿರುವುದರಿಂದ ಖಂಡಿತ ಬರುತ್ತಾರೆ"

**ತಾಯಿ** : (ಕೇಳಿಸಿಕೊಂಡು) ಹೂಂ! ಬಡತನ! ಆತ್ಮಕ್ಕೆ ಅಂಟಿದ ಬಡತನ.

**ಪಾದ್ರಿ** : ಅಮ್ಮ ಇನ್ನು ನೀನು ಮನೆಗೆ ನಡೆ. ನಾನು ಒಳಗೆ ಹೋಗಿ ಉಡುಪು ಬದಲಾಯಿಸಿಕೊಂಡು ನಿಕೋಡಿಮಸ್‌ನನ್ನು ಕಾಣಲು ಹೋಗುತ್ತೇನೆ.

**ತಾಯಿ** : ಮಗು ಪಾಲ್. ಬೆಳಗಿನಿಂದ ಏನನ್ನೂ ತಿಂದಿಲ್ಲ. ಒಂದು ಗಳಿಗೆ ಮನೆಗೆ ಬಂದು ಚಹವನ್ನಾದರೂ ಕುಡಿದು ಹೋಗು. ಓಂತಿರುಗುವುದು ಎಷ್ಟು ಹೊತ್ತಾಗುವುದೋ.....! ಆ್ಯಂಟೀ ನೀನೂ ಬಂದು ಹೋಗು.

**ಪಾದ್ರಿ** : ಅಮ್ಮ ಈ ದಿನ ನನ್ನನ್ನು ಒತ್ತಾಯ ಮಾಡಬೇಡ. ನನಗೇಕೋ ಮನಸ್ಸು ಸರಿಯಿಲ್ಲ. ನೀನು ಹೋಗು. ನಾನು ಹೋಗಿ ಬಟ್ಟೆ ಬದಲಾಯಿಸಿಕೊಂಡು ಹೊರಡುತ್ತೇನೆ. ಆ್ಯಂಟಿಯೂ ನಿನ್ನೊಟ್ಟಿಗೆ ಬರುತ್ತಾನೆ. ಆ್ಯಂಟೀ ಅಮ್ಮನ ಜೊತೆಗೆ ನೀನೂ ಹೋಗು. (ಎಂದು ಆ್ಯಂಟಿಗೆ ಆದೇಶಿಸುತ್ತಾನೆ)

**ಆ್ಯಂಟಿ** : (ಸಂಕೋಚದಿಂದ) ಫಾದರ್, ನಾನೂ ನಿಮ್ಮೊಂದಿಗೆ ಬರುತ್ತೇನೆ. ನಿಮಗೆ ನನ್ನ ಸಹಾಯ ಬೇಕಾಗಬಹುದು. ಅಲ್ಲದೆ ನಿಮ್ಮ ಜೊತೆಗೇ ಇದ್ದರೆ ನಾನೂ ಎಲ್ಲವನ್ನೂ ಕಲಿಯಬಹುದು. ನೀವು ಹೇಳಿದ ಕೆಲಸವನ್ನು ಮಾಡುತ್ತೇನೆ. ನನ್ನನ್ನು ಮಾತ್ರ ಬಿಟ್ಟು ಹೋಗಬೇಡಿ.

**ತಾಯಿ** : ಹೌದು ಪಾಲ್. ಅವನೂ ಬರಲಿ. ನಿನಗೆ ಜೊತೆಯಾಗಿ ಇರುತ್ತಾನೆ, ಅವನ ಆಸೇನೊ ಪೂರೈಸುತ್ತೆ. ಪಾಪದ ಮಗು!!

**ಪಾದ್ರಿ** : ಸರಿ ಆಯಿತು. ಆ್ಯಂಟಿ ಹಾಗಾದರೆ ಬೇಗ ಒಳಗೆ ಹೋಗಿ ಉಗ್ರಾಣದ ಬಾಗಿಲು ತೆಗಿ. ನಾನೂ ಬಂದುಬಿಡುತ್ತೇನೆ. ಉಡುಪನ್ನು ಬದಲಾಯಿಸಿಕೊಂಡು ಬೇಗನೇ ಹೊರಟು ಬಿಡೋಣ. ಇಲ್ಲವಾದರೆ ತಡವಾದೀತು.

**ಆ್ಯಂಟಿ** : (ಗೆಲುವಿನಿಂದ) ಆಯ್ತು ಫಾದರ್. ಇದೋ ಈಗಲೇ ಹೊರಟೆ (ಎಂದು ಕೆನೆಯುತ್ತ ಹೋಗುವನು)

**ಪಾದ್ರಿ** : ಇನ್ನು ನೀನು ನಡಿ ಅಮ್ಮ. ಗೇಟಿನವರೆಗೆ ನಿನ್ನನ್ನು ಕಳಿಸಿ ಬರುತ್ತೇನೆ. ನಡೆ ಹೋಗೋಣ.

(ಪಾದ್ರಿ ಮತ್ತು ತಾಯಿ ಹೋಗುವರು.)

೦೦

# ದೃಶ್ಯ – ೪

(ಅಡುಗೆ ಕೋಣೆ. ತಾಯಿ ಒಲೆಯ ಮೇಲೆ ಒಂದು ಕೆಟಲ್ ಇಟ್ಟು ಅದರ ಮುಂದೆ ಯೋಚನಾಮಗ್ನಳಾಗಿ ತನ್ನೆರಡು ಕೈಗಳ ಮೇಲೆ ಗಲ್ಲವನ್ನೂರಿ ಕುಕ್ಕರಗಾಲಿನಲ್ಲಿ ಕುಳಿತಿದ್ದಾಳೆ. ಅಡುಗೆಮನೆಯ ಮತ್ತೊಂದು ತುದಿಯಲ್ಲಿ ಪುಟ್ಟ ಮೇಜು. ಅದರ ಸುತ್ತಲೂ ನಾಲ್ಕು ಕುರ್ಚಿಗಳಿವೆ. ಒಂದರ ಮೇಲೆ ಆ್ಯಂಟಿಯೋಕಸ್ ಕುಳಿತು ಬೆರಳುಗಳಿಂದ ಕುರ್ಚಿಯನ್ನು ತಟ್ಟಿ, ಮತ್ತೆ ಮೇಜಿನ ಮೇಲೆ ಲಯಬದ್ಧವಾಗಿ ಬೆರಳುಗಳಿಂದ ತಾಳ ಹಾಕುತ್ತಾನೆ. ಆ್ಯಂಟಿಯೋಕಸ್‌ನ ಪರಿವೆಯೇ ಇಲ್ಲದಂತೆ ತಾಯಿ ಭಾವನಾಪರವಶತೆಯಲ್ಲಿ ಮುಳುಗಿದ್ದಾಳೆ.)

ಆ್ಯಂಟಿ : ಅಮ್ಮ......ಅಮ್ಮ......ಪಾದ್ರಿಯವರು ನನ್ನ ಮೇಲೆ ಸಿಟ್ಟುಗೊಂಡಿರಬೇಕಲ್ಲ?

ತಾಯಿ : (ಅವನ ಕರೆಗೆ ಮೆಲ್ಲನೆ ಸ್ಪಂದಿಸುತ್ತ ನಕ್ಕು) ಹಾಗೇಕೆ ಯೋಚಿಸುತ್ತೀ ಆ್ಯಂಟಿ? ನಿನಗೆ ಹಾಗೆ ಕಾಣಿಸಿದರೇನು?

ಆ್ಯಂಟಿ : ಚರ್ಚಿನಲ್ಲಿ ನಾನು ಸಾಕಷ್ಟು ಗಮನಕೊಡುವುದಿಲ್ಲ ಎಂದು ಬಯ್ದರೆ?!.....ನನಗನಿಸುತ್ತೆ, ಇನ್ನು ಹೆಚ್ಚು ಕಾಲ ಅವರು ನನ್ನನ್ನು ಪಾರುಪತ್ತೆಗಾರನಾಗಿ ಇರಿಸಿಕೊಳ್ಳುವುದಿಲ್ಲ ಅಂತ.

ತಾಯಿ : ನಿನಗೆ ಈ ಅನುಮಾನಗಳೆಲ್ಲ ಹೇಗೆ ಬರುತ್ತವೆ ಆ್ಯಂಟಿ?.........ಹಾಗೇನೂ ಆಗುವುದಿಲ್ಲ. ಸುಳ್ಳೇ ಅದನ್ನೆಲ್ಲ ಯೋಚಿಸಬೇಡ.

ಆ್ಯಂಟಿ : ಇಲ್ಲಮ್ಮ.......ಯಾಕೊ ನನಗೆ ಅನುಮಾನ ಬರುತ್ತಿದೆ.......ಇಲಾರಿಯೋ ಪನಿಜ್ಜಾನನ್ನೇ ಆರಿಸಿಕೊಳ್ಳಬಹುದೂಂತ ನನಗೆ ಅನಿಸ ಹತ್ತಿದೆ. ಆದರೆ ಇಲಾರಿಯೋಗೆ ವಿದ್ಯೆಯ ಗಂಧವೇ ಇಲ್ಲ. ಜೊತೆಗೆ ಅವನು ಮಹಾ ಕೊಳಕ. ಯಾವಾಗಲೂ ಅವನ ಬಳಿ ನಾತ ಬಡೀತಿರುತ್ತೆ......ನನ್ನನ್ನು ನಿಜವಾಗಿಯೂ ಕಳಿಸಿಬಿಡಬಹುದಲ್ಲ?

ತಾಯಿ : ಛೆ! ಛೆ! ಅಂಥಾದ್ದೇನೂ ಇರಲಾರದು. ನೀನು ಸರಿಯಾಗಿ ಗಮನವಿಟ್ಟು ಕೇಳಬೇಕು; ಕೆಲಸ ಮಾಡಬೇಕು. ಚರ್ಚಿನಲ್ಲಿ ಪ್ರಾರ್ಥನೆ. ಉಪದೇಶ

ನಡೆಯುವಾಗ ಗಂಭೀರವಾಗಿರಬೇಕು. ಸುಮ್ಮನೆ ನಗಬಾರದು. ಇದನ್ನೆಲ್ಲ ನೀನು ಕಲಿಯಬೇಕೆಂಬುದೇ ಅವನ ಆಸೆ. ಅದಕ್ಕೆ ಅವನು ನಿಷ್ಠುರವಾಗಿರುತ್ತಾನೆ.

**ಆ್ಯಂಟಿ** : ಇಲ್ಲ ಅಮ್ಮ ನಿನಗೆ ತಿಳಿದಿಲ್ಲ. ಅವರು ಕೋಪಗೊಂಡಿದ್ದಾರೆ. ನಿನ್ನೆ ರಾತ್ರಿ ಸರಿಯಾಗಿ ನಿದ್ದೆ ಮಾಡಿದಂತಿಲ್ಲ....ಅಬ್ಬ ನಿನ್ನೆ ರಾತ್ರಿ ಅದೇನು ಭಯಂಕರ ಗಾಳಿ....!! ಹೌದಲ್ಲವೇ ಅಮ್ಮ?

**ತಾಯಿ** : (ಸ್ವಗತ) ಅಬ್ಬ! ಈ ಮರಿ ಪಿಶಾಚಿಗೆ ಇದೆಲ್ಲ ಹೇಗೆ ತಿಳಿಯುತ್ತದೆ.........? ನನಗಂತೂ ಎಲ್ಲವು ಮುಗಿದಂತೆನಿಸುತ್ತದೆಯಾದರೂ ಈಗತಾನೇ ಎಲ್ಲವೂ ಪ್ರಾರಂಭವಾಗಿದೆ.... ಪ್ರಾರ್ಥನಾ ವೇದಿಕೆಯಿಂದ ಅವನು ಹೇಳಿದ್ದೇನು......? 'ಎಲ್ಲರೂ ಬೇಗ ಏಳಬೇಕು, ಎದ್ದು ಮುಖ ತೊಳೆದುಕೊಳ್ಳಬೇಕು. ಮುಂದೆ ಮುಂದೆ ಹೋಗಬೇಕು' ಎಂದಲ್ಲವೇ? ಹೌದು ಈಗೀಗ ಎಲ್ಲವೂ ಸ್ಪಷ್ಟವಾಗುತ್ತಿದೆ........ ಆದರೆ.... ಆದರೆ..... ಒಂದು ಮಾತ್ರ ನನಗೆ ಅರ್ಥವಾಗುತಿಲ್ಲ.... ಪಾದ್ರಿಗಳಿಗೆ ಮದುವೆಯ ನಿಷೇಧವೇಕೆ?........ ಅವರೂ ಎಲ್ಲರಂತೆ ಮನುಷ್ಯರಲ್ಲವೇ?....ಅವರಿಗೆ ಸಂವೇದನೆಗಳು ಇರುವುದಿಲ್ಲವೇ?.... ಛಿ! ಛಿ...! ನಾನೇನು ಯೋಚಿಸುತ್ತಿದ್ದೇನೆ...! ಎಲ್ಲ ಅಸಂಬದ್ಧ ಆಲೋಚನೆಗಳು!.... ನನಗೇನಾಗಿದೆ? ನನಗೇನಾಗಿದೆ?

**ಆ್ಯಂಟಿ** : ಅಮ್ಮ! ಅಮ್ಮ! ಇದೇನು ಮಾಡುತ್ತಿದ್ದೀರಿ? ನಾನು ಮಾತಾಡಿಸುತ್ತಿದ್ದರೂ ನೀವು ಮಾತೇ ಆಡದೆ ಏನನ್ನೋ ಯೋಚಿಸುತ್ತಾ ಕೂರುತ್ತೀರಿ. ಅವರು ಮನೆಗೆ ಬಂದು ಚಹ ಕುಡಿದಿಲ್ಲವೆಂದು ಇಷ್ಟೊಂದು ಚಿಂತೆಯೇ?

**ತಾಯಿ** : (ಬೆಚ್ಚಿ) ಇಲ್ಲ ಆ್ಯಂಟಿ....... ಇಲ್ಲ..... ಬೇರೇನನ್ನೋ ನೆನಪು ಮಾಡಿಕೊಳ್ಳುತ್ತಿದ್ದೆ.

**ಆ್ಯಂಟಿ** : (ನಗುತ್ತ) ಅಮ್ಮ ನನಗೆ ತಿಳಿಯುತ್ತದೆ. ನೀವು ಸುಳ್ಳು ಹೇಳುತ್ತಿದ್ದೀರಿ. ನಿಮಗೆ ನಿಮ್ಮ ಮಗನ ಮೇಲೆ ತುಂಬ ಪ್ರೀತಿ. ಅವರು ಹಸಿದಿದ್ದರೆ ನಿಮಗೆ ತಡೆಯುವುದಕ್ಕೆ ಆಗುವುದಿಲ್ಲ. ಹೆಂಗಸರ ಆತ್ಮ ನಿವೇದನೆಗಳನ್ನು ಕೇಳುತ್ತಾ ಕೂತು ತಡವಾದರೆ ನೀವೇ ಚಹಾ ತೆಗೆದುಕೊಂಡು ಹೋಗಿ ಕೊಡುತ್ತಿದ್ದರಲ್ಲವೇ? ಈ ದಿನವೂ ಹಾಗೇ ಮಾಡಬೇಕಿತ್ತು. ಈಗ ಅವರು ಹಸಿವಿನಿಂದ ಸಾಕಷ್ಟು ಚಡಪಡಿಸುತ್ತಿರಬೇಕು.

**ತಾಯಿ** : ಅಷ್ಟು ಅವಸರದಲ್ಲಿ ಹೋಗಬೇಕಾಗುತ್ತದೇಂತ ನನಗೇನು ಗೊತ್ತಿತ್ತು? ಆ ಮುದುಕ ಇನ್ನೂ ಸತ್ತಿಲ್ಲವೆಂದು ಕಾಣುತ್ತೆ.

**ಆ್ಯಂಟಿ** : ಇಲ್ಲ ಅಮ್ಮ. ಪಾದ್ರಿಯವರು ನನ್ನನ್ನು ಅದಕ್ಕೆಂದೇ ಕಳಿಸಿಬಿಟ್ಟರು. ಅವರೊಟ್ಟಿಗೆ ನಾನೂ ಕಾಯುವುದು ಬೇಡ ಅಂದರು. ಅಮ್ಮ ಅವನು

ಸಾಯುತ್ತಿರುವುದು 'ನಿಜಾಂತ' ಅನಿಸುವುದಿಲ್ಲ. ಆದರೆ ಅವನ ಮೊಮ್ಮಕ್ಕಳು ಅವನು ಸಾಯಲಿ ಎಂದು ಬಹಳ ನಿರೀಕ್ಷೆಯಲ್ಲಿ ಕಾದು ಕುಳಿತಿದ್ದಾರೆ. ಅವನ ಹತ್ತಿರ ಬೇಕಾದಷ್ಟು ದುಡ್ಡಿದೆ, ಅದಕ್ಕೇ ಅವರೆಲ್ಲ ಹದ್ದುಗಳ ಹಾಗೆ ಕಾದು ಕೂತಿದ್ದಾರೆ..... ಆ ಮುದುಕನನ್ನು ನಾನು ಚೆನ್ನಾಗಿ ಬಲ್ಲೆ. ನನ್ನ ತಂದೆ ಜೊತೆ ಬೆಟ್ಟದ ಮೇಲೆ ಹೋದಾಗ ಒಮ್ಮೆ ನಾನು ಅವನನ್ನು ನೋಡಿದ್ದೆ. ಬಿಸಿಲಿನಲ್ಲಿ ಬಂಡೆಗಳ ನಡುವೆ ಆತ ಕೂತಿದ್ದ. ಒಂದು ನಾಯಿ ಮತ್ತು ಪಳಗಿದ ಹದ್ದು ಅವನ ಬಳಿ ಇದ್ದವು. ಅವನ ಸುತ್ತ ಸತ್ತು ಬಿದ್ದ ಎಂತೆಂಥದೋ ಪ್ರಾಣಿಗಳು....ಛಿ! ಛಿ! ಅಸಹ್ಯ! ಹೀಗೆ ಬದುಕಬೇಕೆಂದು ದೇವರು ಹೇಳುವುದಿಲ್ಲ.

**ತಾಯಿ** : (ಆಶ್ಚರ್ಯ, ಕುತೂಹಲಗಳಿಂದ) ಹಾಗಾದರೆ ಮತ್ತೆ ಹೇಗೆ ಬದುಕಬೇಕೆಂದು ದೇವರು ಹೇಳುತ್ತಾನೆ?

**ಆ್ಯಂಟಿ** : ಜನರ ಜೊತೆ ಬದುಕು. ತಾನು ಕೊಟ್ಟಿರುವ ಭೂಮಿಯನ್ನು ಉತ್ತು ಬಿತ್ತು ಬೆಳಸು. ಚೆನ್ನಾಗಿ ದುಡಿ. ಸಂಪಾದಿಸಿದ ಹಣವನ್ನು ಬಚ್ಚಿಡದೆ ಅದನ್ನು ಬಡವರಿಗೆ ಹಂಚು ಎಂದು ಆತ ಆಜ್ಞಾಪಿಸುತ್ತಾನೆ.

**ತಾಯಿ** : (ಪ್ರೀತಿ ತುಂಬಿಬಂದು) ಆ್ಯಂಟಿ.........ಆ್ಯಂಟಿ.......ನೀನೊಬ್ಬ ಪುಟ್ಟ ಸಂತನಂತೆಯೇ ಮಾತಾಡಲು ತೊಡಗಿರುವೆ. ಆದರೆ ಬೆಳೆದು ದೊಡ್ಡವನಾದ ಮೇಲೆ ನೋಡಬೇಕು. ನೀನೇನು ಮಾಡುತ್ತಿ ಎಂದು. ಹಣವನ್ನು ಹಂಚಿ ಕೊಡುತ್ತೀಯೋ ಅಥವಾ ನನಗೇ ಬೇಕೆಂದು ನಿನ್ನಲ್ಲೇ ಇಟ್ಟುಕೊಳ್ಳುತ್ತೀಯೋ, ಕಾದು ನೋಡಬೇಕು.

**ಆ್ಯಂಟಿ** : ನಾನೆಂದೂ ಸುಳ್ಳು ನುಡಿಯುವುದಿಲ್ಲ. ದೇವರ ಆದೇಶದಂತೆಯೇ ನಡೆದುಕೊಳ್ಳುತ್ತೇನೆ. ನನ್ನ ಬಳಿ ಇರುವ ಹಣವನ್ನೆಲ್ಲ ಕೊಟ್ಟು ಬಿಡುತ್ತೇನೆ. ಬಡಬಗ್ಗರಿಗೆ. ನನಗೂ ಬೇಕಾದಷ್ಟು ಹಣ ಬರುತ್ತದೆ. ನನ್ನಮ್ಮ ಖಾನಾವಳಿ ನಡೆಸುತ್ತಲೇ ಚೆನ್ನಾಗಿ ದುಡ್ಡು ಮಾಡಿದ್ದಾಳೆ. ಅರಣ್ಯ ಕಾವಲುಗಾರನಾಗಿ ನನ್ನ ತಂದೆಯೂ ಸಾಕಷ್ಟು ಸಂಪಾದಿಸಿದ್ದಾನೆ. ಹಾಗಾಗಿ ನನ್ನ ಪಾಲಿಗೆ ಬೇಕಾದಷ್ಟು ಆಸ್ತಿ ಬರುತ್ತದೆ. ಆದರೆ ನಾನು ಮಾತ್ರ ಅದಕ್ಕೆ ಆಸೆ ಪಡದೆ ಅದೆಲ್ಲವನ್ನೂ ಬಡಬಗ್ಗರಿಗೆ ಹಂಚಿಬಿಡುತ್ತೇನೆ. ದೇವರು ಹೇಳುವುದು ಇದನ್ನೇ! ,ನಮಗೆ ಬೇಕಾದ್ದೆಲ್ಲವನ್ನೂ ದೇವರೇ ನಮಗೆ ಕೊಡುತ್ತಿರುವಾಗ ನಾವೇಕೆ ನಮ್ಮದೆಂದು, ನಮಗೆಂದು ಬಚ್ಚಿಟ್ಟುಕೊಳ್ಳಬೇಕು? ಪಶು, ಪಕ್ಷಿ, ಪ್ರಾಣಿಗಳೆಲ್ಲ ಉತ್ತುವುದೂ ಇಲ್ಲ ಬಿತ್ತುವುದೂ ಇಲ್ಲ. ಆದರೂ ದೇವರು ಅವುಗಳಿಗೆಲ್ಲ ಆಹಾರ ಕೊಡುವುದಿಲ್ಲವೇ?

**ತಾಯಿ** : ಆ್ಯಂಟಿ ನೀನು ಹೇಳುವುದೆಲ್ಲವನ್ನೂ ಸರಿ ಎಂದೇ ಒಪ್ಪಿಕೊಳ್ಳುತ್ತೇನೆ. ಇದೆಲ್ಲ ಗಂಡಸು ಒಬ್ಬನೇ ಇದ್ದಾಗ ಸರಿ. ಆದರೆ ಅವನಿಗೆ ಹೆಂಡತಿ ಮಕ್ಕಳು ಇದ್ದರೆ?

**ಆ್ಯಂಟಿ** : ಹೆಂಡತಿ, ಮಕ್ಕಳ ಪ್ರಶ್ನೆಯೇ ಇಲ್ಲ. ಹೆಂಡತಿ ಇದ್ದರೆ ತಾನೇ ಮಕ್ಕಳ ಚಿಂತೆ? ನಾನು ಮದುವೆಯನ್ನೇ ಆಗುವುದಿಲ್ಲ. ಪಾದ್ರಿಗಳಿಗೆ ಮದುವೆಯೂ ಇಲ್ಲ; ಮಕ್ಕಳೂ ಇಲ್ಲ!

**ತಾಯಿ** : (ಉಮ್ಮಳ, ಉದ್ವೇಗಗಳಿಂದ) ಆ್ಯಂಟಿ ನೀನು ಪಾದ್ರಿಯಾಗಲೇಬೇಕೆಂದು ನಿಶ್ಚಯಿಸಿಬಿಟ್ಟಿದ್ದೀ ಏನೋ?

**ಆ್ಯಂಟಿ** : (ನಿರುದ್ವಿಗ್ನತೆಯಿಂದ) ಹೌದು. ಅದರಿಂದ ತೊಂದರೆ ಏನಾದರೂ ಇದೆಯೇ ಅಮ್ಮ? ದೇವರ ಇಚ್ಛೆ ಇದೇ ಆಗಿದ್ದರೆ, ತಪ್ಪಿಸಲು ನಮಗೆ ಹೇಗೆ ಸಾಧ್ಯ?

**ತಾಯಿ** : ಪಾದ್ರಿಗಳು ಮದುವೆಯಾಗಬಾರದೆಂದು ನಿಯಮವಿದೆ. ಅಂಥಾದ್ದರಲ್ಲಿ ಪಾದ್ರಿಯಾದ ಮೇಲೆ ನಿನಗೆ ಎಂದಾದರೂ ಒಂದು ದಿನ ಮದುವೆ, ಹೆಂಡತಿ ಬೇಕೆನಿಸಿದರೆ?

**ಆ್ಯಂಟಿ** : ಅದಕ್ಕೇ ದೇವರು ನಿಷೇಧಿಸಿರುವುದು. ದೇವರು ಬಯಸದ್ದನ್ನು ನಾನೆಂದೂ ಮಾಡುವುದಕ್ಕೆ ಹೋಗುವುದಿಲ್ಲ. ಅದು ನನಗೂ ಸರಿಯೆನಿಸುವುದಿಲ್ಲ.

**ತಾಯಿ** : ದೇವರು?...ದೇವರಲ್ಲ ಮದುವೆಯನ್ನು ನಿಷೇಧಿಸಿರುವುದು. ಇಂಥಾದ್ದನ್ನು ಮಾಡಬಾರದು. ಇಂಥಾದ್ದನ್ನು ಮಾಡಬೇಕು ಎಂದು ವಿಧಿಸಿರುವುದು ಪೋಪರು.

**ಆ್ಯಂಟಿ** : ಇರಬಹುದು. ಆದರೆ ಪೋಪರು ದೇವರ ಪ್ರತಿನಿಧಿ. ಅವರೇ ನಮಗೆ ಈ ಭೂಮಿಯ ಮೇಲಿನ ದೇವರು. ಮೇಲಿನ ದೇವರೇ ಇವರ ಮೂಲಕ ಮಾತನಾಡುತ್ತಾರೆ.

**ತಾಯಿ** : ಆದರೆ ಹಿಂದೆ, ಒಂದು ಕಾಲದಲ್ಲಿ ಈ ಪ್ರಾಟೆಸ್ಟೆಂಟ್ ಪಾದ್ರಿಗಳಂತೆ ನಮ್ಮ ಪಾದ್ರಿಗಳಿಗೂ ಮದುವೆ, ಸಂಸಾರ ಇರುತ್ತಿತ್ತು.

**ಆ್ಯಂಟಿ** : (ಗಮನ ಕೊಡದೆ) ಅದು ಬೇರೆ ವಿಚಾರ. ನಾವಂತೂ ಮದುವೆಯಾಗುವ ಹಾಗಿಲ್ಲ. ಅದರ ಯೋಚನೆಯೂ ಸಾಧ್ಯವಿಲ್ಲ.

**ತಾಯಿ** : ಅಲ್ಲವೊ ಆ್ಯಂಟಿ ಹಿಂದಿನ ಕಾಲದಲ್ಲಿ.....ಪಾದ್ರಿಗಳು.....

ಲ್ಯಾಂಟಿ : ಅಮ್ಮ ಅದೆಲ್ಲ ನನಗೆ ಗೊತ್ತು. ನೀವು ಹೇಳುವುದು ನಿಜವಿರಬಹುದು. ಹಿಂದಿನ ಕಾಲದಲ್ಲಿ ಪಾದ್ರಿಗಳಿಗೆ ಸಂಸಾರವೂ ಇದ್ದಿರಬಹುದು. ಆದರೆ ಅವರೇ ಒಂದು ಸಭೆ ಸೇರಿ ಅದರ ವಿರುದ್ಧ ಒಂದು ನಿರ್ಧಾರಕ್ಕೆ ಬಂದರು. ಯಾರಿಗೆ ಹೆಂಡತಿ ಮಕ್ಕಳು ಇರಲಿಲ್ಲವೋ, ಅಂದರೆ ಇನ್ನು ಮದುವೆಯಾಗದೆ ಉಳಿದಿದ್ದ ಯುವಕರೆಲ್ಲರೂ ಸೇರಿ ಪಾದ್ರಿಗಳು ಮದುವೆಯಾಗಬಾರದೆಂದು ತೀರ್ಮಾನಿಸಿದರು. ಒಕ್ಕೊರಲಿನಿಂದ ಮದುವೆಯನ್ನು ವಿರೋಧಿಸಿದರು.

ತಾಯಿ : ಯುವಕರು! ಹುಂ! ಯುವಕರಿಗೆ ಆಗ ಬಹುಶಃ ಈ ವಿಷಯದ ಬಗ್ಗೆ ಏನೂ ತಿಳಿವಳಿಕೆ ಇರಲಿಲ್ಲಾಂತ ಕಾಣುತ್ತೆ. ಆಮೇಲೆ ಅವರಿಗೇನೇ ಪಶ್ಚಾತ್ತಾಪವಾಗಿರಲೂಬಹುದು. ಅದಕ್ಕಾಗಿ ದಾರಿ ತಪ್ಪಿದ್ದರೂ ತಪ್ಪಿರಬಹುದು. ಅವರೇ ತಮ್ಮ ತಪ್ಪನ್ನು ಅರಿತು ಹಳೆಯ ಪಾದ್ರಿಗಳಂತೆಯೇ ಮತ್ತೆ ಮದುವೆಯನ್ನು ಪುರಸ್ಕರಿಸಬಹುದು. (ಈ ಮಾತುಳನ್ನಾಡುವಾಗ ಭಯದಿಂದ ಕಂಪಿಸುತ್ತಾ ಸುತ್ತಮುತ್ತ ನೋಡುವಳು. ತನ್ನಲ್ಲೇ ಮಾತನಾಡಿಕೊಳ್ಳುವಳು.) ನಾನೇನು ಮಾತನಾಡುತ್ತಿದ್ದೇನೆ? ನನ್ನೊಳಗೆ ದೆವ್ವ ಹೊಕ್ಕಿಲ್ಲ ತಾನೇ? ದೇವ ರೇ...ದೇವರೇ!! ಇದೇನಾಗುತ್ತಿದೆ?

ಲ್ಯಾಂಟಿ : (ಸಿಟ್ಟಿನಿಂದ) ಹಾಗೆಲ್ಲ ಯೋಚಿಸುವುದು ಪಾದ್ರಿಯಲ್ಲ, ಭೂಮಿಗೆ ಬಂದಿರುವ ಸೈತಾನನ ತಮ್ಮನೇ ಇರಬೇಕು. ದೇವರೇ ನಮ್ಮನ್ನು ಕಾಪಾಡಬೇಕು. ಅವನ ಬಗ್ಗೆ ಯೋಚಿಸದಿರುವುದೇ ಕ್ಷೇಮ. (ಎಂದು ಕೈಯಿಂದ ಕ್ರಾಸಿನ ಸನ್ನೆ ಮಾಡಿಕೊಳ್ಳುತ್ತಾನೆ.)... ಇನ್ನು ಪಶ್ಚಾತ್ತಾಪದ ವಿಷಯ. ನಿಮ್ಮ ಮಗ ಎಂದಾದರೂ ಇದಕ್ಕಾಗಿ ಅಂದರೆ ಮದುವೆ ಆಗಲಿಲ್ಲವೆಂದು ಪಶ್ಚಾತ್ತಾಪಪಟ್ಟಿದ್ದಾರೆಯೇ? ಎನ್ನುವುದು.

ತಾಯಿ : (ಭಾವೋದ್ವಿಗ್ನತೆಯಿಂದ ಲ್ಯಾಂಟಿಯನ್ನು ಅಪ್ಪಿಕೊಂಡು ಮುದ್ದಾಡಬೇಕೆನ್ನುವ ಭಾವನೆಯಿಂದ) ಲ್ಯಾಂಟಿ......... ಲ್ಯಾಂಟಿ.......... ಇದೇನು..... ಇದೆಲ್ಲವನ್ನೂ ನೀನು ಕೇಳಿ ತಿಳಿದುಕೊಂಡು ಮಾತನಾಡುತ್ತಿರುವೆಯೋ ಅಥವಾ ನಿನ್ನ ಒಳಹೊಕ್ಕು ಶಕ್ತಿ ಯಾವುದಾದರೂ ಮಾತನಾಡಿಸುತ್ತಿದೆಯೋ! .... ನಿನ್ನ ಮಾತುಗಳಿಂದ ನಾನು ಹಿಗ್ಗಿ ಹೋಗುತ್ತಿದ್ದೇನೆ. ನನ್ನ ತೊಂದರೆ ತಾಪತ್ರಯಗಳು, ಸಮಸ್ಯೆಗಳು, ಕಷ್ಟಗಳು ಎಲ್ಲವನ್ನೂ ನಿನ್ನಲ್ಲಿ ಹೇಳಿಕೊಳ್ಳಬೇಕೆನಿಸುತ್ತಿದೆ. ಆದರೆ ನಿನ್ನನ್ನು ಮೊದಲು ನಾನೊಂದು ಪ್ರಶ್ನೆ ಕೇಳುತ್ತೇನೆ.... 'ಪಾದ್ರಿಗಳು ಮದುವೆಯಾಗದೆ ಇರುವುದೇ ಸರಿ' ಎಂದು , ಎಂದಾದರೂ ನನ್ನ ಪಾಲ್ ಹೇಳುತ್ತಾನೇನು?

**ಆ್ಯಂಟಿ** : (ಜೋರಾಗಿ ನಕ್ಕು) ಇದೇನು ಇಂಥ ಪ್ರಶ್ನೆ ಕೇಳುತ್ತಿರಿ ಅಮ್ಮ. ಅವರು ಹಾಗೆ ಹೇಳದಿದ್ದರೆ, ಇನ್ನಾರು ಹೇಳಬೇಕು? ಖಂಡಿತವಾಗಿ ಅವರು 'ಮದುವೆಯಾಗದಿರುವುದೇ ಸರಿ' ಎಂದು ಹೇಳಿಯೇ ಹೇಳುತ್ತಾರೆ.... ಯಾಕೆ ಅವರು ನಿಮ್ಮ ಬಳಿ ಹಾಗೆಂದೂ ಹೇಳಿಲ್ಲವೇ?.... (ನಗುತ್ತಾ) ಪಕ್ಕದಲ್ಲಿ ಹೆಂಡತಿ. ಕಂಕುಳಲ್ಲಿ ಮಗುವನ್ನು ಎತ್ತಿಕೊಂಡು ಬರುವ ಪಾದ್ರಿಯನ್ನು ನೋಡಲು ಹೇಗಿರಬಹುದು! ನೀವೇ ಊಹಿಸಿಕೊಳ್ಳಿ... ಇಷ್ಟೇ ಅಲ್ಲ.... ಇನ್ನೂ ವಿಚಿತ್ರ ಹೇಗಿರುತ್ತೇಂದ್ರೆ..... (ಕನಸಿನಲ್ಲಿ ಗುಂಗಿನಲ್ಲಿ ಮಾತು ಮುಂದುವರಿಯುತ್ತದೆ) ಆ ಪಾದ್ರಿ ಇನ್ನೇನು ಪ್ರಾರ್ಥನೆಗಾಗಿ ಚರ್ಚಿಗೆ ಹೋಗಬೇಕು... ಆಗ ಮಗು ಒಂದೇ ಸಮನೆ ರಂಪ ಮಾಡಲು..... ಕಿರುಚಾಡಲು ಪ್ರಾರಂಭಿಸುತ್ತೆ..... ಆಗ ಆ ಪಾದ್ರಿಗೆ ಮಗುವನ್ನು ಸಮಾಧಾನ ಮಾಡಲೇಬೇಕಾಗುತ್ತದೆ. ಆಹಾ! ಕಂಕುಳಲ್ಲಿ ಮಗು. ಧರಿಸಿರುವ ಗೌನನ್ನು ಎಳೆದಾಡುತ್ತ ರಂಪ ಮಾಡುತ್ತ ಹಿಂದೆ ಬಿದ್ದಿರುವ ಮಗು. ನಡುವೆ ಸಿಕ್ಕಿ ಬಿದ್ದ ನಿಮ್ಮ ಮಗ ಪಾಲ್!!.... ನೀನೇ ಊಹಿಸಿಕೊಳ್ಳಿ ಹೇಗಿರಬಹುದೂಂತ!!... ಆಗ ನಿಮಗೇ ತಿಳಿಯುತ್ತೆ ಪಾದ್ರಿಗಳಿಗೆ ಮದುವೆಯಿಂದ ಉಂಟಾಗುವ ಪರದಾಟ!

**ತಾಯಿ** : (ಸ್ವಗತ) ಹುಂ! ಮುದ್ದಾದ ಮಕ್ಕಳು!!

**ಆ್ಯಂಟಿ** : (ನಗುತ್ತಲೇ) ನಿಜವಾಗಿಯೂ ಪಾದ್ರಿಯ ಹೆಂಡತಿ ಒಂದು ತಮಾಷೆಯ ವಸ್ತು. ಅವರಿಬ್ಬರೂ ಗಾಳಿ ಸೇವನೆಗೆ ಹೋಗುತ್ತಿದ್ದರೆ ಹಿಂದಿನಿಂದ ಇಬ್ಬರೂ ಹೆಂಗಸರಂತೆ ಕಾಣುತ್ತಾರೆ... ಒಂದು ವೇಳೆ ಪಾದ್ರಿಯ ಹೆಂಡತಿ ಆತ್ಮನಿವೇದನೆಗೆ ಹೋಗಬೇಕಾದರೆ, ಬೇರೆ ಪಾದ್ರಿಗಳು ಇಲ್ಲದಿರುವಂತಹ ಕಡೆಗಳಲ್ಲಿ ತನ್ನ ಗಂಡನ ಬಳಿಗೇ ಹೇಗೆ ಹೋಗಲು ಸಾಧ್ಯ?

**ತಾಯಿ** : ಪಾದ್ರಿಯ ತಾಯಿಯಾದವಳು ಹಾಗಾದರೆ ಏನು ಮಾಡಬೇಕು? ಅವಳು ಯಾರಲ್ಲಿಗೆ ಹೋಗಬೇಕು?

**ಆ್ಯಂಟಿ** : ತಾಯಿಯಾದರೆ ಬೇರೆ ವಿಷಯ... ಇದೆಲ್ಲ ಇರಲಿ.... ಒಂದು ವೇಳೆ ನಿಮ್ಮ ಮಗ ಮದುವೆಯಾಗಬೇಕೆಂದೇ ನಿರ್ಧರಿಸಿದರೆ ಅವರು ಮದುವೆಯಾಗಬಹುದಾದಂತಹ ಹೆಣ್ಣು ಯಾವುದಿದೆ? ಬಹುಶಃ ಕಿಂಗ್ ನಿಕೊಡಿಮಸ್‌ನ ಮೊಮ್ಮಗಳು? (ಎಂದು ಹೇಳಿ ದೊಡ್ಡದಾಗಿ ನಗುತ್ತಾನೆ)

**ತಾಯಿ** : ಪಾಲ್ ಮದುವೆಯಾಗಬೇಕೆಂದರೆ ಒಂದು ಹುಡುಗಿ ಇದೆ, ಅವಳು ಏಗ್ನೀಸ್.

**ಆ್ಯಂಟಿ** : (ಬೆಚ್ಚುವಂತೆ) ಇಲ್ಲ..... ಇಲ್ಲ..... ಸಾಧ್ಯವಿಲ್ಲ. ಅವಳು ಕುರೂಪಿ ಅವಳನ್ನು ಕಂಡರೆ ನನಗೆ ಆಗುವುದಿಲ್ಲ. ಅವರಿಗೂ ಅವಳನ್ನು ಕಂಡರೆ ಆಗದು.

ಅಂತಹ ಹುಡುಗಿಯನ್ನು ನಮ್ಮ ಪಾದ್ರಿಗಳಿಗೆ ಮದುವೆ ಮಾಡಿಸುವುದೇ? ಖಂಡಿತ ಕೂಡದು.

**ತಾಯಿ** : ಆ್ಯಂಟಿ ನೀನು ಅವಳನ್ನು ಸರಿಯಾಗಿ ನೋಡಿಲ್ಲ. ಆಕೆ ಬಹಳ ಸುಂದರಳಾಗಿದ್ದಾಳೆ; ಮುದ್ದಾಗಿದ್ದಾಳೆ; ಕೆಂಬಣ್ಣದ ತುಟಿಗಳು; ಸೇಬಿನ ಬಣ್ಣದ ಕೆನ್ನೆಗಳು; ಬಳ್ಳಿಯಂತೆ ಬಳುಕುವ ಮೈಯ್ಯಿ; ಅವಳ ಸ್ಪರ್ಷವೇ ರೋಮಾಂಚಕಾರಿ. ನೋಡಿದಷ್ಟೂ ನೋಡಬೇಕೆನಿಸುವ ಮತ್ತು ಬರಿಸುವ ರೂಪು!!

**ಆ್ಯಂಟಿ** : ನೀವು ಪೇಳುವುದೆಲ್ಲ ಸುಳ್ಳು. (ಹಟದ ದನಿಯಿಂದ) ನಾನು ಹೇಳಿದ್ದು ಕೇಳಿಸಲಿಲ್ಲವೇ?.... ಅವಳು ಕುರೂಪಿ ವಯಸ್ಸಾದವಳು; ಒಣಪ್ರತಿಷ್ಠೆ ಇರುವವಳು; ಅಲ್ಲದೆ.... (ಎಂದು ಮಾತು ಮುಂದುವರಿಸಬೇಕೆನ್ನುವಷ್ಟರಲ್ಲಿ ಹೆಜ್ಜೆ ಸಪ್ಪಳ ಕೇಳಿಬರುತ್ತದೆ. ತಾಯಿ ಆ್ಯಂಟಿಗೆ ಬಾಗಿಲ ಬಳಿ ಹೋಗಿ ಬರುವಂತೆ ಸನ್ನೆ ಮಾಡುತ್ತಾಳೆ. ಅವನ ಹಿಂದಿನಿಂದಲೇ ಪಾಲ್‌ನ ಪ್ರವೇಶ. ಬರುತ್ತಲೇ ಊಟದ ಮೇಜಿನ ಮುಂದೆ ಕೂರುತ್ತಾನೆ. ತಾಯಿ ಎದ್ದು ಅವನ ಮುಂದೆ ಚಹದ ಬಟ್ಟಲನ್ನಿರಿಸಿ ಕೆಟಲ್‌ನಿಂದ ಚಹವನ್ನು ಬಟ್ಟಲಿಗೆ ಸುರಿಯುತ್ತಾಳೆ.)

**ಪಾಲ್** : (ಚಹದ ಬಟ್ಟಲನ್ನು ತುಟಿಗಿರಿಸುತ್ತ) ಅಮ್ಮ ಆ ಪತ್ರವನ್ನು ಅವಳಿಗೆ ತಲುಪಿಸಿದೆ ತಾನೇ?

**ತಾಯಿ** : ಹೂಂ! (ಹಾಗೆಯೇ ಸನ್ನೆಯಿಂದ ಆ್ಯಂಟಿಯ ಕಡೆ ಕಣ್ಣಾಡಿಸಿ ಸುಮ್ಮನಿರುವಂತೆ ಹೇಳುತ್ತಾಳೆ.)

**ಪಾಲ್** : (ಅರ್ಥ ಮಾಡಿಕೊಂಡು ಆ್ಯಂಟಿಯ ಕಡೆ ಮುಖ ಮಾಡಿ) ಆ್ಯಂಟಿ...... ಆ್ಯಂಟಿ.......... ಇಲ್ಲಿ ಬಾ ನೀನು. (ಬರುತ್ತಾನೆ) ಈ ಕೂಡಲೇ ನೀನು ಚರ್ಚಿಗೆ ಹೋಗಬೇಕು. ನಂತರ ಆ ಮುದುಕನ ಅಂತಿಮ ಮಜ್ಜನಕ್ಕೆ ಬೇಕಾಗುವ ಎಲ್ಲವನ್ನೂ ತೆಗೆದಿರಿಸು. ನಾನೂ ಬಂದು ಬಿಡುತ್ತೇನೆ.

**ಆ್ಯಂಟಿ** : (ಹೆಮ್ಮೆಯಿಂದ) ಆಯಿತು ಫಾದರ್. ಇದೋ ಈಗಲೇ ಹೊರಟೆ (ಎಂದು ವೇಗವಾಗಿ ಬಾಗಿಲ ಕಡೆ ಹೊರಡುತ್ತಾನೆ.)

**ಪಾಲ್** : ಒಂದು ನಿಮಿಷ ನಿಲ್ಲು. ಏನಾದರೂ ತಿಂಡಿ ತಿಂದೆಯಾ?

**ತಾಯಿ** : 'ತಿಂಡಿ ಗಿಂಡಿ ಏನೂ ಬೇಡ' ಎಂದ. ಅವನು ತಿನ್ನುವುದೇ ಇಲ್ಲ.

**ಪಾಲ್** : ಓ ಹಾಗೋ! ನಾನೂ ನೋಡುತ್ತೇನೆ. ಹೇಗೆ ತಿನ್ನುವುದಿಲ್ಲವೋ.... ಆ್ಯಂಟಿ ಬಾ ಇಲ್ಲಿ ಕುಳಿತುಕೋ. (ತಾಯಿ ಕಡೆ ತಿರುಗಿ) ಅಮ್ಮ ಅವನಿಗೆ ತಿನ್ನಲು ಏನಾದರೂ ಕೊಡು.

(ತಾಯಿ ಮಗನ ಮಾತನ್ನು ಆಜ್ಞಾಧಾರಕಳಂತೆ ಪಾಲಿಸುತ್ತಾಳೆ. ಆ್ಯಂಟಿಯ ಮುಂದೆ ಬ್ರೆಡ್ಡಿನ ತುಂಡುಗಳನ್ನು ಇಡುತ್ತಾಳೆ ಆ್ಯಂಟಿ ಸಂಕೋಚವಿಲ್ಲದೆ, ಪಾದ್ರಿಯ ಆಜ್ಞೆಯನ್ನು ಪಾಲಿಸುವಂತೆ ಸದ್ದಿಲ್ಲದೆ ತಿಂದುಮುಗಿಸಿ)

**ಆ್ಯಂಟಿ** : ಫಾದರ್ ನಾನಿನ್ನು ಬರಲೇ?

**ಪಾಲ್** : ಹೂಂ! ಹೋಗು. ಆದರೆ ಪಾಠ ಹೇಳಿಸಿಕೊಳ್ಳಲು ಬರುವುದನ್ನು ಮರೆಯಬೇಡ. ಲ್ಯಾಟಿನ್ ಭಾಷೆಯನ್ನು ಗಂಭೀರವಾಗಿ ಕಲಿಯಬೇಕಾಗಿದೆ. ನಾನೀಗ ಹೊಸ ವ್ಯಾಕರಣವನ್ನು ಬರಯಬೇಕು. ನನ್ನ ಬಳಿ ಇರುವುದು ಶತಮಾನದಷ್ಟು ಹಳೆಯದು.... ಇರಲಿ. ಈಗ ಸದ್ಯಕ್ಕೆ ಚರ್ಚಿಗೆ ಹೋಗಬೇಕು... ತಿಳಿಯಿತೇ...? ಈ ದಿನ ನಿನ್ನ ತಾಯಿಯನ್ನು ಕಾಣಲು ಬರಬೇಕೆಂದಿದ್ದೇನೆ... ಹೇಳಿದ್ದೆಲ್ಲ ಅರ್ಥವಾಯಿತು ತಾನೇ?

**ಆ್ಯಂಟಿ** : ಹೂಂ! ಫಾದರ್, ನಾನಿನ್ನು ಬರುತ್ತೇನೆ. ಅಮ್ಮನಿಗೆ ನೀವು ಬರುವ ವಿಷಯ ತಿಳಿಸುತ್ತೇನೆ. ಅವಳಿಗೆ ತುಂಬ ಸಂತೋಷವಾಗುತ್ತದೆ. (ಎಂದು ಹೇಳುತ್ತಲೇ ಓಡುತ್ತಾನೆ.)

(ಸ್ವಲ್ಪ ಹೊತ್ತು ಮೌನ. ಪಾಲ್ ಒಂದು ಪತ್ರಿಕೆಯನ್ನು ತಿರುವಿ ಹಾಕುತ್ತಾನೆ. ಮನಸ್ಸು ಅಸ್ವಸ್ಥವಾಗಿದೆ. ತಾಯಿ ತನ್ನ ಪಾಡಿಗೆ ತಾನು ಅದೂ ಇದೂ ಕೆಲಸ ಮಾಡುತ್ತಿರುವಂತೆ ಕಾಣಿಸಿದರೂ ಆಗಾಗ ಪಾಲ್‌ನ್ ಕಡೆ ದೃಷ್ಟಿ ಹಾಯಿಸುತ್ತಾಳೆ. ತನ್ನನ್ನು ಮಾತನಾಡಿಸಬಹುದೇನೋ ಎಂದು ಮತ್ತೆ ಮತ್ತೆ ಅವನ ಕಡೆ ತಿರುಗುತ್ತಾಳೆ. ಆದರೂ ಪಾಲ್ ಸುಮ್ಮನಿರುವುದನ್ನು ಗಮನಿಸಿ, ತಾನೇ ಮಾತನ್ನು ಆರಂಭಿಸುವವಳಂತೆ)

**ತಾಯಿ** : ಪಾಲ್, ನಾನು ಆ ಪತ್ರವನ್ನು ಅವಳ ಕೈಗೇ ಕೊಟ್ಟೆ. ಆಗಲೇ ಅವಳು ಎದ್ದು ತೋಟದಲ್ಲಿದ್ದಳು. ಬಹುಶಃ ಅವಳಿಗೆ ಬೇಗ ಏಳುವ ಅಭ್ಯಾಸವಿರಬೇಕು. ಅವಳ ಬಳಿಗೇ ಹೋಗಿ ಪತ್ರವನ್ನು ಅವಳ ಕೈಗೆ ಇರಿಸಿದೆ. ಅದನ್ನು ಯಾರೂ ನೋಡಿದಂತಿಲ್ಲ. ಅವಳು ಪತ್ರವನ್ನು ಬಿಡಿಸಿ ಕಣ್ಣಾಡಿಸಿದಳು. ಸರಿಯಾಗಿ ಓದಲಿಲ್ಲ. ಇದಕ್ಕೆ ಉತ್ತರವೇನೂ ಬೇಡವೆಂದು ನಾನು ಹೇಳಿದೆ. ಹೇಳಿ ಹೊರಟೆ. ಅಷ್ಟರಲ್ಲಿ ಅವಳೇ 'ಸ್ವಲ್ಪ ಇರು' ಮತ್ತೊಮ್ಮೆ ಪತ್ರ ಓದಿದಳು. ಓದುತ್ತಿದ್ದಂತೆ ಆ ಕಾಗದದ ಬಿಳುಪಿನಂತೆ ಬಿಳುಚಿಕೊಂಡಳು... ಆಮೇಲೆ ನನ್ನತ್ತ ತಿರುಗಿ, 'ಹೋಗು, ದೇವರು ನಿನ್ನನ್ನು ಕಾಪಾಡಲಿ' ಎಂದು ಹೇಳಿದಳು.

**ಪಾಲ್** : (ಉದ್ವಿಗ್ನನಾಗಿ) ಸಾಕು.... ಸಾಕು. ನಿಲ್ಲಿಸು ನಿನ್ನ ಬಡಬಡಿಕೆಯನ್ನು.... ಅರ್ಥವಾಯಿತು ತಾನೇ, ಹೇಳಿದ್ದು? ಇನ್ನು ಒಂದು.... ಒಂದು

ಮಾತು..... ಕೂಡದು. ಇವತ್ತಿಗೆ ಇಷ್ಟು ಸಾಕು. ನಿನ್ನ ಬಾಯಿಂದ ಒಂದು ಶಬ್ದವನ್ನೂ ನಾನು ಕೇಳುವುದಕ್ಕೆ ಸಿದ್ಧನಿಲ್ಲ. ಆದರೂ ನೀನು ಹೀಗೇ ಮಾತನ್ನು ಮುಂದುವರಿಸಿದರೆ, ಮೊದಲೇ ಹೇಳಿದಂತೆ ಇಲ್ಲಿಂದ ನಾನು ಯಾರಿಗೂ ಹೇಳದೆ ಹೊರಟು ಹೋಗುತ್ತೇನೆ. ನನ್ನ ತಲೆ ಚಿಟ್ಟು ಹಿಡಿಯುತ್ತಿದೆ. ನಿಮ್ಮನ್ನು ಯಾರನ್ನೂ ನೋಡಲು ಮನಸ್ಸಾಗುವುದಿಲ್ಲ.... ನನಗೆ ಶಾಂತಿ ಬೇಕು; ನೆಮ್ಮದಿ ಬೇಕು.... ಅದು ಸಿಗುವ ಕಡೆಗೆ ಹೋಗಿಯೇ ಹೋಗುತ್ತೇನೆ... ಹೋಗಿಯೇ ಹೋಗುತ್ತೇನೆ. (ಎಂದು ಕೂಗುತ್ತ ಕುಳಿತಲ್ಲಿಂದ ಎದ್ದು ಹೋಗುತ್ತಾನೆ.)

OO

# ದೃಶ್ಯ – ೫

(ಮೇಳದ ಪ್ರವೇಶ. ಎರಡು ಸೀಳುಗಳಲ್ಲಿ ನಿಲ್ಲುತ್ತಾರೆ. ಒಬ್ಬರಾದ ಮೇಲೆ ಒಬ್ಬರಂತೆ ಮಾತಾಡುತ್ತಾರೆ.)

**ಒಬ್ಬ**
**(ಒಂದನೆಯವ):** ಓ ದಯಾಮಯ! ಭಗವಂತ! ನಿನ್ನಾಟಗಳ ಮಾಟಗಳ ನಾವೆಂತು ಅರಿತೇವು?

**ಎರಡನೆಯವ :** ಕಾಡುತಿದೆ ಒಳ ಹೊರಗೆ ಕೊನೆ ಇಲ್ಲದಂತೆ.

**ಮೂರನೆಯವ:** ತನ್ನ ತಾನು ಗೆಲ್ಲಲಾರದೆ, ತಪ್ಪಿಸಿಕೊಳ್ಳಲೂ ಆರದೆ ಓಡುತ್ತಿದ್ದಾನೆ ಪಾಪ! ಆ ಬಡಪಾಯಿ!!.... ಓಡುತ್ತಲೇ ಇದ್ದಾನೆ.... ಓಡುವ ಗುರಿ ತಿಳಿಯದೆ.

**ನಾಲ್ಕನೆಯವ:** ಕ್ಷಣ ಕ್ಷಣಕೆ ಮರಿಯಾಗಿ ಒಡೆಯುವ ಕಾಮನೆಗಳ ಮಹಾಪೂರದಲ್ಲಿ ಕೊಚ್ಚಿ ಹೋಗುತ್ತಿದ್ದಾನೆ. ಕೊಚ್ಚಿ ಹೋಗುತ್ತಲೇ ಕೊಳಕು ಚರಂಡಿಯಲ್ಲಿ ಬೀಳ ಹೊರಟಿದ್ದಾನೆ.

**ಐದನೆಯವ:** ಪಾಪ! ಆ ಪಾದ್ರಿ ತನಗೆ ತಾನೇ ಬಡಬಡಿಸುತ್ತಾನೆ. ಕಂಡ ಕಂಡದ್ದನ್ನೆಲ್ಲ, ತನ್ನ ಏಕಾಕಿತನದ ಭಯಂಕರತೆಯನ್ನು ಮರೆಯಲು ಮಾತನಾಡಿಸುತ್ತಾನೆ.

**ಆರನೆಯವ:** ಗೋಡೆಯನ್ನು ಮಾತಾಡಿಸಿದ; ಮರವನ್ನು ಮಾತಾಡಿಸಿದ; ಚರ್ಚಿನ ಗಂಟೇನ ಗೋಳಾಡಿಸಿದ. ನಾಯೀನ ಕಂಡ; ಕುರೀನ ಕಂಡ; ಹಮ್ದುಗಳನ್ನು ಕಂಡ. ಕಂಡ ಕಂಡ ಕಾವಲುಗಾರರನ್ನು ನಿಲ್ಲಿಸಿ ಮಾತನಾಡಿಸಿದ; ಅವರ ಕಷ್ಟ ಸುಖ ವಿಚಾರಿಸಿದ.

**ಮೊದಲನೆಯವ:** ಮಾಮೂಲಿಗಿಂತ ಗಟ್ಟಿಯಾಗಿ ಮಾತಾಡುತ್ತಾನೆ. ಮಾತು ಮಾತಿಗೂ ನಗುತ್ತಾನೆ.

**ಎರಡನೆಯವ** : ಮಾತಿನಲ್ಲಿ ಮನಸಿಲ್ಲ; ನಗುವಿನಲಿ ಗೆಲುವಿಲ್ಲ, ಅವನು ಮಾಡುವ ಯಾವೊಂದರಲ್ಲಿಯೂ ಅವನ ಮನಸ್ಸಿಲ್ಲ.

**ಮೂರನೆಯವ:** ಉನ್ಮತ್ತ, ಉನ್ಮಾದ ಸ್ಥಿತಿಯಲ್ಲಿಯೇ ಇರುತ್ತಾನೆ. ಬೇಕು ಬೇಡದ ಏನನ್ನಾದರೂ ಮಾಡುತ್ತಲೇ ಹೋಗುತ್ತಾನೆ.

**ನಾಲ್ಕನೆಯವ:** ಕೆಲಸವಿಲ್ಲದಿದ್ದರೆ ಶತಪಥ ತಿರುಗುತ್ತಾನೆ.

**ಐದನೆಯವ:** ಆ ದುಷ್ಟ ಹೆಣ್ಣಿನ ಕಪಿ ಮುಷ್ಠಿಯಲ್ಲಿ ಸಿಕ್ಕಿ.

**ಆರನೆಯವ:** ಅವಳ ಆ ಮಾದಕ ನಗೆಯ ಮಹಾಪೂರದಲ್ಲಿ ಮುಳುಗಿ.

**ಎಲ್ಲರೂ** : ದಿನದಿನಕ್ಕೆ ಪಾಪಕೂಪದಲ್ಲಿ ಬಿದ್ದು ಕೆಳಕ್ಕೆ ಕೆಳಕ್ಕೆ ಪಾತಾಳದಾಳಕ್ಕೆ ಇಳಿದು ಹೋಗುತ್ತಿದ್ದಾನೆ. ಸೈತಾನನ ಸ್ನೇಹಿತನಾಗುತ್ತಿದ್ದಾನೆ. ಅವನ ಪ್ರಪಂಚವೇ ತಿರುವು ಮುರುಗಾಗಿದೆ. ಬದುಕಿನ ಭಗ್ನಾವಶೇಷಗಳ ನಡುವೆ ರೋಗಪೀಡಿತವಾದ ಅವನ ಆತ್ಮ ನರಳುತ್ತಲೇ ಚೀರುತ್ತಲೇ ಅಲೆಯುತ್ತಿದೆ; ಚಡಪಡಿಸುತ್ತಿದೆ. ಮನೆಯಲ್ಲಿ ಚರ್ಚಿನಲ್ಲಿ ಅವನು ಕಾಣಿಸುವುದು ನಿರ್ಜೀವ ಬೊಂಬೆಯಂತೆ ಮಾತ್ರ! ತನ್ನನ್ನೇ ತಾನು ವಂಚಿಸಿಕೊಳ್ಳುತ್ತ, ಪಾಪ ಭೀತಿಯೊಳಗೆ ಕುದಿ ಕುದಿಯುತ್ತಲೇ ಪ್ರಾರ್ಥನೆ ಹೇಳಿಕೊಡುತ್ತಾನೆ. ಆತ್ಮ ನಿವೇದನೆಯನ್ನು ಕೇಳಿಸಿಕೊಳ್ಳಬೇಕಾದಾಗ ವ್ಯಂಗ್ಯವಾಗಿ ನಗುತ್ತಾನೆ. ತಾನೇ ತನ್ನ ಸ್ಥಿತಿಗಾಗಿ ನಗುತ್ತಾನೆ. ಮರುಕ ಪಡುತ್ತಾನೆ. ಅವನೀಗ ಮನುಷ್ಯನೇ ಅಲ್ಲ!!

**ಮೊದಲನೆಯವ:**ದೇವರಂತಿದ್ದವ ನಮ್ಮ ಕನಸುಗಳಿಗೆ ರೂಪು ಕೊಡುತ್ತಿದ್ದವ.

**ಎರಡನೆಯವ** :ದಾರಿ ತಪ್ಪಿ ಕುರಿಗಳಂತೆ ಅಲೆಯುತ್ತ ದೇವರು, ಧರ್ಮದ ಭೀತಿ ಇಲ್ಲದೆ,

**ಮೂರನೆಯವ:**ಪುಂಡು ಪೋಕರಿಗಳಂತೆ ಅಲೆಯುತ್ತಿದ್ದ ಈ ಊರಿನ ಜನಕ್ಕೆ ದಾರಿ ತೋರಿದವ.

**ನಾಲ್ಕನೆಯವ** :ಅಕ್ಷರ ಕಲಿಯಬೇಕು; ಶುಚಿಯಾಗಿರಬೇಕು.

**ಐದನೆಯವ** :ಸಂಯಮದಿಂದ, ನಿಗ್ರಹದಿಂದ ಬಾಳಬೇಕು. ದೇವರಲ್ಲಿ ಭಕ್ತಿ ಇಡಬೇಕು.

**ಆರನೆಯವ** :ಭಕ್ತಿ, ಶ್ರದ್ಧೆ, ದೈವಭೀತಿ, ಪ್ರಾಮಾಣಿಕ ದುಡಿಮೆಗಳೇ ಬಡತನವನ್ನು ದೂರ ಮಾಡುತ್ತದೆ ಎಂದವ.

**ಎಲ್ಲರೂ** : ಇಂದೇಕೆ ಹೀಗಾದ? ದೇವರೇ ಇದು ನಿನಗೆ ಕಾಣುವುದಿಲ್ಲವೇ? ನಿನ್ನ ಸೇವಕ. ನಿನ್ನ ಮಗು. ನೀನೇಕೆ ನಿಷ್ಠುರನಾಗಿ ಸುಮ್ಮನಿರುವೆ. ಅವನ ಆತ್ಮಪತನವನ್ನು ತಡೆಯಲಾರೆಯಾ? ನಮಗೆ ಬೆಳಕಾಗಿದ್ದವನ

ಉಳಿಸಿಕೊಡಲಾರೆಯಾ?...ಹೀಗೆಲ್ಲ ಆಗುವುದಕ್ಕೆ ನಮ್ಮೂರಿನ ಶಾಪವೇ? ಕರುಣಾಮಯಿ, ಕಣ್ಣು ತೆರೆ.

**೧ ನೆಯವ:** ಕಿಂಗ್ ನಿಕೊಡಿಮಸ್‌ನ ಅಂತಿಮ ತೈಲಮಜ್ಜನಕ್ಕೆ ಹೊರಟಿರಬೇಕು ನಮ್ಮ ತಂದೆ; ನಮ್ಮ ಪಾದ್ರಿ.

**೨ ನೆಯವ:** ಹೌದು ಬನ್ನಿ ಗೆಳೆಯರೆ. ಆತನ ಅಂತಿಮ ಸಮಯದಲ್ಲಿ ನಾವು ಅಲ್ಲಿದ್ದು ಗೌರವ ಸಲ್ಲಿಸೋಣ. ನಮ್ಮ ಪಾದ್ರಿಗಳು ಆತನನ್ನು ಸಂಸ್ಕರಿಸಿ ಉದ್ಧರಿಸುವುದನ್ನು ನೋಡೋಣ.

**೩ ನೆಯವ:** ಹೌದು ಈಗಲೇ ಹೋಗೋಣ ಬನ್ನಿ.

(ಎಲ್ಲರೂ ಒಟ್ಟಿಗೆ ಸಾಲಾಗಿ ಹೊರಡುತ್ತಾರೆ. ಅಷ್ಟರಲ್ಲಿ ನಾಯಿಯನ್ನು ಹಿಡಿದುಕೊಂಡು ಬಂದ ಕಾವಲುಗಾರ ಅಡ್ಡಾಡುತ್ತಾನೆ. ಕೆಲವೇ ಕ್ಷಣಗಳಲ್ಲಿ ಅವನ ನಾಯಿ ರಂಗದ ಒಂದು ಬದಿಗೆ ತಿರುಗಿ ಬೊಗಳಲು ಆರಂಭಿಸುತ್ತದೆ. ಕಾವಲುಗಾರ ಹಚ್! ಹಚ್! ಎಂದು ಸುಮ್ಮನಿರಿಸಲು ಪ್ರಯತ್ನಿಸಿದರೂ ನಾಯಿ ಬೊಗಳುತ್ತಲೇ ಇರುತ್ತದೆ. ಅದು ಬೊಗಳುವ ದಿಕ್ಕಿನಿಂದ ಪಾದ್ರಿ ಬರುವುದು ಕಾಣಿಸುತ್ತದೆ.)

**ಕಾವಲುಗಾರ:** (ಸ್ವಗತ) ಓ ಫಾದರ್ ಇರುವಂತಿದೆ! ಇದೇನಿದು? ನಿಕೊಡಿಮಸ್‌ನ ಮನೆಗೆ ಹೋಗಿರಬೇಕಿತ್ತಲ್ಲ...? ಇರಲಿ ನಾನೇ ಮಾತನಾಡಿಸಿ ತಿಳಿದುಕೊಳ್ಳುತ್ತೇನೆ. (ಪ್ರಕಟ) ನಮಸ್ಕಾರ ಫಾದರ್ (ಎಂದು ಸೆಲ್ಯೂಟ್ ಹೊಡೆಯುತ್ತಾನೆ.)... ನಾನು ಆ ಕಾಯಿಲೆ ಮನುಷ್ಯನನ್ನು ನೋಡೋಕೆ ಹೋಗಿದ್ದೆ. ಇಂದು ಬೆಳಗ್ಗೇನೆ ೧೦೧ ಜ್ವರ ಇತ್ತು. ನಾಡಿ ಮಿಡಿತ ಜೋರಾಗಿತ್ತು. ನನಗೆ ತಿಳಿದ ಮಟ್ಟಿಗೆ ಅವನ ಸೊಂಟ ಊದಿದೆ. ಅವನ ಮೊಮ್ಮಗಳು ಅವನಿಗೆ ಕ್ವಿನೈನ್ ಗುಳಿಗೆ ಕೊಡೋಕೆ ಹೇಳಿದಳು. ಆದರೆ ನಾನು ಅವಳಿಗೆ ಅದರ ಅಗತ್ಯ ಇಲ್ಲ ಅಂತ ಹೇಳಿದೆ. ಕೂಡಲೇ ಆ ಮಗು ಅಳೋಕೆ ಶುರು ಮಾಡ್ತು. ಅವಳಿಗೆ ಸಮಾಧಾನ ಆಗಲಿಲ್ಲ. ತಕ್ಷಣ ಹೋಗಿ ವೈದ್ಯರನ್ನು ಕರೆದು ತರಲು ಹೇಳಿದಳು. ಆದರೆ ನಾನು ಹೋಗಲಿಲ್ಲ. 'ಬೇಕಾದರೆ ಬೇರೆ ಯಾರನ್ನಾದರೂ ಕಳಿಸು ಎಂದೆ. ವೈದ್ಯರನ್ನು ಕರೆಸಲು ಅವನ ಹತ್ತಿರ ಬೇಕಾದಷ್ಟು ಹಣ ಇದೆ. ಬದುಕಿದ್ದಾಗಂತೂ ಹಣ ಬಿಚ್ಚುತ್ತಿರಲಿಲ್ಲ. ಈಗ ಸಾಯುವಾಗಲಾದರೂ ವೈದ್ಯರನ್ನು ಕರೆಸಲಿಕ್ಕೆ ಹಣ ಖರ್ಚು ಮಾಡಲಿ' ಎಂದೆ.

**ಪಾಲ್ (ಪಾದ್ರಿ):** (ಏನನ್ನೋ ಯೋಚಿಸುತ್ತ) ನಿಜ; ನಿಜ. ನಾಳೆ ವೈದ್ಯರು ಬರುವವರೆಗೆ ಆತ ಕಾಯಬಹುದು. ಆದರೆ ಆತ ತುಂಬ ಕಾಯಿಲೆಯಿಂದ ನರಳುತ್ತಿದ್ದಾನೆ. ಅವನ ಸಹಾಯಕ್ಕೆ ಯಾರಾದರೂ ಬೇಕಾಗಬಹುದು.

**ಕಾವಲುಗಾರ** :ಹಾಗೆ ಒಂದು ವೇಳೆ ಆತ ತುಂಬ ಕಾಯಿಲೆಯಿಂದಿದ್ದರೆ ವೈದ್ಯರನ್ನು ಕರೆತರುವುದೇ ಒಳ್ಳೆಯದು. ಆ ಮುದಿಯನಿಗೇನು? ಬೇಕಾದಷ್ಟು ದುಡ್ಡು ಕಕ್ಕಬಹುದು. ದುಡ್ಡು ಕೊಡಲಾಗದಷ್ಟು ದಿವಾಳಿ ಎದ್ದಿಲ್ಲ. ಆದರೂ ಅಯ್ಯೋ ಪಾಪ ಅಂತ ನಾನೇ ತಯಾರಿಸಿದ ಔಷಧಿಯನ್ನು ಕೊಡಲು ಹೋದರೆ ಅವನ ಮೊಮ್ಮಗಳು ಸುತರಾಂ ಒಪ್ಪಲಿಲ್ಲ. ಬೇಸರವಾಗಿ ನಾನೇ ಹೊರಟು ಬಂದೆ.

**ಪಾದ್ರಿ** : ಅವನ ಮೇಲೇಕೆ ಇಷ್ಟು ಸಿಡುಕು? ನಿನಗೆ ಅವನು ಮಾಡಿದ ಅನ್ಯಾಯವಾದರೂ ಏನು? ಸಾಯುವ ಸ್ಥಿತಿಯಲ್ಲಿರುವವರನ್ನು ಅವರು ಎಷ್ಟೇ ಬೇಡದವರಾಗಿದ್ದರೂ ಸಹಾನುಭೂತಿಯಿಂದ ನೋಡಬೇಕು.

**ಕಾವಲುಗಾರ** : (ಸ್ವಗತ) ಈ ಪಾದ್ರಿಯನ್ನು ಅರ್ಥಮಾಡಿಕೊಳ್ಳುವುದೇ ಕಷ್ಟ! ಈತ ಈಗ ನಿಜವಾದ ಪಾದ್ರಿಯಂತೆ ಎಷ್ಟು ಗಂಭೀರವಾಗಿ ಮಾತಾಡುತ್ತಿದ್ದಾನೆ.!

**ಪಾದ್ರಿ** : ಯಾಕೆ ಸುಮ್ಮನಾದೆ? ಮಾತಾಡು.

**ಕಾವಲುಗಾರ**: ಫಾದರ್ ಹಾಗಾದರೆ ಈಗ ಅವನ ಸ್ಥಿತಿ?

**ಪಾದ್ರಿ** : ಆತನಿಗೆ ಕಮ್ಯುನಿಯನ್ ಸಿಗಬೇಕು.

**ಕಾವಲುಗಾರ**: ನೀವು ಅವನಿಗೆ ಅದನ್ನು ನೀಡುತ್ತೀರೇನು?

**ಪಾದ್ರಿ** : ಸದ್ಯಕ್ಕೆ ಆತನಿಗೆ ಪ್ರಾಣ ಹೋಗುವಂತಹ ಅಪಾಯವೇನೂ ಬಂದಿಲ್ಲ.

**ಕಾವಲುಗಾರ**: (ಮತ್ತೆ ಮೊದಲಿನ ದಾಟಿಯಲ್ಲಿ) ಅಲ್ಲ, ಆ ಹುಡುಗಿಗೆ ಅದೆಷ್ಟು ಧಿಮಾಕು! ವೈದ್ಯರನ್ನು ಕರೆದು ತರಲು ನನ್ನಂತಹವನಿಗೆ, ಸೇವಕನಿಗೆ ಆಜ್ಞಾಪಿಸುವಂತೆ ಆಜ್ಞಾಪಿಸಿ ಹೇಳುತ್ತಾಳೆ!! ಮೊದಲೇ ನನಗೆ ಸಾಕಷ್ಟು ಕೆಲಸಗಳಿವೆ. ಆದರೂ ಅವನ ಮೇಲಿನ ಮರ್ಯಾದೆಯಿಂದ ಅಲ್ಲಿಗೆ ಹೋದರೆ ನನಗೆ ಸಿಕ್ಕ ಮರ್ಯಾದೆ, ಇದೇ ನೋಡಿ! (ತಿರಸ್ಕಾರ)...(ಮತ್ತೆ ವಿನಯದಿಂದ) ನಾನಿನ್ನು ಬರುತ್ತೇನೆ ಫಾದರ್. ನನ್ನಿಂದ ನಿಮಗೇನಾದರೂ ಸಹಾಯ ಬೇಕಾದರೆ ಹೇಳಿ. (ಎಂದು ಮತ್ತೊಮ್ಮೆ ಸೆಲ್ಯೂಟ್ ಹೊಡೆದು ನಿರ್ಗಮಿಸುತ್ತಾನೆ. ಮತ್ತೊಂದು ಕಡೆಯಿಂದ ಆಂಟಿಯೋಕಸ್ ಪ್ರವೇಶಿಸುತ್ತಾನೆ.)

**ಆ್ಯಂಟಿ** : ಫಾದರ್, ನೀವು ಹೇಳಿದಂತೆ ಎಲ್ಲವನ್ನು ಸಿದ್ಧ ಮಾಡಿದ್ದೇನೆ. ನೀವೇನಿದ್ದರೂ ನಿಮಗಾಗಿ ತೆಗೆದಿರಿಸಿರುವ ಸರ್ಪ್ಲೀಸ್ ಮತ್ತು ನಿಲುವಂಗಿಯನ್ನು ತೊಟ್ಟುಕೊಳ್ಳುವುದೊಂದೇ ಬಾಕಿ. ಬೆಳ್ಳಿ ಪಾತ್ರೆಯಲ್ಲಿ ತೈಲವನ್ನು ತುಂಬಿರಿಸಿದ್ದೇನೆ. ನಾವು ಹೊರಡುವುದನ್ನು ನೋಡಲು ಜನ ಆಗಲೇ ಕಾದಿದ್ದಾರೆ. ಫಾದರ್ ಈ ಛತ್ರಿಯನ್ನು ಹಿಡಿಸಿ ಹಿಡಿಯಲೆ?

ಪಾದ್ರಿ : ಆ್ಯಂಟಿ, ಮೊದಲು ನೀನು ಹೆಚ್ಚು ಮಾತಾಡುವುದನ್ನು ನಿಲ್ಲಿಸಬೇಕು.

ಆ್ಯಂಟಿ : (ಅಪರಾಧಿಯಂತೆ) ಕ್ಷಮಿಸಿ ಫಾದರ್. ತಪ್ಪಾಯಿತು.

ಪಾದ್ರಿ : ಇತ್ತೀಚೆಗೆ ನಿನ್ನ ಮಾತು ಅತಿಯಾಯಿತು. ಒಂದು ನಿಮಿಷವೂ ಸುಮ್ಮನಿರುವುದಿಲ್ಲ. (ಅವರಿಂದ ಸ್ವಲ್ಪ ದೂರದಲ್ಲಿ ಸೇರಿರುವ ಗುಂಪು ನೋಡಿ) ಇಷ್ಟೊಂದು ಜನ ಇಲ್ಲಿಗೆ ಹೇಗೆ ಬಂದರು? ಯಾರಾದರೂ ನಾನು ಬರುತ್ತಿರುವ ಸುದ್ದಿಯನ್ನು ಸಾರಿದರೇನು?

ಆ್ಯಂಟಿಯೋ: (ವಿನಯದಿಂದ) ಗೊತ್ತಿಲ್ಲ ಫಾದರ್. (ಎಂದು ಹೇಳುತ್ತ ಅವನ ಮುಖದ ಕಡೆ ನೋಡುತ್ತಾನೆ.) (ಫಾದರ್ (ಪಾದ್ರಿ) ಆ ಗುಂಪಿನಲ್ಲಿ ಏಗ್ನಿಸ್‌ಳ ಸೇವಕಿಯೂ ಇರುವುದನ್ನು ಗಮನಿಸುತ್ತಾನೆ. ಮುಖದಲ್ಲಿ ಭೀತಿ ಕಾಣಿಸಿಕೊಳ್ಳುತ್ತದೆ. ಮೈಯಲ್ಲಿ ನಡುಕ. ತೈಲದ ಬಟ್ಟಲನ್ನು ಹಿಡಿದು ಅವನಿಗೆ ತೀರ ಹತ್ತಿರದಲ್ಲೇ ನಿಂತಿರುವ ಆ್ಯಂಟಿಯೋಕಸ್‌ನ ಸೂಕ್ಷ್ಮ ಕಣ್ಣುಗಳು ಇದೆಲ್ಲವನ್ನು ಗಮನಿಸುತ್ತಿವೆ. ಹೆದರಿಕೆಯಿಂದಲೆ ಪಿಸುದನಿಯಲ್ಲಿ ಮಾತನಾಡಿಸುತ್ತಾನೆ.)

ಆ್ಯಂಟಿ : ಫಾದರ್, ನಿಮಗೆ ಮೈ ಸ್ವಸ್ಥವಿಲ್ಲವೇನು? ನೋಡಿದರೆ ತುಂಬ ಹೆದರಿಕೊಂಡಂತಿದ್ದೀರಿ. ಆ ಮುದುಕನನ್ನು ಸಂಸ್ಕರಿಸಲು ಇಷ್ಟು ಬೇಗ ಬರಬಾರದಿತ್ತು. ಅವನೇನೂ ಅಷ್ಟು ಬೇಗ ಸಾಯುವುದಿಲ್ಲ.

ಪಾದ್ರಿ : ಆ್ಯಂಟಿ ಬೇಗ ನಡಿ. ನಾವು ಇಲ್ಲಿಂದ ಈ ಕೂಡಲೇ ಹೊರಡಬೇಕು. ನನಗೇನೂ ಆಗಿಲ್ಲ. ಸುಳ್ಳು ಸುಳ್ಳೇ ಇಲ್ಲದ್ದನ್ನು ನಿನ್ನಲ್ಲಿ ಊಹಿಸಿಕೊಂಡು ಮಾತಾಡುತ್ತಿರುವಿ. ಇಷ್ಟಕ್ಕೂ ನಿನ್ನನ್ನು ಬಾಯಿ ಬಿಚ್ಚಲು ಹೇಳಿದವರಾರು?.... ನನಗೆ ಈ ರೀತಿ ಜನಜಂಗುಳಿ ಹಿಡಿಸುವುದಿಲ್ಲ. ಮೊದಲಿಗೆ ಇವರೆಲ್ಲರನ್ನೂ ದೂರ ಸರಿದು ಹೋಗುವಂತೆ ಹೇಳಿ ಬಾ.

ಆ್ಯಂಟಿ : (ಖುಷಿಯಿಂದ) ಏಯ್ ಎಲ್ಲರೂ ಇಲ್ಲಿಂದ ದೂರ ಹೋಗಿ. ಈ ರೀತಿ ಗುಂಪು ಕಟ್ಟಿಕೊಂಡು ಗದ್ದಲ ಮಾಡಿದರೆ ಫಾದರ್‌ಗೆ ತೊಂದರೆಯಾಗುತ್ತದೆ. ನಡೀರಿ ಇಲ್ಲಿಂದ. ಆ ಮುದುಕನ ಸಂಸ್ಕರಣಕ್ಕೆ, ಆತ್ಮ ನಿವೇದನೆಗೆ ಬೇರೆ ಹೋಗಬೇಕಿದೆ... ಯಾಕೆ ಹೀಗೆ ಮುಗಿ ಬೀಳುತ್ತಿದ್ದೀರಿ? ಫಾದರ್‌ನನ್ನು ಎಂದೂ ಕಂಡಿಲ್ಲವೇ? ಇಲ್ಲ...ಇಲ್ಲಿ ಏನಾದರೂ ಮಂಗಾಟ ನಡೆಯುತ್ತಿದೆಯೇ?... ಹೊರಡಿ..... ಬೇಗ ಇಲ್ಲಿಂದ ಹೊರಡಿ (ಎಂದು ನುಗ್ಗಿ ಅವರನ್ನು ತರುಬುತ್ತಾನೆ. ಜನ ಏನೇನೋ ಗೊಣಗಿಕೊಳ್ಳುತ್ತಾ ದಿಕ್ಕಾಪಾಲಾಗಿ ಹೋಗುತ್ತಾರೆ. ಪಾದ್ರಿ ಮತ್ತು ಆ್ಯಂಟಿಯೋಕಸ್ ಮೆಲ್ಲಗೆ ಹೆಜ್ಜೆ ಹಾಕುತ್ತ ರಂಗದ ಎಡಬದಿಗೆ ನಿರ್ಗಮಿಸುತ್ತಾರೆ.)

# ದೃಶ್ಯ – ೬

(ರಾತ್ರಿ ವೇಳೆ ತಾಯಿ ಊಟದ ಮೇಜಿನ ಮುಂದೆ ಕುಳಿತಿದ್ದಾಳೆ. ಪಾಲ್ ಸದ್ದಿಲ್ಲದೆ ಬಂದು ತಾಯಿಗೆ ಎದುರಾಗಿ ಕುಳಿತುಕೊಳ್ಳುತ್ತಾನೆ. ಸ್ವಲ್ಪ ಹೊತ್ತು ಇಬ್ಬರ ನಡುವೆ ಮಾತುಕತೆ ನಡೆಯುವುದಿಲ್ಲ....ಕೆಲವು ಕ್ಷಣಗಳ ನಂತರ ತಾಯಿಯೇ ಮಾತಿಗೆ ಮೊದಲಿಡುತ್ತಾಳೆ.)

**ತಾಯಿ** : ಪಾಲ್, ನಿಕೋಡಿಮಸ್‌ನ ಅಂತಿಮ ಮಜ್ಜನವೇನಾಯಿತು? ಎಲ್ಲವೂ ಸಾಂಗವಾಗಿ ನೆರವೇರಿತೇನು? ನಿಕೋಡಿಮಸ್ ಈಗ ಹೇಗಿದ್ದಾನೆ?

**ಪಾಲ್** : ಇಲ್ಲ ಅಮ್ಮ ನಾನು ಹೋದ ಕೆಲಸ ಮಾಡಲಿಲ್ಲ. ನಿಕೋಡಿಮಸ್‌ನೇ ಪತ್ತೆಯಿರಲಿಲ್ಲ. ಆತ ಏನಾದನೋ ಯಾರಿಗೂ ಗೊತ್ತಿಲ್ಲ. ಈ ಹಾಳಾದ ಲ್ಯಂಟಿ ಎಲ್ಲಿ ಸತ್ತನೋ ಬರುವುದಕ್ಕಿಲ್ಲ, ಆಗಲೇ ಕಣ್ಣು ತಪ್ಪಿಸಿ ಓಡಿಹೋದ.

**ತಾಯಿ** : ಸಿಟ್ಟೇಕೆ ಪಾಲ್. ಅವನಿನ್ನೂ ಹುಡುಗ. ಉತ್ಸಾಹದಿಂದ ಪುಟಿಯುವ ವಯಸ್ಸು. ಅವನನ್ನು ಯಾವ ಆಲೋಚನೆಗಳೂ ಕಾಡುವುದಿಲ್ಲ. ಅವನ ಮುಗ್ಧತೆಯೇ ಅವನ ಅಮೂಲ್ಯ ಆಸ್ತಿಯಾಗಿದೆ. ಅವನಿಗೆ ದಣಿವೇ ಇಲ್ಲ. ಈಗ ತಾನೇ ಬಂದು ನಿಕೋಡಿಮಸ್‌ನ ಬಗ್ಗೆ ತಿಳಿದು ಬರುತ್ತೇನೆಂದು ಓಡಿದ. ಎಲ್ಲಾ ತಿಳಿದು ಇನ್ನೇನು ಬಂದೇಬಿಡುತ್ತಾನೆ. ತಾನು ಕೇಳಿದಕ್ಕಿಂತ ಹೆಚ್ಚಾಗಿ ಬಣ್ಣ ಹಚ್ಚಿ. ರೆಕ್ಕೆ ಪುಕ್ಕ ಹಚ್ಚಿ ಅವೆಲ್ಲವನ್ನೂ ಅದ್ಭುತ ರೋಮಾಂಚಕಾರಿ ಕತೆಯಂತೆ ಬಣ್ಣಿಸಿ ಹೇಳುತ್ತಾನೆ.

**ಪಾಲ್** : ಹಾಗಾದರೆ ನಿನಗೆ ಮೊದಲೇ ವಿಷಯ ಎಲ್ಲ ತಿಳಿದಿತ್ತು?

**ತಾಯಿ** : ನನಗೂ ಪೂರ್ತಿಯಾಗಿ ಏನೂ ಗೊತ್ತಿಲ್ಲ. ಜನ ಬೀದಿಗಳಲ್ಲಿ ಗುಂಪು ಗುಂಪಾಗಿ ನಿಂತು ಏನೇನೋ ಮಾತಾಡಿಕೊಳ್ಳುತ್ತಿದ್ದರಂತೆ. ಪನಿಜ್ಜಾ ಬಂದು ಅದನ್ನು ಹೇಳಿದ. ಇಲ್ಲಿಯೇ ಇದ್ದ ಲ್ಯಂಟಿಗೆ ಕುತೂಹಲ; ತಡೆಯಲಾಗಲಿಲ್ಲ. ಇನ್ನಷ್ಟು ವಿಷಯ ಸಂಗ್ರಹಿಸಲು ಹೋಗಿದ್ದಾನೆ.

**ಪಾಲ್** : ಸರಿ. ಆ್ಯಂಟಿ ಬಂದರೆ ಅವನನ್ನು ನನ್ನ ಕೋಣೆಗೆ ಕಳಿಸು. ಅವನ ಹತ್ತಿರ ಬಹಳ ಮಾತನಾಡುವುದಿದೆ. ಅವರ ತಾಯಿಯನ್ನು ಬೇರೆ ಕಾಣಬೇಕಿದೆ. (ಎಂದು ಎದ್ದು ಹೊರಡಬೇಕೆನ್ನುವಷ್ಟರಲ್ಲಿ ಆ್ಯಂಟಿ ಎದುಸಿರು ಬಿಡುತ್ತಾ ಓಡಿ ಬರುತ್ತಾನೆ. ಎದುರಿಗೆ ಪಾಲ್‌ನನನ್ನು ನೋಡಿ ಒಂದು ಕ್ಷಣ ಸ್ತಬ್ಧನಾಗಿ ನಿಲ್ಲುತ್ತಾನೆ. ಆದರೆ ಮಾತಾಡದೆ ಇರಲು ಸಾಧ್ಯವಾಗದೆ ಮೆಲ್ಲನೆ ತಾಯಿಯನ್ನು ಕುರಿತು)

**ಆ್ಯಂಟಿ** : (ಪಿಸುದನಿಯಲ್ಲಿ) ಅಮ್ಮ ಅವರು ನನ್ನನ್ನು ಚೆನ್ನಾಗಿ ಬೈದಿರಬೇಕಲ್ಲ? (ಅಳುಮೋರೆ ಹಾಕುವನು.)

**ತಾಯಿ** : ನೀನು ಹೀಗೆ ಮಾಡುತ್ತಲೇ ಇದ್ದರೆ ಮತ್ತೇನು ಮಾಡಬೇಕು? (ನಗುವಳು)

**ಆ್ಯಂಟಿ** : ಅಮ್ಮ ನಿಕೊಡಿಮಸ್ ಬಗ್ಗೆ ಜನ ಏನೇನು ಮಾತಾಡಿಕೊಂಡರು ಗೊತ್ತಾ? ನಿಮಗೆ ಹೇಳಿದರೆ ನಿಜಕ್ಕೂ ನೀವು ನಂಬುವುದಿಲ್ಲ.

**ತಾಯಿ** : (ಆಶ್ಚರ್ಯ ವ್ಯಕ್ತಪಡಿಸುತ್ತಾ) ಹೌದೇನು? ಹಾಗಾಧರೆ ಹೇಳು ನೋಡೋಣ.

**ಆ್ಯಂಟಿ** : ಊಹುಂ! ನಾನು ಹೇಳುವುದಿಲ್ಲ. ನೀವು ನಿಮ್ಮ ಮಗನಿಗೆ ಹೇಳಿಬಿಟ್ಟರೆ ನನ್ನ ಕತೆ ಮುಗಿದಂತೆ...! ಅವರೆಂದಿಗೂ ನನ್ನನ್ನು ಪಾದ್ರಿ ಆಗಲು ಬಿಡುವುದೇ ಇಲ್ಲ. ನನ್ನನ್ನು ಈಗಲೇ ಅವರು ಕೆಲಸದಿಂದ ತೆಗೆದು ಬಿಡುತ್ತಾರೆ.

**ತಾಯಿ** : ಹಾಗೇನೂ ಆಗುವುದಿಲ್ಲ ಧೈರ್ಯವಾಗಿ ಹೇಳು. ನೀನು ಕಂಡದ್ದನ್ನು, ಕೇಳಿದ್ದನ್ನು, ಒಂದೂ ಬಿಡದಂತೆ ಹೇಳು. ಓಡಿಹೋದ ನಿಕೋಡಿಮಸ್ ಹಿಂತಿರುಗಿದನೇನು?

**ಆ್ಯಂಟಿ** : ಅಯ್ಯೋ, ಅಮ್ಮ! ನಿನಗೊಂದಿಷ್ಟೂ ತಿಳಿಯುವುದಿಲ್ಲ. ಅವನಾಗಿ ಓಡಿ ಹೋಗಲಿಲ್ಲವಂತೆ. ಅವನ ಬಂಧುಗಳು ಅವನ ಹಣ ಲಪಟಾಯಿಸಲು ಎಲ್ಲಿಗೋ ಒಯ್ದುಬಿಟ್ಟರಂತೆ!....ಇನ್ನೊಬ್ಬರು ಹೇಳುವ ಹಾಗೆ, ಅವನನ್ನು ನಾಯಿಯೋ ಹದ್ದೋ ಎತ್ತಿಕೊಂಡು ಹೋಯಿತಂತೆ!!.... ಅಮ್ಮ ಇನ್ನೊಂದು ವಿಚಿತ್ರದ ಸುದ್ದಿ ಎಂದರೆ..... ಅವನು ಅಷ್ಟೊಂದು ಕಾಯಿಲೆ ಇದ್ದರೂ, ಬೆಟ್ಟದ ಮೇಲೇ ಸಾಯಬೇಕೆಂದು ತೀರ್ಮಾನಿಸಿ, ಅವನಲ್ಲಿ ಯಾವುದೋ ಅದೃಶ್ಯ ಶಕ್ತಿ ಹೊಕ್ಕಿರುವ ಹಾಗೆ ತಾನೇ ಸ್ವತಃ ಎದ್ದು ದಡ ದಡ ಬೆಟ್ಟವೇರಿ ಹೋಗಿಬಿಟ್ಟನಂತೆ!!! ಅವನಿಗೆ ಹಿಂಸೆಯಾಗಬಾರದೆಂದು ಸುಮ್ಮನಿದ್ದ ಅವನ ಜನ ಆಮೇಲೆ ಅವನನ್ನು ಮನೆಗೆ ಹೊತ್ತು ತಂದರಂತೆ!!!

**ಪಾಲ್** : (ಪ್ರವೇಶಿಸುತ್ತಾ) ಆ್ಯಂಟಿ. ಕತೆಗಳನ್ನು ಹೇಳುವುದನ್ನು ಸಾಕು ಮಾಡಿ ಮೊದಲು ತಿಂಡಿ ತಿನ್ನು. ಶಿಕಾರಿ ಮುದುಕನ ವಿಷಯ ಬಿಟ್ಟರೆ ನಿನಗೆ

ಸದ್ಯಕ್ಕೆ ಏನೂ ಹೊಳೆಯುವುದೇ ಇಲ್ಲ, ಬೇರೆ ಕೆಲಸವೂ ಇಲ್ಲ, ತೆಪ್ಪಗೆ ಕುಳಿತು ತಿಂದು ಮುಗಿಸು. (ಆ್ಯಂಟಿ ತಲೆ ಬಗ್ಗಿಸಿಕೊಂಡು ಸದ್ದಿಲ್ಲದೆ ತಿನ್ನುತ್ತಿರುತ್ತಾನೆ. ಇಡೀ ಪರಿಸರದಲ್ಲಿ ನೀರವತೆ ತುಂಬಿದೆ. ಒಂದೆರಡು ಕ್ಷಣಗಳ ನಂತರ ಬಾಗಿಲು ತಟ್ಟುವ ಸದ್ದು. ಆ್ಯಂಟಿ ಎದ್ದು ಬಾಗಿಲ ಬಳಿ ಹೋಗುತ್ತಾನೆ. ಅಲ್ಲಿಂದಲೇ ಅವನ ದನಿ ಕೇಳಿಸುತ್ತದೆ)

**ಆ್ಯಂಟಿ** : (ಗದ್ದರಿಸುವಂತೆ) ಯಾರು ನೀನು? ಇಷ್ಟು ಹೊತ್ತಲ್ಲಿ ಇಲ್ಲಿಗೇಕೆ ಬಂದೆ? ನಿನಗೆ ಏನಾಗಬೇಕಿತ್ತು? ಯಾರು ಬೇಕಿತ್ತು?

**ಹೆಂಗಸು** : (ವಿನಮ್ರತೆಯಿಂದ) ಚಿಕ್ಕ ದಣಿ, ನನ್ನ ಮಗಳು ತೀರಾ ಅನಾರೋಗ್ಯದಿಂದಿದ್ದಾಳೆ. ಅವಳಿಗೆ ದೆವ್ವ ಹಿಡಿದಿದೆ. ಪಾದ್ರಿಯವರನ್ನು ಕಂಡು ಅವಳನ್ನು ದೆವ್ವದ ಹಿಡಿತದಿಂದ ಬಿಡಿಸಬೇಕೆಂದು ಪ್ರಾರ್ಥಿಸಲು ಬಂದಿದ್ದೇನೆ.

**ಆ್ಯಂಟಿ** : ಅದಕ್ಕೆ ಇಂಥ ಹೊತ್ತಲ್ಲದ ಹೊತ್ತಿನಲ್ಲಿ ಬರುವುದೇ? ಇಷ್ಟು ಸಣ್ಣ ವಿಷಯಗಳಿಗಾಗಿ ಪಾದ್ರಿಯವರನ್ನು ಎಬ್ಬಿಸಿ ತೊಂದರೆ ಕೊಡುವುದೇ? ನಾಳೆ ಬೇಕಾದರೆ ಬನ್ನಿ.

**ಹೆಂಗಸು** : (ಅಂಗಲಾಚುತ್ತಾ) ಕೋಪಿಸಿಕೊಳ್ಳಬೇಡ ಚಿಕ್ಕದಣಿ. ನೋಡು ದೆವ್ವಹಿಡಿದ ಈ ನನ್ನ ಮಗಳು ಹೇಗೆ ನಡೆದುಕೊಳ್ಳುತ್ತಿದ್ದಾಳೆ? ಅವಳ ಕಾಟವನ್ನು ತಡೆಯಲಾಗುತ್ತಿಲ್ಲ. ದಯವಿಟ್ಟು ಒಳಗೆ ಬಿಡು. ಆ ತಂದೆ ಬಯಸಿದರೆ ನನ್ನ ಮಗಳನ್ನು ಸರಿ ಮಾಡಬಲ್ಲರು.

**ಪಾಲ್** : ಆ್ಯಂಟಿ, ಆಕೆಯನ್ನು ಒಳಗೆ ಬಿಡು.

(ಆ್ಯಂಟಿ ಅವರನ್ನು ಒಳಗೆ ಬಿಡುತ್ತಾನೆ. ಒಳಗೆ ಬರಲು ಒಪ್ಪದ ಹುಡುಗಿಯನ್ನು ಬಲವಂತವಾಗಿ ಎಳೆದುತರುತ್ತಾನೆ. ಹೆಂಗಸು ಭಯಗ್ರಸ್ತಳಾಗಿದ್ದಾಳೆ, ಮುಖ ಪೇಲವವಾಗಿದೆ. ಕೊಳೆಯಾದ ಕಪ್ಪು ಕೂದಲಿನ ಸುತ್ತ ಕೆಂಪು ವಸ್ತ್ರ ಸುತ್ತಿದ ನೀಲಿಗಟ್ಟಿದ ಚಿಕ್ಕ ಹುಡುಗಿ ಜೊತೆಗಿದ್ದಾಳೆ.)

**ಪಾಲ್** : (ಕರುಣಾಪೂರ್ಣ ದೃಷ್ಟಿಯಿಂದ ಆ ತಾಯಿ ಮಕ್ಕಳನ್ನು ನೋಡಿ) ಏನಾಗಿದೆ ತಾಯಿ ಈ ಮಗುವಿಗೆ?

**ಹೆಂಗಸು** : ಫಾದರ್, ಈಗ ನೀವು ಕಾಣುತ್ತಿರುವಂತೆ ವಿಚಿತ್ರವಾಗಿ ವರ್ತಿಸುತ್ತಿರುವುದು. ಇದು ಮೂರನೇ ಬಾರಿ. ಕೈಗೆ ಸಿಕ್ಕದಂತೆ ಸದಾ ತಪಿಸಿಕೊಂಡು ಓಡಿ ಹೋಗುತ್ತಾಳೆ. ಅವಳಿಗೆ ನಮ್ಮ ಪರಿವೆಯೇ ಇರುವುದಿಲ್ಲ. (ತಾಯಿಯ ಹಿಡಿತದಿಂದ ತಪ್ಪಿಸಿಕೊಳ್ಳಲು ಹೆಣಗಾಡುತ್ತಿರುವ ಮಗಳನ್ನು ಮತ್ತಷ್ಟು ಬಿಗಿಹಿಡಿದು ಪಾದ್ರಿಯ ಸಮೀಪಕ್ಕೆ ಒಯ್ಯುತ್ತಾಳೆ. ಪಾದ್ರಿ ಅವಳನ್ನು ಮೇಲಿನಿಂದ ಕೆಳಗೆ ದೃಷ್ಟಿ ಹಾಯಿಸಿ ನೋಡುತ್ತಾನೆ.... ಕ್ಷಣಕಾಲ ಕಣ್ಣು ಮುಚ್ಚಿ ಧ್ಯಾನಿಸಿ, ಕಣ್ತೆರೆದು)

**ಪಾದ್ರಿ** : ತಾಯಿ, ಈ ಮಗು ಹೆಚ್ಚು ಹೊತ್ತು ಬಿಸಿಲಿನಲ್ಲಿ ಇತ್ತೇನು?

**ಹೆಂಗಸು** : ಇಲ್ಲ ಫಾದರ್, ಹಾಗೇನೂ ಇಲ್ಲ.

**ಪಾದ್ರಿ** : ತಾಯಿ, ನನಗೆ ಹೊಳೆದಂತೆ ಈ ಮಗುವಿನಲ್ಲಿ ಯಾವುದೋ ಒಂದು ದುಷ್ಟ ಶಕ್ತಿ ಪ್ರವೇಶಿಸಿದೆ.

**ಹೆಂಗಸು** : ಅಂದ.... ಅಂದರೆ.... ನನ್ನ ಮಗಳು ನನ್ನ ಮಗಳಾಗಿ ಉಳಿದಿಲ್ಲ ಅಲ್ಲವೇ ಫಾದರ್. (ಅಳುವಳು)

**ಪಾದ್ರಿ** : ಆ್ಯಂಟಿ ಆ ಒಡಂಬಡಿಕೆಯ ಪುಸ್ತಕವನ್ನು ಸ್ವಲ್ಪ ತೆಗೆದುಕೊಂಡು ಬಾ.

(ಆ್ಯಂಟಿ ಪುಸ್ತಕವನ್ನು ತಂದುಕೊಡುತ್ತಾನೆ. ಪಾದ್ರಿ ಮೊಣಕಾಲೂರಿ ಆ ಹುಡುಗಿಯ ತಲೆಯ ಮೇಲೆ ಕೈಯನ್ನಿರಿಸಿ ಪುಸ್ತಕದಲ್ಲಿಯ ಒಂದು ಭಾಗವನ್ನು ಗಟ್ಟಿಯಾಗಿ ಓದುತ್ತಾನೆ.)

"ಗ್ಯಾಲಿಲೀಯ ಆ ಕಡೆ ಇರುವ ಗದಾರಿನೀಸ್ ಎಂಬ ದೇಶಕ್ಕೆ ಅವರು ಆಗಮಿಸಿದರು. ಅವನು ಆ ಪ್ರದೇಶವನ್ನು ತಲುಪಿದಾಗ ಅಲ್ಲಿ ಒಬ್ಬ ಮನುಷ್ಯನನ್ನು ಭೇಟಿಯಾದ. ಬಹಳ ಕಾಲದಿಂದಲೂ ಭೂತ ಹಿಡಿದಿದ್ದ ಆತ ಬಟ್ಟೆ ತೊಡುತ್ತಿರಲಿಲ್ಲ. ಅವನಿಗೊಂದು ನಿವಾಸವಿರಲಿಲ್ಲ. ಅವನ ವಾಸವೆಂದರೆ ಗೋರಿ. ಜೀಸಸ್‌ನನ್ನು ಕಂಡಕೂಡಲೇ ಆತ ಗಟ್ಟಿಯಾಗಿ ಅಳುತ್ತಾ ಅವನೆದುರು ಅಡ್ಡಬಿದ್ದು ದೊಡ್ಡದನಿಯಲ್ಲಿ ಹೇಳಿದ, 'ಓ ಅತ್ಯಂತ ಶ್ರೇಷ್ಠನಾದ ದೇವಪುತ್ರನೇ ನಿನ್ನ ಜೊತೆ ನನಗೇನು ಕೆಲಸ? ನಾನು ನಿನ್ನಲ್ಲಿ ಬೇಡಿಕೊಳ್ಳುವುದೇನೆಂದರೆ ನನ್ನನ್ನು ಪೀಡಿಸ

('ನಿನ್ನ ಜೊತೆ ನನಗೇನು ಕೆಲಸ' ಎಂಬ ಸಾಲಿನ ಮೇಲೆ ಪಾದ್ರಿಯ ಕೈಗಳು ನಿಂತು ಕಂಪಿಸುತ್ತಿದ್ದವು. ಆತನ ಕಣ್ಣಿಂದ ಧಾರಾಕಾರವಾಗಿ ನೀರು ಸುರಿಯುತ್ತಿತ್ತು. ಆ್ಯಂಟಭಾವೋದ್ವೇಗದಿಂದ ಕುಸಿದು ಆ ವಿಧವೆ ಹೆಂಗಸಿನ ಬಳಿ ಕಾಲೂರಿ ಕುಳಿತುಕೊಂಡೇ ಪುಸ್ತಕವನ್ನು ಮುಟ್ಟಿದ. ತನ್ನೊಳಗೇ ಮಾತಾಡಿಕೊಂಡ.)

**ಆ್ಯಂಟಿ** : 'ದೇವ ವಾಕ್ಯಗಳನ್ನು ಓದುವಾಗ ಕಣ್ಣೀರುಗರೆವ ಈತ ಈ ಜಗತ್ತಿನಲ್ಲೇ, ನಿಜಕ್ಕೂ ಶ್ರೇಷ್ಠ ಪುರುಷ!' (ಎಂದುಕೊಳ್ಳುತ್ತಿರುವಷ್ಟರಲ್ಲಿ, ಸ್ತಿಮಿತಕ್ಕೆ ಬಂದ ಮಗಳನ್ನು ನೋಡಿ ಸಂತೋಷದಿಂದ. ಸಂತೋಷದ ಅತಿರೇಕದಿಂದ ಆ ಹೆಂಗಸು ಆ್ಯಂಟಿಯನ್ನು ಅಲುಗಾಡಿಸುತ್ತಾಳೆ.)

**ಹೆಂಗಸು** : ದಣಿ.... ನಿನ್ನ ಈ ಫಾದರ್ ಸಾಕ್ಷಾತ್ ದೇವರೇ ಸರಿ. (ಎಂದು ಮಗಳೊಂದಿಗೆ ಪಾಲ್‌ನ ಕಾಲ ಬಳಿ ಕುಸಿದುಕೂರುತ್ತಾನೆ. ಪಾಲ್ ಮುಂದುವರಿಸುತ್ತಾನೆ)

**ಪಾಲ್** : "ಈಗ ದೆವ್ವ ಬಿಟ್ಟುಹೋದ ಮನುಷ್ಯ ಜೀಸಸ್‌ನ ಜೊತೆಗೆ ಇದ್ದು ಬಿಡುವುದಾಗಿ ಬೇಡಿಕೊಂಡ. ಆದರೆ. 'ನೀನು ನಿನ್ನ ಮನೆಗೆ ಹಿಂದಿರುಗಿ

ಹೋಗು. ದೇವರು ಎಂಥ ಪವಾಡ ಮಾಡಿ ನಿನ್ನಿಂದ ಭೂತವನ್ನು ಹೊರಗೋಡಿಸಿದ ಎಂಬುದನ್ನು ಜನರಿಗೆ ತೋರಿಸು." –ಎಂದು ಹೇಳಿ ಆತನನ್ನು ಹಿಂದಕ್ಕೆ ಕಳಿಸಿಬಿಟ್ಟ....

(ಪಾದ್ರಿ ಮುಗಿಸುತ್ತಿದ್ದಂತೆ ಆ್ಯಂಟಿ ಮತ್ತು ಹೆಂಗಸು ಸಂಭ್ರಮಾಶ್ಚರ್ಯಗಳಿಂದ ಒಬ್ಬರನ್ನೊಬ್ಬರು ನೋಡಿಕೊಳ್ಳುತ್ತಾರೆ. ಪಾಲ್ ನಿರ್ಭಾವುಕತೆಯಿಂದ ಇದ್ದಾನೆ. ಕೃತಜ್ಞತಾಭಾವ ತುಂಬಿಬಂದ ಹೆಂಗಸು ಪಾದ್ರಿಯ (ಪಾಲ್) ಪಾದಗಳನ್ನು ಚುಂಬಿಸಲು ಬಗ್ಗಿದಾಗ ಪಾಲ್ ಹಾವು ತುಳಿದವರಂತೆ ಬೆಚ್ಚಿ ಕಾಲುಗಳನ್ನು ಹಿಂದಕ್ಕೆ ಎಳೆದುಕೊಳ್ಳುತ್ತಾನೆ. ಕ್ಷಣ ಸಾವರಿಸಿಕೊಂಡು ಮೊದಲಿನ ಸ್ಥಿತಿಗೆ ಬಂದು)

**ಪಾಲ್** : ದೇವರು ನಿನಗೆ ಒಳ್ಳೆಯದು ಮಾಡಲಿ. ನಿನ್ನ ಮಗುವಿಗೆ ಆರಾಮವಾಯಿತಲ್ಲವೇ?

**ಆ್ಯಂಟಿ** : (ಸಂಭ್ರಮದಿಂದ) ಫಾದರ್, ಫಾದರ್ ಎಂತಹ ಪವಾಡವನ್ನು ಮಾಡಿಬಿಟ್ಟಿರಿ....ನಾನು ಊರಿಗೆಲ್ಲ ಈ ಪವಾಡದ ಬಗ್ಗೆ ಸಾರಿ ಹೇಳುತ್ತೇನೆ. ದೆವ್ವವೂ ಫಾದರ್‌ಗೆ ಹೆದರಿಕೊಂಡು ನೀನಾಮಾಸಿಯಾಳ ಮೈ ಬಿಟ್ಟು ಹೋಯಿತೆಂದು ಈಗಲೇ ಎಲ್ಲರಿಗೂ ತಿಳಿಸಬೇಕು ಅಮ್ಮನಿಗೂ ಹೇಳಬೇಕು.

**ಪಾಲ್** : (ಸಿಟ್ಟಿನಿಂದ) ಆ್ಯಂಟಿ ನಿನ್ನದು ಅತಿಯಾಯಿತು. ನಿನಗೆಲ್ಲೋ ಹುಚ್ಚು ಹಿಡಿದಿರಬೇಕು.... ಇದೋ ನೋಡು, ನಾನು ನಿನಗೆ ಹೇಳುವುದಿಷ್ಟೆ. ಈ ವಿಷಯ ಯಾರಲ್ಲಿಯೂ ಹೇಳಕೂಡದು. ಎಚ್ಚರಿಕೆ.

**ಆ್ಯಂಟಿ** : (ಅಳುಮೋರೆ ಹಾಕಿಕೊಂಡು) ಫಾದರ್, ಫಾದರ್ ನಾನು ಹೇಳದಿದ್ದರೂ ಜನರಿಗೆ ತಿಳಿದೇ ತಿಳಿಯುತ್ತದೆ. ಇವರೇ ಅದನ್ನು ಎಲ್ಲರಿಗೂ ಹೇಳುತ್ತಾರೆ. (ಬಾಗಿಲು ಬಡಿವ ಶಬ್ದ)

**ಪಾಲ್** : ಅದೆಲ್ಲ ನಿನಗೆ ಬೇಡ, ನೀನು ಮಾತ್ರ ಹೇಳಕೂಡದು. ನೋಡು ಯಾರೋ ಬಂದಂತಿದೆ.

(ಆ್ಯಂಟಿಯೋ ಹೋಗಿ ಬರುವಾಗ ಹಿಂದಿನಿಂದ ಕಾವಲುಗಾರ ಪ್ರವೇಶಿಸುತ್ತಾನೆ. ಬಂದ ಕಾವಲುಗಾರ ಅನುಮಾನಿಸುತ್ತ ಅಲ್ಲಿದ್ದ ಹೆಂಗಸರ ಕಡೆ ನೋಡುತ್ತಾನೆ. ಅದನ್ನು ಅರ್ಥಮಾಡಿಕೊಂಡವರಂತೆ ಅವರು ಒಳಗೆ ಹೋಗುತ್ತಾರೆ.)

**ಕಾವಲುಗಾರ**: (ಸಂಕೋಚದಿಂದ) ಫಾದರ್ ಓಡಿ ಹೋಗಿದ್ದ ಶಿಕಾರಿ ಮುದುಕ ಮತ್ತೆ ಹಿಂತಿರುಗಿ ಬಂದಿದ್ದಾನೆ. ಆತನಿಗೆ ಅಂತಿಮ ಮಜ್ಜನ ನೀಡುವುದಕ್ಕಾಗಿ ತಾವು ಅಲ್ಲಿಗ ಬರಬೇಕಂತೆ.

**ಪಾಲ್** : ಹೂಂ, ಆಗಲಿ. (ದೀರ್ಘ ನಿಟ್ಟುಸಿರು ಬಿಟ್ಟು) ಆದರೆ ಬೆಟ್ಟದ ಮೇಲೆ ಆ ರಸ್ತೆಗಳಲ್ಲಿ ಹೋಗುವುದು ಹೇಗೆ?

**ಕಾವಲುಗಾರ:** ಅದರ ಯೋಚನೆ ನನಗಿರಲಿ ಫಾದರ್.

**ಪಾಲ್** : ಹಾಗಾದರೆ ಸರಿ. ಇನ್ನು ಸ್ವಲ್ಪ ಹೊತ್ತಿನಲ್ಲಿಯೇ ಎಲ್ಲವನ್ನೂ ಸಿದ್ಧಮಾಡಿಕೊಳ್ಳುತ್ತೇನೆ. ನಂತರ ಕೂಡಲೇ ಹೊರಡೋಣ... ಅಂದ ಹಾಗೆ ನೀನೇನಾದರೂ ಕುಡಿಯಲು ತೆಗೆದುಕೊಳ್ಳುತ್ತೀಯ?

**ಕಾವಲುಗಾರ:** ಫಾದರ್, ಅದನ್ನು ಬೇಡವೆನ್ನುವುದು ಆ ಗೌರವದ ಸೂಚನೆ. ಅದಕ್ಕಾಗಿ ಸ್ವಲ್ಪವೇ ತೆಗೆದುಕೊಳ್ಳುತ್ತೇನೆ.

(ಪಾಲ್ ಗ್ಲಾಸಿಗೆ ವೈನನ್ನು ಸುರಿದು ನೀಡುತ್ತಾನೆ. ಕಾವಲುಗಾರ ಒಂದು ಹನಿಯನ್ನೂ ಬಿಡದಂತೆ ಗಟಗಟ ಕುಡಿದು ಗ್ಲಾಸನ್ನು ಕೆಳಗಿರಿಸುತ್ತಾನೆ. ಮತ್ತು ಮಿಲಿಟರಿ ಸೆಲ್ಯುಟ್ ಹೊಡೆದು ಹೊರಡುತ್ತಾನೆ. ಕಾವಲುಗಾರ ಹೋಗುವುದನ್ನೇ ಕಾಯುತ್ತಿದ್ದ ಆ್ಯಂಟಿ ಮೆಲ್ಲಗೆ ಪಾಲ್ ಬಳಿ ಸರಿದು ವಿನಮ್ರತೆಯಿಂದ ಮಾತಾಡಲು ಪ್ರಯತ್ನಿಸುತ್ತಾನೆ.)

**ಆ್ಯಂಟಿ** : ಫಾದರ್, ಹೊರಡಲು ಏನೇನು ಸಿದ್ಧಗೊಳಿಸಬೇಕೆಂಬುದನ್ನು ತಿಳಿಸುತ್ತೀರಾ? ಛತ್ರಿಯನ್ನು ತೆಗೆದುಕೊಳ್ಳಬೇಕೇ ಹೇಗೆ? (ದನಿಯಲ್ಲಿ ಆತುರತೆ)

**ಪಾಲ್** : ಆ್ಯಂಟಿ. ನಿನಗೇಕೆ ಅಷ್ಟೊಂದು ಆತುರ? ನಾನಂತೂ ಕುದುರೆ ಮೇಲೆ ಸವಾರಿ ಹೋಗುತ್ತೇನೆ. ನೀನು ಬರಲೇಬೇಕೆಂಬುದೇನೂ ಇಲ್ಲ. ಆದರೆ ಬರಬೇಕೆಂಬ ಆಸೆ ಇದ್ದರೆ, ನನ್ನ ಅಡ್ಡಿಯಿಲ್ಲ. ನನ್ನ ಹಿಂದೆ ಕುದುರೆ ಮೇಲೆ ಕೂರಿಸಿಕೊಂಡು ಹೋಗುತ್ತೇನೆ.

**ಆ್ಯಂಟಿ** : ಬೇಡ ಫಾದರ್. ನಾನು ನಿಮ್ಮ ಹಿಂದೆ ನಡೆದೇ ಬರುತ್ತೇನೆ. ನನಗೇನೂ ಕಷ್ಟವಾಗುವುದಿಲ್ಲ.

**ಪಾಲ್** : ಸರಿ ನಿನ್ನಿಷ್ಟ. ಹೋಗು ಬೇಗ. ನಿನಗೆ ಬೇಕಾದ್ದನ್ನೆಲ್ಲ ತೆಗೆದುಕೊ ಚರ್ಚಿನ ಮುಂದೆ ನನಗಾಗಿ ಕಾಯುತ್ತಿರು.

**ಆ್ಯಂಟಿ** : ಹಾಗಾದರೆ ಹೊರಡುತ್ತೇನೆ ಫಾದರ್. (ಹೊರಡುವನು) (ಹಿನ್ನೆಲೆಯಲ್ಲಿ ಆ್ಯಂಟಿ ಹಾಡುತ್ತಿರುವುದು ಕೇಳಿಬರುತ್ತದೆ.) ಲಾಲಲಾ....ಲಾಲಲಾ.....ಲಾಲಲಾ ತೈಲ ಪಾತ್ರೆ ಹಿಡಿದು ನಡೆವೆ ತಂದೆ ಜೊತೆಗೆ ಬೆಟ್ಟವೇರಿ ಹಳ್ಳ ಹಾರಿ ಶಿಕಾರಿಯ ಮನೆಗೆ

ಕೊನೆಯ ಯಾತ್ರೆ ಗಳಿಗೆಯಲ್ಲಿ ತೈಲ ಮಜ್ಜನ

ನನ್ನ ಕಂಡು ಜೊತೆಗೆ ಅವರ ಬೆಚ್ಚಲೀ ಜನ

ಲಾಲಲಾ......ಲಾಲಲಾ......ಲಾಲಲಾಲಾ.....

ಂಂ

## ದೃಶ್ಯ – ೭

(ರಂಗದ ಬದಿಗಳಿಂದ ಜನರ ಗುಜು ಗುಜು ಕೇಳಿ ಬರುತ್ತದೆ. ಒಂದೆರಡು ನಿಮಿಷಗಳ ಕಾಲ ರಂಗ ಬರಿದಾಗಿರಬೇಕು. ನಂತರ ಜನರ ಗುಂಪುಗಳು ಎರಡೂ ಬದಿಗಳಿಂದ ರಂಗವನ್ನು ಪ್ರವೇಶಿಸುತ್ತಾರೆ. ಅವರೆಲ್ಲರ ಮುಖಗಳಲ್ಲಿ ಆಶ್ಚರ್ಯ, ಮೆಚ್ಚುಗೆ, ಕುತೂಹಲಗಳು ಕಾಣುತ್ತವೆ. ನಂಬಲಾಗದ ಪಲವು ಪವಾಡಗಳನ್ನು ಕಂಡಂತೆ, ಕಂಡದ್ದನ್ನು ಒಬ್ಬರಿಗೊಬ್ಬರು ಹಂಚಿಕೊಳ್ಳಬೇಕೆಂಬ ತವಕ ಅವರಲ್ಲಿ ಎದ್ದು ಕಾಣುತ್ತದೆ.)

**ಒಬ್ಬ :** ಅಣ್ಣಂದಿರೇ......ಸುದ್ದಿ ಕೇಳಿಧಿರಾ?

**ಮತ್ತೊಬ್ಬ :** ಸುದ್ದಿ! ಎಂತಹ ಸುದ್ದಿ?...ಬಹುಶಃ ನಮ್ಮ ಪ್ರಿಯ ಪಾದ್ರಿಯವರ ಕರಾಮತ್ತುಗಳನ್ನು ಬಿಟ್ಟರೆ ಬೇರೆ ಸುದ್ದಿಗಳು ಇರಲಿಕ್ಕೆ ಸಾಧ್ಯವಿಲ್ಲ.

**ಮೊದಲನೆಯವ:** ಸರಿಯಾಗಿ ಊಹಿಸಿದೆ ಅಣ್ಣ. ನೀನಾಮಾಸಾಳ್ಗೆ ಹಿಡಿದಿದ್ದ ದೆವ್ವವನ್ನು ನಮ್ಮ ತಂದೆ ಕ್ಷಣಾರ್ಧದಲ್ಲಿ ಓಡಿಸಿಬಿಟ್ಟರಂತೆ. ದೆವ್ವ ಬಿಟ್ಟ ಆ ಮಗುವನ್ನು ಖುದ್ದಾಗಿ ಕಾಣಲು ಜನರು ಚರ್ಚಿನ ಕಡೆಗೆ ತಂಡೋಪತಂಡವಾಗಿ ಹೋಗಿ ಸೇರುತ್ತಿದ್ದಾರೆ.

**ಎರಡನೆಯವ:** ನಮ್ಮ ಅದೃಷ್ಟವೋ ಅದೃಷ್ಟ! ಇಂತಹ ಕುಗ್ರಾಮಕ್ಕೆ ದಯಾಮಯನಾದ ಆ ಭಗವಂತ ಒಬ್ಬ ಒಳ್ಳೆಯ ಪ್ರತಿನಿಧಿಯನ್ನು ಕಳಿಸಿದ. ಇಲ್ಲಿಯವರೆಗೂ ಕಾಣದ ಮಹಾನುಭಾವ ನಮ್ಮ ಉದ್ಧಾರಕ್ಕೆಂದೇ ಬಂದನೆಂದು ಕಾಣುತ್ತದೆ.

**ಮೂರನೆಯವ:** ಏನು ನಯ! ಏನು ವಿನಯ! ಎಂತಹ ಚಾರಿತ್ರ್ಯ! ಎಲ್ಲ ಹೆಣ್ಣು ಮಕ್ಕಳನ್ನು ಏಸುವಿಗೆ ಜನ್ಮ ಕೊಟ್ಟ ತಾಯಿಯಂತೆಯೇ ಭಾವಿಸುತ್ತಾನೆ. ಈ ಸಣ್ಣ ವಯಸ್ಸಿಗೇ ಎಂತಹ ಮನೋ ನಿಗ್ರಹ!

**ನಾಲ್ಕನೆಯವ:** ನಿಮಗೆ ಗೊತ್ತಿರಬೇಕಲ್ಲ? ಎಷ್ಟೊಂದು ದಿನಗಳು ನಮಗೊಬ್ಬ ಪಾದ್ರಿಯಿಲ್ಲದೆ ಚರ್ಚು ಎನ್ನುವುದು ಪಾಳು ಬಿದ್ದ ಕೊಂಪೆಯಂತಿದ್ದು

ಜನರೆಲ್ಲರೂ ದೇವರು, ಧರ್ಮ, ಶಿಸ್ತು-ಯಾವುದರ ಬಗ್ಗೆಯೂ ಪ್ರೀತಿ. ಭಕ್ತಿ ಇಲ್ಲದೆ ಎಲ್ಲರೂ ಅವರವರಿಗೆ ಇಷ್ಟವಾದಂತೆ ಬದುಕುತ್ತ, ಅರಾಜಕತೆಯ ಮಹಾಸಾಮ್ರಾಜ್ಯವಾಗಿತ್ತು!!

**ಎರಡನೆಯವ:** ಇದೆಲ್ಲವನ್ನೂ ದೊಡ್ಡ ಪಾದ್ರಿಗೆ ನಿವೇದಿಸಿಕೊಂಡದ್ದಕ್ಕೆ ಪಾದ್ರಿಯಾಗಿ ಒಬ್ಬ ಬಂದಿದ್ದನಲ್ಲ! (ಮುಖ ಕಿವುಚುತ್ತಾನೆ) ಛಿ! ಛಿ ನೆನಪಿಸಿಕೊಂಡರೇ ಮೈ ಮುಳ್ಳಾಗುತ್ತದೆ.

**ಮೂರನೆಯವ:** ತೆಗೆ ತೆಗೆ! ಈಗ್ಯಾಕೆ ಅವನ ಮಾತು? ಅವನು ಪಾದ್ರಿಯಲ್ಲ, ಉದ್ಧಾರ ಮಾಡಲು ಬಂದವನಲ್ಲ. ಪಾದ್ರಿಯ ವೇಷದಲ್ಲಿನ ಸೈತಾನನೇ ಸರಿ!..... ಸ್ವಲ್ಪವಾದರೂ ಸಂಯಮವಿಲ್ಲ..... ಯಾವಾಗಲೂ ಕುಡಿತ..... ಹೆಣ್ಣಿನ ಸಹವಾಸ!!

**ಮೊದಲನೆಯವ:** ಒಟ್ಟಿನಲ್ಲಿ ನಡೆತೆಗೆಟ್ಟ ಮನುಷ್ಯ! ಅಂಥ ಮನುಷ್ಯ ಇನ್ನೂ ಸ್ವಲ್ಪ ಕಾಲ ಇಲ್ಲಿಯೇ ಉಳಿದಿದ್ದರೆ ಈ ಊರು, ಈ ಜನ ನಾಶವಾಗಿ, ನರಕವಾಗುತ್ತಿತ್ತು.....

**ಮೊದಲನೆಯವ:** (ಮುಂದುವರಿಸುತ್ತ) ಹಾದರ, ಅನೀತಿಗಳಿಂದ ದೂರವಿದ್ದು ತನ್ನನ್ನು ರಕ್ಷಿಸಿಕೊಳ್ಳಲಾರದವ ನಮ್ಮನ್ನೇನು ರಕ್ಷಿಸಿಯಾನು?

**ಎರಡನೆಯವ:** ಸದ್ಯ, ಅವನು ಕಾಯಿಲೆ ಬಿದ್ದು ಸತ್ತದ್ದು ಈ ಊರಿಗೆ ಹಿಡಿದಿದ್ದ ಪೀಡೆ ದೂರವಾದಂತಾಯಿತು.

**ಮೂರನೆಯವ:** ಇನ್ನೊಂದು ಸುದ್ದಿ ಗೊತ್ತೇನು? ಸತ್ತರೂ ಶನಿ ದೂರವಾಗಲಿಲ್ಲ ಎಂಬಂತೆ, ಸತ್ತ ಆ ಪಾದ್ರಿ ಸೈತಾನನ ದೂತನಾಗಿ, ದೆವ್ವವಾಗಿ ಅಲೆದಾಡುತ್ತಲೇ ಇದ್ದಾನಂತೆ!!.... ಪಾಪ! ಅತೃಪ್ತ ಆತ್ಮ! (ವ್ಯಂಗ್ಯ).

**ಎಲ್ಲರೂ :** (ಆಶ್ಚರ್ಯದಿಂದ) ನಿನಗಾರು ಈ ದರಿದ್ರ ಸುದ್ದಿಗಳನ್ನು ಹೇಳಿದವರು? ಅದೆಲ್ಲ ಸುಳ್ಳು ವದಂತಿಗಳೇ ಇರಬೇಕು.

**ಮೂರನೆಯವ:** ಹಾಗಂತ ತುಂಬ ಜನ ಮಾತಾಡಿಕೊಳ್ಳುತ್ತಿದ್ದರು. ಯಾವೊಬ್ಬ ಪಾದ್ರಿಯೂ ಇಲ್ಲಿ ಉಳಿಯದಂತೆ ಬೆದರಿಸುತ್ತಿದ್ದಾನಂತೆ. ಹೇಗಾದರೂ ಅವನನ್ನು ಇಲ್ಲಿಂದ ಹೊರಡಿಸಬೇಕೆಂದು ಏನೇನೋ ಸಂಚುಗಳನ್ನು ಮಾಡುತ್ತಿದ್ದಾನಂತೆ!!

**ಎರಡನೆಯವ :** (ನಗುತ್ತ) ಓಹೊಹೋ! ಬಹಳ ತಮಾಶೆಯಾಗಿದೆ!

**ಮೂರನೆಯವ:** (ಗಂಭೀರವಾಗಿ) ಇದು ನಗುವಂತಹ ವಿಷಯವಲ್ಲ. ಅವನ ಆ ತಂತ್ರಗಳು ಫಲಿಸಿ ನಮ್ಮ ದೇವರಂತಹ ಈ ಪಾದ್ರಿಗೆ ತೊಂದರೆಕೊಟ್ಟು ಓಡಿಸಿಬಿಟ್ಟರೆ

ನಮ್ಮ ಪಾಡೇನು?.,..ಹೇಗಾದರಾಗಲಿ. ನಮ್ಮ ಪ್ರೀತಿಯ ತಂದೆಗೆ ತೊಂದರೆ ಆಗದಂತೆ ನೋಡಿಕೊಳ್ಳಬೇಕಾದ್ದು ನಮ್ಮ ಧರ್ಮ.

**ಮೊದಲನೆಯವ** : ಬಿಡು ಬಿಡು! ನಮ್ಮ ಪಾದ್ರಿಯ ಪವಾಡ ಶಕ್ತಿಯ ಮುಂದೆ ಯಾವ ಸೈತಾನನೂ ನಿಲ್ಲಲಾರ. ಆತ ಸಾಕ್ಷಾತ್ ಏಸು ಪ್ರಭುವಿನಂತೆಯೇ! ಯಾವ ದುಷ್ಟಶಕ್ತಿ ತಾನೇ ಅವರ ಬಳಿ ಸಾರಲು ಸಾಹಸ ಮಾಡೀತು?!

**ನಾಲ್ಕನೆಯವ** : (ಗುಟ್ಟನ್ನು ಹೇಳುವಂತೆ) ಹಾಗಲ್ಲ. ನಿನಗೆ ವಿಷಯ ತಿಳಿದಿಲ್ಲ. ಇತ್ತೀಚೆಗೆ ನಮ್ಮ ಪಾದ್ರಿಗಳು ಒಮ್ಮೊಮ್ಮೆ ಅಸ್ವಸ್ಥರಾದಂತೆ, ಉದ್ವಿಗ್ನರಾದಂತೆ, ಅನ್ಯಮನಸ್ಕರಾದಂತೆ ಕಾಣಿಸಿಕೊಳ್ಳುತ್ತಾರಂತೆ!! ಅಲ್ಲದೆ ನಡುರಾತ್ರಿಯ ಹೊತ್ತು, ಊರೆಲ್ಲ ಮಲಗಿದ ಮೇಲೆ ಒಬ್ಬರೇ ಎದ್ದು ಏನನ್ನೋ ಚಿಂತಿಸುತ್ತ ಎಲ್ಲಿಗೋ ಹೋಗುತ್ತಾರಂತೆ!! ಅವರ ತಾಯಿ ಭಯದಿಂದ ನಡುಗುತ್ತ, ಅಳುತ್ತಿದ್ದುದನ್ನು ಯಾರೋ ನೋಡಿದರಂತೆ!!!

**ಎರಡನೆಯವ** : ಛೆ! ಛೆ! ಇದೆಲ್ಲ ಇಲ್ಲಸಲ್ಲದ ಪುಕಾರುಗಳು! ವದಂತಿಗಳು!

**ಮೊದಲನೆಯವ:** ಇಷ್ಟೆಲ್ಲ ಅನುಮಾನ ಏಕೆ ಗೆಳೆಯರೇ? ಆ ಛ್ಯಾಂಟೀ, ಅದೇ ನಮ್ಮ ಪಾದ್ರಿಗಳ ಬಲಗೈ ಬಂಟ, ಚುರುಕು ಹುಡುಗ ಇದಾನಲ್ಲ. ೨೪ ಗಂಟೆಗಳ ಕಾಲ ಅವರಲ್ಲಿಯೇ ಇರುತ್ತಾನೆ. ಅವರ ನಂತರ ಅವನೇ ಪಾದ್ರಿಯಾಗುವ ಕನಸು ಬೇರೆ ಕಾಣುತ್ತಿದ್ದಾನೆ. ಅವನನ್ನೇ ಕೇಳಿದರೆ ವಿಷಯದ ಸತ್ಯಾಸತ್ಯತೆ ತಿಳಿಯುತ್ತದೆ.

(ಕಾವಲುಗಾರ ಪ್ರವೇಶಿಸುತ್ತಾನೆ. ನೆರೆದ ಗುಂಪನ್ನು ನೋಡಿ)

**ಕಾವಲುಗಾರ:** ಇದೇನು ಗೆಳೆಯರೇ ಊರಿಗೆ ಊರೇ ಈ ಚೌಕದಲ್ಲಿ ನೆರೆದಂತಿದೆ! ಏನು ವಿಶೇಷ?

**ಒಬ್ಬ** : ಏನಿಲ್ಲ ಮಹಾರಾಯ........ ಹೀಗೇ...... ಆ ನಮ್ಮ ದೇವರ ಬಗ್ಗೆ ಮಾತನಾಡಿಕೊಳ್ಳುತ್ತಿದ್ದೆವು.

**ಕಾವಲುಗಾರ:** ಓಹೋ! ಅಪಾ! ವಿಷಯ? ಅಂದ ಹಾಗೆ ನೀವು ಮಾಡನಾಡುತ್ತಿರುವ ಮತ್ತು ನನಗೆ ತಿಳಿಯದ ದೇವರು ಯಾರಪ್ಪಾ?

**ಇನ್ನೊಬ್ಬ** : ಇನ್ಯಾರು ದೇವರಾಗಿರಲು ಸಾಧ್ಯ!..... ಅದೇ ನಮ್ಮ ಪಾದ್ರಿಗಳು.

**ಕಾವಲುಗಾರ:** ಪಾದ್ರಿಗಳೇ! ಹೌದು ಹೌದು! ಪಾದ್ರಿಗಳೆಂದರೆ ಸಾಮಾನ್ಯವೇ? ಈಗ ತಾನೇ ನಾನು ಅಲ್ಲಿಂದ ಬರುತ್ತಿದ್ದೇನೆ. ಆಹಾ! ಏನು ವಿನಯ, ಏನು ಅತಿಥಿ ಸತ್ಕಾರ! ನನ್ನಂತಹ ಒಬ್ಬ ಸಾಮಾನ್ಯ ವ್ಯಕ್ತಿಯನ್ನೂ ಕೂಡಾ ಎಷ್ಟೊಂದು ಗೌರವದಿಂದ ನೋಡಿಕೊಂಡರು! ಪ್ರೀತಿಯಿಂದ ಹತ್ತಿರ

ಕರೆದು, ಯೋಗಕ್ಷೇಮ ವಿಚಾರಿಸಿ, ಕುಡಿಯಲು ಮದ್ಯವನ್ನು ನೀಡಿದರು. ಅಬ್ಬಾ, ಅಂತಹ ವ್ಯಕ್ತಿ ಜನ್ಮ ಜನ್ಮಾಂತರಕ್ಕೂ ಮತ್ತೊಮ್ಮೆ ನಮಗೆ ದಕ್ಕಲಾರ.

**ಎಲ್ಲರೂ :** (ಅಸೂಯೆ, ಮೆಚ್ಚುಗೆಗಳಿಂದ) ನೀನೇ ಅದೃಷ್ಟವಂತ ಕಣಯ್ಯ. ಅವರ ಕೈಯಿಂದಲೇ ಏಸುಪ್ರಭುವಿನ ಕೈಯಿಂದ ಪಡೆದ ಮದ್ಯದಂತೆ, ಪಡೆದೆ. ನಿಜವಾಗಿಯೂ ನಿನ್ನ ಪುಣ್ಯ!......ಇದೇನು ಈಗ ಈ ಕಡೆ ಹೊರಟೆ?

**ಕಾವಲುಗಾರ:** ಗೆಳೆಯರೇ, ನಿಮಗೆ ನಿಕೊಡಿಮಸ್ ವಿಷಯ ತಿಳಿದೇ ಇದೆ. ಮೊದಲಸಲ ಪವಿತ್ರ ತೈಲಮಜ್ಜನಕ್ಕೆಂದು ಹೋದಾಗ, ಅವನು ಇದ್ದಕ್ಕಿದ್ದಂತೆ ಎಲ್ಲಿಯೂ ಮಾಯವಾಗಿದ್ದವನು. ಈಗ ಮತ್ತೆ ಮರಳಿ ಬಂದಿದ್ದಾನೆ. ಆಗ ಸಾಧ್ಯವಾಗದ ಅಂತಿಮ ತೈಲಮಜ್ಜನವನ್ನು ಈಗ ನೀಡುವಂತೆ ಪಾದ್ರಿಯವರಿಗೆ ಪ್ರಾರ್ಥಿಸಿಕೊಂಡು ಬಂದಿದ್ದೇನೆ. ಈಗ ನಾನು ಅಲ್ಲಿಗೇ ಹೊರಟಿದ್ದೇನೆ. ನೀವೂ ಬರುವಿರಾದರೆ ಬನ್ನಿ. ಸಾವಿನ ಕ್ಷಣಗಳನ್ನು ಎದುರು ಕಾಣುತ್ತಿರುವ ಆತನ ಅಂತಿಮ ದರ್ಶನವೂ ಆದಂತಾಗುತ್ತದೆ.

**ಎಲ್ಲರೂ :** ಹೌದೇನು?.... ಅಲ್ಲಿ ಅವನನ್ನು ಹದ್ದು ಎತ್ತಿಕೊಂಡು ಹೋಗಿತ್ತು ಎಂದು ಹೇಳುತ್ತಿದ್ದರಲ್ಲ! ಆ ಮುದುಕ ಮತ್ತೆ ಹೇಗೆ ಬದುಕಿ ಬರಲು ಸಾಧ್ಯವಾಯಿತು?.... ಅದೇನು ವಿಚಿತ್ರವೂ ಏನೋ! ಎಲ್ಲಾ ಆಯೋಮಯ!!.... ಸರಿ ನಡೆಯಿತು ಗೆಳೆಯರೇ....ಮುಂದೆ ಇನ್ನೂ ಏನೇನಾಗುವುದೋ ನೋಡಿಯೇ ಬಿಡೋಣ, ಪ್ರತ್ಯಕ್ಷವಾಗಿ.

(ಎಲ್ಲರೂ ಹೊರಡುವರು)

 OO

# ದೃಶ್ಯ – ೮

(ಕಿಂಗ್ ನಿಕೊಡಿಮಸ್‌ನ ಗುಡಿಸಲು. ಒಳಭಾಗದಲ್ಲಿ ಅರೆ ಪ್ರಜ್ಞಾವಸ್ಥೆಯಲ್ಲಿ ನಿಕೋಡಿಮಸ್ ಮಲಗಿದ್ದಾನೆ. ಅವನ ಸುತ್ತ ಕೆಲವು ಜನ ನಿಂತಿದ್ದಾರೆ. ಎಲ್ಲರೂ ಪಾದ್ರಿಯ ನಿರೀಕ್ಷೆಯಲ್ಲಿ ಇದ್ದಂತಿದೆ. ದೂರದಲ್ಲಿ ನಾಯಿ ಬೊಗಳುವ ಸದ್ದು ಕೇಳಿಸುತ್ತದೆ. ಕೂಡಲೆ ಜನ ಆ ಸದ್ದು ಬಂದ ದಿಕ್ಕಿಗೆ ನೋಡುತ್ತಾರೆ. ನಿಕೊಡಿಮಸ್‌ನ ಮೊಮ್ಮಗ (ಕಪ್ಪು ಗುಂಗುರು ಕೂದಲಿನವ) ತನ್ನ ಕೊರಳನ್ನು ಎತ್ತರಿಸಿ ಮುಂದಕ್ಕೆ ಚಾಚಿ, ಪಾದ್ರಿಗಿಂತ ಮೊದಲೇ ಬಂದು ನಿಂತಿರುವ ಆ್ಯಂಟಿಯನ್ನು ಕುರಿತು)

**ಮೊಮ್ಮಗ :** ಏಯ್ ಆ್ಯಂಟಿ ಹೋಗಿ ನೋಡೋ.... ಯಾರಿರಬಹುದು?

**ಆ್ಯಂಟಿ :** (ಜಿಗಿದೆದ್ದು ಓಡಿಹೋಗಿ ಹಿಂತಿರುಗಿ ಬಂದು) ಅದೇ ಪಾದ್ರಿಗಳು ಮತ್ತು ಕಾವಲುಗಾರ. ಬಂದೇಬಿಟ್ಟರು.

**ಮೊಮ್ಮಗ :** (ಸಿಡುಕಿನಿಂದ) ಕಾವಲುಗಾರ?...ಈ ಅನಿಷ್ಟ ಶನಿ! ಇವನೇಕೆ ಬರುತ್ತಿದ್ದಾನೆ....? ಎಲ್ಲಿ ಹೋದರೂ ಏನಾದರೂ ಮೂಗು ತೂರಿಸಿಕೊಂಡು ಬರುವುದೇ ಇವನ ಕೆಲಸ. ಇವನಿಗೆ ಬೇರೇನೂ ಕೆಲಸವಿಲ್ಲವೇನೋ? ದರಿದ್ರದ್ದು! ಕೈಗೆ ಸಿಗಬೇಕು, ಅವನನ್ನು ಇಲ್ಲಾ ಎನ್ನಿಸಿಬಿಡ್ತೀನಿ.

**ಆ್ಯಂಟಿ :** ಹಾಂ! ಅಷ್ಟು ಸುಲಭವಲ್ಲ ಅವನನ್ನು ಮುಟ್ಟುವುದು. ಅವನ ಜೊತೆಗಿನ ನಾಯಿಯೇ ಸಾಕು! ದೆವ್ವದಂತಹ ಆ ಪ್ರಾಣಿ ಕಣ್ಣಿಗೆ ಬಿದ್ದರೇನೇ ಪ್ರಾಣ ಹಾರಿಹೋಗುತ್ತೆ.

**ಮೊಮ್ಮಗ :** ಎಂದಾದರೂ ಒಬ್ಬನೇ ಸಿಗುವನಲ್ಲ ಆಗ ನೋಡಿಕೊಳ್ಳುತ್ತೇನೆ.

(ಅಷ್ಟರಲ್ಲಿ ಬಾಗಿಲಲ್ಲಿ ಪಾದ್ರಿ, ಕಾವಲುಗಾರ ಕಾಣಿಸಿಕೊಳ್ಳುತ್ತಾರೆ. ಆ್ಯಂಟಿ ಆತುರದಿಂದ ಎದ್ದು ಗೌರವ ಸೂಚಿಸಿ ನಿಕೊಡಿಮಸ್ ಬಳಿಗೆ ಕರೆದೊಯ್ಯುತ್ತಾನೆ. ಸುತ್ತ ಮುತ್ತ ಅಡ್ಡಾದಿಡ್ಡಿಯಾಗಿ ಜೋಡಿಸಿರುವ ಕಲ್ಲು ಬಂಡೆಗಳ ಮೇಲೆ ವಿವಿಧ ಪ್ರಾಣಿಗಳ

ಚರ್ಮಗಳನ್ನು ಒಣಗಲು ಹರವಿದಂತಿದೆ. ನಿಕೊಡಿಮಸ್ ಹಾಸಿದ ಒಂದು ಚರ್ಮದ ಮೇಲೆ ಮಲಗಿದ್ದಾನೆ. ಪಾದ್ರಿ ಅವನ ಬಳಿ ನಡೆದು ತಲೆ ನೇವರಿಸಿ ಮಾತನಾಡಿಸಲು ಯತ್ನಿಸುತ್ತಾನೆ.)

**ಪಾದ್ರಿ(ಪಾಲ್):** ಕಿಂಗ್ ನಿಕೋಡಿಮಸ್, ಕಣ್ಣು ತೆರೆ, ನೋಡು ನಾನು ಪಾದ್ರಿ, ನಿನಗೆ ಅಂತಿಮ ತೈಲಮಜ್ಜನ ನೀಡಲು ಬಂದಿದ್ದೇನೆ. ಪ್ರಾಣಿಗಳನ್ನು ಹಿಂಸಿಸಿ ಕೊಂದು ಗಳಿಸಿದ ನಿನ್ನ ಪಾಪಗಳಿಗೆ ಆ ಪ್ರಭುವಿನಲ್ಲಿ ಪ್ರಾರ್ಥಿಸಿ, ಕ್ಷಮೆ ಕೋರುತ್ತೇನೆ.

**ಕಾವಲುಗಾರ:** ಘಾಟಿ ಮುದುಕ. ಸಾಯುವಾಗಲೂ ತನ್ನ ಆಸ್ತಿಯನ್ನು ಹೇಗೆ, ಯಾರಿಗೆ ವಿತರಿಸಬೇಕೆಂದು ತಿಳಿಯದೆ, ಉಯಿಲನ್ನೂ ಮಾಡದೆ ಹೇಗೆ ಅವಿತಿಡಬೇಕೆಂದು ಯೋಚಿಸುತ್ತಿರಬೇಕು!

(ಆ್ಯಂಟಿ ಕಾವಲುಗಾರನನ್ನೇ ದಿಟ್ಟಿಸಿ ನೋಡಿ, ಅವನನ್ನು ಅರ್ಥಮಾಡಿಕೊಂಡಂತೆ ನಗುತ್ತಾನೆ.)

**ಪಾಲ್(ಪಾದ್ರಿ):** (ತನ್ನೊಳಗೇ) ಇಲ್ಲ, ಏನೂ ಪ್ರಯೋಜನವಿಲ್ಲ. ಯಾರಿಂದಲೂ ತಡೆಯಲು ಸಾಧ್ಯವಿಲ್ಲ... ಇದು ಸಾವು. ಈತ ಇನ್ನು ಯಾವೊಂದು ಪಾಪವನ್ನೂ ಕೊಲೆಯನ್ನೂ ಮಾಡಬಾರದೆಂದು ತನ್ನಿಂದ ಮತ್ತೊಂದು ಅಪರಾಧವಾಗಬಾರದೆಂದು ಇಲ್ಲಿಂದ ಓಡಿ ಹೋಗಿರಬೇಕು....ಆದರೆ, ಆದರೆ...... ಈಗ ಈತ ಇಲ್ಲಿ ಸತ್ತು ಮಲಗಿದ್ದಾನೆ, ಕಲ್ಲುಗಳ ಜೊತೆ ಕಲ್ಲಾಗಿ...!! ಅಂದರೆ? ಅನಂತದವರೆಗೆ ಭ್ರಷ್ಟನಾಗಿ ಸಾಗುತ್ತಿರುವ ನಾನೂ ಕೂಡಾ ಹೀಗೆಯೇ ಇನ್ನು ಮೂವತ್ತು, ನಲ್ವತ್ತು ವರ್ಷಗಳಲ್ಲಿ ಶವವಾಗಿ ಮಲಗುತ್ತೇನೆ....! ಅವಳು....ಅವಳು...ಈ ದಿನವೂ ನನ್ನ ದಾರಿ ಕಾಯುತ್ತಾಳೆ.... ಇಲ್ಲ... ಇಲ್ಲ.... ನಾನೇನು ಆಲೋಚಿಸುತ್ತಿದ್ದೇನೆ? ನಾನು ಸತ್ತಿಲ್ಲ..... ಇನ್ನೂ ನನ್ನಲ್ಲಿ ಜೀವ ಮಿಡಿಯುತ್ತಿದೆ...ಕಲ್ಲುಗಳ ಮೇಲೆ ಕೂತ ಹದ್ದಿನಂತೆ, ಭದ್ರವಾಗಿ, ದೃಢವಾಗಿ, ಶಕ್ತಿಯುತವಾಗಿ ಜೀವ ಮಿಟಿಯುತ್ತಿದೆ... ಏನೆಲ್ಲವನ್ನೂ ಬಯಸುತ್ತಿದೆ... ಹೌದು... ಹೌದು ಬಯಕೆ ಬಲವಾಗಿ, ಕಾಲುಗಳು ದುರ್ಬಲವಾಗಿ ನೇರದಾರಿಯಿಂದ ನನ್ನನ್ನು ದಿಕ್ಕುತಪ್ಪಿಸಿ ಆ ಮಾಯಾವಿನಿಂದ ಹೊಸ್ತಿಲೆಡೆಗೆ ಕರೆದೊಯ್ಯಬಹುದು.... ಇಲ್ಲ.... ಹಾಗಾಗಲು ಬಿಡಬಾರದು... ಇವನ ಈ ಅಂತಿಮ ಮಜ್ಜನದ ಕಡೆ ಗಮನ ಹರಿಸಬೇಕು... ಆ್ಯಂಟಿ (ಕೂಗುತ್ತಾನೆ)

**ಆ್ಯಂಟಿ** : ಏನಾಗಬೇಕು ಫಾದರ್?

**ಪಾದ್ರಿ** : ನೋಡು, ಅಂತಿಮ ಮಜ್ಜನಕ್ಕೆ ಬೇಕಾದುದೆಲ್ಲವನ್ನೂ ಸಿದ್ಧಮಾಡು.

(ಎಂದು ಹೊರಗಡೆ ಅಸ್ತಂಗತನಾಗುತ್ತಿರುವ ಸೂರ್ಯನ ಕೆಂಪು ಬೆಳಕು ಗುಡಿಸಲಿನ ಒಂದು ಭಾಗವನ್ನು ಆಲೋಕಿಸಿದೆ. ಪಾದ್ರಿ ಒಂದು ಕ್ಷಣ ಬಾಗಿಲಿನಿಂದ ಹೊರಗೆ ಹೋಗಿ ಮತ್ತೆ ಒಂದೆರಡು ಕ್ಷಣಗಳ ನಂತರ ಒಳಗೆ ಬರುತ್ತಾನೆ. ಆ್ಯಂಟಿ ಅಷ್ಟರಲ್ಲಿ ಬಿಳಿಬಟ್ಟೆ, ಪವಿತ್ರ ತೈಲವನ್ನು ಪೆಟ್ಟಿಗೆಯೊಳಗಿಂದ ತೆಗೆದಿರಿಸಿದ್ದಾನೆ. ಪಾದ್ರಿ ಮುದುಕನ ಹಣೆಗೆ ತೈಲವನ್ನು ಸವರಿದ. ಏನೇನೋ ಮಣ ಮಣ ಮಂತ್ರ ಹೇಳಿದ. ಧ್ಯಾನಮಗ್ನನಾಗಿ ಕಣ್ಣುಮುಚ್ಚಿ ಕುಳಿತ. ಒಂದೆರಡು ಗಳಿಗೆಯ ನಂತರ)...(ಪ್ರಕಟ)

ಪಾದ್ರಿ : ಇನ್ನೇನೂ ಆಸೆ ಉಳಿದಿಲ್ಲ. ಪೂರ್ತಿಯಾಗಿ ಪ್ರಜ್ಞಾಶೂನ್ಯನಾಗಿ ಬಿದ್ದಿದ್ದಾನೆ. ಹೆಚ್ಚೆಂದರೆ ಕೆಲವು ಗಂಟೆಗಳ ಕಾಲ ಮಾತ್ರವೇ ಈ ಉಸಿರಾಟ. ಆತನನ್ನು ಕೆಳಗೆ ಹಳ್ಳಿಗೆ ಒಯ್ಯಲು ವ್ಯವಸ್ಥೆ ಮಾಡಿಕೊಳ್ಳಿ. ನಾನಿಂದು ರಾತ್ರಿ ಇಲ್ಲಿಯೇ ಉಳಿಯಬೇಕಾದ ಅಗತ್ಯವೇನೂ ಇಲ್ಲ...(ಸ್ವಗತ) ನಿಜವಾಗಿಯೂ ಅಗತ್ಯವಿಲ್ಲವೇ....? ಇಡಿ ರಾತ್ರಿ ಇಲ್ಲಿಯೇ ಉಳಿದು ಅವಳಿಂದ ತಪ್ಪಿಸಿಕೊಳ್ಳಬೇಕೆಂದು ಬಯಸಲಿಲ್ಲವೇ....? ಉಹುಂ! ಸುಳ್ಳು! ದೇಹದಿಂದ ಇಲ್ಲಿ ಉಳಿದುಕೊಳ್ಳಬೇಕೆಂದಿದ್ದೇನೇ ಹೊರತಾಗಿ ಮನಸ್ಸಿನಿಂದ ಅಲ್ಲ... ಆದಷ್ಟು ಬೇಗ ಇಲ್ಲಿಂದ.... ಈ ತರಂಗದಿಂದ ಬಿಡಿಸಿಕೊಂಡು ಓಡಿಹೋಗಿ ಅವಳ ಮೃದುಬಾಹುಗಳ ಮಾದಕ ಸಂಕೋಲೆಯಲ್ಲಿ ಸಿಲುಕಿ ನಲುಗಿ ಹೋಗಬೇಕು.... ಓಹ್ ಅದರಲ್ಲಿ ಎಷ್ಟು ಸುಖವಿದೆ...!! ಛೆ! ಛೆ! ನಾನೇನು ಯೋಚಿಸುತ್ತಿದ್ದೇನೆ.

ಆ್ಯಂಟಿ : ಫಾದರ್, ಹೊರಗಡೆ ಪ್ರಕೃತಿ ಎಷ್ಟು ಸುಂದರವಾಗಿದೆಯಲ್ಲವೇ? ಹಾಯಾಗಿ ಈ ರಾತ್ರಿನ ಇಲ್ಲಿಯೇ ಕಳೆದು ಬೆಳಿಗ್ಗೆ ಎದ್ದು ಹೋದರಾಗದೆ? ನೀವೂ ಬೆಳಿಗ್ಗಿನಿಂದ ದಣಿದಿದ್ದೀರಿ. ಮತ್ತೆ ಪ್ರಯಾಣದಿಂದ ಆಯಾಸ. ಬೇಡ ಫಾದರ್. ಇಂದು ಇಲ್ಲಿಯೇ ಇದ್ದು ಬಿಡೋಣ.

ಪಾದ್ರಿ : (ಮೆಚ್ಚುಗೆಯಿಂದ) ಭಲೆ ಆ್ಯಂಟಿ. ನನ್ನ ಮನಸ್ಸಿನಲ್ಲಿ ಇದ್ದುದನ್ನೇ ಹೇಳುತ್ತಿದ್ದಿ. ನನಗೂ ಹಾಗೇ ಅನ್ನಿಸಿದೆ. ಈ ಸಮುದ್ರ ದಂಡೆಯಲ್ಲಿನ ಬಂಡೆ ಕಲ್ಲುಗಳು ಚಂದ್ರ ಬೆಳಕಿನಲ್ಲಿ ಬೆಳ್ಳಿಯ ಗಟ್ಟಿಗಳ ಹಾಗೆ ಹೊಳೆಯುತ್ತಿವೆ. ಇವುಗಳ ಮೇಲೆ ಮೈ ಚಾಚಿ ಮಲಗಿದ್ದರೆ ಹಾಯಾಗಿ ನಿದ್ದೆ ಮಾಡಬಹುದು. ಆದರೆ ಹೊರಡಲೇಬೇಕಾಗುವುದೋ ಏನೋ?

ಕಾವಲುಗಾರ: (ಪ್ರವೇಶಿಸಿ) ಫಾದರ್ ನೀವು ಇಂದು ಇಲ್ಲೇ ಉಳಿಯುವಿರಿ ಹೇಗೆ?

ಮೊಮ್ಮಗ : (ಕೋಪ, ತಿರಸ್ಕಾರಗಳಿಂದ) ನೀವು ನಿಮ್ಮ ಕರ್ತವ್ಯವನ್ನು ಪೂರೈಸಿದ್ದೀರಿ. ಇನ್ನು ನಿಶ್ಚಿಂತೆಯಿಂದ ಇಲ್ಲಿಂದ ದಯಮಾಡಿ.

ಕಾವಲುಗಾರ: ಪಾನಿಂಯಾ, 'ನಿಶ್ಚಿಂತೆಯಿಂದ ಶಾಂತವಾಗಿ ನೀವು ಇಲ್ಲಿಂದ ಹೋಗಬಹುದೆಂದು' ನಿಮ್ಮ ಆತ್ಮಸಾಕ್ಷಿಯಿಂದ ಹೇಳುತ್ತಿದ್ದೀರಾ?

**ಮೊಮ್ಮಗ :** ಈ ಅಂತಿಮ ತೈಲಮಜ್ಜನದ ವಿಧಿಗಲ್ಲದಿದ್ದರೆ ನೀವು ಇಲ್ಲಿಗ ಬರುವ ಅಗತ್ಯವೇ ಇರುತ್ತಿರಲಿಲ್ಲ. ನನ್ನ ವ್ಯವಹಾರದಲ್ಲಿ ತಲೆ ಹಾಕಲು ನಿಮಗ್ಯಾರಿಗೂ ಅಧಿಕಾರ ಇಲ್ಲ.

**ಕಾವಲುಗಾರ:** ಪಾನಿಯಾ, ದನಿ ಏರಿಸಿ ಮಾತಾಡಬೇಡ. ನಾವೂ ಕಾನೂನಿನಂತೆ ನಡೆಯಬೇಕಾಗಿದೆ.

**ಪಾದ್ರಿ :** ಸಾಕುಮಾಡಿ ನಿಮ್ಮ ಜಗಳ. ಒಳಗೆ ಆ ಮನುಷ್ಯ ಸಾಯುತ್ತ ಬಿದ್ದಿರುವಾಗ ಇದೇನು ನಿಮ್ಮ ಹಗರಣ?

**ಮೊಮ್ಮಗ :** 'ಜೀವನದಲ್ಲಿ ಒಂದೇ ಒಂದು ಕರ್ತವ್ಯವಿದೆ. ಪ್ರತಿಯೊಬ್ಬರೂ ಅವರವರ ಕರ್ತವ್ಯವನ್ನು ಪಾಲಿಸಬೆಕು' ಎಂದು ಭೋಧಿಸುತ್ತೀರಿ ಅಲ್ಲವೇ ಫಾದರ್? (ವ್ಯಂಗ್ಯ)

**ಪಾದ್ರಿ :** (ಆತ್ಮಪ್ರಜ್ಞೆಯನ್ನು ಕೆಣಕಿದಂತಾಗಿ, ಪಾನಿಯಾನನ್ನು ನೋಡುತ್ತಾನೆ) (ಸ್ವಗತ) ಹೌದು. ಇದು ನನ್ನ ಸಲುವಾಗಿಯೇ ಹೇಳಿದ ಮಾತಿರಬೇಕು. ಬೇರೆಯವರ ಬಾಯಿಂದ ತನ್ನ ಇಚ್ಛೆಯನ್ನು ದೇವರು ನನಗೆ ತಿಳಿಸಿರಬೇಕು. (ಪ್ರಕಟ) ಆಯಿತು ನಿಕೊಡಿಮಸ್ ಪಾನಿಯಾ, ನಿನ್ನ ಅಜ್ಜ ಸಾಯುವವರೆಗೆ ಅವನ ಬಳಿಯೇ ಇರು. ದೇವರು ದೊಡ್ಡವನು. ಮತ್ತೆ ಏನಾಗುವುದೋ ಹೇಳಲಾಗುವುದಿಲ್ಲ.... ನಾನಿನ್ನು ಬರುತ್ತೇನೆ. (ಎಂದು ಹೊರಡುತ್ತಾನೆ)

**ಪಾನಿಯಾ:** (ಪಾದ್ರಿಯನ್ನು ತಡೆದು) ಕ್ಷಮಿಸಿ ಫಾದರ್. ನನ್ನ ಮಾತು ಕೇಳಿ. ನನ್ನ ಅಜ್ಜ ತನ್ನ ಹಣವನ್ನು ನನ್ನ ವಶಕ್ಕೆ ಕೊಟ್ಟಿದ್ದಾನೆ. ಅದು ಇಲ್ಲಿ ನನ್ನ ಕೋಟಿನ ಜೇಬಿನಲ್ಲಿದೆ. ಅದೇನೂ ಅಷ್ಟು ಹೆಚ್ಚಿಲ್ಲ. ಆದರೆ ಅದೆಷ್ಟೇ ಇರಲಿ.....ಅದು ನನಗೆ ಸೇರುವುದೋ ಇಲ್ಲವೋ?

**ಪಾದ್ರಿ :** (ನಿರ್ಭಾವದಿಂದ) ನಿನ್ನ ಅಜ್ಜ ಅದನ್ನು ನಿನಗೆಂದೇ ಕೊಟ್ಟಿದ್ದರೆ ನಿನ್ನದೇ ಆಗುತ್ತದೆ.... (ಹಿಂತಿರುಗಿ ನೋಡುತ್ತಾನೆ. ಜನ ಅವನ ಹಿಂದೆಯೇ ಬರುತ್ತಾರೆ. ಕ್ಯಾಂಟಿ ಮರದ ಕೊಂಬೆಯೊಂದನ್ನು ಮುರಿದು ಕೋಲಿನಂತೆ ಮಾಡಿಕೊಂಡಿದ್ದಾನೆ. ಮೌನವಾಗಿ ದಾರಿ ಸವೆಸುತ್ತಾ ಸಾಗುತ್ತಾರೆ. ಯಾರಲ್ಲಿಯೂ ಮಾತಿಲ್ಲ. ಒಂದಷ್ಟು ದೂರ ಸಾಗಿದ ಮೇಲೆ ಪಾದ್ರಿ ಏನನ್ನೋ ಕಂಡು ನಿಲ್ಲುತ್ತಾನೆ. ಮತ್ತೊಮ್ಮೆ ಒಂದು ದಿಕ್ಕಿಗೆ ಕಣ್ಣು ನೆಟ್ಟು ನೋಡುತ್ತಾನೆ. ಕ್ಯಾಂಟ ಪಾದ್ರಿಯ ಬಳಿಗೆ ಬರುತ್ತಾನೆ.)

**ಕಾವಲುಗಾರ :** ಫಾದರ್, ಅಲ್ಲಿ ನೋಡಿದಿರಾ.....? ಅಬ್ಬ ಎಷ್ಟು ದೊಡ್ಡ ಬೆಂಕಿ! ಎದುರು ಕಾಣುತ್ತಿರುವ ದಿಬ್ಬರ ಶೃಂಗದಿಂದಲೇ ಬೆಂಕಿಯ ಜ್ವಾಲೆಗಳು ಭುಗಿಲೇಳುತ್ತಿವೆ. ಜನಗಳು ಅದರ ಕಡೆಗೇ ಓಡುತ್ತಿದ್ದಾರೆ. ನೋಡಿದಿರಾ ಫಾದರ್?

ಪಾದ್ರಿ : ಆ್ಯಂಟಿ.... ಆ್ಯಂಟಿ..... ನನಗೇಕೋ ನೀನು ಪುಟ್ಟ ಸೈತಾನನೇ ಇರಬೇಕು ಎನಿಸುತ್ತಿದೆ. ನಿನಗೆ ತಿಳಿಯದ ವಿಷಯವಂತು ಇಲ್ಲವೇ ಇಲ್ಲ!!... ಹೇಳು ಹಾಗಾದರೆ ಅದೇನು ಕೇಳೋಣ. (ಕುತೂಹಲದಿಂದ)

ಆ್ಯಂಟಿ : ಫಾದರ್ ಅವರ ಈ ಕುಣಿತ, ಸಂತೋಷ, ಸಂಭ್ರಮಗಳೆಲ್ಲ ನಮಗಾಗಿಯೇ, ನೀನಾಮಾಸಿಯಾಳ ವಿಚಾರದಲ್ಲಿ ನೀವು ತೋರಿದ ಪವಾಡ ಅವರನ್ನು ಖುಷಿಯಿಂದ ಹುಚ್ಚರನ್ನಾಗಿಸಿದೆ. ಅವರೆಲ್ಲ ನಿಮಗಾಗಿ ಈ ಉತ್ಸವ ಮಾಡುತ್ತಿದ್ದಾರೆ.

ಪಾದ್ರಿ : ಆ್ಯಂಟಿ..... ಆ್ಯಂಟಿ...... ನಿನಗೆಲ್ಲೋ ಹುಚ್ಚು! ಇವರೆಲ್ಲ ಇದೇನು ಮಾಡಹೊರಟಿದ್ದಾರೆ? ಉತ್ಸಾಹದ ಭರದಲ್ಲಿ ಹಳ್ಳಿಗೇ ಬೆಂಕಿ ಹಚ್ಚಿದರೆ? (ಸ್ವಗತ) ದೇವರೇ.... ದೇವರೇ ಇದೇನು ಪರೀಕ್ಷೆ? ಅವರಿಗಾಗಿ ನಾನೇನು ಮಾಡಿದೆ? ಅವರ ಪ್ರಾಮಾಣಿಕ, ಮುಗ್ಧನಂಬಿಕೆಗಳಿಗೆ ನಾನು ಮೋಸ ಮಾಡುತ್ತಿಲ್ಲ ತಾನೇ? ನಾನೊಬ್ಬ ದೊಡ್ಡ ಮೂರ್ಖನಾಗಿರುವುದು ಸಾಲದೆ, ಅವರೆಲ್ಲರನ್ನೂ ಮೂರ್ಖರನ್ನಾಗಿಸಿದೆ. ನಾನೆಂತಹ ಮೋಸಮಾಡುತ್ತಿದ್ದೇನೆ.!... ಓ ಏಸು ಪ್ರಭುವೆ.... ನಮ್ಮೆಲ್ಲರ ಅಪರಾಧ, ಅಜ್ಞಾನಗಳನ್ನು ಕ್ಷಮಿಸಬಲ್ಲೆಯಾ!

ಧ್ವನಿ : (ಹಿಂದಿನಿಂದ ಕೇಳಿಬರಬೇಕು) ಓ ಮೂರ್ಖ ಪಾಲ್, ಅವರು ಈ ಉತ್ಸವವನ್ನು ಆಚರಿಸುತ್ತಿರುವುದು ತಮ್ಮ ನಂಬಿಕೆಯನ್ನು. ದೇವರನ್ನು ವೈಭವೀಕರಿಸಿ, ಭಾವಪರವಶತೆಗೆ ಒಳಗಾಗಿ ತಮ್ಮ ಪಾಡಿಗೆ ತಾವಿದ್ದಾರೆ. ಅವರ ಯೋಚನೆ ಬಿಟ್ಟುಬಿಡು. ನಿನ್ನ ನಯವಂಚಕತೆ, ಆತ್ಮದ್ರೋಹಗಳನ್ನು, ದಾರಿದ್ರ್ಯವನ್ನು ಮಧ್ಯೆ ತೂರಿಸಬೇಡ. ಅವರನ್ನು ಅವರ ದೇವರ ಪಾಡಿಗೆ ಬಿಟ್ಟುಬಿಡು... ನೀನು ಕ್ಷುದ್ರ.... ಸತ್ಯದಲ್ಲಿ ಉರಿಯಲು, ಯಾತನೆಯನ್ನು ಅನುಭವಿಸಲು ಹೆದರುತ್ತಿದ್ದೀಯೆ.

ಪಾದ್ರಿ : (ಎಚ್ಚೆತ್ತವನಂತೆ) ಇಲ್ಲ...... ಇಲ್ಲ. ನಾನು ಎಲ್ಲಕ್ಕೂ ಸಿದ್ಧ. ಸತ್ಯಕ್ಕೆ ನಾನೆಂದೂ ಹೆದರುವುದಿಲ್ಲ.

ಕಾವಲುಗಾರ: ಫಾದರ್... ಫಾದರ್... ಏನಾಯಿತು ಫಾದರ್.... ಯಾಕೆ ಹೀಗೆ ಹೆದರಿ ಬಡಬಡಿಸುತ್ತಿದ್ದೀರಿ? ಯಾರೊಂದಿಗೆ ಮಾತಾಡುತ್ತಿದ್ದೀರಿ? ಇಲ್ಲಿ ಯಾರೂ ಇಲ್ಲವಲ್ಲ!

ಪಾದ್ರಿ : (ನಕ್ಕು) ನಿಮಗ್ಯಾರಿಗೂ ಕಾಣದ ಸೈತಾನನೊಬ್ಬ ಒಳಹೊಕ್ಕಿದ್ದಾನೆ. ಅವನನ್ನು ಕೊನೆಗಾಣಿಸದೆ ಬಿಡುವುದಿಲ್ಲ. (ಆ್ಯಂಟಿ ಕಡೆ ತಿರುಗಿ) ಆ್ಯಂಟಿ ನಡೆ. ನಾವು ಬೇಗ ಹೋಗಬೇಕು. ಬಹಳಷ್ಟು ಕೆಲಸಗಳಿವೆ. (ಎಂದು

ಗುಂಪಿನಿಂದ ಬೇರೆಯಾಗಿ ಬಿರಬಿರನೆ ಹೊರಟು ಹೋಗುತ್ತಾರೆ. ಹಿನ್ನೆಲೆಯಲ್ಲಿ ಪಟಾಕಿಗಳ ಶಬ್ಧ ಕೇಳಿ ಬರುತ್ತದೆ.)

**ಮೊಮ್ಮಗಳು:** (ವೇಗವಾಗಿ ಹೋಗುತ್ತಿರುವ ಪಾದ್ರಿಯ ಹಿಂದಿನಿಂದ ಓಡಿಬಂದು. ಅವರನ್ನು ತಡೆದು) ಫಾದರ್–ಫಾದರ್ ಈಗ ನನ್ನ ಅಜ್ಜನ ಸ್ಥಿತಿ ಹೇಗಿದೆ?

**ಪಾದ್ರಿ** : (ಆತುರದಲ್ಲಿದ್ದೇ) ಪರವಾಗಿಲ್ಲ...ಎಲ್ಲ ಸರಿಯಾಗಿದೆ.

**ಮೊಮ್ಮಗಳು:** ಅಂದರೆ ನನ್ನ ಅಜ್ಜನ ಕಾಯಿಲೆ ವಾಸಿಯಾಯ್ತಲ್ಲ.

**ಆ್ಯಂಟಿ** : (ತಟ್ಟನೆ) ಇಲ್ಲ. ಇಷ್ಟು ಹೊತ್ತಿಗೆ ನಿನ್ನ ಅಜ್ಜ ಸತ್ತು ಸ್ವರ್ಗ ಸೇರಿರಬೇಕು.

**ಮೊಮ್ಮಗಳು:** (ಚೀರುತ್ತ) ಇಲ್ಲ...ಇಲ್ಲ.....ಇದು ಸುಳ್ಳು. ಫಾದರ್. ನೀವು ಹೇಳಿ ಫಾದರ್. ಇದು ಸುಳ್ಳುತಾನೇ?

**ಪಾದ್ರಿ** : ಅಧೀರಳಾಗಬೇಡ ಮಗಳೆ. ಪ್ರತಿಯೊಬ್ಬರೂ ಒಂದಲ್ಲ ಒಂದು ದಿನ ಸಾಯಲೇಬೇಕಲ್ಲವೇ? ಸಮಾಧಾನ ತಂದುಕೋ. (ತಲೆ ನೇವರಿಸುತ್ತಾ) ಬಾ ಮಗು. ನಮ್ಮ ಜೊತೆಗೆ ನಡೆ. ಅಳುತ್ತಾ ಒಬ್ಬಳೇ ಕೂರುವುದು ಬೇಡ. ನೋಡು ಆ ಚರ್ಚಿನ ಬಳಿ ಸೇರಿರುವ ಜನ ಹಬ್ಬ ಮಾಡುತ್ತಿದ್ದಾರೆ. ಅಲ್ಲಿಗೇ ಹೋಗೋಣ. ನಾವೂ ಅವರೊಂದಿಗೆ ಬೆರೆತು ಅವರ ಸಂತೋಷದಲ್ಲಿ ಭಾಗಿಯಾಗೋಣ. (ಆ್ಯಂಟಿ, ಮೊಮ್ಮಗಳು, ಪಾದ್ರಿ ಮೂವರೂ ಹೊರಟು ಹೋಗುತ್ತಾರೆ. ಮತ್ತೆ ಹಿನ್ನಲೆಯಿಂದ, ಜನರ ಗದ್ದಲ, ನಡುವೆ 'ನಮ್ಮ ದೇವಪುತ್ರನಿಗೆ ಜಯವಾಗಲಿ, ನಮ್ಮ ಧರ್ಮರಕ್ಷಕನಿಗೆ ಜಯವಾಗಲಿ. ಆ ತಂದೆಯ ಕ್ಷೇಮಕ್ಕಾಗಿ ನಾವೆಲ್ಲರೂ ಮದ್ಯ ಸೇವಿಸೋಣ ಬನ್ನಿರಿ' ಎಂಬ ಮಾತುಗಳು ಪದೇ ಪದೇ ಕೇಳಿ ಬರುತ್ತವೆ. ಕ್ರಮೇಣ ಕ್ಷೀಣವಾಗುತ್ತ ಸದ್ದಡಗುತ್ತದೆ.)

೦೦

# ಅಂಕ – ೨

## ದೃಶ್ಯ – ೧

(ಮಧ್ಯರಾತ್ರಿಯ ಸಮಯ. ನಿರ್ಜನ ಬೀದಿಗಳಲ್ಲಿ, ಪಾಲ್ ಮನೆಯಿಂದ ಹೊರಟ ಅತಿಥಿಗಳ ಬೂಟುಗಳ ಸಪ್ಪಳ ಕೇಳಿಬರುತ್ತಿದೆ. ಪಾಲ್ ಕಿಟಕಿಗೆ ಮುಖಮಾಡಿ ಅವರು ಹೋದುದನ್ನು ದಿಟ್ಟಿಸುತ್ತಿದ್ದಾನೆ. ಮುಖದಲ್ಲಿ ದಣಿವು, ಯೋಚನಾಮಗ್ನನಾಗಿದ್ದಾನೆ. ಒಮ್ಮೆ ಬೀದಿ ಬಾಗಿಲಿನ ಕಡೆಗೆ ಮತ್ತೊಮ್ಮೆ ಅಡುಗೆಮನೆ ಕಡೆ ನೋಡುತ್ತಾನೆ. ಮನಸ್ಸಿನಲ್ಲಿ ಹೊಯ್ದಾಟ ನಡೆದಂತಿದೆ. ಅಸಹನೆಯಿಂದ ಕೋಣೆಯಲ್ಲಿ ಅಡ್ಡಾಡುತ್ತಾನೆ. ಒಮ್ಮೆ ಕುರ್ಚಿಯ ಮೇಲೆ ಕುಕ್ಕರಿಸುತ್ತಾನೆ. ಮತ್ತೆ ಎದ್ದು ಮೇಜಿನ ಡ್ರಾ ತೆಗೆದು ಕನ್ನಡಿಯೊಂದನ್ನು ಹೊರತೆಗೆಯುತ್ತಾನೆ. ಮುಖ ನೋಡಿಕೊಂಡು ಬೆಚ್ಚುತ್ತಾನೆ. ಹೆಜ್ಜೆ ಸಪ್ಪಳ ಕೇಳಿ ಬಂದ ಕೂಡಲೇ ಕನ್ನಡಿಯನ್ನು ಮೇಜಿನ ಮೇಲೆ ಬೋರಲು ಹಾಕಿ ಅಡ್ಡ ನಿಲ್ಲುತ್ತಾನೆ. ಸಪ್ಪಳ ನಿಲ್ಲಲು ಮತ್ತೆ ಕನ್ನಡ ಕೈಗೆತ್ತಿಕೊಳ್ಳುತ್ತಾನೆ. ಮತ್ತೊಮ್ಮೆ ಸದ್ದಾಗಲು ಗಾಭರಿಯಿಂದ ಕನ್ನಡಿಯನ್ನು ಯಾವುದೋ ಒಂದು ಮೂಲೆಗೆ ಎಸೆದುಬಿಡುತ್ತಾನೆ– 'ಫಳ್! ಫಳ್' ಸದ್ದು ಕೇಳಿಬರುತ್ತದೆ. ತಾಯಿ ಬಾಗಿಲಲ್ಲಿ ಕಾಣಿಸಿಕೊಳ್ಳುತ್ತಾಳೆ.)

ತಾಯಿ : (ಪ್ರೀತಿ. ಕನಿಕರಗಳಿಂದ ನೋಡುತ್ತ) ಮಗು ಪಾಲ್. ಈ ಹೊತ್ತಲ್ಲದ ಹೊತ್ತಲ್ಲಿ ಏನು ಮಾಡುತ್ತಿದ್ದಿ?...ಏನೋ ಮುರಿದ ಸದ್ದಾಯಿತಲ್ಲ. ಏನದು ಮಗು?......(ಹತ್ತಿರ ಬಂದು) ಪಾಲ್, ಇದೇಕೆ ಗಾಯಗೊಂಡ ಬೆಕ್ಕಿನಂತೆ, ಅಸ್ವಸ್ಥನಾಗಿ ಹೀಗೆ ಹೆಜ್ಜೆ ಹಾಕುತ್ತಿರುವೆ?...ಒಂದೇ ಸಮನೆ ನಡೆದು, ದುಡಿದು ದಣಿದಿದ್ದಿ. ಬಂದ ಅತಿಥಿಗಳು ಹೊರಟಾಯಿತಲ್ಲ. ಇನ್ನಾದರೂ ಸ್ವಲ್ಪ ವಿಶ್ರಾಂತಿ ತಗೋ ಮಗು.

ಪಾಲ್ : (ಒಂದು ಬಗೆಯ ತಿರಸ್ಕಾರದ ನಗೆಯಿಂದ) ಅಮ್ಮ, ದಯವಿಟ್ಟು ನನ್ನನ್ನು ಓಂಸಿಸಬೇಡ. ನನಗೆ ಗೊತ್ತು. ನೀನೂ ಎಚ್ಚರವಿದ್ದು ನನ್ನನ್ನು ಕಾಯುತ್ತಿದ್ದೀಯೆ! ನಾನೆಷ್ಟು ಸಲ ನಿನಗೆ ಹೇಳಿಲ್ಲ? 'ಇನ್ನು ಮೇಲೆ ಅಲ್ಲಿಗೆ ಹೋಗುವುದಿಲ್ಲ' ಎಂದು? ನಿನಗೆ ನಂಬಿಕೆಯೇ ಬಂದಂತಿಲ್ಲ. ನಾನೇನು ಅಷ್ಟು ದುರ್ಬಲ ಮನಸ್ಸಿನವನೇ?

**ತಾಯಿ** : (ನೊಂದು) ಪಾಲ್, ಇದೇಕೆ ನೀನು ಹೀಗೆ ನಿನ್ನ ತಾಯಿಯ ಬಗ್ಗೆ ನಿಷ್ಠುರನಾಗುತ್ತಿರುವಿ? ನನಗೆ ನನ್ನ ಮಗನಲ್ಲಿ ಪೂರ್ಣ ವಿಶ್ವಾಸವಿದೆ. ತನ್ನ ಧರ್ಮಕ್ಕೆ, ಕರ್ತವ್ಯಕ್ಕೆ ಎಂದೂ ದ್ರೋಹ ಬಗೆಯುವುದಿಲ್ಲ. ಮುಗ್ಧ, ಪಾಪದ ಪ್ರಜ್ಞೆಗಳನ್ನು ನಿಜವಾದ ಅರ್ಥದಲ್ಲಿ ಉದ್ಧಾರ ಮಾಡುತ್ತಿದ್ದೀಯೆ. ಆದರೆ...ಆದರೆ....?

**ಪಾಲ್** : (ಸಿಡುಕಿನಿಂದ) ಮತ್ತೇನು ಮಧ್ಯೆ 'ಆದರೆ...ಆದರೆ' ಯ ಅಪಸ್ವರ? ಮನಸ್ಸಿನಲ್ಲಿ ಏನಿದೆಯೋ ಹೇಳಿಬಿಡು. ಸುಮ್ಮನೆ ನನ್ನನ್ನು ಕೊಲ್ಲಬೇಡ.

**ತಾಯಿ** : ಪಾಲ್. ನನ್ನನ್ನು ಅರ್ಥಮಾಡಿಕೊ. ನೀನು ನಾಶವಾಗುವುದನ್ನು. ಜನರ ದೃಷ್ಟಿಯಲ್ಲಿ ಪತಿತನಾಗುವುದನ್ನು ನಾನು ಸಹಿಸಲಾರೆ. ನಮ್ಮೆಲ್ಲರ ನಿರ್ಧಾರಗಳನ್ನು, ಪ್ರಯತ್ನಗಳನ್ನು ಹುಡಿಗೊಳಿಸಲು ನಮಗೆ ಮೀರಿದ ದುಷ್ಟ ಶಕ್ತಿಯೊಂದು ಸದಾ ನಮ್ಮನ್ನು ದಾರಿತಪ್ಪಿಸಲು, ಆತ್ಮವಿನಾಶ ಮಾಡಲು ಹೊಂಚಿ ಕಾಯುತ್ತಿರುತ್ತದೆ. ನಮಗರಿವಿಲ್ಲದಂತೆಯೇ ನಮ್ಮನ್ನು ಆ ಸೈತಾನ ತನ್ನ ಬಲೆಯಲ್ಲಿ ಕೆಡವಿಕೊಳ್ಳುತ್ತಾನೆ. ಅದಕ್ಕಾಗಿ ಅವನು ಯಾವ ಅತಿರೇಕಕ್ಕೂ ಹೋಗಬಲ್ಲ. ಅವನು ಬೀಳಿಸುವ ಅಧಃಪಾತಾಳದಿಂದ, ಪಾಪಕೂಪದಿಂದ ನಮ್ಮನ್ನು ರಕ್ಷಿಸಲಾರ. ಅವನು ಬಯಸುವುದರಲ್ಲಿ ತಪ್ಪೇನಿದೆ ಮಗು?... ನಿನಗೆ ನ್ನ ಸಂದಿಗ್ಧ ಅರ್ಥವಾಗುವುದಿಲ್ಲ. ಕ್ಷಣ ಕ್ಷಣವೂ ನಾನು ಅನುಭವಿಸುತ್ತಿರುವ ನರಕಯಾತನೆಯ ತೀವ್ರತೆ ನಿನಗೆ ಅರ್ಥಮಾಡಿಕೊಳ್ಳಲು ಸಾಧ್ಯವಿಲ್ಲ. ನೀನಿಲ್ಲದ ರಾತ್ರಿಗಳಲ್ಲಿ ನನ್ನೆದುರಿಗೆ ಆ ದುಷ್ಟಶಕ್ತಿಯ ಬೆದರಿಕೆಗಳ ಕಲ್ಪನೆ ನಿನಗೆ ಬರಲು ಸಾಧ್ಯವಿಲ್ಲ.... ಸಾಧ್ಯವೇ ಇಲ್ಲ. ನಿನ್ನ, ನನ್ನ ವಿನಾಶದ ಕಹಳೆಯೂದದೆ ಸಮಾಧಾನವೇ ಇಲ್ಲ ಅವನಿಗೆ. ಮಾಡಿಯೇ ಮಾಡುತ್ತೇನೆಂಬ ಪ್ರತಿಜ್ಞೆ ಬೇರೆ ಆ ಸೈತಾನನದು.... ಈಗ ಹೇಳು ಮಗು. ನನ್ನ ಮನಸ್ಸು ಹೇಗಿರಬಹುದೆಂಬುದನ್ನು ಯೋಚಿಸಿ ಹೇಳು.

**ಪಾಲ್** : (ಕನಿಕರದಿಂದ) ಅಮ್ಮ ನನ್ನ ಬಗ್ಗೆ ನೀನು ಇಟ್ಟಿರುವ ಅತಿಯಾದ ಪ್ರೀತಿಯೇ ಇಂತಹ ಅನಿಷ್ಟ ಕಲ್ಪನೆಗಳಿಗೆ ಕಾರಣವಾಗಿದೆ. ನೀನು ಹೆದರಬೇಕಿಲ್ಲ. ಯಾವ ಸೈತಾನನೂ ನನ್ನನ್ನು ಅಲುಗಿಸಲಾರ. ಈ ಏಸುಪ್ರಭುವಿನ ಭದ್ರ ಕವಚದಿಂದ ನಾನು ಪರಿರಕ್ಷಿತನಾಗಿದ್ದೇನೆ. ಸಲ್ಲದ ಯೋಚನೆಗಳಿಂದ ನೆಮ್ಮದಿಯನ್ನು ಹಾಳು ಮಾಡಿಕೊಳ್ಳಬೇಡ. ನೀನು ಸ್ವಸ್ಥವಾಗಿ ಹೋಗಿ ನಿದ್ದೆ ಮಾಡು.

**ತಾಯಿ** : (ನಿಟ್ಟುಸಿರು) ಆಂ! ನಿದ್ದೆ!.... ಎಲ್ಲಿಯ ನಿದ್ದೆ? ಮರೆತೂ ಒಂದು ಗಳಿಗೆ ಕಣ್ಣು ಮುಚ್ಚಲಾರೆ.... ಕೊನೆಯದಾಗಿ ಹೇಳುತ್ತಿದ್ದೇನೆ. ಮಗು. ನೀನು

ಆ ದೇವರಿಗೆ, ನಿನ್ನ ಆತ್ಮಕ್ಕೆ, ನಿನ್ನನ್ನು ನಂಬಿರುವ ಆ ನಿನ್ನ ಮುಗ್ಧ ಪ್ರಜೆಗಳಿಗೆ ಎಂದೂ ಮೋಸವಾಗದಂತೆ ನೋಡಿಕೋ. ಅದು ನಿನ್ನ ಕರ್ತವ್ಯ; ಬಲು ಭಾರವಾದ ಜವಾಬ್ದಾರಿ. ಈ ವಯಸ್ಸಾದ ಮುದಿತಾಯಿಯ ಮಾತುಗಳನ್ನು, ಎದೆಯಾಳದ ಆತಂಕಗಳನ್ನು ಅರ್ಥವಿಲ್ಲದ್ದೆಂದು ನಿರ್ಲಕ್ಷಿಸಬೇಡ. ಬರುತ್ತೇನೆ.... ಒಂದೆರಡು ಗಂಟೆಗಳ ಕಾಲವಾದರೂ ಎಲ್ಲ ಯೋಚನೆಗಳನ್ನು ಬಿಟ್ಟು ಬಲವಂತದಿಂದಲಾದರೂ ಒಂದಷ್ಟು ನಿದ್ದೆ ಮಡು. ಬೆಳಿಗ್ಗೆ ಹೊಸ ಮನುಷ್ಯನಾಗಿರುತ್ತೀ. ಹುರುಪಿನಿಂದ, ಉತ್ಸಾಹದಿಂದ ಚರ್ಚಿಗೆ ಹೋಗಬಲ್ಲೆ. ಆ ಕರುಣಾಮಯನಾದ ಏಸುಪ್ರಭುವು ನಿನ್ನನ್ನು ಸದಾ ಕಾಯುತ್ತಿರಲಿ.

(ಒಳಗೆ ಹೋಗುವಳು. ಅವಳು ಹೋಗುವುದನ್ನೇ ಕಾಯುತ್ತಿದ್ದು ಮತ್ತೆ ಯೋಚನೆಗಳ ಗುಂಗಿಗೆ ಇಳಿಯುತ್ತಾನೆ.)

**ಪಾಲ್** : (ಸ್ವಗತ) ಅಬ್ಬ! ಅವಳಿಂದ ಪಾರಾಗಿಬಿಟ್ಟೆ. ಇನ್ನು ಭಯವಿಲ್ಲ.

**ಅಂತರ್ವಾಣಿ**: ಸುಳ್ಳು. ಬರೀ ಸುಳ್ಳು. ನಿನ್ನಮ್ಮನನ್ನು, ಜನರನ್ನು ಸುಲಭವಾಗಿ ಮೋಸ ಮಾಡಬಲ್ಲೆ. ಆದರೆ ನಿನ್ನನ್ನು ನೀನು ವಂಚಿಸಿಕೊಳ್ಳಲಾರೆ.... ಅವಳನ್ನು ಮರೆತೆ ಎಂದೆಯಾ?... ನನ್ನ ಮನಸ್ಸು ದುರ್ಬಲವಲ್ಲ ಎಂದು ಬೀಗಿಕೊಳ್ಳುತ್ತಿದ್ದೀಯ?.... ಎಲ್ಲಿ ಮತ್ತೊಮ್ಮೆ ಹೇಳು... ಸುಮ್ಮನೆ ಆಗದ್ದಕ್ಕೆ ಪ್ರಯತ್ನಿಸಿ ಪ್ರಯಾಸಪಡುವುದೇಕೆ?... ನಿನ್ನ ಆತ್ಮದ ಕರೆಗೆ, ನಿನ್ನೊಳಗಿನ ದನಿಗೆ, ಎದೆಯಾಳದ, ಸುಪ್ತಾಕಾಂಕ್ಷೆಗಳಿಗೆ ಓಗೊಡು. ದೇವರು, ಧರ್ಮ, ಚರ್ಚು, ಉಪದೇಶ.... ಇದೆಲ್ಲ ನಿನ್ನಂಥವರಿಗಲ್ಲ. ಬದುಕಿನ ಬಟ್ಟಲ ತುಂಬ ಪ್ರಾಯದ ಮಧ್ಯವಿದೆ. ಅದನ್ನು ಚೆಲ್ಲಿ ಬಿಡಬೇಡ. ಕೊನೆಯ ಗುಟುಕಿನವರೆಗೆ ಕುಡಿದು ಆಸ್ವಾದಿಸು. ನನ್ನ ಮಾತು ಕೇಳು... ಹೋಗು ಅವಳು ನಿನಗಾಗಿ ಕಾದಿದ್ದಾಳೆ. ನಿನಗೇ ತನ್ನೆಲ್ಲವನ್ನೂ ಒಪ್ಪಿಸಿಕೊಂಡು ಬದುಕುತ್ತಿರುವ ಅವಳನ್ನು ವಂಚಿಸಬೇಡ. ನಿನ್ನೊಳಗಿನ ಪ್ರವೃತ್ತಿಗಳನ್ನೇಕೆ ತುಳಿಯುತ್ತೀ? ಕಾಣದ ಸ್ವರ್ಗ, ದೇವರುಗಳ ಕನಸಿನಲ್ಲಿ ಮುಳುಗಿ ನಿನ್ನ ಎಟುಕಿನಲ್ಲಿಯೇ, ನಿನ್ನ ಎದುರಿಗೇ ತೆರೆದುಕೊಂಡಿರುವ ಸ್ವರ್ಗದ ಬಾಗಿಲುಗಳನ್ನೇಕೆ ಮುಚ್ಚುತ್ತಿರುವೆ?

**ಪಾಲ್** : (ಬೆಚ್ಚಿ) ಯಾರು?... ಯಾರು ನೀನು? ನನ್ನನ್ನೇಕೆ ಈ ಪ್ರಲೋಭನೆಗಳಿಗೆ ದೂಡುತ್ತಿರುವೆ? ನಾನು ಅವಳನ್ನು ಎಂದೋ ಮರೆತುಬಿಟ್ಟಿದ್ದೀನಿ. ಎಲ್ಲವೂ ಒಂದು ಕೆಟ್ಟ ಕನಸು ಎಂದು ತೀರ್ಮಾನಿಸಿದ್ದೀನಿ. ಅವಳಿಗಾಗಲೇ ನನ್ನ ಮನಸ್ಸಿನ ಇರಾದೆಯನ್ನು ತಿಳಿಸಿಬಿಟ್ಟಿದ್ದೀನಿ. ಆಕೆ ಮತ್ತೆಂದೂ ನನ್ನ ಬಗ್ಗೆ ಕನಸುಗಳನ್ನು ಕಾಣುವುದಿಲ್ಲ: ಎಂದೂ ನನ್ನ ನಿರೀಕ್ಷೆಯಲ್ಲಿ

ಕೂರುವುದಿಲ್ಲ. ನನ್ನನ್ನು ಸೆಳೆದುಕೊಂಡು ನನ್ನಿಂದ ಮಾಡಿಸಿದ ಪಾಪಕ್ಕೆ ಪ್ರಾಯಶ್ಚಿತ್ತ ಮಾಡಿಕೊಳ್ಳಲಿ. ಇಲ್ಲವೆ. ಅನುಭವಿಸಲಿ.

**ಧ್ವನಿ** : (ಗಹಗಹಿಸಿ ನಕ್ಕು) ಆಹಾ! ಎಷ್ಟು ಸುಂದರವಾಗಿ ಸುಳ್ಳನ್ನು ಮಾತಾಡಬಲ್ಲೆ. ನಿಜವಾಗಿಯೂ ಅವಳ ಯೋಚನೆ ನಿನಗಿಲ್ಲವಾದರೆ ನೀನೇಕೆ ಹೀಗೆ ಕಂಪಿಸುತ್ತಿರುವಿ? ಒಳಗೊಳಗೇ ಪಾಪಭೀತಿಯಿಂದ ತಲ್ಲಣಿಸುತ್ತಿರುವಿ? ಗೊತ್ತು. ಅದು ಏಕೆಂದು ನನಗೆ ಗೊತ್ತು. ಅವಳ ಬಳಿಗೆ ಮತ್ತೆ ನೀನು ಹೋಗಬಹುದೆಂಬ ಭೀತಿಗಿಂತ ಹೆಚ್ಚಾಗಿ ಅವಳು ತಿರಸ್ಕಾರದಿಂದ, ನಿಷ್ಠುರತೆಯಿಂದ ನಿನ್ನನ್ನು ನಿಜವಾಗಿಯೂ ಮರೆತುಬಿಡಬಹುದೇನೋ ಎನ್ನುವ ಕಲ್ಪನೆಯೇ ನಿನ್ನನ್ನು ಹೆಚ್ಚು ಅಸ್ವಸ್ಥಗೊಳಿಸಿದೆ. ಅವಳು ನಿಜವಾಗಿಯೂ ಮರೆತುಬಿಟ್ಟರೆ? ಎಂಬ ಕಾಲ್ಪನಿಕ ಭೀತಿಯೇ ನಿನ್ನನ್ನು ತಲ್ಲಣಗೊಳಿಸಿರುವಾಗ, ಅವಳಿಂದ ದೂರ ಉಳಿಯುವುದು, ಅವಳ ಪ್ರೇಮವನ್ನು ಧಿಕ್ಕರಿಸುವುದು ನಿನಗೆ ಸಾವಿನಷ್ಟು ಭಯಂಕರವೆನಿಸೀತು. ಹೋಗು... ಹೋಗು... ಬರಿಯ ಸೋಗುಗಳಿಂದ ನಿನ್ನನ್ನೇಕೆ ಬಲಿಕೊಟ್ಟುಕೊಳ್ಳುತ್ತೀ?

**ಪಾಲ್** : ಹೌದು ಹೌದು..... ನೀನು ಹೇಳುತ್ತಿರುವುದೆಲ್ಲ ನಿಜವಿರಬಹುದು. (ಚೀರುತ್ತಾನೆ) ಏಗ್ನೀಸ್... ಏಗ್ನೀಸ್... ಓ ನನ್ನ ಮುದ್ದಿನ ಪಾರಿವಾಳವೇ.... ನನ್ನನ್ನು ಮರೆಯುವುದು ನಿನಗೆ ಸಾಧ್ಯವಾಯಿತೇ? ನೀನು ನಿರ್ದಯಳಾಗಬೇಡ... ನೀನು ಕೊಟ್ಟ ವಚನಗಳನ್ನು ಬಹುಶಃ ನೀನು ಮರೆಯಲಾರೆ! ಎಂದು ಭಾವಿಸುತ್ತೇನೆ. ನೀನು ನಿನ್ನ ಸಶಕ್ತ ಕೈಗಳಿಂದ ನನ್ನ ಮುಂಗೈಯನ್ನು ಬಲವಾಗಿ ಹಿಡಿದುಕೊಂಡು ನನಗೆ ಹೇಳಿದ್ದೆ. 'ಜೀವನ-ಮರಣಗಳೆರಡರಲ್ಲಿಯೂ ನಾವಿಬ್ಬರೂ ಅಗಲಲಾರದಂತೆ ಒಂದಾಗಬೇಕು' ಎಂದು. ನೆನಪಿದೆಯಲ್ಲವೇ ನನ್ನ ಸಕ್ಕರೆಯ ಗೊಂಬೆಯೇ!.... ಇನ್ನೂ ನೀನು ಏನೆಲ್ಲ ಹೇಳಿದ್ದೆ. ನೆನಪಿದೆಯೇ.... (ಉದ್ವಿಗ್ನನಾಗಿ) ಅಯ್ಯೋ ಇದೇನು ಮಾಡುತ್ತಿದ್ದೇನೆ?.... ಯಾರು ಮಾತಾಡುತ್ತಿದ್ದವರು! ನಾನೇ?... ನಾನೆಯೇ!!? ಇಲ್ಲ... ಇಲ್ಲ ಖಂಡಿತ ನಾನಲ್ಲ....ನನ್ನೊಳಗೆ ನಿಜವಾಗಿಯೂ ಸೈತಾನ ಪ್ರವೇಶಿಸಿಬಿಟ್ಟಿದ್ದಾನೆ. ಇನ್ನು ತಪ್ಪಿಸಿಕೊಳ್ಳಲಾರೆ. ಅವನ ಬಲೆಯ ಗಂಟುಗಳು ಬಿಗಿಯಾಗಿವೆ. ಆದರೂ...ಆದರೂ ಬಿಡಿಸಿಕೊಂಡು ಓಡಿಬಿಡಬೇಕು...ಪನಿಜ್ಜಾ ಹೇಳಿದ ಕತೆಯಲ್ಲಿನ ಮೊಲದಂತೆ, ತನ್ನ ಕಾಲನ್ನೇ ಕತ್ತರಿಸಿಕೊಂಡು ಓಡಿದಂತೆ, ಓಡಿ ಹೋಗಬೇಕು. ಸ್ವತಂತ್ರವಾಗಿ ದೂರ....ದೂರ....ಬಲುದೂರ ಯಾರ ಕಣ್ಣಿಗೂ ಬೀಳದಂತೆ ಓಡಿ ಹೋಗಬೇಕು. ಒಬ್ಬನೇ ಇದ್ದಷ್ಟೂ ಈ

ಸೈತಾನನ ಹಿಂಸೆ ಜಾಸ್ತಿಯಾಗುತ್ತಿದೆ. ಹೋಗಿ ಅಮ್ಮನನ್ನು ಮಾತಾಡಿಸಿದರೆ ಅವಳ ಬೇಸರವೂ ದೂರವಾಗುತ್ತೆ. (ಹೋಗುವನು)

(ಅಡುಗೆ ಮನೆಯಲ್ಲಿ ಅಮ್ಮ ಒಂದು ಗೋಡೆಗೆ ಒರಗಿ ಚಿಂತಾಮಗ್ನಳಾಗಿ ಕುಳಿತಿದ್ದಾಳೆ. ಪಾಲ್ ಮೆಲ್ಲನೆ ಹತ್ತಿರ ಹೋಗಿ ಅವಳನ್ನು ಅಲುಗಾಡಿಸುತ್ತಾನೆ. ಪಕ್ಕದಲ್ಲಿಯೇ ಮಲಗಿರುವ ಆ್ಯಂಟಿಯ ಕಡೆ ಗಾಬರಿಯಿಂದ ನೋಡುತ್ತಾಳೆ.)

ಪಾಲ್ : (ನಗುತ್ತಾ) ಅಮ್ಮ ನಾನು..... ನಿನ್ನ ಮಗ..... ಗಾಬರಿಯಾದೆಯಾ?

ತಾಯಿ : (ಚೇತರಿಸಿಕೊಂಡು) ಇದೇನು ಇಷ್ಟು ಹೊತ್ತಿನಲ್ಲಿ ಇಲ್ಲಿ?

ಪಾಲ್ : ಸುಮ್ಮನೆ ಬೇಸರವಾಯಿತು. ಎದ್ದಿರುವೆಯೋ ಇಲ್ಲವೊ ನೋಡಿ ಹೋಗೋಣವೆಂದು ಬಂದೆ. (ಆ್ಯಂಟಿಯ ಕಡೆ ನೋಡಿ) ಇದೇನು ಈ ಹುಡುಗ ಇಲ್ಲಿ? ಮನೆಗೆ ಹೋಗಲಿಲ್ಲವೇನು?

ತಾಯಿ : (ಸಂಕೋಚದಿಂದ) ಅದು.... ಅದು... ನೀನು (ಎಂದು ತಡವರಿಸುತ್ತ ಏನೋ ಹೇಳಬೇಕೆಂದು ಬಾಯಿ ತೆರೆಯುವಷ್ಟರಲ್ಲಿ ಆ್ಯಂಟಿ ಎಚ್ಚರಗೊಳ್ಳುತ್ತಾನೆ. ಪಾಲ್ ಅವನ ಕಡೆ ತೀಕ್ಷ್ಣವಾಗಿ ನೋಡುತ್ತಾನೆ.)

ಪಾಲ್ : ಇಷ್ಟು ರಾತ್ರಿಯಾದರೂ ಇನ್ನೂ ಏಕೆ ಇಲ್ಲಿಯೇ ಇದ್ದೀಯೆ? ನೀನು ಮಾಡಿದ್ದು ಸರಿಯಲ್ಲ. ನಿನ್ನ ತಾಯಿ ನಿನಗಾಗಿ ಕಾಯುತ್ತಿರಬಹುದಲ್ಲವೇ?

ಆ್ಯಂಟಿ : (ನಿದ್ದೆಯ ಮಂಪರಿನಲ್ಲೂ ಚುರುಕಾಗಿ) ಫಾದರ್, ನನಗೊಬ್ಬನಿಗೇ ಅಲ್ಲ. ನಮ್ಮಿಬ್ಬರ ಹಾದಿ ಕಾಯುತ್ತಿರುತ್ತಾರೆ. ನಾನು ನಿಮ್ಮ ಹಾದಿ ಕಾಯುತ್ತಲೇ ನಿದ್ರೆ ಮಾಡಿಬಿಟ್ಟೆ. ಕ್ಷಮಿಸಿ ಫಾದರ್.

ಪಾಲ್ : ಆ್ಯಂಟಿ. ಈಗ ಹೊತ್ತೇನಾಗಿದೆ ಗೊತ್ತಾ?

ತಾಯಿ : ಹೌದು ಆ್ಯಂಟಿ. ಯಾರ ಮನೆಗಾದರೂ ಹೋಗಿ ಭೇಟಿಯಾಗುವ ಹೊತ್ತೇನು ಇದು? ಸುಮ್ಮನೆ ಈಗ ಮನೆಗೆ ಹೋಗು. ಪಾಲ್ ಈಗಾಗಲೇ ಬಹಳ ದಣಿದಿದ್ದಾನೆ. (ಎಂದು ಹೇಳುತ್ತಲೇ ಪಾಲ್‌ನನ್ನು ಗಮನಿಸುತ್ತಾಳೆ)

ಆ್ಯಂಟಿ : (ನಿರಾಸೆಯಿಂದ) ಹಾಗಾದರೆ ಬರುವುದಿಲ್ಲವೇ ಫಾದರ್? ನನ್ನ ತಾಯಿ ನಿಮ್ಮನ್ನು ಕಂಡು ಬಹಳ ಮಾತನಾಡಲೇಬೇಕು ಎನ್ನುತ್ತಿದ್ದಳು. ತುಂಬ ಮಹತ್ವದ ವಿಚಾರವಿರಬೇಕು.

ತಾಯಿ : ಅಷ್ಟು ಮಹತ್ವದ್ದಾಗಿದ್ದರೆ ಖಂಡಿತ ಅವನು ಹೋಗುತ್ತಿದ್ದ, ಸುಮ್ಮನೆ ಇಲ್ಲಿ ನಿಂತು ಹರಟಬೇಡ. ನೀನೀಗ ಇಲ್ಲಿಂದ ಬೇಗ ಓಡು. ನಿನ್ನ ಅಮ್ಮನಿಗೆ ಹೇಳು ಪಾದ್ರಿಗಳು ಬೇರೆ ಯಾವುದಾದರೂ ಒಂದು ದಿನ ಬರುತ್ತಾರೆ ಎಂದು.

**ಪಾಲ್** : (ತಾಯಿಯ ಮಾತಿನಿಂದ ಅಸಮಾಧಾನ, ಕೋಪವುಂಟಾಗಿ ದೀಪವನ್ನೆತ್ತಿ ಮೇಜಿನ ಮೇಲೆ ಒರಟಾಗಿ ಇರಿಸುತ್ತಾನೆ. ಅವಳು ಹೇಳಿದ್ದನ್ನು ವಿರೋಧಿಸುವಂತೆ ಆ್ಯಂಟಿಯೋನನ್ನು ಕರೆಯುತ್ತಾನೆ.) ಆ್ಯಂಟಿ..... ಆ್ಯಂಟಿ ಬೇಜಾರು ಮಾಡಿಕೊಳ್ಳಬೇಡ. ನನ್ನಿಂದ ಯಾರಿಗೂ ನಿರಾಸೆ ಆಗಬಾರದು. ನಡೆ, ಹೋಗೋಣ. ಪಾಪ ನಿನ್ನ ತಾಯಿ ನಮಗಾಗಿ ಕಾಯುತ್ತಿರಬಹುದು (ಎಂದು ಒಂದಷ್ಟು ದೂರ ನಡೆದು, ತಾಯಿಯ ದಿಕ್ಕಿಗೆ ತಿರುಗಿ) ಅಮ್ಮ ನಾನು ಅಲ್ಲಿಂದ ಎಲ್ಲಿಗೂ ಹೋಗುವುದಿಲ್ಲ. ನೇರವಾಗಿ ಮನೆಗೆ ಬರುತ್ತೇನೆ. ಬಾಗಿಲಿನ ಚಿಲಕ ಹಾಕಿರಬೇಡ.

(ತಾಯಿ ಮೌನವಾಗಿರುತ್ತಾಳೆ. ಒಂದು ಕ್ಷಣದ ನಂತರ ಬಾಗಿಲಿಂದಾಚೆ ನೋಡುತ್ತಾಳೆ. ಭೀಕರ ಕತ್ತಲು. ಗಾಳಿಯ ಸುಯ್ಯಲು... ಹುಳು ಹುಪ್ಪಟಗಳ ಸದ್ದು. ತಾಯಿಯ ಚೀರುದನಿ.)

"ದೇವರೇ ದೇವರೆ.... ಎಂತಹ ಪರೀಕ್ಷೆ ಇದು? ಪಾಪವಲ್ಲದ ಪಾಪದ ಕಲ್ಪನೆಯಲ್ಲಿ ಹೀಗೆ ನರಳುವಂತೆ ಮಾಡುವುದಾದರೂ ಏಕೆ?...ನನ್ನ ಮಗ.... ನನ್ನ ಪಾಲ್... ಏನು ತಾನೇ ಅಪರಾಧ ಮಾಡಿದ್ದಾನೆ. ಸಹಜ ಮನುಷ್ಯನಂತೆ ಒಂದು ಹೆಣ್ಣನ್ನು ಪ್ರೀತಿಸಿದ. ಪ್ರೀತಿ, ಪ್ರೇಮಗಳು ಮನುಷ್ಯನ ಸಹಜ ಕ್ರಿಯೆಗಳು; ಸಹಜ ಪ್ರವೃತ್ತಿಗಳು. ಪ್ರಪಂಚದಲ್ಲಿ ಸಣ್ಣವರು, ದೊಡ್ಡವರು, ಕುರುಡರು, ಕುಂಟರು, ಕುರಿ ಕಾಯುವವರು, ಪ್ರತಿಷ್ಠಿತರು, ಸೆರೆಯಾಳುಗಳು ಹೀಗೆ ಎಲ್ಲರೂ ಪ್ರೀತಿಸುತ್ತಾರೆ. ಆದರೆ...ಆದರೆ ನನ್ನ ಪಾಲ್‌ಗೆ ಏಕೆ ಅದು ನಿಷಿದ್ಧ? ಅವನೇಕೆ ಪ್ರೀತಿಸಬಾರದು... (ಮೌನ).... ಇಲ್ಲ...... ಇಲ್ಲ... ನನ್ನ ಮಗ ಪಾಲ್.... ಎಲ್ಲರಂತಲ್ಲ. ಅವನು ಸಾಮಾನ್ಯ ಮನುಷ್ಯನಲ್ಲ. ಎಲ್ಲರ ಉದ್ಧಾರಕ್ಕೆಂದು ಅವನು ಅವತರಿಸಿದ್ದಾನೆ.... ನನಗೇನು ಬಂತು ಹುಚ್ಚು?..... ಅವನು ಮಾಡಬಾರದ್ದನ್ನು ಮಾಡುತ್ತಿದ್ದರೆ ಅದನ್ನೂ ಸಮರ್ಥಿಸುತ್ತಿದ್ದೇನೆಯೇ? ನನಗಷ್ಟು ಬೆಂಕಿ ಬೀಳಲಿ!.... ಆ ಪುಟ್ಟ ಹುಡುಗ ಆ್ಯಂಟಿಗೆ ಇರುವ ವಿವೇಕವಾದರೂ ನನಗೆ ಬೇಡವೆ? ಅವನ ಆ ಪುಟ್ಟ ತಲೆಯಲ್ಲಿ ಎಂತಹ ಉದಾತ್ತವಾದ, ಆದರ್ಶದ ವಿಚಾರಗಳಿವೆ. ಪಾದ್ರಿಗಳಲ್ಲೇ, ಅತ್ಯಂತ ಕಿರಿಯ ವಯಸ್ಸಿನವರೇ ಪರಿಶುದ್ಧರಾಗಿ, ಹೆಣ್ಣಿನ ಸಂಪರ್ಕವೇ ಇಲ್ಲದೆ ಬದುಕುತ್ತಿಲ್ಲವೇ?..... ನನ್ನ ಮಗ ಪಾಲ್‌ಗೆ ಬೇಕಾದಷ್ಟು ಮನೋದಾರ್ಢ್ಯವಿದೆ. ಸುಲಭವಾಗಿ ಯಾವುದಕ್ಕೂ ಸೋಲುವುದಿಲ್ಲ ಅವನ ಹಿಂದಿನವರಿಗಿಂತ ಇವನೇನು ಕಡಿಮೆಯಿಲ್ಲ. ಅಸಹಾಯಕನಾಗಿ ಎಂದಿಗೂ ಅಳುವುದಿಲ್ಲ. ಅವನು ಗಟ್ಟಿ ಮನುಷ್ಯ.... ಹೂಂ! ಅವಳೂ

ಅಷ್ಟೆ.... ತನ್ನ ಭಾವನೆಗಳನ್ನು ತೋರಿಸಿಕೊಳ್ಳದೆ ಸಂಯಮದಿಂದ ಇರಬಲ್ಲಳು.

(ಎಂದು ತಲೆಬಾಗಿಲನ್ನು ಮುಚ್ಚಿ ಬರುತ್ತಾಳೆ. ತಾನು ತೊಟ್ಟುಕೊಂಡಿದ್ದ ಏಪ್ರನ್ ಬಿಚ್ಚಲು ಪ್ರಯತ್ನಿಸಿ ಕಗ್ಗಂಟಾಗಿರುವುದನ್ನು ಕಂಡು ಸಿಡಿಮಿಡಿಗೊಂಡು, ಕತ್ತರಿಗಾಗಿ ಹುಡುಕುತ್ತಾ ಒಂದು ಬುಟ್ಟಿಯ ಕಡೆಗೆ ಹೋಗುತ್ತಾಳೆ. ತಕ್ಷಣವೇ ಚೆಕ್ಕಿನ ಮರಿ ಅದರೊಳಗಿರುವುದನ್ನು ನೋಡಿ ಹಿಂತಿರುಗುತ್ತಾಳೆ. ಹಾಗೂ ಹೀಗೂ ಮಾಡಿ ಹಿಂದಕ್ಕೆ ಮುಂದಕ್ಕೆ ಎಳೆದು ಗಂಟನ್ನು ಬಿಚ್ಚುತ್ತಾಳೆ. ಬಟ್ಟೆಯನ್ನು ಅರ್ಧ ಕಳಚಿ ಕುರ್ಚಿಯ ಮೇಲೆ ಕುಸಿದು ಕೂರುತ್ತಾಳೆ; ಆಕಳಿಸುತ್ತಾಳೆ. ಏನೋ ಕೇಳಿಸಿಕೊಳ್ಳುವಂತೆ ಕಿವಿ ನಿಮಿರಿಸುತ್ತಾಳೆ..... ಮತ್ತೆ ಯಾವುದೋ ಪ್ರಾರ್ಥನೆಯನ್ನು ಗುಣು ಗುಣಿಸುತ್ತಾಳೆ. ಮೋಂಬತ್ತಿಯನ್ನು ಆರಿಸಿ ತಟ್ಟನೆ ಮುಸುಕೆಳೆದುಕೊಂಡು ಹಾಗೆಯೇ ಕುರ್ಚಿಗೆ ಒರಗಿಕೊಂಡೇ ನಿದ್ದೆಗೆ ಇಳಿಯುತ್ತಾಳೆ)

OO

# ದೃಶ್ಯ – ೨

(ಹೆಂಡದಂಗಡಿ, ಅಷ್ಟೇನೂ ದೊಡ್ಡದಲ್ಲದ ಆ ಅಂಗಡಿಯಲ್ಲಿ ನಾಲ್ಕೈದು ಮೇಜುಗಳಿವೆ. ಬಾಗಿಲ ಬಳಿ ಎತ್ತರವಾದ ಜಗಲಿ. ಅದರ ಮೇಲೆ ಒಂದು ಸಣ್ಣ ಮೇಜು. ಕುರ್ಚಿ ಒಂದಿದೆ. ಮೇಜಿನ ಒಂದು ಬದಿಗೆ ಗಲ್ಲಾ ಪೆಟ್ಟಿಗೆ. ಇದೇ ಆ ಹೆಂಡನ ಹೋಟೆಲ್ ಮಾಲಿಕಳು ಕುಳಿತುಕೊಳ್ಳುವ ಜಾಗ. ತೀರಾ ರಾತ್ರಿಯಾಗಿರುವುದರಿಂದ ಗಿರಾಕಿಗಳು ಯಾರೂ ಇಲ್ಲ. ಹೆಂಡದಂಗಡಿಯ ಒಡತಿ (ಆ್ಯಂಟಿಯ ತಾಯಿ) ಒಮ್ಮೆ ಅಂಗಡಿಯನ್ನು ಪರೀಕ್ಷಿಸುವವಳಂತೆ ನೋಡಿ, ಸಮಾಧಾನದ ನಿಟ್ಟುಸಿರು ಬಿಟ್ಟು ಹೊರಗೆ ಬಂದು ಬಾಗಿಲನ್ನು ಮುಚ್ಚುತ್ತಾಳೆ. ಕೆಳಗಿನ ಚಿಲಕವನ್ನು ಹಾಕುತ್ತಾಳೆ. ಕಪ್ಪು ಜಡೆಗಳಿಂದ ಸುತ್ತಿದ ಗಂಟು ಹಿಂದಿನಿಂದ ಆಕರ್ಷಕವಾಗಿ ಕಾಣುತ್ತಿದೆ. ಇನ್ನೇನು ಬೀದಿಯ ಕಡೆ ತಿರುಗಿ ಹೊರಡಬೇಕು ಎನ್ನುವಷ್ಟರಲ್ಲಿ ವೇಗವಾಗಿ ಬಂದು ಪಾದ್ರಿ ಅವಳನ್ನು ಸಮೀಪಿಸುತ್ತಾನೆ. ಇಷ್ಟು ಹೊತ್ತಲ್ಲಿ ತನ್ನನ್ನು ಸಮೀಪಿಸಿದ ಪಾದ್ರಿಯ ಕಡೆ ಅಚ್ಚರಿಯಿಂದಲೂ, ಪ್ರಶ್ನಾರ್ಥಕವಾಗಿಯೂ ನೋಡುತ್ತಾಳೆ. ಆ್ಯಂಟಿ ತಾಯಿಯ ಮುಖವನ್ನು ಕುತೂಹಲದಿಂದ ನೋಡುತ್ತಾನೆ.)

**ಶ್ರೀಮತಿ ಮಾರ್ಟಿನ್** : ಬನ್ನಿ ಫಾದರ್, ಅಂಗಡಿಯ ಹಿಂದಿನ ಕೋಣೆಗೆ ಹೋಗುವ. (ಎಂದು ಬಾಗಿಲು ತೆಗೆದು ಒಳಗೆ ದಾರಿ ತೋರುತ್ತಾಳೆ).

**ಪಾಲ್** : ಬೇಡ ಬೇಡ. ನಿಮಗೆ ತೊಂದರೆ ಬೇಡ. ಇಲ್ಲಿಯೇ ಕುಳಿತು ಕೊಳ್ಳೋಣ. (ಎನ್ನುತ್ತಾ ಅಂಗಡಿಯ ಕರೆಗಟ್ಟಿದ ಒಂದು ಮೇಜಿನ ಮುಂದೆ ಕುಳಿತುಕೊಳ್ಳುತ್ತಾನೆ.) ಇಲ್ಲಿ ಕೂತರೆ ತೊಂದರೆ ಇಲ್ಲ ತಾನೇ ಮಿಸೆಸ್ ಮಾರ್ಟಿನ್? ಗಿರಾಕಿಗಳಿಗೆ ತೊಂದರೆಯಾಗಬಹುದೇನೋ (ಅನುಮಾನಿಸುತ್ತಾನೆ).

**ಶ್ರೀಮತಿ ಮಾರ್ಟಿನ್** : ಇಲ್ಲ ಫಾದರ್, ಯಾರೂ ಬರುವುದಿಲ್ಲ. ಹೊತ್ತು ಮೀರಿ ಹೋಗಿದೆ.

**ಪಾಲ್** : (ಒಂದರೆಕ್ಷಣ ಆ ಅಂಗಡಿಯ ಪರಿಸರವನ್ನು ಗಮನಿಸುತ್ತಾನೆ. ಎಲ್ಲವೂ ಅಚ್ಚುಕಟ್ಟಾಗಿದೆ. ಕೆಂಪು, ಹಳದಿ ಮತ್ತು ಹಸಿರು ಮದ್ಯದ ಶೀಶೆಗಳನ್ನಿಟ್ಟ ಕಪಾಟಿನ ಹಿಂದಿನ ಚಿಕ್ಕ ಗೋಡೆಯ ಮೇಲೆ ಪೆಟ್ರೋಲಿಯಂ ಲಾಂದ್ರದ ಬೆಳಕು ಚೆಲ್ಲಿದೆ. ಬಾಗಿಲ ಹಿಂದೆ

ಒಂದಷ್ಟು ಪೊರಕೆಗಳನ್ನು ತೂಗು ಹಾಕಿದೆ) (ಪಾಲ್ ಮಾತು ಮುಂದುವರೆಸುತ್ತಾನೆ) ಮಿಸೆಸ್ ಮಾರ್ಟಿನ್ ನಿನ್ನ ಗಂಡನೂ ಇದ್ದರೆ ಚೆನ್ನಾಗಿತ್ತು. ಆದರೆ ಭಾನುವಾರದವರೆಗೂ ಆತ ಸಿಗಲಾರನೆಂದು ಟ್ಯಾಂಟಿ ಹೇಳುತ್ತಿದ್ದ. ಹೌದೇನು?

**ಶ್ರೀಮತಿ ಮಾರ್ಟಿನ್:** ಹೌದು ಫಾದರ್.

**ಟ್ಯಾಂಟಿ** : ಭಾನುವಾರದಂದು ಬರುತ್ತಾರೆ. ನಿಮಗೆ ಅವರನ್ನು ಕಾಣುವುದು ತೀರಾ ಅಗತ್ಯವೆನಿಸಿದರೆ ನಾನು ಹೋಗಿ ಕರೆತರುತ್ತೇನೆ. ಅಗಬಹುದೇ ಫಾದರ್? ಬೇಗ ಹೋಗಿ ಬರುತ್ತೇನೆ.

**ಪಾಲ್** : ಅಗತ್ಯವಿಲ್ಲ. (ಆಕೆಯತ್ತ ತಿರುಗಿ) ನಿಮ್ಮ ಹುಡುಗನ ಬಗ್ಗೆ ಮಾತಾಡಬೇಕಿತ್ತು.... ಮುಂದೆ ಅವನ ಬಗ್ಗೆ ಏನನ್ನು ಆಲೋಚಿಸಿದ್ದೀರಿ? ಈಗ ಸಮಯ ಬಂದಿದೆ ಅವನ ದೊಡ್ಡವನಾಗುತ್ತಿದ್ದಾನೆ. ಅವನಿಗೆ ಯಾವುದಾದರೂ ಉದ್ಯೋಗ ಒದಗಿಸಬೇಕು. ಇಲ್ಲ. ಪಾದ್ರಿಯನ್ನಾಗಿ ಮಾಡಬೇಕೆಂದು ಆಸೆಯಿದ್ದರೆ, ಅದರ ಬಗ್ಗೆ ಗಂಭೀರವಾಗಿ ಆಲೋಚಿಸಬೇಕು.

**ಆಕೆ (ಮಿ.ಮಾ.):** ಪೂಜ್ಯರೇ, ನಿಮಗೇ ತಿಳಿದಂತೆ ನನ್ನ ಮಾರ್ಟಿನ್ ಈ ಜಗತ್ತಿನಲ್ಲೇ ಅತ್ಯಂತೆ ಕರ್ತವ್ಯ ಪ್ರಜ್ಞೆಯುಳ್ಳ ಮನುಷ್ಯ. ಆತ ಒಳ್ಳೆಯ ಗಂಡ; ಒಳ್ಳೆಯ ತಂದೆ. ಎಲ್ಲಕ್ಕಿಂತ ಹೆಚ್ಚಾಗಿ ಒಳ್ಳೆಯ ಕೆಲಸಗಾರ. ಅವನಷ್ಟು ಕಷ್ಟಪಟ್ಟು ಕೆಲಸ ಮಾಡುವವರು ಈ ಹಳ್ಳಿಯಲ್ಲಿ ಯಾರಿದ್ದಾರೆ? ನೀವೇ ಹೇಳಿ. ಟ್ಯಾಂಟಿ ಉದ್ಯೋಗ ಮಾಡಬಯಸಿದರೆ ತಂದೆಯ ಜೊತೆಗೇ ಇರಲಿ. ಅದೇ ಅವನಿಗೆ ಸೂಕ್ತವಾದದ್ದು. ಆದರೆ ಒಂದು ಮಾತ್ರ ನಾನು ಸ್ಪಷ್ಟಪಡಿಸುತ್ತೇನೆ. ನನ್ನ ಟ್ಯಾಂಟಿ ಇದೇ ಮಾಡಬೇಕು. ಅದೇ ಮಾಡಬೇಕು, ಎಂದಿಲ್ಲ. ಅವನು ಏನನ್ನು ಮಾಡಲು ಬಯಸಿದರೆ ಅದನ್ನು ಮಾಡಲು ಅವನು ಸ್ವತಂತ್ರ. ನಮ್ಮ ಬಲವಂತವೇನೂ ಇರುವುದಿಲ್ಲ. ಕಡೆಗೆ ಏನೂ ಕೆಲಸ ಮಾಡದಿದ್ದರೂ ಪರವಾಗಿಲ್ಲ. ಕೂತು ತಿನ್ನುವಷ್ಟು ಮಡಿದು ನಾವು ಹಣ ಗಳಿಸಿದ್ದೇವೆ. ಅವನಿಚ್ಛೆಯಂತೆ ಅವನು ಬದುಕಲಿ. ಬಡಗಿಯೋ, ಕುಂಬಾರನೋ, ಹೋಟೆಲ್ ಮಾಲಿಕನೋ ಯಾವುದಾದರೂ ಸರಿ.

**ಟ್ಯಾಂಟಿ** : (ಆತುರದಿಂದ) ನಾನು ಅದೇನೂ ಆಗುವುದಿಲ್ಲ. ನಾನು ಫಾದರ್‌ನಂತೆ ಪಾದ್ರಿಯಾಗುತ್ತೇನೆ.

**ಆಕೆ (ಮಿ.ಮಾ.):** ಸರಿ ಹಾಗೇ ಆಗಲಿ. ನೀನು ಪಾದ್ರಿಯೇ ಆಗುವಿಯಂತೆ.

**ಪಾಲ್** : ಬಹಳ ಸಂತೋಷ. ಅವನು ತನ್ನ ಅಂತರಂಗದ ಧ್ವನಿಗೆ ಕಿವಿಗೊಡಲು ನೀವು ಸ್ವಾತಂತ್ರ್ಯ ಕೊಟ್ಟಿರುವುದು ಸಂತೋಷ. ಯಾವಾಗಲೂ ನಮ್ಮ

ಅಂತರಂಗದ ಧ್ವನಿ ನಮ್ಮನ್ನು ತಪ್ಪುದಾರಿಗೆ ಒಯ್ಯುವುದಿಲ್ಲ. ಆದ್ದರಿಂದ ಆ್ಯಂಟಿಯನ್ನು ನಿಮ್ಮ ಇಚ್ಛೆಯ ಬಲವಂತಕ್ಕೆ ದೂಡದೆ ಅವನ ದಾರಿಗೆ. ಅವನ ನಿರ್ಧಾರಕ್ಕೆ ಬಿಟ್ಟಿರಿ. ಇದಕ್ಕಾಗಿ ನಿಮ್ಮನ್ನು ಅಭಿನಂದಿಸಬೇಕು. (ಆ್ಯಂಟ ಕಡೆ ತಿರುಗಿ) ಆ್ಯಂಟಿ. ಇದೋ ಈಗ ನಿನ್ನ ಸರದಿ. ಹೇಳು ನೀನೇಕೆ ಪಾದ್ರಿಯಾಗಬೇಕೆಂದು ಆಸೆಪಡುತ್ತಿರುವಿ. ನಿನಗೇ ತಿಳಿದಿದೆ. ಪಾದ್ರಿಯಾಗುವುದು ಅಷ್ಟು ಸುಲಭವಲ್ಲ. ಬೇರೆ ವೃತ್ತಿಗಳನ್ನು ಮಾಡಿದ ಹಾಗಲ್ಲ. ತಿಳಿಯಿತೇ? ಪಾದ್ರಿಯ ಜೀವನ ಬಹಳ ಕಷ್ಟಕರವಾದ್ದು. ಎಷ್ಟೆಲ್ಲ ವಿಧಿ ನಿಷೇಧಗಳು. ಎಲ್ಲರಂತೆ ಬಾಳುವ ಹಾಗಿಲ್ಲ. ಕ್ಷಣ ಕ್ಷಣಕ್ಕೂ ಎದುರಾಗುವ, ಮನಸ್ಸನ್ನು ಅಲ್ಲಾಡಿಸಲು ಪ್ರಯತ್ನಿಸುವ ಆಮಿಷಗಳನ್ನು ಹತ್ತಿಕ್ಕಿ ಬದುಕುವುದು ಎಷ್ಟು ಕಷ್ಟಕರವಾದ್ದು. ಇಂತಹುದೆಲ್ಲದರ ಕಲ್ಪನೆ ನಿನಗೆ ಇಲ್ಲ. ಅದಕ್ಕೇ ಪಾದ್ರಿಯಾಗುವುದರಲ್ಲಿ ಏನೋ ಮಹತ್ತಾದುದು ಇದೆ ಎಂದು ಸಂಭ್ರಮ ಪಡುತ್ತಿರುವಿ. ಕೇವಲ ದೇವರ ಸೇವೆಯಲ್ಲಿಯೇ ಪ್ರಾಮಾಣಿಕವಾಗಿ ನಮ್ಮನ್ನು ತೊಡಗಿಸಿಕೊಳ್ಳಬೇಕು. ನಿರಂತರ ತ್ಯಾಗದ ಬದುಕು ನಮ್ಮದಾಗಬೇಕು.

**ಆ್ಯಂಟಿ** : ಫಾದರ್, ಅದೆಲ್ಲವನ್ನು ನಾನು ಬಲ್ಲೆ. ನಿಮ್ಮನ್ನು ನೋಡುತ್ತ ನೀವಾಡುವ ಮಾತುಗಳನ್ನು ಕೇಳುತ್ತಾ ಕಲಿತಿದ್ದೇನೆ. ದೇವರ ಸೇವೆ ನನ್ನ ಸ್ವಂತ ಇಚ್ಛೆಯೆಂದೇ ಭಾವಿಸುತ್ತೇನೆ. ನನ್ನ ಅಪ್ಪ, ಅಮ್ಮ ಇಬ್ಬರು ನಾನು ಪಾದ್ರಿಯಾಗುತ್ತೇನೆಂದರೆ, ವಿರೋಧಿಸುವುದಿಲ್ಲ. ಒಮ್ಮೊಮ್ಮೆ ನಾನು ಹುಡುಗತನದಂತೆ ವರ್ತಿಸಬಹುದು. ಆದರೆ ಇನ್ನು ಮುಂದೆ ನೀವು ಹೇಳುವಂತೆ ತುಂಬ ಗಂಭೀರವಾಗಿ ನಡೆದುಕೊಳ್ಳುತ್ತೇನೆ. ಶ್ರದ್ಧೆಯಿಂದ ಧರ್ಮಶಾಸ್ತ್ರಗಳನ್ನು, ಭಾಷೆಗಳನ್ನು ಕಲಿಯುತ್ತೇನೆ. ನಿಮ್ಮ ಉಪದೇಶವನ್ನು ಅಕ್ಷರಶಃ ಪಾಲಿಸುತ್ತೇನೆ. ಕರ್ತವ್ಯದ ಕಡೆ ಗಮನ ಕೊಡುತ್ತೇನೆ.

**ಪಾಲ್** : ಆ್ಯಂಟಿ ನನ್ನ ಪ್ರಶ್ನೆ ಅದಲ್ಲ. ನೀನಂದಂತೆ ಪ್ರಾಮಾಣಿಕನಾಗಿ ಕರ್ತವ್ಯಶೀಲನಾಗಿ ಇರಬಲ್ಲೆ; ಇದ್ದೀಯ ಕೂಡ. ನಿನ್ನ ವಯಸ್ಸಿನಲ್ಲಿ ಹುಡುಗುತನ, ಚೆಲ್ಲಾಟಗಳು ಸಹಜ. ನಾನು ಹೇಳಿದೆನೆಂದು ಅದೆಲ್ಲದರಿಂದ ವಂಚಿಸಿಕೊಳ್ಳಬೇಡ. ಉತ್ಸಾಹವನ್ನು ಕಳೆದುಕೊಳ್ಳಬೇಡ. ನಿನ್ನ ಇಷ್ಟದಂತೆಯೇ ಪಾದ್ರಿಯಾಗಲು ಸಿದ್ಧನಾಗು. ಹುಡುಗನಾಗಿಯೂ ಸಂತೋಷದ ಕ್ಷಣಗಳನ್ನು ಅನುಭವಿಸು.

**ಆ್ಯಂಟಿ** ನಾನೀಗ ಹುಡುಗನಾಗಿಲ್ಲವೇ ಫಾದರ್? ನಾನೂ ಎಲ್ಲ ಹುಡುಗರ ಜೊತೆ ಆಟ ಆಡುತ್ತೇನೆ. ಆದರೆ ನಾನು ಆಡುವುದನ್ನು ನೀವು ನೋಡುವುದೇ ಇಲ್ಲ. ಅಲ್ಲದೆ ನನಗೆ ಇಷ್ಟವಾಗದಿದ್ದಲ್ಲಿ ನಾನೇಕೆ

ಆಡಬೇಕು? ಸಂತೋಷವಾಗಿರಲು ಆಟವೊಂದೇ ಸಾಧನವಲ್ಲ. ಚರ್ಚಿನ ಗಂಟೆ ಬಾರಿಸುವುದರಲ್ಲಿ, ಗೋಪುರದ ಮೇಲಿರುವ ಹಕ್ಕಿಗಳಲ್ಲಿ ನಾನೂ ಒಂದು ಎಂಬ ಭಾವನೆಯಲ್ಲಿ, ನಿಮ್ಮೊಂದಿಗೆ ಪೆಟ್ಟಿಗೆ ಒಯ್ಯುತ್ತ ಬಂಡೆಗಳ ಮೇಲೆ ಜಿಗಿ ಜಿಗಿದು ಹಾರುತ್ತ, ಕುಣಿಯುತ್ತ, ನಿಮಗಿಂತ ಮೊದಲೇ ಗುರಿ ತಲುಪುವುದರಲ್ಲಿ ನನಗೆ ಬೇರೆಲ್ಲಕ್ಕಿಂತ ಹೆಚ್ಚಿನ ಖುಷಿ ಸಿಗುತ್ತದೆ. ಫಾದರ್..... ಅದರಲ್ಲೂ ನೀವು ನೀನಾಮಾಸಿಯಾಳ ದೇಹದಿಂದ ದೆವ್ವವನ್ನು ಓಡಿಸಿದ್ದು ನೋಡಿದ ಮೇಲಂತೂ ನನ್ನ ಸಂತೋಷ ಇನ್ನಷ್ಟು ಹೆಚ್ಚಿತು. ಈ ಸಂತೋಷ ಎಷ್ಟೆಂದು ಹೇಳುವುದಕ್ಕೂ ಆಗದು ಫಾದರ್!!

**ಪಾಲ್** : ಆ್ಯಂಟಿ, ದೆವ್ವವನ್ನು ನಾನು ಹೊರಗಟ್ಟಿದೆನೆಂದು ನೀನೂ ನಂಬುತ್ತೀಯಾ?

(ಆ ಪ್ರಶ್ನೆ ಆ್ಯಂಟಿಯನ್ನು ದಿಗ್ಭ್ರಮೆಗೊಳಿಸುತ್ತದೆ. ಪಾಲ್‌ನ ಕಡೆ ಪ್ರಶ್ನಾರ್ಥಕವಾಗಿ ನೋಡುತ್ತಾನೆ. ಪಾಲ್ ಅವನ ನೋಟವನ್ನು ಎದುರಿಸಲಾಗದೆ ಮುಖ ಕೆಳಗೆ ಮಾಡುತ್ತಾನೆ.)

(ಮಾತನ್ನು ಮುಂದುವರಿಸುತ್ತಾ) ನಾವು ಹುಡುಗರಾಗಿದ್ದಾಗ ಯೋಚನೆ ಮಾಡುವ ರೀತಿಯೇ ಬೇರೆ. ಆಗ ನಮಗೆ ಎಲ್ಲವೂ ಅದ್ಭುತವಾಗಿ, ರೋಮಾಂಚಕಾರಿಯಾಗಿ ಕಾಣುತ್ತದೆ... ಬೆಳೆದು ದೊಡ್ಡವರಾದ ಮೇಲೆ ಅದೆಲ್ಲ ಬದಲಾಗುತ್ತದೆ. ಆದ್ದರಿಂದ ನಿರ್ಧಾರ ತೆಗೆದುಕೊಳ್ಳುವ ಮೊದಲು ಸ್ವಲ್ಪ ನಿಧಾನವಾಗಿ ಆಲೋಚನೆ ಮಾಡಬೇಕು. ಇಲ್ಲವಾದಲ್ಲಿ ಪಶ್ಚಾತ್ತಾಪ ಪಡಬೇಕಾಗುತ್ತದೆ. (ಮಾತಿನಲ್ಲಿ ನೋವು, ಅಧೀರತೆಗಳು ಕೇಳಿಸುತ್ತವೆ)

**ಆ್ಯಂಟಿ** : ಇಲ್ಲ ಫಾದರ್. ನಾನೆಂದೂ ನನ್ನ ನಿರ್ಧಾರಕ್ಕೆ ಪಶ್ಚಾತ್ತಾಪ ಪಡುವುದೇ ಇಲ್ಲ. ಖಂಡಿತವಾಗಿ ಹೇಳಬಲ್ಲೆ.... (ಅನುಮಾನಿಸುತ್ತ) ಫಾದರ್, ನೀವೆಂದಾದರೂ ನಿಮ್ಮ ನಿರ್ಧಾರಕ್ಕೆ ಪಶ್ಚಾತ್ತಾಪ ಪಟ್ಟಿದ್ದೀರಾ? ನೀವು ಪಾದ್ರಿಯಾದದ್ದು ತಪ್ಪಾಯಿತೆಂದು ಎಂದಾದರೂ ಪರಿತಪಿಸಿದ್ದೀರಾ?

**ಪಾಲ್** : (ಆಶ್ಚರ್ಯದಿಂದ ಅವನತ್ತ ನೋಡುತ್ತಾನೆ. ನಿಟ್ಟುಸಿರಿನಿಂದ ಸ್ವಗತ) ಹುಂ! ಅವನಿಗೇನು ಗೊತ್ತು. ನನ್ನ ನರಕಯಾತನೆ!!

(ಇವರಿಬ್ಬರ ಮಾತುಗಳನ್ನು ಮಿಸೆಸ್ ಮಾರ್ಟಿನ್ ಕುತೂಹಲದಿಂದ ಕೇಳುತ್ತಾ ಕುಳಿತಿರುತ್ತಾಳೆ.)

**ಆ್ಯಂಟಿ** : ನಂಬದೇ ಇರಲು ಹೇಗೆ ಸಾಧ್ಯ ಫಾದರ್. ನಾನೇ ಖುದ್ದಾಗಿ ನೀವು ನೀನಾಮಾಸಿಯಾಳನ್ನು ದೆವ್ವದ ಹಿಡಿತದಿಂದ ಬಿಡಿಸಿದ್ದನ್ನು ನೋಡಿದ್ದೇನೆ. ಪಂಜರದಲ್ಲಿರುವ ತೋಳದಂತೆ ಅವಳ ದೇಹದೊಳಗಿನ ದೆವ್ವ ಚಡಪಡಿಸುವುದನ್ನು ಕಂಡಿದ್ದೇನೆ. ನೀವು ಪಠಿಸಿದ ಗಾಸ್ಪೆಲ್‌ನ

ಶ್ಲೋಕಗಳಿಂದಲೇ ಅವಳ ದೇಹದೊಳಗಿನ ಭೂತ ಹೊರಟು ಹೋದದ್ದು! ಅದರಲ್ಲಿ ಸಂಶಯವೇ ಇಲ್ಲ.

**ಪಾಲ್** : ನಿಜವಿದ್ದರೂ ಇರಬಹುದು. ದೇವರು ಉಚ್ಚರಿಸುವ ಮಾತುಗಳು ಎಲ್ಲವನ್ನೂ ಸಾಧಿಸಬಲ್ಲವು. (ಮಾತಾಡುತ್ತಲೇ ಎದ್ದು ಹೊರಡಲು ಅನುವಾಗುತ್ತಾನೆ)

**ಆ್ಯಂಟಿ** : (ಗಾಬರಿಯಿಂದ) ಫಾದರ್, ಇದೇನು ಆಗಲೇ ಎದ್ದುಬಿಟ್ಟಿರಿ? (ತಾಯಿಯ ಕಡೆ ನೋಡುತ್ತಾನೆ.) ತಾಯಿ ಅರ್ಥವಾದಂತೆ ಎದ್ದು ಕಪಾಟಿನೊಳಗಿಂದ ಮದ್ಯದ ಸೀಸೆಗಳನ್ನು ಹೊರತೆಗೆದು, ಕೈಯಲ್ಲಿ ಬಟ್ಟಲುಗಳನ್ನು ಹಿಡಿದು ಇವರಿಬ್ಬರ ಹತ್ತಿರ ಬರುತ್ತಾಳೆ.

**ಆಕೆ (ಮಿ.ಮಾರ್ಟಿನ್)**: ಯಾಕೆ ಫಾದರ್ ಎದ್ದುಬಿಟ್ಟಿರಿ?...ನಮ್ಮ ಆತಿಥ್ಯವನ್ನು ಸ್ವೀಕರಿಸದೆ ತಾವು ಹೊರಡುವ ಹಾಗಿಲ್ಲ. ಒಂದು ಬಟ್ಟಲು ಪಾನೀಯವನ್ನಾದರೂ ತೆಗೆದುಕೊಳ್ಳಿ. ಈ ವೈನ್ ಬಹಳ ಹಳೆಯದು. ರುಚಿಕಟ್ಟಾಗಿದೆ. (ಎಂದು ಆ್ಯಂಟಿ ತಂದ ಟ್ರೇನಲ್ಲಿ ಬಟ್ಟಲುಗಳನ್ನಿರಿಸಿ ಅವುಗಳೊಡನೆ ವೈನ್ ಸುರಿಯುತ್ತಾಳೆ. ಆ್ಯಂಟಿ ಟ್ರೇಯನ್ನು ಪಾದ್ರಿಯ (ಪಾಲ್‌ನ) ಮುಂದಿಡುತ್ತಾನೆ.)

**ಪಾಲ್** : (ಗೆಲುವಿನಿಂದ ಬಟ್ಟಲು ತೆಗೆದುಕೊಳ್ಳುತ್ತಾ) ನಾವೀಗ ಈ ಪ್ರದೇಶದ ಭಾವೀ ಪಾದ್ರಿಯ ಒಳಿತಿಗಾಗಿ ಕುಡಿಯೋಣ. ಆ್ಯಂಟಿ ನೀನೂ ಸ್ವಲ್ಪ ತಗೋ. (ಎಂದು ಹೇಳಿ ಬಟ್ಟಲನ್ನು ತುಟಿಗೆತ್ತಿಕೊಳ್ಳುತ್ತಾನೆ. ಅಷ್ಟರಲ್ಲಿ ಅವನ ದೃಷ್ಟಿ ಒಂದು ಆಕೃತಿಯ ಮೇಲೆ ಬಿದ್ದು ಬಿಳುಚಿಕೊಳ್ಳುತ್ತಾನೆ. ಆ ಆಕೃತಿ ಅತ್ತ ಇತ್ತ ದೃಷ್ಟಿ ಹಾಯಿಸುತ್ತ ಒಳಗೆ ಪ್ರವೇಶಿಸುತ್ತದೆ. ಪಾಲ್‌ಗೆ ಆ ಆಕೃತಿಯ ಗುರುತು ಹತ್ತಿ ಕಂಪಿಸಿ ಬಟ್ಟಲನ್ನು ಕೆಳಗಿರಿಸಿ ಸೀಸೆಗಳಿದ್ದ ಕಪಾಟಿನ ಹಿಂದೆ ಅವಿತುಕೊಳ್ಳುತ್ತಾನೆ. ಎದೆಯ ಭಾಗದ ಮೇಲೆ ಕೈಗಳನ್ನಿರಿಸಿಕೊಳ್ಳುತ್ತಾನೆ.) (ಇನ್ನೊಂದು ದಿಕ್ಕಿನಿಂದ ಮಾತುಗಳು ಕೇಳಿ ಬರುತ್ತವೆ.)

**ಆಗಂತುಕಳು**: ಅವಳು ಬಿದ್ದುಬಿಟ್ಟಳು. ಅವಳ ಮೂಗಿನಿಂದ ರಕ್ತಧಾರೆ ಧಾರೆಯಾಗಿ ಹರಿಯಿತು. ಅದೂ ಎಷ್ಟೊಂದು ರಕ್ತ! ಅವಳ ತಲೆ ಮೂಳೆ ಮುರಿದೇ ಹೋಗಿರಬೇಕೆಂದು ಭಯವಾಯಿತು. ಇನ್ನೂ ರಕ್ತ ನಿಂತಿಲ್ಲ. ಈಜಿಪ್ಟಿನ ಸಂತ ಮೇರಿಯ ಕೀಲಿಕೈ ಕೊಡಿ. ಅದೊಂದೇ ಹರಿಯುವ ರಕ್ತವನ್ನು ನಿಲ್ಲಿಸಬಹುದೆಂಬ ನಂಬಿಕೆ.

**ಪಾಲ್** : (ಸ್ವಗತ) ಅದೆಲ್ಲ ಬರಿ ಸುಳ್ಳು ಕಟ್ಟುಕತೆ. ನನ್ನ ಮೇಲೆ ಗೂಢಚರ್ಯೆ ನಡೆಸಲು, ಮತ್ತು ನನ್ನನ್ನು ಅವಳ ಮನೆಗೆ ಬರುವಂತೆ ಮಾಡಲು ಹೂಡಿರುವ ಸಂಚು. ಬಹುಶಃ ಈಕೆಯೂ ಇದರಲ್ಲಿ ಶಾಮೀಲಾಗಿರಬೇಕು. ಇರಲಿ. ಇಷ್ಟಕ್ಕೆಲ್ಲ ನಾನು ಜಗ್ಗುವುದಿಲ್ಲ.

(ಆ್ಯಂಟಿ ಕೀಲಿಕೈ ತಂದುಕೊಡುತ್ತಾನೆ. ಆಗಂತುಕಗಳು ಆ್ಯಂಟಿಯ ಕಡೆ ಕೃತಜ್ಞತೆಯಿಂದ ನೋಡುತ್ತಾಳೆ.)

**ಆಗಂತುಕಳು:** ಧನ್ಯವಾದಗಳು ಪುಟ್ಟ ಪಾದ್ರಿಗಳೇ (ಎಂದು ಹೇಳಿ ತಲೆ ಎತ್ತಲು ಆಕಸ್ಮಿಕವಾಗಿ ಅವಳ ದೃಷ್ಟಿ ಕಪಾಟಿನ ಮರೆಯಲ್ಲಿರುವ ಪಾದ್ರಿಯ ಮೇಲೆ ಬೀಳುತ್ತದೆ. ಆಶ್ಚರ್ಯ ವ್ಯಕ್ತಪಡಿಸುತ್ತಾಳೆ. ಸಿಕ್ಕಿ ಬಿದ್ದ ಕಳ್ಳನಂತೆ ನಾಚಿಕೆಯಾದರೂ ತೋರಿಸಿಕೊಳ್ಳದೆ, ಸಹಜತೆಯಿಂದಲೇ ಮಾತನಾಡಿಸುತ್ತಾನೆ.)

**ಪಾದ್ರಿ :** ಅದು ಹೇಗಾಯಿತು?

**ಆಗಂತುಕಳು:** ಅವಳು ಬಿದ್ದಾಗ ನಾನು ಮನೆಯಲ್ಲಿರಲಿಲ್ಲ. ಮನೆಗೆ ಬಂದಾಗ ಅವಳು ತೀರಾ ಅಸ್ವಸ್ಥಳಾಗಿದ್ದಳು. ನಡೆಯಲೂ ತ್ರಾಣವಿರಲಿಲ್ಲ. ತೂರಾಡುತ್ತಲೇ ಬಂದು ಬಾಗಿಲ ಬಳಿಯೇ ಬಿದ್ದುಬಿಟ್ಟಳು. ಮೂಗಿಗೆ ತಗುಲಿ ಒಂದೇ ಸಮನೆ ರಕ್ತ ಹರಿಯಿತು. ಆದರೆ ಅವಳಿಗೆ ನೋವಿಗಿಂತ ಭಯವೇ ಹೆಚ್ಚಾದಂತೆ ಇತ್ತು. ಪ್ರೇತದಂತೆ ಬಿಳುಚಿಕೊಂಡಿದ್ದಳು. ದಿನವಿಡೀ ಏನೂ ತಿಂದಿರಲಿಲ್ಲ. ಶರೀರ ಕಂಪಿಸುತ್ತಿತ್ತು. ನಾನಿಲ್ಲಿಗೆ ಬಂದಾಗ ಇನ್ನೂ ಸೆಟೆದುಕೊಂಡು ಬಿದ್ದಿದ್ದಳು. ನನಗೆ ತುಂಬ ಗಾಬರಿಯಾಗಿದೆ. ಮನೆಯಲ್ಲಿರುವುದು ನಾವು ಹೆಂಗಸರು ಮಾತ್ರ. (ದೈನ್ಯದಿಂದ ಪಾಲ್‌ನತ್ತ ನೋಡುತ್ತಾಳೆ.)

**ಮಿಸೆಸ್ ಮಾರ್ಟಿನ್:** (ಸಹಾನುಭೂತಿಯಿಂದ) ಪೂಜ್ಯರೇ ನೀವೇಕೆ ಒಮ್ಮೆ ಹೋಗಿ ನೋಡಬಾರದು. ಅಸಹಾಯಕ ಸ್ಥಿತಿಯಲ್ಲಿನ ಹೆಂಗಸರು.

**ಪಾಲ್ :** ಓಹ್!ನಾನೇನು ಮಾಡಲಿ? ಈಗಾಗಲೇ ಬಹಳ ತಡವಾಗಿದೆ ನನ್ನ ತಾಯಿ ನನಗಾಗಿ ಕಾತರದಿಂದ ಕಾದಿರುತ್ತಾಳೆ. ಅಲ್ಲಿಗೆ ಬಂದು ಇನ್ನಷ್ಟು ತಡವಾದರೆ ಪ್ರಾಣವೇ ಬಿಟ್ಟಾಳು... ದೇವರೇ ನಾನೇನು ಮಾಡಲಿ? ನೀನೇ ದಾರಿ ತೊರಬೇಕು (ದೈನ್ಯವಾಗಿ ಪ್ರಾರ್ಥಿಸುತ್ತಾನೆ.)

**ಆಗಂತುಕಳು:** (ಇದಕ್ಕಾಗಿಯೇ ಕಾಯುತ್ತಿದ್ದವಳಂತೆ) ಹೌದು ಫಾದರ್, ನೀವು ಬಂದರೆ ಅವಳಿಗೂ ಸ್ವಲ್ಪ ಸಮಾಧಾನವಾದೀತು. ಈ ಹೊತ್ತಿನಲ್ಲಿ ನೀವು ನಮಗೆ ಸಹಾಯ ಮಾಡುವುದು ದೇವರಿಗೂ ಮೆಚ್ಚಿಗೆಯಾದೀತು.

**ಪಾಲ್ :** (ಸ್ವಗತ) ಇದು ಇವಳಾಡುತ್ತಿರುವ ಮಾತುಗಳಲ್ಲ. ಆ ಸೈತಾನನೇ ಅವಳ ಬಾಯಿಂದ ಹೇಳುತ್ತಿದ್ದಾನೆ. ಇನ್ನು ಹೇಗೂ ತಪ್ಪಿಸಿಕೊಳ್ಳುವಂತಿಲ್ಲ. ನನ್ನ ಜಾಗ್ರತೆಯಲ್ಲಿ ನಾನಿರಬೇಕು. ಅವಳ ಮಾಟ ಬೇಟಗಳಿಗೆ ಬಲಿಯಾಗಬಾರದು. ಅಲ್ಲದೆ ಒಬ್ಬನೇ ಹೋಗಬಾರದು. ಆ್ಯಂಟಿಯನ್ನು ಜೊತೆಯಾಗಿ ಕರೆದೊಯ್ಯುತ್ತೇನೆ. (ಪ್ರಕಟ) ಆ್ಯಂಟಿ ನಡೆ ನನ್ನ ಜೊತೆಗೆ.

ಕಷ್ಟದಲ್ಲಿರುವವರಿಗೆ ಸಹಾಯ ಮಾಡಬೇಕೆಂಬ ಮೊದಲ ಪಾಠ ಪ್ರಾರಂಭವಾಗಲಿ. ಬಾ ಹೊರಡೋಣ. (ಮಿಸೆಸ್ ಮಾರ್ಟಿನ್ ಕಡೆ ತಿರುಗಿ) ಮಿಸೆಸ್ ಮಾರ್ಟಿನ್ ಇವನನ್ನು ಜೊತೆಗೆ ಕರೆದುಕೊಂಡು ಹೋಗುತ್ತೇನೆ. ನಿಮಗೆ ಅಭ್ಯಂತರವಿರಲಾರದಲ್ಲವೇ?

**ಮಿಸೆಸ್ ಮಾರ್ಟಿನ್:** (ನಗುತ್ತ) ಫಾದರ್ ಇನ್ನು ನಮ್ಮನ್ನು ಕೇಳುವುದೇಕೆ. ಅವನು ನಿಮ್ಮ ಹುಡುಗ. ನಿಮ್ಮ ಸುಪರ್ದಿಗೇ ಬಿಟ್ಟದ್ದು.

೦೦

# ದೃಶ್ಯ – ೩

(ಪಾಲ್‌ನ ಮನೆ. ಸಾಕಷ್ಟು ರಾತ್ರಿಯಾಗಿದೆ. ಮನೆಯ ಒಳಗೆ ದೀಪವೊಂದೂ ಉರಿಯುತ್ತಿಲ್ಲ. ತೀರಾ ಕತ್ತಲು ತುಂಬಿದೆ. ಪಾಲ್ ಕಳ್ಳ ಹೆಜ್ಜೆಗಳನ್ನಿಡುತ್ತಾ ಮೆಲ್ಲಗೆ ಸದ್ದಾಗದಂತೆ ಬಾಗಿಲನ್ನು ತೆಗೆದುಕೊಂಡು ಒಳಗೆ ಬರುತ್ತಾನೆ. ತಾಯಿ ಇನ್ನೂ ಎಚ್ಚರವಾಗಿಯೇ ಕುಳಿತಿದ್ದಾಳೆ. ಹೆಜ್ಜೆ ಸಪ್ಪಳ ಕೇಳಿ 'ಯಾರದು' ಎಂದು ಬೆಚ್ಚಿ ಕೇಳುತ್ತಾಳೆ.)

**ಪಾಲ್** : (ಮೆಲ್ಲಗೆ) ನಾನು ಅಮ್ಮ. ನಿನ್ನ ಮಗ ಪಾಲ್. ನೀನು ಏಳಬೇಡ ಕುಳಿತುಕೋ. ಮೊಂಬತ್ತಿಯನ್ನು ಹಚ್ಚಬೇಡ. ನಾನು ನಿನಗೇನೋ ಹೇಳಬೇಕಾಗಿದೆ.

**ತಾಯಿ** : ಓಹ್ ನೀನು! ನಾನೇನೋ ಕನಸು ಕಾಣುತ್ತಿದ್ದೆ. 'ಯಾರೊ ನರ್ತಿಸುತ್ತಿದ್ದಂತೆ; ಮತ್ತೆ ಯಾರೋ ಕೊಳಲು ನುಡಿಸುತ್ತಿದ್ದಂತೆ ನನಗೆ ಕೇಳಿಸಿತು.

**ಪಾಲ್** : (ತಾಯಿಯ ಮಾತಿನ ಕಡೆ ಲಕ್ಷ್ಯವಿಲ್ಲದಂತೆ) ಅಮ್ಮ ನಾನು ಹೇಳುವುದನ್ನು ಮೊದಲು ಕೇಳಿಸಿಕೊ. ಆ ಹೆಂಗಸು. ಅದೇ ಏಗ್ನೀಸ್ ತುಂಬ ಅಸ್ವಸ್ಥಳಾಗಿದ್ದಾಳೆ. ಕೆಳಗೆ ಬಿದ್ದು ತೀವ್ರವಾಗಿ ಗಾಯಗೊಂಡಿದ್ದಾಳೆ. ಮೂಗಿನಿಂದ ರಕ್ತ ಹರಿಯುತ್ತಿದೆ.

**ತಾಯಿ** : ನೀನು ಹೇಳುತ್ತಿರುವುದು ನಿಜವೇ ಪಾಲ್? ಅವಳು ಅಪಾಯದಲ್ಲಿದ್ದಾಳೆಯೇ (ಗಾಬರಿಯಿಂದ ಕೇಳಿದಳು.)

**ಪಾಲ್** : ಅದು ಸಂಭವಿಸಿದ್ದು ಈ ದಿನ ಬೆಳಿಗ್ಗೆ. ಅಂದರೆ ನನ್ನ ಪತ್ರ ಅವಳ ಕೈ ಸೇರಿದ ಮೇಲೆ! ಇಡೀ ದಿವಸ ಅವಳು ಮೌನವಾಗಿ, ಚಿಂತಾಕ್ರಾಂತಳಾಗಿದ್ದಳು. ಆರೋಗ್ಯ ಕೆಟ್ಟಿತು. ಭಯದಿಂದ ಕಂಪಿಸುತ್ತಿದ್ದಳು ಎಂದು ಗೊತ್ತಾಯಿತು.

**ತಾಯಿ** : ಪಾಲ್ ಇದೆಲ್ಲವನ್ನು ನಿನಗೆ ಹೇಳಿದವರು ಯಾರು? ಬಹುಶಃ ಇದು ನಿಜವಿರಲಾರದು.

**ಪಾಲ್** : ಇಲ್ಲ ಅಮ್ಮ. ಇದೆಲ್ಲವೂ ಸತ್ಯ. ಆದರೆ ಈಗ ಸತ್ಯ, ಸುಳ್ಳು ಎನ್ನುವುದಲ್ಲ ಪ್ರಶ್ನೆ. ಅವಳೇನಾದರೂ ಭಯದಿಂದ ಆತ್ಮಹತ್ಯೆಗೆ ಆಲೋಚಿಸುತ್ತಾಳೇನೋ ಎನ್ನುವ ಭೀತಿ. ಪಾಪ! ಕೆಲಸದವಳನ್ನು ಬಿಟ್ಟರೆ ಅವಳಿಗೆ ಯಾರೂ ಇಲ್ಲ. ಕಡೆಯ ಪಕ್ಷ ಒಂದು ಸಲ.... ಒಂದೇ ಸಲ ಅವಳನ್ನು ನೋಡಿ ಮಾತಾಡಿಸಿಕೊಂಡು ಬರಬೇಕೆಂದಿದ್ದೇನೆ.

**ತಾಯಿ** : (ಬೆಚ್ಚಿ) ಪಾಲ್!!

**ಪಾಲ್** : ಮತ್ತೇನೂ ಮಾತಾಡಬೇಡ. ನಾನು ಅವಳನ್ನು ನೋಡಲೇಬೇಕು. (ಕಿರುಚುವ ದನಿಯಲ್ಲಿ ಹೇಳುವನು.)

**ತಾಯಿ** : ನೀನು ನನಗೆ ಮಾತು ಕೊಟ್ಟಿದ್ದೀಯ!

**ಪಾಲ್** : ಅದಕ್ಕೆಂದೇ, ನೀನು ತಪ್ಪು ತಿಳಿಯಬಾರದೆಂದೇ ನಿನ್ನ ಅಪ್ಪಣೆ ಪಡೆದು ಹೋಗಲು ಬಂದೆ. ಅವಳ ಬಳಿಗೆ ಹೋಗಲೇಬೇಕು. ನನ್ನ ಅಂತರಾತ್ಮ ನನಗೆ ಅದನ್ನು ಮಾಡಲು ನಿರ್ದೇಶಿಸುತ್ತಿದೆ.

**ತಾಯಿ** : ಪಾಲ್, ಒಂದು ವಿಷಯ ಹೇಳು. ನೀನು ಏಗ್ನೀಸಳ ಕೆಲಸದವಳನ್ನು ನೋಡಿದೆಯಾ? ಯಾಕೆಂದರೆ ಸೈತಾನನು ಹಲವು ರೂಪಗಳಲ್ಲಿ ಕಾಣಿಸಿಕೊಂಡು ಏನೇನೋ ಆಮಿಷಗಳನ್ನು ತೋರಿಸಿ ಸೆಳೆದುಕೊಳ್ಳುತ್ತಾನೆಂದು ನಾನು ಬಲ್ಲೆ.

**ಪಾಲ್** : ಹೌದು ಅಮ್ಮ. ಅವಳನ್ನು ಕಂಡಿದ್ದೆ.

**ತಾಯಿ** : ಪಾಲ್ ನಾನು ಯಾಕೆ ಕೇಳಿದೆನೆಂದರೆ, ನಿನ್ನೆ ರಾತ್ರಿ ನನಗೆ ಹಳೆಯ ಪಾದ್ರಿ ಕಾಣಿಸಿಕೊಂಡಿದ್ದ. ಈಗ ಸ್ವಲ್ಪ ಹೊತ್ತಿಗೆ ಮುಂಚೆ ಅವನ ಹೆಜ್ಜೆ ಸಪ್ಪಳ ಕೇಳಿಸಿತು. ನಿನ್ನೆ ರಾತ್ರಿಯಂತು ಆತ ನನ್ನ ಎದುರಿಗೇ ನೇರವಾಗಿ, ಬೆಂಕಿಯ ಪಕ್ಕದಲ್ಲಿ ಕುಳಿತುಕೊಂಡಿದ್ದ. ಕ್ಷೌರವಿಲ್ಲದ ಮುಖ; ಧೂಮಪಾನದಿಂದ ಕಪ್ಪಾದ ಹಲ್ಲುಗಳು; ಹರಕಲಾದ, ಕೊಳಕಾದ ಕಾಲು-ಚೀಲಗಳು. ಅವನು ಹೇಳಿದ "ನಾನು ಬದುಕಿದ್ದೇನೆ. ಅದಕ್ಕೇ ಇಲ್ಲಿದ್ದೇನೆ. ಸದ್ಯದಲ್ಲಿಯೇ ನಿನ್ನನ್ನು ನಿನ್ನ ಮಗನನ್ನು ಈ ಪ್ರೆಸ್ಬಿಟರಿಯಿಂದ ಓಡಿಸುತ್ತೇನೆ." ಎಂದು. ನೀನು ಪಾಪ ಕೂಪಕ್ಕೆ ಬೀಳದೆ ಇರಲು ನಿನಗೆ ನಾನು ನಿನ್ನ ತಂದೆಯ ಕಸುಬನ್ನೇ ಕಲಿಸಬೇಕಾಗಿತ್ತಂತೆ!..... ಅವನು ನನ್ನನ್ನು ಎಷ್ಟು ಕಂಗೆಡಿಸಿ ಬಿಟ್ಟನೆಂದರೆ, ಯಾವುದು ಸರಿ, ಯಾವುದು ತಪ್ಪು ಎಂದು ಆಲೋಚಿಸಲಾಗದೆ ಹೋಯಿತು. ನಿನ್ನೆ ನನ್ನ ಪಕ್ಕದಲ್ಲಿ ಕುಳಿತದ್ದು ಸೈತಾನನೆಂಬುದರಲ್ಲಿ ಸಂದೇಹವಿಲ್ಲ....ಅವನೇ, ಆ ದುಷ್ಟನೇ ಕೆಲಸದವಳ ರೂಪದಲ್ಲಿ ಬಂದು ಆಮಿಷವೊಡ್ಡಿರುವನೆಂದೇ

ನನ್ನ ಅನಿಸಿಕೆ. ಒಂದು ವೇಳೆ ನೀನು ಅಲ್ಲಿಗೆ ಹೋದರೆ, ಅವಳ ಬಲೆಯಲ್ಲಿ ಖಂಡಿತವಾಗಿಯೂ ಬೀಳದಿರಲಾರೆ... ಪಾಲ್ ನನ್ನ ಮಾತು ಕೇಳು. ಆ ಮಾಯಾವಿನಿಯ ಮಾಂತ್ರಿಕ ಶಕ್ತಿಯಿಂದ ದೂರವಿರು. ನಿನ್ನನ್ನು ನಾನು ಅಂಗಲಾಚಿ ಬೇಡಿಕೊಳ್ಳುತ್ತೇನೆ.

**ಪಾಲ್** : (ಉದ್ವಿಗ್ನತೆಯಿಂದ) ಅಮ್ಮ.... ಅಮ್ಮ. ನನ್ನ ಸಂಕಟವನ್ನು ನೀನೇಕೆ ಅರ್ಥಮಾಡಿಕೊಳ್ಳುವುದಿಲ್ಲ? ಪಾಪದ ಜೀವವೊಂದು ನನ್ನಿಂದಾಗಿ ಸಾಯುವುದು ಯಾವ ನ್ಯಾಯ? ದೇವರಾದರೂ ಇದನ್ನು ಮೆಚ್ಚುತ್ತಾನೆಯೇ? ನಿನಗೇನೂ ಭಯ ಬೇಡ. ನನ್ನನ್ನು ನಾನು ಸಂಭಾಳಿಸಿಕೊಳ್ಳಬಲ್ಲೆ. (ದೈನ್ಯನಾಗಿ ಬೇಡುತ್ತಾನೆ)

**ತಾಯಿ** : (ಅಸಹಾಯಕತೆಯಿಂದ) ನಿನ್ನಿಷ್ಟ ಪಾಲ್. ನಿನ್ನ ಅಂತರಾತ್ಮ ನಿನಗೆ ಹೋಗೆಂದು ಹೇಳಿದ ಮೇಲೆ ನನ್ನ ಬಳಿಗೇಕೆ ಬಂದೆ?

**ಪಾಲ್** : ಯಾಕೆಂದರೆ, ನಾನು ನಿನಗೆ ಮಾತುಕೊಟ್ಟಿದ್ದೆ.

**ತಾಯಿ** : ಸರಿ ಹಾಗಾದರೆ ಹೋಗು. ನಿನಗೆ ಸರಿ ತೋಚಿದಂತೆ ಮಾಡು. ದೇವರಿಗೆ ಮೊರೆ ಇಟ್ಟುಕೊಳ್ಳುವುದೊಂದೇ ನನಗೆ ಉಳಿದಿರುವ ದಾರಿ..... ಹೋಗು ಪಾಲ್... ಹೋಗು.

**ಪಾಲ್** : (ಕೃತಜ್ಞತಾ ಭಾವನೆಯಿಂದ ತಾಯಿಯ ಕಡೆ ನೋಡಿ ಅವಳನ್ನು ತೀರಾ ಸಮೀಪಿಸಿ) ಅಮ್ಮ ಗಾಬರಿಯಾಗಬೇಡ. ಆದಷ್ಟು ಬೇಗ ಅಲ್ಲಿಂದ ಬಂದುಬಿಡುತ್ತೇನೆ. ನಿನಗೆ ನನ್ನ ಮೇಲೆ ಭರವಸೆಯಿಲ್ಲವೇ? (ಪಾಲ್ ನಿಧಾನವಾಗಿ ಬಾಗಿಲ ಕಡೆ ನಡೆಯುತ್ತಾನೆ. ತಾಯಿ ಆ ದಿಕ್ಕಿನತ್ತಲೇ ನೋಡುತ್ತಾ ನಿಟ್ಟುಸಿರು ಬಿಟ್ಟು)

**ತಾಯಿ** : ಹುಂ.... ಆದುದಾಗಲಿ.... ಇವನು ಕೇಳುವುದೇ ಇಲ್ಲ....ಆ ದುಷ್ಟ ಸೈತಾನನ ಕರಾಮತ್ತುಗಳೇ ಇವೆಲ್ಲ!!..... ಅಥವಾ ಇವೆಲ್ಲ ನನ್ನಿಂದಾದುದೇ? ನನ್ನ ದುರಾಸೆ, ಸುಖ, ಸೌಲಭ್ಯಗಳ ಹಂಬಲ.... ಗೌರವ ಪ್ರತಿಷ್ಠೆಗಳ ಆಕಾಂಕ್ಷೆ!?..... ಅವನ ಅಂತರ್ಯವನ್ನು ತಿಳಿಯದೆ, ಅವನ ಸ್ವತಃ ಇಚ್ಛೆಯಿಲ್ಲದೆ ನಾನೇ ನನ್ನ ಸ್ವಾರ್ಥಗಳಿಗಾಗಿ ಅವನನ್ನು ಬಲಿಕೊಟ್ಟೆನೇ? ದೇವರೇ.... ಇದೆಲ್ಲವೂ ನಿನ್ನ ಆಟವೇನು? ಈ ಬಗೆಯ ದ್ವಂದ್ವಗಳ ದಾರುಣ ಪರಿಣಾಮಗಳನ್ನೇಕೆ ನಮ್ಮ ಪಾಲಿಗೆ ಒಡ್ಡಿದೆ ಪ್ರಭು?.... ದಯಾಮಯಾ ತಪ್ಪು ಮಾಡಿದವರ ತಪ್ಪುಗಳನ್ನು ಮರೆತು ಅವರನ್ನು ಉದ್ಧರಿಸು. ಅವರ ಆತ್ಮವಿನಾಶವಾಗುವುದನ್ನು ತಡೆಯುವ ಕೃಪೆ ಮಾಡು ತಂದೆ.... ನನ್ನ ಮಗನನ್ನು, ಆ ದುಷ್ಟ ಹೆಂಗಸಿನ ಬಲೆಯಿಂದ ಅವನನ್ನು ಮುಕ್ತಗೊಳಿಸು.

೦೦

# ದೃಶ್ಯ – ೪

(ಏಗ್ನೀಸಳ ಮನೆ. ಮನೆಯ ಹಿಂದಿನ ತೋಟ. ಮನೆಯ ಕಿಟಕಿಯಿಂದ ತೋಟ ಕಾಣಿಸಬೇಕು. ತೋಟದ ಕಡೆಯಿಂದಲೂ ಒಳಗೆ ಬರಲು ಬಾಗಿಲನ್ನು ಕಾಣಿಸಬೇಕು. ಏಗ್ನೀಸಳ ಬಿಳುಚಿಕೊಂಡ ಮುಖ, ಕೆದರಿದ ಕೂದಲು, ಅವಳ ಅನಾರೋಗ್ಯ ಸ್ಥಿತಿಯನ್ನು, ಹೆದರಿದ ಸ್ಥಿತಿಯನ್ನು ತೋರುತ್ತಿದೆ. ಹಿತ್ತಲಿನ ಬಾಗಿಲ ಸಪ್ಪಳ ಕೇಳಿಸುತ್ತದೆ. ಹಾಸಿಗೆಯಲ್ಲಿ ಒರಗಿ ಕುಳಿತ ಏಗ್ನೀಸಳು ಎದ್ದು ಹೋಗಲು ಪ್ರಯತ್ನಿಸುತ್ತಾಳೆ. ಸಾಧ್ಯವಾಗದೆ ಕೆಲಸದವಳಿಗಾಗಿ ಆ ಕಡೆ ಈ ಕಡೆ ಕಣ್ಣಾಡಿಸುತ್ತಾಳೆ.)

**ಏಗ್ನೀಸ್** : ಎಲಿಜಾ.... ಎಲಿಜಾ..... ನೋಡು, ಯಾರೋ ಬಂದಿರುವ ಹಾಗಿದೆ.

**ಎಲಿಜಾ** : (ಒಳಗಿನಿಂದ ಬರುತ್ತಾ) ಒಡತಿ, ನೀವು ಆರಾಮವಾಗಿ ಮಲಗಿ ನಾನು ನೋಡುತ್ತೇನೆ. ಇಷ್ಟು ರಾತ್ರಿಯಲ್ಲಿ ಯಾರು ಬರಬಹುದು? (ಎಂದು ಮೇಣದ ಬತ್ತಿಯನ್ನು ತೆಗೆದು ಹಚ್ಚಿಕೊಂಡು ಹಿತ್ತಿಲ ಬಾಗಿಲ ಕಡೆ ಹೋಗುತ್ತಾಳೆ. ಅಲ್ಲಿಂದಲೇ 'ಓ ನೀವಾ! ಬನ್ನಿ ಬನ್ನಿ..... ಈಗಲಾದರೂ ಬಂದಿರಲ್ಲ' ಎಂಬ ಮಾತುಗಳು ಕೇಳಿಸುತ್ತವೆ.)

(ಪಾಲ್ ಪ್ರವೇಶಿಸುತ್ತಾನೆ. ನೇರವಾಗಿ ಏಗ್ನೀಸಳ ಹಾಸಿಗೆ ಬಳಿಗೆ ಹೋಗಿ ಅವಳ ಪಕ್ಕದಲ್ಲಿಯೇ ಕುಳಿತುಕೊಳ್ಳುತ್ತಾನೆ. ಕರುಣಾಜನಕವಾದ ಅವಳ ಸ್ಥಿತಿಯನ್ನು ಗಮನಿಸುತ್ತಾನೆ.)

**ಪಾಲ್** : (ಮೃದುವಾಗಿ) ಏಗ್ನೀಸ್, ಈಗ ಹೇಗಿರುವಿ....? ಇಷ್ಟೇಕೆ ಗಾಬರಿಗೊಂಡಿದ್ದೀ. ಧೈರ್ಯವಾಗಿರುವುದನ್ನು ಕಲಿಯಬೇಕು.

**ಏಗ್ನೀಸ್** : (ಕೋಪ, ತಿರಸ್ಕಾರಗಳಿಂದ) ಮತ್ತೇಕೆ ಬಂದಿರಿ ಇಲ್ಲಿಗೆ?

**ಪಾಲ್** : ನಿನಗೆ ಹುಷಾರಿಲ್ಲವೆಂದು ತಿಳಿಯಿತು.

**ಏಗ್ನೀಸ್** : ಅದಕ್ಕೆ?..... ನಾನು ಸತ್ತಿರುವೆನೋ, ಬದುಕಿರುವೆನೋ, ನೋಡಲು ಬಂದಿರೇನು?.... ನಾನೀಗ ಆರಾಮವಾಗಿದ್ದೀನಿ. ನೀವು ಬರಬೇಕಾದ

ಅಗತ್ಯವಿರಲಿಲ್ಲ. ಅಲ್ಲದೆ ನಾನು ನಿಮಗೆ ಬರಬೇಕೆಂದು ಹೇಳಿ ಕಳಿಸಿರಲಿಲ್ಲ ಅಲ್ಲವೇ?

**ಪಾಲ್** : ನನಗೆ ಅದೆಲ್ಲ ಗೊತ್ತು. ಆದರೂ ನಿನ್ನನ್ನು ನೋಡಿಕೊಂಡು ನಿನ್ನ ಯೋಗಕ್ಷೇಮ ವಿಚಾರಿಸಿಕೊಂಡು ಹೋಗೋಣವೆಂದು ಬಂದೆ....ನಾನು ಬರಬಾರದೆಂದೇನೂ ನಿಯಮವಿಲ್ಲವಲ್ಲ? ನಿನ್ನ ಎಲಿಜಾ ನಿನ್ನ ಸ್ಥಿತಿಯನ್ನು ಉತ್ಪ್ರೇಕ್ಷಿಸಿ ಹೇಳಿದ್ದಾಳೆಂಬುದು ಇಲ್ಲಿಗೆ ಬಂದಮೇಲೆ ಈಗ ತಿಳಿಯಿತು! ಹೋಗಲಿಬಿಡು. ನೀನು ಕ್ಷೇಮವಾಗಿರುವುದನ್ನು ನೋಡಿ ನನಗೆ ಸಮಾಧಾನವಾಯಿತು.

**ಏಗ್ನೀಸ್** : (ಸಿಟ್ಟಿನಿಂದಲೇ) ನಿಮಗೆ ಹೇಳಿ ಕಳಿಸಿರಲಿಲ್ಲವೆಂದ ಮೇಲೆ ನೀವೇಕೆ ಬಂದಿರಿ? (ನಿಟ್ಟುಸಿರು) ನೀವು ಬರಬಾರದಿತ್ತು.... ಆದರೆ ನೀವು ಬಂದಿರುವುದರಿಂದ ನಿಮ್ಮನ್ನೊಂದು ಪ್ರಶ್ನೆ ಕೇಳುತ್ತೇನೆ.... (ತಡೆದು) ನೀವೇಕೆ ಹೀಗೆ ಮಾಡಿದಿರಿ? (ಉದ್ವಿಗ್ನತೆಯಿಂದ ಅಳುತ್ತಾಳೆ.)

(ಪಾಲ್ ಪ್ರೀತಿ ಉಕ್ಕಿ ಬಂದು ಇನ್ನಷ್ಟು ಹತ್ತಿರ ಸರಿಯುತ್ತಾನೆ. ಅವಳನ್ನು ಪ್ರೀತಿಯಿಂದ ಎಬ್ಬಿಸಿ ಕೂರಿಸುತ್ತಾನೆ. ಆದರೆ ಮತ್ತೆ ಮುಟ್ಟುವುವಕ್ಕೆ ಹೆದರಿ ಹಿಂಜರಿಯುತ್ತಾನೆ. ದೀಪದ ಬೆಳಕಿನಲ್ಲಿ ಬಣ್ಣ ಕಳೆದುಕೊಂಡ ತುಟಿಗಳು, ಗುಳಿಬಿದ್ದ ಕಣ್ಣುಗಳು. ಅವಳ ನಡುಕ ಸ್ಪಷ್ಟವಾಗಿ ಕಾಣುತ್ತದೆ.)

**ಪಾಲ್** : (ನೊಂದ ದನಿಯಲ್ಲಿ) ಏಗ್ನೀಸ್, ನಾನು ನಿನಗೇನು ಮಾಡಿದ್ದೇನೆ?.... ನನ್ನನ್ನು ಅಪಾರ್ಥ ಮಾಡಿಕೊಂಡಿದ್ದೀಯೆ... ಏಗ್ನೀಸ್ ನನ್ನ ಮಾತನ್ನು ಕೇಳು.... ನಿನ್ನೆ ರಾತ್ರಿ ನಾವಿಬ್ಬರೂ ವಿನಾಶದ ಅಂಚಿನಲ್ಲಿದ್ದೆವು.... ಏನೋ ದೇವರ ದಯೆ. ನಮ್ಮನ್ನು ನಮ್ಮ ಪಾಡಿಗೆ ಬಿಟ್ಟುಬಿಟ್ಟ, ನಾವು ಪ್ರಪಾತದ ಅಂಚಿಗೆ ಜಾರುತ್ತಾ ಹೋಗುತ್ತಿದ್ದೆವು. ಆದರೆ ದೇವರು ನಮಗೆ ಸರಿಯಾದ ದಾರಿ ತೋರಿಸಿ ನಡೆಸುತ್ತಿದ್ದಾನೆ. ನಮ್ಮ ಅಧಃಪತನವಾಗಬಾರದು. ಏಗ್ನೀಸ್, ಅಧಃಪತನವಾಗಬಾರದು.... ಏಗ್ನೀಸ್... ಏಗ್ನೀಸ್ (ಹೆಸರು ಹೇಳುತ್ತಿದ್ದಂತೆ ಭಾವೋದ್ವಿಗ್ನತೆಗೆ ಒಳಗಾಗುತ್ತಾನೆ.) ನಾನು ನಿನಗಾಗಿ ಎಷ್ಟು ಸಂಕಟ ಪಡುತ್ತಿದ್ದೇನೆ. ಎನ್ನುವುದು ನಿನ್ನ ಊಹೆಗೂ ಸಿಗಲಾರದು ನನ್ನ ವೇದನೆ ನನ್ನೊಳಗೇ ಸಮಾಧಿಯಾಗಿ ಅನಂತ ಕಾಲದವರೆಗೆ ಇರುತ್ತದೆ. ನಿನ್ನ ಒಳಿತಿಗೆ, ನಿನ್ನ ಆತ್ಮೋದ್ಧಾರಕ್ಕೆ ನಾವು ನಮ್ಮ ನಮ್ಮ ಸಂಕಟಗಳನ್ನು ನುಂಗಿಕೊಳ್ಳಬೇಕು... ಏಗ್ನೀಸ್ ನಮ್ಮ ಪ್ರೇಮದ ಸಲುವಾಗಿಯಾದರೂ ಧೈರ್ಯವಾಗಿರು. ಈ ಅಗ್ನಿಪರೀಕ್ಷೆಯಲ್ಲಿ ನಾವು ಸಫಲರಾಗಿ, ಪುನೀತರಾಗಿ ಬರಲು ದೇವರು ನಮಗೆ ಸದ್ಬುದ್ಧಿ, ಸಾಮರ್ಥ್ಯಗಳನ್ನು ನೀಡಲಿ.... ಈ ಪರೀಕ್ಷೆ ನಮಗೆ

ಕಷ್ಟವಾಗಲಾರದು. ಮೊದ ಮೊದಲು ನಮಗೆ ಒಬ್ಬರನ್ನೊಬ್ಬರು ಮರೆಯುವುದು ಅಸಾಧ್ಯವೆನಿಸಬಹುದು. ಕ್ರಮೇಣ ಎಲ್ಲವೂ ಸರಿಹೋಗುತ್ತದೆ. ನೀನಿನ್ನೂ ಚಿಕ್ಕವಳು. ನಿನ್ನ ಮುಂದೆ ಇಡೀ ಜೀವನವಿದೆ. ನನ್ನ ನೆನಪಾದಾಗ ಅದೊಂದು ಕೆಟ್ಟ ಕನಸೆಂದು ಮರೆತುಬಿಡು. ಕಣಿವೆಯಲ್ಲಿ ನಡೆಯುವಾಗ, ಅಕಸ್ಮಾತ್ತಾಗಿ ಎದುರಾಗುವ ಒಂದು ದುಷ್ಟ ಜಂತುವೆಂದು ನನ್ನನ್ನು ತಿಳಿ.... ಸದ್ಯ ದೇವರು ನಿನ್ನನ್ನು ಕಾಪಾಡಿದ. ಎಲ್ಲವೂ ಕ್ರೂರವಾಗಿ, ಕರಾಳವಾಗಿ ಕಾಣಿಸಬಹುದು. ಕ್ರಮೇಣ ಶುಭ್ರವಾದ ಬೆಳಕೊಂದು ಮೂಡಿನಿಲ್ಲುತ್ತದೆ. ನಾನು ನಿನಗೀಗ ಕೊಡುತ್ತಿರುವ ನೋವು ನಿನ್ನ ಮುಂದಿನ ಒಳಿತಿಗಾಗಿಯೇ. ಅಸ್ವಸ್ಥರಾದವರಿಗೆ ಕೆಲವೊಮ್ಮೆ ನಿಷ್ಠುರ ಪಥ್ಯವನ್ನು ವಿಧಿಸಲೇ ಬೇಕಾಗುತ್ತದೆ. ಮುಂದೆ ಮುಂದೆ ನಿನಗೇ ಇದೆಲ್ಲವೂ ಅರ್ಥವಾಗುತ್ತದೆ.

(ಏಗ್ನೀಸ್ ಎದ್ದು ನಿಂತು ಗೋಡೆಯ ಮೇಲಿನ ಜಿಂಕೆಯ ತಲೆಯಲ್ಲಿನ ಗಾಜಿನ ಕಣ್ಣುಗಳು ಹೊಳೆಯುತ್ತಿರುವಂತೆ ಹೊಳೆಯುತ್ತಿರುವ ತನ್ನ ಕಣ್ಣುಗಳನ್ನು ಪಾಲ್‌ನತ್ತ ತಿರುಗಿಸುತ್ತಾಳೆ.)

**ಏಗ್ನೀಸ್** : (ಕ್ಷೀಣ ದನಿಯಲ್ಲಿ) ಸುಳ್ಳು.... ನೀನು ಹೇಳುತ್ತಿರುವುದೆಲ್ಲ ಸುಳ್ಳು.

**ಪಾಲ್** : ನಾನು ಹೇಳುತ್ತಿರುವುದು ಸುಳ್ಳಾದರೆ, ಯಾವುದು ಸತ್ಯ?

**ಏಗ್ನೀಸ್** : ನಿನ್ನೆ ರಾತ್ರಿ ನೀವು ಹೀಗೇಕೆ ಮಾತಾಡಲಿಲ್ಲ? ನಿನ್ನೆ ರಾತ್ರಿಯೇ ಅಲ್ಲ, ನಾವು ಕಳೆದ ಹಿಂದಿನ ಎಷ್ಟೋ ರಾತ್ರಿಗಳು.... ಹೌದು ಆಗಿನ ಸತ್ಯವೇ ಬೇರೆ ಅಲ್ಲ! (ವ್ಯಂಗ್ಯ).... ನನಗೆ ಗೊತ್ತು. ನೀನಾಗಿ ಈ ಮಾತುಗಳನ್ನು ಆಡುತ್ತಿಲ್ಲ. ಯಾರಿಗೋ ಹೆದರಿ, ನಿನ್ನ ಹೆದರಿಕೆಯನ್ನು ಮುಚ್ಚಿಹಾಕಲು ಈ ಒಣ ವೇದಾಂತ, ದೇವರು, ಅದೂ ಇದೂಂತ ಮಾತಾಡಲು ಆರಂಭಿಸಿದ್ದಿ. ನನಗೆ ಗೊತ್ತು ಇದೆಲ್ಲವೂ ನಿನ್ನ ತಾಯಿಯ ಬೇಹುಗಾರಿಕೆಯ ಪರಿಣಾಮ ಇದ್ದಕ್ಕಿದ್ದಂತೆ ನಿನಗೆ ಲೋಕದ ಬಗ್ಗೆ, ಸಮಾಜದ ಬಗ್ಗೆ ಹೆದರಿಕೆ ಶುರುವಾಯಿತೇನು? ನನ್ನಿಂದ ನೀನು ದೂರವಿರಲು ಪ್ರಯತ್ನಿಸುತ್ತಿರುವುದು ದೇವರ ಹೆದರಿಕೆಯಿಂದಲ್ಲ, ನಿನ್ನ ಅಮ್ಮನ ಹೆದರಿಕೆಯಿಂದ.

**ಪಾಲ್** : (ಎತ್ತರದ ದನಿಯಲ್ಲಿ) ಏಗ್ನೀಸ್, ಏಗ್ನೀಸ್... ಹಾಗಾದರೆ ಮತ್ತೇನು? ಇದೆಲ್ಲ ಗಂಭೀರ ವಿಚಾರವಲ್ಲ ಅಂತ ನಿನ್ನ ಭಾವನೆಯೇನು?...ನಿಜ. ನನ್ನ ತಾಯಿ ನಮ್ಮಿಬ್ಬರ ವಿಚಾರವನ್ನು ಪತ್ತೆ ಮಾಡಿದ್ದಾಳೆ. ಆದರೆ ನನ್ನೊಳಗಿನ ಮಾತಿಗೆ ಅವಳು ಗಟ್ಟಿಯಾಗಿ ದನಿ ಕೊಟ್ಟಿದ್ದಾಳೆ ಅಷ್ಟೆ.

ನಿನಗೂ ಒಂದು ಅಂತರಾತ್ಮ ಇದೆ ಎಂದು ಭಾವಿಸುತ್ತೇನೆ. ನಮ್ಮನ್ನು ನೆಚ್ಚಿಕೊಂಡಿರುವವರನ್ನು, ನಮ್ಮ ಕ್ಷೇಮ ಸುಖಗಳಿಗಾಗಿಯೇ ತಮ್ಮನ್ನು ತೇಯುತ್ತಿರುವವರನ್ನು, ಘಾಸಿಗೊಳಿಸುವುದು, ನಿನಗೆ ಸರಿ ಎನಿಸುತ್ತದೆಯೇ? ನಿಜ. ನಾವಿಬ್ಬರೂ ಓಡಿ ಹೋಗಿ ಎಲ್ಲಾದರೂ ಬದುಕಬೇಕೆಂಬುದು ನಮ್ಮ ಇಚ್ಛೆಯಾಗಿತ್ತು... ನಮ್ಮ ಕಾಮನೆಗಳನ್ನು ನಾವೇ ಅರ್ಥಮಾಡಿಕೊಂಡು ಹತ್ತಿಕ್ಕದಿದ್ದರೆ ನಮ್ಮ ಪ್ರೇಮವನ್ನು ಜಯಿಸಲಾಗದಿದ್ದರೆ ನೀನು ಹೇಳುವುದು ಸರಿಯಾಗಬಹುದಿತ್ತೇನೋ!.... ಆದರೆ ಇದರಿಂದ ನಮ್ಮೊಂದಿಗೆ ತಮ್ಮ ಕನಸುಗಳನ್ನು ಹೆಣೆದುಕೊಂಡಿರುವ ಒಂದು ವಾತ್ಸಲ್ಯ ಜೀವಿಯ ಹೃದಯಕ್ಕೆ ಆಗಬಹುದಾದ ನೋವು, ಅದರೊಂದಿಗೆ ಬಾಂಧವ್ಯವನ್ನೇ ಕತ್ತರಿಸಿಕೊಳ್ಳಬೇಕಾಗಿ ಬರುವ ಅನಿವಾರ್ಯತೆಗಳು ನೆನಪಾದಾಗ, ಅವರಿಗಾಗಿ ಮಾಡಬೇಕಾಗಿ ಬರುವುದು ತ್ಯಾಗವೊಂದೇ!!

ಏಗ್ನೀಸ್ : (ನಕ್ಕು) ಅಂತರಾತ್ಮ! ನನಗೆ ಅಂತರಾತ್ಮ ಇಲ್ಲವೆಂದು ನಿನಗೆ ಯಾರು ಹೇಳಿದರು? ನನಗೂ ಅಂತರಾತ್ಮವಿದೆ. ನಾನೇನೂ ಚಿಕ್ಕ ಮಗುವಲ್ಲ. ನಿನ್ನ ಮಾತುಗಳನ್ನು ನಂಬಿ, ನಿನ್ನನ್ನು ಒಳಗೆ ಸೇರಿಸಿಕೊಂಡು, ನಿನಗಾಗಿ ಪ್ರಾಣಬಿಟ್ಟೆನಲ್ಲ. ಅದು ನಾನು ಮಾಡಿದ ಮಹಾಪರಾಧವೆಂದು ಈಗ ನನ್ನ ಅಂತರಾತ್ಮ ಚೀರಿ ಹೇಳುತ್ತಿದೆ. ಸರಿ ಈಗೇನು ಮಾಡಬೇಕೆಂದಿರುವೆ?... ಕಾಲ ಮಿಂಚಿ ಹೋಗಿದೆ. 'ಇದನ್ನೆಲ್ಲಾ ಮೊದಲೇ ಹೇಳಬೇಕಿತ್ತು'– ಎಂದು ನಿನ್ನ ದೇವರು ಪ್ರೇರಿಸಲಿಲ್ಲವೇ? ನಾನೇನೂ ನಿನ್ನ ಮನೆಗೆ ಬಂದು 'ನನ್ನನ್ನು ಪ್ರೀತಿಸು' ಎಂದು ಕೇಳಿಕೊಳ್ಳಲಿಲ್ಲ. ನೀನೇ ಇಲ್ಲಿಗೆ ಬಂದು, ನಾನೊಂದು ಮಗುವಿನ ಗೊಂಬೆ ಎಂದು ತಿಳಿದು ನಿನಗೆ ಬೇಕಾದಷ್ಟು ಕಾಲವೂ ಆಟವಾಡಿದೆ!..... ಈಗ ಈ ಮಾತುಗಳನ್ನು.... ಸುಂದರವಾದ ಮಾತುಗಳನ್ನು ಆಡುತ್ತಿರುವೆ.... ಪರವಾಗಿಲ್ಲ.... ನೀನು ನನ್ನ ಜೊತೆ ಬರಲು ಸಿದ್ಧನಿಲ್ಲದಿದ್ದರೂ ನಾನೇ ಇಲ್ಲಿಂದ ಹೊರಟು ಹೋಗುತ್ತೇನೆ..... ನಿನ್ನನ್ನು ಮರೆಯಲು ಪ್ರಯತ್ನಿಸುತ್ತೇನೆ. ಹೇಳು... ಯಾವಾಗ ಹೋಗಲಿ?... ಈ ಕ್ಷಣವೇ ಹೋಗಬೇಕೇ ಅಥವಾ....?

ಪಾಲ್ : (ಬೆರಗಿನಿಂದ) ಅಥವಾ...? ಏಕೆ ನಿಲ್ಲಿಸಿದೆ?

(ಏಗ್ನೀಸ್ ಮಾತಾಡುತ್ತಿದ್ದಂತೆ ಯಾವುದೋ ದುಷ್ಟ ಶಕ್ತಿಯ ಪ್ರಭಾವಕ್ಕೊಳಗಾದವಂತೆ ಥರ ಥರ ನಡುಗುತ್ತಾಳೆ. ಬೀಳುವಂತಾಗುತ್ತಾಳೆ. ಗಾಬರಿಯಿಂದ ಪಾಲ್ ಅವಳನ್ನು ಗಟ್ಟಿಯಾಗಿ ಹಿಡಿದುಕೊಳ್ಳುತ್ತಾನೆ.)

(ಸ್ವಗತ) ಹೌದು... ಹೌದು... ಅವಳು ಹೇಳುವುದು ಸರಿ. ಇವು ನನ್ನ ಅಂತರಾತ್ಮದ ಮಾತುಗಳಲ್ಲ. ಅವಳನ್ನು ನಂಬಿಸುವುದಕ್ಕಾಗಿ ಈ ಮಾತುಗಳಲ್ಲವೇ....? ನಿಜವಾಗಿಯೂ ನನಗೆ ಅವಳು ಬೇಡವೇ....? (ಪ್ರಕಟ) ಏಗ್ನೀಸ್, ಸಮಾಧಾನ ಮಡಿಕೋ.

**ಏಗ್ನೀಸ್** : ದೇವರೇ.... ದೇವರೆ. ನೀನು ಇರುವುದು ನಿಜವಾದರೆ, ನಮ್ಮನ್ನು ದೂರವಿಡುವುದೇ ನಿನ್ನ ಉದ್ದೇಶವಾದರೆ, ನಮ್ಮನ್ನು ಸೇರಿಸಲೇಬಾರದಿತ್ತು. ಈಗ ಇವನನ್ನೇಕೆ ಇಲ್ಲಿಗೆ ಕಳಿಸಿದೆ?... ನನಗೆ ಗೊತ್ತು.... ಅವನು ನನ್ನನ್ನು ಪ್ರೀತಿಸದೆ ಇರಲಾರ... ಅವನು ನನ್ನನ್ನು ಪ್ರೀತಿಸುತ್ತಾನೆ. ಗಾಢವಾಗಿ ಪ್ರೀತಿಸುತ್ತಾನೆ...ಆದರೇಕೆ ಈ ವಂಚನೆಯ ಮಾತುಗಳು?

**ಪಾಲ್** : (ಮೆಲ್ಲಗೆ ತಲೆ ಎತ್ತಿ ಅವಳನ್ನೇ ದಿಟ್ಟಿಸುತ್ತ) ಏಗ್ನೀಸ್.... ಏಗ್ನೀಸ್.... ನನ್ನ ಮುದ್ದು ಏಗ್ನೀಸ್.... ನನ್ನ ಪ್ರೇಮದೇವತೆಯೇ ನಿನ್ನ ನಂಬಿಕೆಯೇ ನಿಜವಾದ್ದು.... ನನ್ನನ್ನು ಎಷ್ಟು ಗಾಢವಾಗಿ ಪ್ರೀತಿಸುತ್ತಿರುವೆ....! ನಿನ್ನ ಮನಸ್ಸನ್ನು. ನಿನ್ನ ಪ್ರೀತಿಯ ಆಳವನ್ನು ತಿಳಿದಿದ್ದೂ ನಿನಗೆ ನೋವುಂಟು ಮಾಡಲು ಹೊರಟಿರುವ ನನಗೆ ಯಾವ ಶಿಕ್ಷೆಯಾದರೂ ಕಡಿಮೆಯೇ! ನಾನೆಷ್ಟು ಮೂರ್ಖ, ನಿನ್ನಂತಹ ಅಪೂರ್ವ ವಸ್ತುವನ್ನು ಕಳೆದುಕೊಳ್ಳಲು ಹೊರಟಿದ್ದೆನಲ್ಲ....?! ನಿನ್ನ ಅಗಲಿಕೆಯ ಒಂದೊಂದು ಕ್ಷಣವೂ ನನಗೆ ಸಾವಿನಂತೆ.,...ಎಲ್ಲ ದೇವರ ಇಚ್ಛೆ. ಅವನ ಕೈಯ್ಯ ಆಟದ ಕಾಯಿಗಳು ನಾವು. ನಮ್ಮಲ್ಲಿನ ಒಪ್ಪು ತಪ್ಪುಗಳು–ಎಲ್ಲಕ್ಕೂ ಅವನೇ ಪ್ರೇರಕ...ಬಾ ಏಗ್ನೀಸ್. ಇನ್ನು ನಾನು ನಿನ್ನನ್ನು ನೋಯಿಸಲಾರೆ.... ಬಾ....ದೂರ.... ಎಲ್ಲಾದರೂ ನಿರ್ಜನ ಸ್ಥಾನಕ್ಕೆ ಓಡಿ ಹೋಗಿ ಮುಕ್ತ ಬದುಕನ್ನು ಬದುಕೋಣ....ಚರ್ಚಿಲ್ಲದ.....ಚರ್ಚಿನ ಗೋಪುರ ಕಾಣದ....ಚರ್ಚಿನ ಗಂಟೆಗಳು ನುಡಿಯದ.... ನೀತಿ, ನಿಯಮ, ಧರ್ಮ, ಸಮಾಜ... ಯಾವುದೇ ಕಟ್ಟು ಕಟ್ಟಳೆಗಳಿಲ್ಲದ ನಾಡಿಗೆ ಹೋಗಿ ಬಿಡೋಣ.

(ಎಂದು ತೀವ್ರವಾದ ಭಾವಾತಿರೇಕಕ್ಕೆ ಒಳಗಾಗಿ ಏಗ್ನೀಸಳನ್ನು ಬರಸೆಳೆದುಕೊಂಡು ಬಿಗಿಯಾಗಿ ಅಪ್ಪಿಕೊಳ್ಳುತ್ತಾನೆ. ಅವಳನ್ನು ಗಟ್ಟಿಯಾಗಿ ಚುಂಬಿಸುತ್ತಾನೆ..... ದೂರದಲ್ಲಿ ಗುಡುಗು ಸಿಡಿಲಿನ ಸಬ್ದ..... ಸಮುದ್ರದ ಭಯಂಕರ ಘೋರ್ಗರೆತ, ಹೆಪ್ಪುಗಟ್ಟಿದ ಕತ್ತಲಿನ ವಾತಾವರಣ.)

೦೦

## ದೃಶ್ಯ – ೫

(ಮೇಳದ ಪ್ರವೇಶ. ಎರಡು ಪಾರ್ಶ್ವಗಳಲ್ಲಿ ಮೊದಲು ನಿಂತು ಮಾತನಾಡುತ್ತಾರೆ. ನಂತರ ಮಾತನಾಡುತ್ತಲೇ ಎರಡು ಹೋಳುಗಳು ಸುತ್ತಾಡುತ್ತ ವೃತ್ತಾಕಾರದಲ್ಲಿ ತಿರುಗುತ್ತಾರೆ.)

**ಬಲಮೇಳ :** ಗಿರಿಭಾನು ಧರೆಯೆಲ್ಲ ಮುನಿದುದೇಕೆ?
ಮರ ಮರದ ಕೊಂಬೆಗಳು ಅಳುವುದೇಕೆ?
ಕತ್ತಲದು ಕತ್ತಲು ಕವಿದು ಕೊಲ್ಲುವುದೇಕೆ?
ಗರ್ಜಿಸುವ ಕಡಲೆದೆಯು ಕುದಿವುದೇಕೆ?

**ಎಡಮೇಳ :** ವಿಘ್ನಗಳು ವಿಪರೀತಗಳು
ಸೈತಾನನುರಿಗಣ್ಣ ಬೆಂಕಿ ಕೆಂಡಗಳು
ನೆಮ್ಮದಿಯ ಕಲಕಲು ಇಳಿದು ಬಂದ
ಜಗದ ಪ್ರಳಯದ ಶಾಪ ಹೊತ್ತು ತಂದ
ಹೊಳೆವ ಬೆಳಕನು ಇರಿದು
ದೈವಭಕ್ತರ ಮುರಿದು
ಕಾರುಕತ್ತಲನಿಳಿಸಿ ಬಂದ
ಗುಮ್ಮನಂದದಿ ಅವಿತು
ಎದೆಯಾಳದಲಿ ಹುಗಿದು
ಕಾಮನಂಬುಗಳೆಸೆದು
ನಮ್ಮ ತಂದೆಯನಿರಿದು
ಥಕಥಕಿಸಿ ಕುಣಿದ.

**ಬಲಮೇಳ :** ಸುಂದರ ಪಿಶಾಚಿಯಾಗಿ ಸೈತಾನನೇ ಬಂದ
ಅಚಲಬಲವನು ಮುರಿದು

ರಕ್ತವನೆ ಹೀರಿದಳು, ಮೀರಿದಳು
ಬಾಹುಬಂಧನ ಸರ್ಪ;
ತುಟಿಯ ಚುಂಬನ ನಂಜು
ಹೊಳೆವ ಕಣ್ಣಿನ ಅಲಗು
ಮೈ ಮನಕೆ ಫಾಸಿ
ಅವಳೊಗೆದ ಪಾತಾಳ ಬಾವಿಯಲಿ
ಬಲಿ ಬಿದ್ದ
ಅಂಗುಲಂಗುಲವಿಳಿದು ಗೋರಿಯಾದ.

**ಎಡಮೇಳ :** ಪ್ರೇಮವೆ ವಿಷವಾಗಿ
ನರನಾಡಿ ತುಂಬಿತ್ತು
ಅರ್ಬುದದ ತೆರದಲ್ಲಿ
ಬೆಳೆ ಬೆಳೆದು ತುಂಬಿತ್ತು
ಕರಗಿವನು ಮರುಗಿದನು
ಮರುಳಾದನು.
ದೇವರಾ ದಾರಿಯನು
ಸ್ವರ್ಗದಾ ತೀರವನು
ಆತ್ಮದುದ್ಧಾರವನು
ತಾಯೆದೆಯ ಆಸೆಯನು
ಮೀರಿದನು ತೂರಿದನು.

**ಬಲಮೇಳ :** ಇನ್ನಾರು ಕಾವವರು
ಈ ನಮ್ಮ ಕುರಿಗಳನು?
ಬೋಧಿಸುವರಾರೆಮಗೆ
ನಮ್ಮವರ ಗುರಿಗಳನು?
ಬೆಳಕ ತೋರಿಸಲೆಂದು
ಬಳಿಗೆ ಬಂದವನು
ಪ್ರೀತಿ ಮಮತೆಗಳುಣಿಸಿ
ತಣಿಸಿದವನು.

ಎಡಮೇಳ : ಸುಳಿಗಾಳಿಗೊಡೆಯುವ ಹಡಗ
ದಂಡೆಗೆಳೆದು ತರುವ
ನಂದಿ ಹೋಗುವ ಬೆಳಕ
ತಡೆದು ನಿಲ್ಲಿಸುವ

ಕಾಳರಾತ್ರಿಗಳಲ್ಲಿ ಅಂಡಲೆವ ಆತ್ಮವನು
ನಿಜದ ನೆಲಗೆಳೆತರುವ
ನೆಲಕಚ್ಚಿ ಮಡಿಯಾಗಿ
ಗೋರಿಯಾಗುವ ಮುಗ್ಧ
ಪ್ರಭುವಿನಮೃತ ಚೆಲ್ಲಿ
ಮೃತ ಆತ್ಮವನು ಮತ್ತೆ
ಎಚ್ಚರಿಸುವ.

**ಎಲ್ಲರೂ** : ಗೆಳೆಯರೆಲ್ಲರು ಬನ್ನಿ.... ಬನ್ನಿ ಗೆಳೆಯರೆ ಬೇಗ
ನಮ್ಮ ತಂದೆಯ ಅಂಡಲೆವ ಆತ್ಮಪಟವನ್ನು
ಅದರ ನೆಲೆಗೆ ನಿಲ್ಲುವಂತೆ ಪ್ರಯತ್ನಿಸೋಣ.
(ಎಲ್ಲರೂ ಸಾಲಾಗಿ ಹೋಗುತ್ತಾರೆ)

೦೦

# ದೃಶ್ಯ – ೬

(ಏಗ್ನೀಸ್‌ಳ ಮನೆಯ ದೃಶ್ಯವೇ ಮುಂದುವರಿಯುವುದು. ಒಂದೇ ಹಾಸಿಗೆಯ ಮೇಲೆ ದಣಿದವರಂತೆ ಕುಳಿತಿದ್ದಾರೆ. ಏಗ್ನೀಸ್‌ಳ ಮುಖದಲ್ಲಿ ಗಲಿಬಿಲಿ ಭಾವ ಕಾಣಿಸುತ್ತದೆ.)

**ಏಗ್ನೀಸ್** : ನೀನು ಮತ್ತೆ ನನ್ನ ಬಳಿಗೆ ಬಂದೇ ಬರುತ್ತೀ ಎಂದು ನನಗೆ ಗೊತ್ತಿತ್ತು ಪಾಲ್.

**ಪಾಲ್** : ಹಾಗಾದರೆ ಈಗ ನಿನಗೆ ಸಂತೋಷವಾಗಿರಬೇಕಲ್ಲ! (ಹತ್ತಿರ ಸರಿದು) ನಾನಿಲ್ಲಿದ್ದೇನೆ; ಮರಳಿ ಬಂದಿದ್ದೇನೆ. ಇನ್ನು ಮುಂದೆ ಎಂದೆಂದಿಗೂ ನಾನು ನಿನ್ನವನೆ. ನಿನ್ನನ್ನು ಬಿಟ್ಟು ಹೋಗಲಾರೆ. ಇನ್ನಾದರೂ ಶಾಂತವಾಗಿ, ನೆಮ್ಮದಿಯಾಗಿ ಇರು... ಅಬ್ಬಬ್ಬ! ಎಷ್ಟೊಂದು ಹೆದರಿಸಿಬಿಟ್ಟೆ. ಯಾವುದಕ್ಕೂ ಇನ್ನು ನೀನು ಉದ್ವೇಗಗೊಳ್ಳಬೇಡ. ಬದುಕಿನ ನೇರ ಮಾರ್ಗದಲ್ಲಿ ನಡೆಯೋಣ. ಇನ್ನೆಂದಿಗೂ ನಾನು ನಿನಗೆ ತೊಂದರೆ ಕೊಡುವುದಿಲ್ಲ. ಇನ್ನು ಮುಂದೆ ಹೀಗೇ ಶಾಂತವಾಗಿರುತ್ತೇನೆಂದು ಮಾತು ಕೊಡು.

(ಏಗ್ನೀಸ್ ಮೌನವಾಗಿ, ಏನೂ ಅರ್ಥವಾಗದವಳಂತೆ ಒಂದೇ ಸಮನೆ ಅವನನ್ನು ನೋಡುತ್ತಾಳೆ.)

**ಪಾಲ್** : ಪ್ರಿಯ ಏಗ್ನೀಸ್, ಇಂದು ನಾನು ಏನೇನು ನೋವನ್ನು ಅನುಭವಿಸಿದ್ದೇನೆಂದು ನೀನು ಖಂಡಿತ ಅರ್ಥಮಾಡಿಕೊಂಡಿರಲಾರೆ. ಆದರೆ ಈ ನೋವು ಬಹುಶಃ ನನಗೆ ಅನಿವಾರ್ಯವಾಗಿತ್ತೇನೋ! ನನ್ನ ಹೊರಗಿನ ಚಿಪ್ಪುಗಳನ್ನೆಲ್ಲಾ ಕಿತ್ತು ಹಾಕಿದೆ. ಅಶುದ್ಧವಾದುದನ್ನು ಕಿತ್ತೊಗೆದೆ. ರಕ್ತ ಒಸರುವಷ್ಟರ ಮಟ್ಟಿಗೆ ನನ್ನನ್ನು ನಾನೇ ದಂಡಿಸಿಕೊಂಡೆ. ಆದರೆ ಈಗ ನಾನಿಲ್ಲಿ ನಿನ್ನವನಾಗಿ... ಕೇವಲ ನಿನ್ನವನಾಗಿ ಇದ್ದೇನೆ. ಮಾನಸಿಕವಾಗಿ

ಮಾತ್ರವೇ ನಿನ್ನವನಾಗಿ ಇರಬಲ್ಲೆ.... ತಿಳಿಯಿತಾ? ನಾವು ಎಷ್ಟೋ ವರ್ಷಗಳಿಂದ ಪರಸ್ಪರ ಪ್ರೀತಿಸಿದ್ದೇವೆ; ಸಂತೋಷಪಟ್ಟಿದ್ದೇವೆ; ಒಬ್ಬರು ಮತ್ತೊಬ್ಬರಿಗಾಗಿ ಸಂಕಟ ಪಟ್ಟಿದ್ದೇವೆ ಎಂದು ನಾನು ಭಾವಿಸುತ್ತೇನೆ. ಸಮುದ್ರವನ್ನೇ ತಲ್ಲಣಗೊಳಿಸುವ ಚಂಡಮಾರುತ ಮತ್ತು ಅದರ ಪ್ರಚಂಡ ಜೀವ ಚೈತನ್ಯ ನಮ್ಮೊಳಗೇ ಇದೆ ಎನಿಸುತ್ತದೆ. ಏಗ್ನೀಸ್.... ನನ್ನ ಪ್ರೀತಿಯ ಹುಡುಗಿ... ಪ್ರಾಣದ ಪ್ರಾಣವೇ ನನ್ನನ್ನೇ ಸಂಪೂರ್ಣವಾಗಿ ನಿನಗೆ ತೆತ್ತುಕೊಂಡಿರುವಾಗ ನನ್ನಿಂದ ಮತ್ತೇನನ್ನು ಪಡೆಯಬಲ್ಲೆ?

**ಏಗ್ನೀಸ್** : (ಅಪನಂಬಿಕೆಯಿಂದ) ನೀನು ಹೇಳುವುದೆಲ್ಲ ಹೇಳಿ ಮುಗಿಸಿದೆಯಾ?... ಹಾಗಿದ್ದರೆ ಕೇಳು.... ಇನ್ನೂ ಹೆಚ್ಚಿನ ಸುಳ್ಳುಗಳನ್ನು ಸೃಷ್ಟಿಸುವ ಕಷ್ಟ ಬೇಡ. ಈಗಾಗಲೇ ಸಾಕಷ್ಟು ಸುಂದರ ಸುಳ್ಳುಗಳನ್ನು ಕೇಳಿದ್ದೇನೆ. ನಿನ್ನೆ ರಾತ್ರಿ ನಾವು ನಿರ್ಧರಿಸಿದಂತೆ ಇಲ್ಲಿಂದ ಖಂಡಿತವಾಗಿಯೂ ಹೋಗಲಿದ್ದೇವೆ ತಾನೇ? ಈ ರೀತಿ ಕಳ್ಳತನದಲ್ಲಿ ಬದುಕುವುದು ನನಗೆ ಇಷ್ಟವಾಗುವುದಿಲ್ಲ. ನಾವಿಬ್ಬರೂ ಒಟ್ಟಿಗೆ ಜೀವಿಸಬೇಕೆಂದಿದ್ದರೆ ಈ ರಾತ್ರಿಯೇ ಹೊರಟು ಬಿಡಬೇಕು. ನನ್ನ ಹತ್ತಿರ ಹಣವಿದೆ. ಅದು ನನ್ನದೇ ಹಣ ತಿಳಿಯಿತೇ? ಸತ್ಯ ಮಾರ್ಗದಲ್ಲಿಯೇ ಬದುಕುತ್ತಿದ್ದೇವೆಂಬುದು ರುಜುವಾತಾದ ಮೇಲೆ ನಿನ್ನ ತಾಯಿ, ನನ್ನ ಅಣ್ಣತಮ್ಮಂದಿರು ಮತ್ತು ಉಳಿದವರೆಲ್ಲರೂ ನಮ್ಮನ್ನು ಕ್ಷಮಿಸುತ್ತಾರೆ. ಆದರೆ ಈ ರೀತಿಯ ಬದುಕು ನನ್ನಿಂದ ಸಾಧ್ಯವಿಲ್ಲ.

**ಪಾಲ್** : (ಅಬ್ಬರಿಸಿ) ಏಗ್ನೀಸ್!

**ಏಗ್ನೀಸ್** : ನನಗೆ ತತ್‌ಕ್ಷಣದ ಉತ್ತರ ಬೇಕು ಹೇಳು. ಹೌದೋ ಇಲ್ಲವೋ?

**ಪಾಲ್** : ಇದ್ದಕ್ಕಿದ್ದಂತೆ ನಿಂತ ಕಾಲ ಮೇಲೆ ಹೊರಟು ಬಾ ಎಂದರೆ, ನನಗೆ ಆಗುವುದಿಲ್ಲ!

**ಏಗ್ನೀಸ್** : (ವ್ಯಂಗ್ಯ) ಓಹ್! ಹಾಗಾದರೆ ಇಲ್ಲಿಗೇಕೆ ಮತ್ತೆ ಬಂದೆ? ನನ್ನನ್ನು ಬಿಟ್ಟುಬಿಡು. ಹೊರಟು ಹೋಗು... ನನ್ನ ಪಾಡಿಗೆ ನನ್ನನ್ನು ಬದುಕಲು ಬಿಡು... ಹೊರಟು ಹೋಗು (ಕಿರುಚುತ್ತಾಳೆ) ನಾನೇನೂ ನಿನ್ನನ್ನು ಬಾ ಎಂದು ಹೇಳಲಿಲ್ಲ.... ನಾವು ಧೈರ್ಯವಾಗಿರಬೇಕೆಂದು ಹೇಳುವ ನಿನಗೇ ಧೈರ್ಯವಿಲ್ಲ. ನನ್ನೊಟ್ಟಿಗೆ ಬರಲು ಹೆದರಿಕೆ... ಹೆದರಿಕೆ ಇರುವವನೇಕೆ ಬಂದೆ? ಏಕೆ ನನ್ನನ್ನು ಚುಂಬಿಸಿದೆ?... ವಂಚಕ, ದ್ರೋಹಿ ನೀನು. ರಾತ್ರಿಗಳಲ್ಲಿ ನನ್ನ ಸಹವಾಸ ಬಯಸುತ್ತೀ; ಬೆಳಗಿನ ಹೊತ್ತು ನನ್ನನ್ನು ಅವಮಾನಪಡಿಸುವಂತೆ ಕ್ಷಮೆ ಕೇಳುತ್ತೀ; ಬುದ್ಧಿವಾದದ ಪತ್ರಗಳನ್ನು

ಕಳಿಸುತ್ತೀ. ಇದು ನಿನಗೆ ಸರಿ ಎನಿಸುತ್ತಿದ್ದರೆ, ನಾನು ಹೇಳುತ್ತೇನೆ. ಅದು ತಪ್ಪು ಎಂದು. ಇಂದು ರಾತ್ರಿ ತಿರುಗಿ ಬಂದಂತೆ ನಾಳೆ ರಾತ್ರಿಯೂ ಬರುತ್ತೀ.... ಬರುತ್ತಲೇ ಇರುತ್ತಿ. ನಾನು ಅದನ್ನು ಸಹಿಸುವುದಿಲ್ಲ. ನಾನೇನೂ ರಾತ್ರಿಗಳ ಬೆಲೆ ಕಟ್ಟುವ ಸೂಳೆಯಲ್ಲ... ಇನ್ನು ನಾನಿದನ್ನು ಸಹಿಸುವುದಿಲ್ಲ... ತಿಳಿಯಿತೇ?

**ಪಾಲ್** : ಏಗ್ನೀಸ್... ಏಗ್ನೀಸ್ ನಿನಗೇನಾಗಿದೆ. ಹೀಗೇಕೆ ಮೈಮೇಲೆ ಬಂದವರಂತೆ ಆಡುತ್ತಿರುವೆ. ನನ್ನನ್ನೇಕೆ ನೀನು ಅರ್ಥಮಾಡಿಕೊಳ್ಳಲು ಪ್ರಯತ್ನಿಸುವುದಿಲ್ಲ... (ಸ್ವಗತ) ದೇವರೇ! ದೇವರೆ!... ನನ್ನನ್ನು ಈ ಸಿಕ್ಕಿನಿಂದ ಪಾರಾಗಿಸು.

**ಏಗ್ನೀಸ್** : ಪಾಲ್, ನನ್ನ ಬಳಿ ಇದೆಲ್ಲ ನಾಟಕ ಬೇಡ. ನನ್ನನ್ನು ಇನ್ನೂ ಮಗುವೆಂದು ಭಾವಿಸಿ ಮಾತನಾಡುತ್ತಿರುವಿ. ನೋಡು, ನನಗೂ ವಯಸ್ಸಾಗಿದೆ... ಇನ್ನೊಂದೆರಡು ದಿನಗಳಲ್ಲಿ ನನಗೆ ಮುಪ್ಪು ಬರುವಂತೆ ಮಾಡಿದವನು ನೀನೇ! ಜೀವನದಲ್ಲಿ ಋಜುಮಾರ್ಗ... ನೇರ ದಾರಿ... ಎಲ್ಲ ಒಪ್ಪುತ್ತೇನೆ. ಈ ರೀತಿ ಗುಟ್ಟಾಗಿ ಸುಖ ಅನುಭವಿಸುವುದು ನೇರದಾರಿ. ಅಲ್ಲವೇ? (ವ್ಯಂಗ್ಯ) ಲೋಕದ ಕಣ್ಣಿಗೆ ಮಣ್ಣೆರಚಲು ನನಗೊಬ್ಬ ಗಂಡ ಬೇಕು. ನೀನೇ ಧಾರೆ ಎರೆದು ಕೊಡುತ್ತೀ ಬೇರೆ! ಆದರೆ ಗುಟ್ಟಾಗಿ ನೀನು ಬರುತ್ತಿರಬೇಕು. ನನ್ನ ರಾತ್ರಿಗಳನ್ನು ದೋಚಬೇಕು...ಇದಲ್ಲವೇ ನಿನ್ನ ತಂತ್ರ? ನನಗೆ ಗೊತ್ತು.... ನಿನ್ನ ಆಲೊಚನೆ ಏನೆಂದು.....! ನನ್ನ ವಿಚಾರ ನಿನಗೆ ಇನ್ನೂ ತಿಳಿಯದು. ನಾನು ಮನಸ್ಸು ಮಾಡಿದರೆ....? .... ಅದಕ್ಕೇ ಹೇಳುತ್ತಿದ್ದೇನೆ, ನಾವಿಬ್ಬರೂ ಹೊರಟು ಬಿಡೋಣ. ಎಂದು. ಯಾರಿಂದ ಯಾರಿಗೂ ಮೋಸವಾದಂತೆ ಆಗುವುದಿಲ್ಲ. ಎಲ್ಲಾದರೂ ಹೋಗಿ ಮದುವೆ ಮಾಡಿಕೊಳ್ಳೋಣ. ನಾನು ದುಡಿಯುತ್ತೇನೆ... ಹೇಗೋ ಹಾಯಾಗಿ ಇರಬಹುದು. ರಾತ್ರಿ ಹೇಳುತ್ತಿದ್ದೆಯಲ್ಲ, ದೇವರು, ತ್ಯಾಗ ಇತ್ಯಾದಿ, ಇತ್ಯಾದಿ, ಅವೆಲ್ಲ ಏನಾದವು....? ನಾನು ಹೇಳುವುದನ್ನು ಕೇಳು. ಇಲ್ಲವಾದರೆ....? ನಾನೂ ನಿನ್ನ ಜೊತೆ ಚರ್ಚಿಗೆ ಬಂದು, ನಿನ್ನ ಜೊತೆಗೇ ಪ್ರಾರ್ಥನಾ ವೇದಿಕೆಯ ಮೇಲೆ ನಿಂತು, ಅಲ್ಲಿ ಸೇರಿದ ಎಲ್ಲರಿಗೂ ಎತ್ತರದ ದನಿಯಲ್ಲಿ ಹೇಳುತ್ತೇನೆ..... "ಇದೋ ನೋಡಿ ಇವನು, ನಿಮ್ಮ ಸ್ವಂತ. ಬೆಳಗಿನ ಹೊತ್ತು ಧರ್ಮ ಬೋಧಿಸುತ್ತಾನೆ; ಪವಾಡಗಳನ್ನು ಮಾಡುತ್ತಾನೆ. ರಾತ್ರಿಯ ಹೊತ್ತು ಅರಕ್ಷಿತ. ಅಸಹಾಯಕ, ಹೆಣ್ಣಿನ ಮನೆಗೆ ಬಂದು ಮಾನಭಂಗ ಮಾಡುತ್ತಾನೆ; ಶೀಲಭಂಗ ಮಾಡುತ್ತಾನೆ" ಎಂದು ಸಾರಿ, ಸಾರಿ ಹೇಳುತ್ತೇನೆ.

**ಪಾಲ್** : (ಅವಳ ಹತ್ತಿರ ಬಂದು ಬಾಯಿಮುಚ್ಚಿ) ಏಗ್ನೀಸ್... ಏಗ್ನೀಸ್ ನಿನಗೆ ಹುಚ್ಚು ಹಿಡಿದಿರಬೇಕು. ವಿನಾಕಾರಣ ಉದ್ವೇಗಗೊಳ್ಳುತ್ತಿರುವೆ. ಸುಮ್ಮನೆ ಸಮಾಧಾನ ತಂದುಕೊ. ನನ್ನ ಮಾತನ್ನು ಕೇಳು. ನಾನು ನಿನ್ನನ್ನು ಪ್ರೀತಿಸುತ್ತಿದ್ದೇನೆಂದು ಅನಿಸುವುದಿಲ್ಲವೇ? ನಿನಗೆ ದ್ರೋಹ ಮಾಡಬೇಕೆಂದಿದ್ದರೆ, ನಾನೇಕೆ ನಿನ್ನಲ್ಲಿಗೆ ಬರುತ್ತಿದ್ದೆ? ನಿನ್ನ ಬಿಟ್ಟು ಹೋಗುವುದು ಸಾಧ್ಯವೇ ಇಲ್ಲ. ಮರೆಯುವುದಂತು, ಕನಸಿನಲ್ಲಿಯೂ ಊಹಿಸಿಕೊಳ್ಳಲಾರೆ. ಆದರೆ ಏಗ್ನೀಸ್, ನಾವು ನಮ್ಮನ್ನು ಕಲುಷಿತಗೊಳಿಸಿಕೊಳ್ಳಬಾರದು. ಜೀವನದಲ್ಲಿ ಅತ್ಯುತ್ತಮವಾದುದರ ಜೊತೆಗೆ, ತ್ಯಾಗ ಸಾವುಗಳ ಜೊತೆಗೆ, ಅಲ್ಲದೆ ದೇವರ ಜೊತೆಗೂ ಕೂಡ ನಮ್ಮ ಈ ಪ್ರೇಮ ಬೆಸೆದುಕೊಳ್ಳಬೇಕು...... ಅರ್ಥವಾಯಿತಾ ಏಗ್ನೀಸ್?.... ಹೇಳು..... ಹೇಳು... ಅರ್ಥವಾಯಿತಾ?

(ಏಗ್ನೀಸ್‌ಳ ಮೇಲೆ ಯಾವುದೇ ಪರಿಣಾಮವಾಗುವುದಿಲ್ಲ. ಅವಳು ಅವಳದೇ ಆಲೋಚನೆಗಳ ಗುಂಗಿನಲ್ಲಿ ಇರುತ್ತಾಳೆ. ಪಾಲ್ ಎದ್ದು ಅವಳ ರಟ್ಟೆ ಹಿಡಿದು ಮೆಲ್ಲನೆ ಎಬ್ಬಿಸುತ್ತಾನೆ.)

**ಪಾಲ್** : ಏಳು. ಎದ್ದೇಳು. ನಾಳೆ ಬೆಳಕು ಹರಿದಂದಿನಿಂದ ಹೊಸ ಜೀವನವನ್ನು ಆರಂಭಿಸೋಣ. ನೀನು ಇಚ್ಛಿಸಿದರೆ, ನಾವು ಮೊದಲಿನಂತೆ ಭೇಟಿಯಾಗೋಣ. ನಾನು ನಿನ್ನ ಗೆಳೆಯನಾಗಿರುತ್ತೇನೆ. ನಿನ್ನ ಅಣ್ಣನಾಗಿರುತ್ತೇನೆ. ಒಬ್ಬರಿಗೊಬ್ಬರು ಸಹಾಯ ಮಾಡೋಣ, ಸಾವಿನ ಗಳಿಗೆಯವರೆಗೆ, ಕಡೆಗೆ ಸಾವಿನಲ್ಲೂ ನಾನು ನಿನ್ನ ಜೊತೆಗಿರುತ್ತೇನೆ. ನಿನ್ನ ಇಚ್ಛೆಯಂತೆ ನನ್ನನ್ನು ನಡೆಸಿಕೊ.

**ಏಗ್ನೀಸ್** : ನನ್ನನ್ನು ಮುಟ್ಟಬೇಡ. ಹೊರಟು ಹೋಗು. ನಾಳೆಯಿಂದ ನಿನ್ನ ಮುಖ ತೋರಿಸಬೇಡ. ನನಗೆ ಅಸಹ್ಯವಾಗುತ್ತದೆ.

**ಪಾಲ್** : ಹಾಗೆ ಹೊರಟುಹೋಗಲು ಸಾಧ್ಯವಿಲ್ಲ. ನಾಳೆ ಚರ್ಚಿನಲ್ಲಿ ಪ್ರಾರ್ಥನೆ ಸಲ್ಲಿಸಲೇ ಬೇಕು. ನೀನು ಬಂದು ಅದನ್ನು ಕೇಳಲೇಬೇಕು. ನಂತರ ಅಗತ್ಯವೆನಿಸಿದರೆ ಹೊರಟುಹೋಗುತ್ತೇನೆ.

**ಏಗ್ನೀಸ್** : ಬರುತ್ತೇನೆ.. ಖಂಡಿತ ಬರುತ್ತೇನೆ. ನಾಳೆ ಚರ್ಚಿಗೆ ಬಂದು ಪ್ರಾರ್ಥನಾ ಸಮೂಹದ ಎದುರು ನಿನ್ನನ್ನು ಖಂಡಿಸುತ್ತೇನೆ. ನಿನ್ನ ಮುಖವಾಡ ಕಿತ್ತು ಬಿಸುಡುತ್ತೇನೆ. ಗೋಮುಖವ್ಯಾಘ್ರ ನೀನು ಎಂಬುದನ್ನು ಎಲ್ಲರಿಗೂ ಪ್ರತ್ಯಕ್ಷವಾಗಿ ತೋರಿಸುತ್ತೇನೆ. ಮತ್ತೆಂದೂ ತಲೆ ಎತ್ತದಂತೆ ಮಾಡುತ್ತೇನೆ.

**ಪಾಲ್** : (ಸಮಾಧಾನದಿಂದಲೇ) ಅದೇ ದೇವರಿಚ್ಛೆಯಾದರೆ ಹಾಗೆಯೇ ಆಗಲಿ...ಆದರೆ ನನಗೆ ಗೊತ್ತು. ನೀನು ಹಾಗೆ ಮಾಡಲಾರೆ.....ನೀನು ನನ್ನನ್ನು

ಪ್ರಾಮಾಣಿಕವಾಗಿ ಪ್ರೀತಿಸಿರುವೆ, ಯಾರೂ ತಾವು ಅತಿಯಾಗಿ ಪ್ರೀತಿಸುವ ವಸ್ತುವನ್ನು ನಾಶಮಾಡುವುದಿಲ್ಲ. ನನಗೆ ಖಾತ್ರಿಯಿದೆ... ನಾನಿನ್ನು ಬರುತ್ತೇನೆ.... ಎಲ್ಲಿ, ಒಮ್ಮೆ..... ಕೇವಲ ಒಮ್ಮೆ ಹಿಂದಿನಂತೆಯೇ ಬಂದು ನನ್ನನ್ನು ಬೀಳ್ಕೊಡಲಾರೆಯಾ? (ಪ್ರಾರ್ಥನೆ)

(ಏಗ್ನೀಸ್ ಅವನ ಪ್ರಾರ್ಥನೆಗೆ ಮಣಿದಂತೆ ವಿಧೇಯಳಾಗಿ ಎದ್ದು ಮೊದಲು ಅವನು ಒಳಗೆ ಬಂದ ಬಾಗಿಲಿನ ಬಳಿಗೆ ನಿಧಾನವಾಗಿ ನಡೆದು ಹೋಗಿ ನಿಲ್ಲುತ್ತಾಳೆ. ಆದರೆ ಕೈ ನೀಡುವುದಿಲ್ಲ.)

(ಕತ್ತಲು. ನಾಯಿ ಬೊಗಳುವುದು, ನರಳಾಟ, ಚೀರಾಟಗಳು ಅಸ್ಪಷ್ಟವಾಗಿ ಕೇಳಿ ಬರುತ್ತವೆ.)

೦೦

# ದೃಶ್ಯ – ೭

(ಮೊದಲ ಅಂಕದ ಮೊದಲ ದೃಶ್ಯ. ಪಾಲ್ ಮನೆಯ ಮುಂದೆ ಮೆಟ್ಟಿಲುಗಳ ಮೇಲೆ ಕುಳಿತಿದ್ದಾನೆ. ಒಳಗೆ ತಾಯಿ ಓಡಾಡುತ್ತಿರುವ ಸದ್ದು ಒಳಗಿನಿಂದ. ಪಾಲ್, ಪಾಲ್ ಎಲ್ಲಿದ್ದೀಯ ಮಗು? ಎಂದು ಕೇಳುತ್ತಿದ್ದಾಳೆ. ತಾಯಿ ಹೊರಬಾಗಿಲಿಗೆ ಬಂದು ಪಾಲ್ ಕುಳಿತಿದ್ದನ್ನು ನೋಡಿ ತಟ್ಟನೆ ನಿಲ್ಲುತ್ತಾಳೆ.)

ತಾಯಿ : ಯಾಕೆ ಮಗು ಇಷ್ಟು ಬೇಗ ಎದ್ದುಬಿಟ್ಟೆ? ರಾತ್ರಿ ಮಲಗಿದ್ದು ತಡವಾಗಿರಬೇಕಲ್ಲವೇ. ನನಗೆ ನೀನು ಬಂದದ್ದು ತಿಳಿಯಲೇ ಇಲ್ಲ. ಚೆನ್ನಾಗಿ ನಿದ್ದೆ ಹತ್ತಿಬಿಟ್ಟಿತ್ತು. ಒಳಗೆ ಬಾ. ಸ್ವಲ್ಪ ಚಹವನ್ನಾದರೂ ಕುಡಿ.

(ವಿಧೇಯನಂತೆ ಎದ್ದು ಒಳಗೆ ಹೋಗುತ್ತಾನೆ. ಒಳ ದೃಶ್ಯ ಕಾಣಿಸಬೇಕು. ತಾಯಿ ಚಹದ ಬಟ್ಟಲನ್ನು ನೀಡುತ್ತಾಳೆ. ಇಬ್ಬರ ನಡುವೆ ಮೇಜೊಂದಿದೆ. ಒಂದೆರಡು ನಿಮಿಷಗಳು ಮೌನ, ಪಾಲ್ ತಾಯಿಯ ದೃಷ್ಟಿಯಿಂದ ತಪ್ಪಿಸಿಕೊಳ್ಳಲು ಪ್ರಯತ್ನಿಸುತ್ತಾನೆ. ಅವಳಿಗೆ ಕಾಣದಷ್ಟು ಕೆಳಮುಖವಾಗಿ ಚಹ ಕುಡಿಯುತ್ತಾನೆ.)

ತಾಯಿ : (ಮೃದುವಾಗಿ) ಪಾಲ್, ಏಗ್ನೀಸ್‌ಳ ಆರೋಗ್ಯ ಹೇಗಿದೆ?

[ಪಾಲ್ (ಏಗ್ನೀಸ್‌ಳ ಹೆಸರು ಕೇಳಿ ಬೆಚ್ಚುತ್ತಾನೆ;) ಕುಡಿಯುತ್ತಿದ್ದ ಚಹ ನೆತ್ತಿಗೇರಿ ಕೆಮ್ಮುತ್ತಾನೆ. ಚಹ ಚಿಮ್ಮಿ ಚೆಲ್ಲುತ್ತದೆ.]

ತಾಯಿ : ನಿಧಾನ ಮಗು. ಯಾಕೆ ಅಷ್ಟು ಬೆಚ್ಚಿದೆ? ಗಾಬರಿಗೊಳ್ಳುವ ಸುದ್ದಿಯೇನೂ ಇಲ್ಲ ತಾನೇ....? ದೇವರು ಆ ಮಗುವನ್ನು ಚೆನ್ನಾಗಿ ಇಟ್ಟಿರಲಿ.

ಪಾಲ್ : (ಹೆದರಿಕೆಯಿಂದ) ಅಮ್ಮ. ಏಗ್ನೀಸ್ ಇಂದು ಚರ್ಚಿಗೆ ಬರುತ್ತಾಳಂತೆ!

ತಾಯಿ : ಬರಲಿ ಬಿಡು. ಸದ್ಯ ಈಗಲಾದರೂ ಆ ಮಗುವಿಗೆ ದೇವರು ಸದ್ಬುದ್ಧಿ ಕರುಣಿಸಿದ್ದಾನೆ.

ಪಾಲ್ : ಈಗ ಅವಳು ಆರಾಮವಾಗಿದ್ದಾಳೆ. ಆದರೆ ತುಂಬ ಉದ್ರೇಕಗೊಂಡಿದ್ದಾಳೆ. ಈ ಊರನ್ನು ಕೂಡಲೇ ಬಿಡಬೇಕೆಂದು ಒತ್ತಾಯಿಸಿದಳು. ಇಲ್ಲದೆ

ಹೋದ ಪಕ್ಷದಲ್ಲಿ ಚರ್ಚಿಗೆ ಬಂದು ಅಲ್ಲಿ ಸೇರಿದ ಎಲ್ಲ ಜನರ ಮುಂದೆ ನನ್ನನ್ನು ಖಂಡಿಸುತ್ತಾಳಂತೆ; ಬಣ್ಣ ಬಯಲು ಮಾಡುತ್ತಾಳಂತೆ; ದೊಡ್ಡದಾಗಿ ಗುಲ್ಲೆಬ್ಬಿಸುತ್ತಾಳಂತೆ....!

(ತಾಯಿ 'ಹೂಂ!' ಎಂದು ಮಾತ್ರ ತಲೆ ತೂಗುತ್ತಾಳೆ.)

**ಪಾಲ್** : (ಮಾತು ಮುಂದುವರಿಸುತ್ತ) ಆಂ! ನಾನೇನು ಹೆದರಿಕೊಂಡಿಲ್ಲ. ಅಲ್ಲದೆ ಅವಳು ಖಂಡಿತವಾಗಿಯೂ ಬರುತ್ತಾಳೆಂಬ ನಂಬಿಕೆಯೂ ನನಗಿಲ್ಲ. ನಾನೀಗಲೇ ರೆಡಿಯಾಗಿ ಚರ್ಚಿಗೆ ಹೋಗುತ್ತೇನೆ. ಈ ದಿನ ನನ್ನ ಪರೀಕ್ಷೆ ನಡೆಯುತ್ತದೆ....ಅಮ್ಮ ಬಹುಶಃ ಇದೇ ನನ್ನ ಕಡೆಯ ಪ್ರಾರ್ಥನಾ ಸಭೆಯಾಗಬಹುದು. ಈ ಹಳ್ಳಿ ಬಿಟ್ಟು ಹೊರಡಲು ಸಿದ್ಧಳಾಗು (ಎಂದವನೇ ಒಳಗೆ ಹೊರಡುತ್ತಾನೆ.)

**ತಾಯಿ** : (ಸ್ವಗತ) ಹುಡುಗ ಗಾಬರಿಗೊಂಡಿದ್ದಾನೆ. ಏನಾಗುವುದೋ ಏನೋ...! ದೇವರೇ ನೀನೇ ಕಾಪಾಡಬೇಕು... ಕಡೆಗೂ ಆ ಸೈತಾನ ನಮ್ಮನ್ನು ವಿನಾಶದ ಅಂಚಿಗೆ ದೂಡಿಯೇಬಿಟ್ಟ.... ಹೋಗುತ್ತೇವೆ...... ಹೋಗುತ್ತೇವೆ.... ಹೊರಟೇ ಹೋಗುತ್ತೇವೆ... ನನ್ನ ಪಾಲ್ ಸುರಕ್ಷಿತವಾಗಿ ಉಳಿದರೆ ಸಾಕು.... ನನ್ನಿಂದಾಗಿ ಅವನು ಘೋರ ದಂಡನೆಗೆ ಗುರಿಯಾಗುವುದನ್ನು ಸಹಿಸಲಾರೆ... ಅದನ್ನು ಕಣ್ಣಿಂದ ನೋಡಲೂ ಆರೆ..... ಹಾಗೇನಾದರೂ ಆದ ಪಕ್ಷದಲ್ಲಿ ನಾನು ಬದುಕಿರಲಾರೆ. ಇದು ಸತ್ಯ.... ಇದು ಸತ್ಯ.... ನನ್ನ ಮಗುವಿನ ಅಪಮಾನಕ್ಕಿಂತ ನನ್ನ ಜೀವನ ಪ್ರೀತಿ ದೊಡ್ಡದಲ್ಲ.

ಂಂ

# ದೃಶ್ಯ – ೮

(ಚರ್ಚಿನ ಒಳಭಾಗ. ಜನ ಆಗಲೇ ಪ್ರಾರ್ಥನೆಗೆಂದು ಸೇರಿದ್ದಾರೆ. ಪಾಪನಿವೇದನೆ ಜಾಗದಲ್ಲಿ ಹೆಂಗಸರ ದೊಡ್ಡ ಸಾಲಿದೆ. ವೇದಿಕೆಯತ್ತ ಪ್ರವೇಶಿಸುತ್ತಿದ್ದ ಪಾಲ್‌ನ ಕಣ್ಣುಗಳು ಆ ಹೆಂಗಸರ ಗುಂಪಿನಲ್ಲಿ ಯಾರನ್ನೋ ಹುಡುಕಾಡುತ್ತಿರುವಂತಿದೆ. ಅಷ್ಟರಲ್ಲಿ ಪುಟ್ಟ ಪಾದ್ರಿಯಂತಿದ್ದ ಆ್ಯಂಟಿಯೋಕಸ್ 'ಫಾದರ್ ಇಲ್ಲೇಕೆ ನಿಂತಿರಿ? ಬನ್ನಿ ಮೇಲೆ ಹೋಗೋಣ. ಪ್ರಾರ್ಥನೆಗೆ ತಡವಾಗುತ್ತಿದೆ' ಎಂದು ಎಚ್ಚರಿಸುತ್ತಾನೆ. ಕೂಡಲೇ ಲಗು ಬಗೆಯಿಂದ ವೇದಿಕೆಯ ಬಳಿಗೆ ನಡೆಯುತ್ತಾನೆ. ವೇದಿಕೆ ಹತ್ತಿ ನಿಂತು ಒಮ್ಮೆ ಸಭೆಯನ್ನೆಲ್ಲ ಸೂಕ್ಷ್ಮವಾಗಿ, ಗಂಭೀರವಾಗಿ ಪರಿಶೋಧಿಸುತ್ತಾನೆ. ಅವನ ಆ ನಡವಳಿಕೆಯೂ ಜನರಲ್ಲಿ ಮೆಚ್ಚುಗೆ ಮೂಡಿಸುತ್ತದೆ. ಅವನ ಮನಸ್ಸಿನ ಜಾಡನ್ನು ಪತ್ತೆ ಹಚ್ಚಿದ ಆ್ಯಂಟಿ ಪಾಲ್‌ನ ನಿಲುವಂಗಿಯನ್ನು ಹಿಡಿದು ಜಗ್ಗುತ್ತಾನೆ. ವೇದಿಕೆಯಿಂದ ಮೂರಡಿ ದೂರದಲ್ಲಿ ಕುಳಿತಿದ್ದ ಏಗ್ನೀಸಳ ಕಡೆ ಕಣ್‌ಸನ್ನೆ ಮಾಡಿ ತೋರಿಸುತ್ತಾನೆ.)

**ಆ್ಯಂಟಿ** : ಫಾದರ್, ಅಗೋ ಇಲ್ಲಿ. ಹತ್ತಿರದಲ್ಲಿಯೇ ನಿಮ್ಮೆದುರಿಗೇ ಕುಳಿತಿದ್ದಾಳೆ. ಅಲ್ಲಿ ನೋಡಿ ಅವಳ ಕೆಲಸದವಳೂ ಜೊತೆಗಿದ್ದಾಳೆ. (ಎಂದು ಪಿಸುದನಿಯಲ್ಲಿ ಹೇಳುತ್ತಾನೆ.)

(ಪಾಲ್‌ನ ಶರೀರ ಕಂಪಿಸ ತೊಡಗುತ್ತದೆ. ತುಟಿಗಳು ಅದುರುತ್ತವೆ. ಮುಖ ಬಿಳುಚಿಕೊಂಡಂತಾಗುತ್ತಿದೆ. ಆ್ಯಂಟಿ ತನ್ನ ಪ್ರೀತಿಯ ಪಾದ್ರಿಯವರನ್ನು ಜನರು ಈ ಸ್ಥಿತಿಯಲ್ಲಿ ನೋಡಿ ಏನೆಂದುಕೊಳ್ಳುತ್ತಾರೋ ಎಂದು ಒಬ್ಬೊಬ್ಬರ ಮುಖಗಳನ್ನೂ ಗಮನಿಸುತ್ತಾನೆ. ಪ್ರಾರ್ಥನೆಗೆಂದು ಮೊಣಕಾಲೂರಿ ಕುಳಿತ ಪಾದ್ರಿಯನ್ನು ಆ್ಯಂಟಿ ಕನಿಕರದಿಂದ ನೋಡುತ್ತಾನೆ.)

**ಆ್ಯಂಟಿ** : (ಮೆಲ್ಲಗೆ ಬಗ್ಗಿ) ಫಾದರ್. ನಿಮಗೆ ಆರೋಗ್ಯ ಸರಿ ಇಲ್ಲವೆನಿಸುತ್ತದೆ. ಬೇಗ ಪ್ರಾರ್ಥನೆ ಮುಗಿಸಿ ಮನೆಗೆ ಹೋಗೋಣ. ಪಾಪ ನಿವೇದನೆಗೆ ಬೇಕಾದರೆ ನಾಳೆ ಬರಲಿ.

**ಪಾಲ್** : ಅದಾಗದು ಆ್ಯಂಟಿ ಪಾಪ! ತುಂಬ ಹೊತ್ತಿನಿಂದ ಜನ ಇಲ್ಲಿ ಬಂದು ಕಾದಿದ್ದಾರೆ. ಇವರೆಲ್ಲರನ್ನೂ ನಿರಾಶೆಗೊಳಿಸಲಾರೆ.

(ಎಂದು ಪಾಪ ನಿವೇದನೆ ಕೇಳಲು ಕುಳಿತುಕೊಳ್ಳುವ ಜಾಗದಲ್ಲಿ ಹೋಗಿ ಕೂರುತ್ತಾನೆ. ಒಬ್ಬೊಬ್ಬರಾಗಿ ನಿವೇದನೆ ಮಾಡಿಕೊಳ್ಳುತ್ತಾರೆ. ನಂತರ ಎದ್ದು ವೇದಿಕೆಗೆ ಹೋಗಿ ಗಾಸ್ಪೆಲ್ ಹಿಡಿದುಕೊಳ್ಳುತ್ತಾನೆ. ಕೈಗಳು ಥರಥರ ನಡುಗುತ್ತವೆ. ಆದರೆ ಓದಲು ಯತ್ನಿಸುತ್ತಾನೆ. ನಿಧಾನವಾಗಿ ಓದತೊಡಗುತ್ತಾನೆ.)

"ಆತ ಕ್ಯಾಲ್‌ವರಿಯ ಕಡಿದಾದ ಶಿಖರವನ್ನು ಏರುತ್ತಲೇ ಹೋದ. ಮತ್ತೆ ರಕ್ತ ಹೃದಯಕ್ಕೆ ಹರಿದು ಬಂದಂತಾಯಿತು. ಬಿಗಿದುಕೊಂಡಿದ್ದ ನರಗಳು ಸಡಿಲಗೊಂಡವು. ಆದರೆ ಈ ಆರಾಮ ಸ್ಥಿತಿ ಹತಾಶೆಯಿಂದ ಉಂಟಾದದ್ದು. ಅಪಾಯಕ್ಕೆ ಶರಣಾಗದೆ ಬೇರೆ ಗತಿಯೇ ಇಲ್ಲ ಎನ್ನುವ ಮನಃಸ್ಥಿತಿಯಿಂದ ಉಂಟಾದದ್ದು. ನೀರಿನಲ್ಲಿ ಮುಳುಗುತ್ತಿದ್ದ ವ್ಯಕ್ತಿ ಅಲೆಗಳ ವಿರುದ್ಧ ಇನ್ನು ಹೋರಾಡಲು ಸಾಧ್ಯವಿಲ್ಲ ಎಂದು ತಟಸ್ಥನಾದ.... ದೇವರು ನಿನಗೆ ಒಳ್ಳೆಯದು ಮಾಡಲಿ.

(ಪ್ರಾರ್ಥನೆಯ ನಂತರ ಕಮ್ಯುನಿಯನ್ ಆಗುತ್ತದೆ. ಹೆಂಡ ಮತ್ತು ರೊಟ್ಟಿ ಚೂರುಗಳನ್ನು ಪ್ರತಿಯೊಬ್ಬರ ತುಟಿಗಳಿಗಿಡುತ್ತಾನೆ. ಏಗ್ನೀಸಳ ಬಳಿಗೂ ಬರುತ್ತಾನೆ. ಕೈಗಳು ಕಂಪಿಸುತ್ತವೆ. ಏಗ್ನೀಸಳು ಕಟಕಟಿಯ ಮೆಟ್ಟಿಲ ಬಳಿ ಬಂದು ನಿಲ್ಲುತ್ತಾಳೆ. ಅವಳೂ ದಣಿದಂತಿದ್ದಾಳೆ. ಮುಗ್ಗರಿಸಿ ಬೀಳುವಂತಾಗಿ ಮತ್ತೆ ಚೇತರಿಸಿಕೊಂಡು ಹೊರಬಾಗಿಲ ಕಡೆಗೆ ಹೊರಡುತ್ತಾಳೆ ಜನ ಮೆಚ್ಚುಗೆಯಿಂದ, ಅಚ್ಚರಿಯಿಂದ ಅವಳನ್ನೇ ನೋಡುತ್ತಾ ಹಿಂಬಾಲಿಸುತ್ತಾರೆ. ಹತ್ತಿರದಲ್ಲಿಯೇ ಪ್ರಾರ್ಥನಾ ಭಂಗಿಯಲ್ಲಿ ಕುಳಿತಿದ್ದ ಪಾದ್ರಿಯ ತಾಯಿಯನ್ನು ನೋಡುತ್ತಾಳೆ. ಅದನ್ನು ಗಮನಿಸಿದ ಹೆಂಗಸೊಬ್ಬಳು, ತಾಯಿಯ ಕಿವಿಯಲ್ಲಿ ಏನನ್ನೋ ಹೇಳಬೇಕೆಂದು ಮುಖವನ್ನು ಹತ್ತಿರ ತರುತ್ತಾಳೆ. ತಾಯಿಯಿಂದ ಪ್ರತಿಕ್ರಿಯೆ ಬಾರದೆ ಇರಲು ಗಾಬರಿಯಿಂದ ಅವಳನ್ನು ಆಮೂಲಾಗ್ರವಾಗಿ ಗಮನಿಸುತ್ತಾಳೆ. ಅವಳನ್ನು ಸ್ಪರ್ಶಿಸಲು ಹೋದ ಹೆಂಗಸಿನ ಹೆಗಲ ಮೇಲೆ ತಾಯಿ ವಾಲಿ ಬೀಳುತ್ತಾಳೆ.)

**ಹೆಂಗಸು** : (ಚಿಟ್ಟನೆ ಚೀರಿ) ಅಯ್ಯೋ! ನಮ್ಮ ಪಾದ್ರಿಗಳ ತಾಯಿ ಸತ್ತಿದ್ದಾಳೆ.

(ಜನರಲ್ಲಿ ಗಲಿಬಿಲಿ. ಗಾಬರಿ. ಪಾದ್ರಿಗೆ ಬರಲು ಜನ ದಾರಿಮಾಡಿ ನಿಲ್ಲುತ್ತಾರೆ.)

**ಪಾದ್ರಿ** : (ಒತ್ತರಿಸಿ ಬಂದ ದುಃಖದಿಂದ) ಅಮ್ಮ, ಅಮ್ಮ.... ಇದೇನಾಯಿತು? ನನ್ನ ಪಾಪಕ್ಕೆ ನಿನ್ನ ಸಾವು ಪ್ರಾಯಶ್ಚಿತ್ತವೇ....? ನನಗೆ ಗೊತ್ತು. ನೀನು ಸತ್ತದ್ದು ಏಕೆಂದು ನಾನು ಬಲ್ಲೆ.... ನಾನೇ.... ನಾನೇ ನಿನ್ನ ಕೊಲೆಗಾರ.... ಕೊಲೆಗಾರ. ದೇವರು ನನ್ನನ್ನು ಕ್ಷಮಿಸಲಾರ, (ಎಂದು ತಾಯಿಯ ಶವದ ಪಕ್ಕದಲ್ಲಿ ಕುಳಿತುಕೊಂಡು 'ಕ್ರಾಸ್' ಮಾಡಿ 'ಆಮೆನ್' ಎನ್ನುತ್ತಾನೆ.)

(ಅಲ್ಲಿಯೇ ನಿಂತ ಏಗ್ನೀಸ್‌ಳ ಕಣ್ಣುಗಳೊಂದಿಗೆ ಪಾಲ್‌ನ ಕಣ್ಣುಗಳು ಸಂಧಿಸುತ್ತವೆ. ಆ್ಯಂಟಿ ಇದಾವುದೂ ಅರ್ಥವಾಗದವನಂತೆ ಮೂಕವಿಸ್ಮತನಾಗಿ, ಇಡೀ ಘಟನೆಗಳಿಗೆ ಸಾಕ್ಷಿಯಾಗಿ ನಿಲ್ಲುತ್ತಾನೆ.)

○○

# ಪಾತ್ರವರ್ಗ

| | | |
|---|---|---|
| ಸಾಲವತಿ | : | ವೈಶಾಲಿಯ ವೀರ ವನಿತೆ (ಧವಳಯಶರ ಮಗಳು) |
| ಪ್ರಭುಗಳು | : | ವೈಶಾಲಿ ಗಣರಾಜ್ಯದ ರಾಜರು |
| ಅಭಯ ಕುಮಾರ | : | ವೈಶಾಲಿಯ ಉಪರಾಜ |
| ಮಣಿಧರ | : | ವೈಶಾಲಿಯ ಸೇನಾಪತಿ |
| ಕುಲಪುತ್ರರು | : | ತತ್ವಜ್ಞಾನಿ ಗೆಳೆಯರು (೪ ಮಂದಿ) |
| ನೀಲಾ | : | ಸಾಲವತಿಯ ದಾಸಿ |

ಸೂತ್ರಧಾರ, ನಟಿ, ಪುರಜನರು, ಮಗಧದ ಮಹಾಮಂತ್ರಿ, ರಾಜಭಟರು, ಸೇವಕರು, ಡಂಗುರದವ, ಬಾಲಕ ಮೊದಲಾದ ಇತರ ಪಾತ್ರಗಳು.

## ಅಂಕ – ೧

# ದೃಶ್ಯ – ೧

(ವೈಶಾಲಿಯ ಬೀದಿ. ಜನರು ಸಂಭ್ರಮದಿಂದ ಓಡಾಡುತ್ತಿದ್ದಾರೆ. ಅವರ ಮುಖಗಳಲ್ಲಿ ಹರ್ಷ, ಉಲ್ಲಾಸಗಳು ತುಂಬಿವೆ. ಹಿನ್ನೆಲೆಯಿಂದ ಸಂಗೀತ ಕುಣಿತಗಳ ಸದ್ದು ಕೇಳಿ ಬರುತ್ತಿದೆ. ರಂಗದ ಬಲಬದಿಯಿಂದ ನಟಿ ತನ್ನ ಪ್ರಿಯಕರನನ್ನು ಹುಡುಕುತ್ತ ಪ್ರವೇಶಿಸುತ್ತಾಳೆ.)

**ನಟಿ** : (ಪ್ರವೇಶಿಸಿ) ಪ್ರಿಯಾ! ಪ್ರಿಯಾ! ಎಲ್ಲಿರುವೆ? (ಎಂದು ಸುತ್ತಲೂ ಕಣ್ಣು ಹಾಯಿಸುತ್ತಾಳೆ.) ಎಲ್ಲಿ ಹೋದನೋ ಏನೋ? ವಸಂತ ಹಬ್ಬವನ್ನು ಮಾಡಬೇಕೆಂದು ಗೆಳೆಯರೆಲ್ಲ ಸೇರಿ ಕಾದು ಕುಳಿತಿದ್ದಾರೆ. ಇವನು ಮಾತ್ರ ಕೈಗೇ ಸಿಕ್ಕದೆ ಎಲ್ಲಿ ಹೋಗಿ ಬಿದ್ದುಕೊಂಡಿದ್ದಾನೋ!! (ಬೇಸರಿಸುವಳು)

**ಸೂತ್ರಧಾರ:** (ಪ್ರವೇಶಿಸಿ) ಪ್ರಿಯೆ..... ಓ ನನ್ನ ಪ್ರಿಯತಮೆ ಯಾಕಿಷ್ಟು ಕೋಪ? ನನ್ನನ್ನು ಹುಡುಕಲು ನೀನು ಬಂದಂತೆ ನಿನ್ನನ್ನು ಹುಡುಕಲು ನಾನೂ ಸುತ್ತಾಡಿ ಬಂದೆ.

**ನಟಿ** : (ಹುಸಿ ಮುನಿದು) ಸಾಕು ಮಾಡು ಈ ನಾಟಕ ನನಗೆಲ್ಲ ನಿನ್ನ ಆಟಗಳು ತಿಳಿದಿವೆ... ಸದ್ಯ ಬಂದೆಯಲ್ಲ! ಅಲ್ಲಿ ಗೆಳೆಯರೆಲ್ಲರೂ ನಮಗಾಗಿ ಕಾದಿದ್ದಾರೆ. ಅವರನ್ನು ಇನ್ನಷ್ಟು ಹೊತ್ತು ಕಾಯಿಸುವುದು ಸರಿಯಲ್ಲ.

**ಸೂತ್ರಧಾರ:** ನಾನು ಕಾಯಿಸಬೇಕೆಂದೆನೇ? ನೀನು ಹೇಳಿದ ನಾಟಕ ಗೀಟಕ ಆತ ಎಲ್ಲ ನಾನೊಬ್ಬನೇ ಅಲ್ಲ, ನಾವೆಲ್ಲರೂ ಆಡಬೇಕಾಗಿದೆ.

**ನಟಿ** : (ಕುತೂಹಲದಿಂದ) ಅಂದರೆ? ನಿನ್ನ ಅರ್ಥ?

**ಸೂತ್ರಧಾರ:** ನಾವು ರಾಜಾತಿಥಿಗಳಿಗೆ ನಾಟಕ ಒಂದನ್ನು ಆಡಿ ತೋರಿಸಬೇಕಂತೆ. ಏಕೆಂದು ಬಹುಶಃ ನಿನಗೂ ಗೊತ್ತಿರಬೇಕು. ವಸಂತಹಬ್ಬ ವೈಶಾಲಿ ನಗರದ ವಿಶೇಷ. ಎಲ್ಲ ಗಣರಾಜ್ಯಗಳಲ್ಲಿ ನಡೆಯುವುದಕ್ಕಿಂತ ತೀರಾ

ಭಿನ್ನವಾಗಿ ಬೇರೆ ಬೇರೆ ರಾಜ್ಯಗಳಿಂದ ಬಹಳ ಮಂದಿ ಅತಿಥಿಗಳು, ಅಭ್ಯಾಗತರು ಬಂದಿದ್ದಾರೆ. ಅವರ ಗೌರವಾರ್ಥ ವಿಶೇಷ ಕಾರ್ಯಕ್ರಮಗಳು ಆಗಬೇಕು ಎನ್ನುವುದು ಉಪರಾಜರಾದ ಅಭಯ ಕುಮಾರರ ಆದೇಶ. ಅಲ್ಲದೆ ಇನ್ನೊಂದು ಸುದ್ದಿ ಗೊತ್ತೇನು?

ನಟಿ : (ಆಶ್ಚರ್ಯದಿಂದ) ಸುದ್ದಿ? ಏನದು ಸುದ್ದಿ ಪ್ರಿಯೆ?

ಸೂತ್ರಧಾರ: ಈ ಸಲದ ಹಬ್ಬಕ್ಕೆ ಮಗಧದ ಮಹಾಮಂತ್ರಿಗಳು ವಿಶೇಷ ಅತಿಥಿಗಳಾಗಿ ಬಂದಿದ್ದಾರೆ.

ನಟಿ : ಏನು.....? ಏನೆಂದೆ? ಮಗಧದಿಂದಲೇ? ನನಗೆ ನಂಬಿಕೆಯಾಗುವುದಿಲ್ಲ. ಮಗಧ ಮತ್ತು ವೈಶಾಲಿಗಳ ಸಂಬಂಧ?

ಸೂತ್ರಧಾರ: ಪ್ರಿಯೆ, ಈ ರಾಜಕೀಯ ಮತ್ತು ರಾಜಕಾರಣಿಗಳ ವಿಷಯವಾಗಿ ಏನನ್ನೂ ಹೇಳಲು ಸಾಧ್ಯವಿಲ್ಲ. ಅವರನ್ನು ನಂಬುವುದೇ ಕಷ್ಟ. ಅವರು ಮಾಡುವ ಪ್ರತಿಯೊಂದು ಕೆಲಸ. ಇಡುವ ಪ್ರತಿಯೊಂದು ಹೆಜ್ಜೆಯ ಹಿನ್ನೆಲೆಯಲ್ಲಿ ಭಾರಿ ರಾಜಕೀಯವೇ ಇರುತ್ತದೆ. ಯಾವ ಕ್ಷಣದಲ್ಲಿ ಸ್ನೇಹವೋ, ಯಾವ ಕ್ಷಣದಲ್ಲಿ ದ್ವೇಷವೋ ಹೇಳುವುದಕ್ಕಾಗುವುದಿಲ್ಲ. ಇದೆಲ್ಲದರ ಆಳದಲ್ಲಿ ಇರುವುದು ಮಾತ್ರ ಸ್ವಾರ್ಥ, ದ್ವೇಷ, ಅಧಿಕಾರ ಲಾಲಸೆ ಮತ್ತು ಸ್ವಪ್ರತಿಷ್ಠೆಗಳು.

ನಟಿ : ಪ್ರಿಯೆ, ಈ ಸಂತೋಷದ ಸಮಯದಲ್ಲಿ ತಲೆಭಾರವಾಗುವಂತಹ ವಿಷಯುಗಳೇಕೆ? ಬೇಗ ನಡಿ. ನಮ್ಮಿಂದ ಗೆಳೆಯರ ಉತ್ಸಾಹ ಕುಸಿಯುವುದು ಬೇಡ; ತಡವಾಗುವುದೂ ಬೇಡ.

ಸೂತ್ರಧಾರ: (ನಾಟಕೀಯವಾಗಿ) ಅಪ್ಪಣೆ ದೇವಿ! ತಮ್ಮ ಆದೇಶದಂತೆ ನಡೆಯಲು ಈ ದಾಸ ಸದಾ ಸಿದ್ಧನಾಗಿದ್ದಾನೆ. ಹೂವಿನ ಅಲಂಕಾರವನ್ನು ಸಿದ್ಧಪಡಿಸಲು ಹೇಳಿ ಬಂದಿದ್ದೇನೆ. ಬೇಗ ನಡೆ. ಸಜ್ಜುಗೊಂಡು ವಸಂತಾಗಮನವನ್ನು ಆಚರಿಸೋಣ. ನಾಳೆ ನಡೆಯಲಿರುವ ಕಾಮದೇವನ ಪೂಜೆಗೆ ಈಗಾಗಲೇ ಶೃಂಗಾರವನದಲ್ಲಿ ಭರದಿಂದ ಸಿದ್ಧತೆಗಳು ನಡೆದಿವೆ. (ಹೋಗುವರು)

(ಮತ್ತೊಂದು ಕಡೆಯಿಂದ ತರುಣ ತರುಣಿಯರು ಹೂವು ಎಲೆಗಳಿಂದ ಅಲಂಕೃತರಾಗಿ ಹಾಡುತ್ತ ಕುಣಿಯುತ್ತ ಪ್ರವೇಶಿಸುತ್ತಾರೆ.)

(ತರುಣ ತರುಣಿಯರು ಹಾಡುತ್ತ ನರ್ತಿಸುತ್ತಾರೆ.)

ಮಧುಮಾಸ ಮಧುಸೂಸಿ ಬಂದಿಹುದು
ಮನಕೆಂತೋ ಮುದ ಮೋದ ತಂದಿಹುದು
ಗಿಡ ಗಿಡ ಮರ ಮರ ಮೈ ತುಂಬ
ಪುಲಕವೆ ಹೂವಾಗರಳಿವೆ ನೋಡಾ।
ಭೂ ಬಾನಿನ ಎದೆ ಸೊಗವೇ ಸುರಿದಿದೆ
ನಾಕದ ನಗುವೇ ನಮ್ಮೊಳಗಿಳಿದಿದೆ॥

ಕರೆದಿದೆ ಕೋಗಿಲೆ ಬಾಬಾ ಇನಿಯ
ಮೂಕ ಭಾವಕೆ ನೀಡುತ ದನಿಯ
ಕೋಗಿಲೆಯಿಂಚರ ವಿರಹದ ಕಾವ್ಯ
ಕಲಕಿದೆ ಮನವಾಗುತಲದು ಶ್ರಾವ್ಯ॥

ಬೆಂದೆದೆಗಳಿಗೆ ಚಂದನ ತನ್ನಿರಿ
ಉರಿವ ಉಸಿರಿಗೆ ತಂಪನು ತುಂಬಿರಿ
ಬೀಸುವ ತಂಗಾಳಿಗೆ ಮೈಯಾನುತ
ಒಲವಿನ ಗೀತೆಗಳೆನಿತೊ ಹಾಡುತ
ಬನ್ನಿ ಗೆಳೆಯರೆ ಕೂಡಿ ನಲಿಯುವಾ
ನಲಿ ನಲಿಯುತಲಾ ಕಾಮನ ಕರೆಯುವ॥

**ಸೂತ್ರಧಾರ–ನಟಿ:** (ಪ್ರವೇಶಿಸಿ) ಓಹೊ ಹೋ! ಸಾಕು ಮಾಡಿ ನಿಮ್ಮ ಈ ಗಾಯನ, ನರ್ತನ, ಗೆಳೆಯರೇ ಎಲ್ಲರೂ ಇಲ್ಲಿಯೇ ಉಳಿದು ಬಿಟ್ಟರೆ ಹೇಗೆ? ಮಾಡಬೇಕಾದ ಕೆಲಸಗಳು ಬೇಕಾದಷ್ಟಿವೆ. ನಾವೆಲ್ಲರೂ ಮಹಾರಾಜರ ರಂಗಮಂದಿರಕ್ಕೆ ಹೊರಟು ನಾಟಕವನ್ನು ಅಭಿನಯಿಸಬೇಕಾಗಿದೆ. ಈ ಬಾರಿಯ ವಸಂತ ಹಬ್ಬದಲ್ಲಿ ಕೆಲವು ಸಾಂಸ್ಕೃತಿಕ ಸ್ಪರ್ಧೆಗಳೂ ಇವೆಯಂತೆ!!

**ಒಬ್ಬ ತರುಣ:** ಸ್ಪರ್ಧೆಗಳಿದ್ದರೆ ನಮಗೇನಂತೆ? ನಾನೇನು ಮಾಡಬೇಕು ಅಲ್ಲಿ? ಅರಮನೆಯ ಆವರಣದಲ್ಲಿ ನಮ್ಮಿಚ್ಛೆಯಂತೆ ನಾವು ವಿನೋದಿಸಲು ಸ್ವಾತಂತ್ರ್ಯವೆಲ್ಲಿರುತ್ತದೆ. ನಮ್ಮ ಪಾಡಿಗೆ ನಮ್ಮನ್ನು ಆಮೋದಿಸಲು, ವಿನೋದಿಸಲು ಬಿಟ್ಟುಬಿಡು ಹಿರಿಯ. ಈ ದಿವಸ ನಮ್ಮನ್ನು ಯಾರೂ ನಿರ್ಬಂಧಿಸಲಾರರು. ಸ್ತ್ರೀ ಪುರುಷರಾದಿಯಾಗಿ ಎಲ್ಲರೂ ಸ್ವೇಚ್ಛೆಯಾಗಿ ವಿಹರಿಸುತ್ತಾ ಶೃಂಗಾರ ವಿಲಾಸಗಳಲ್ಲಿದ್ದು ಮನ್ಮಥ ಪೂಜೆಯನ್ನು ಮಾಡಬೇಕಿದೆ.

**ಸೂತ್ರಧಾರ:** ನೀನು ಹೇಳುವುದು ಸರಿ ತಮ್ಮಯ್ಯ. ಅಲ್ಲಿ ಬಂದು ನಿರ್ಬಂಧದಲ್ಲಿ ಇರು ಅಂತ ನಿನಗೆ ಯಾರೂ ಹೇಳುವುದಿಲ್ಲ. ಈ ಸಲದ ವಸಂತ

ಹಬ್ಬಕ್ಕೆ ಮಗಧದಿಂದ ಮುಖ್ಯ ಅತಿಥಿಗಳೊಬ್ಬರು ಆಹ್ವಾನಿತರಾಗಿದ್ದಾರೆ. ವೈಶಾಲಿಯ ವಸಂತಹಬ್ಬ ಜಗದ್ವಿಖ್ಯಾತವಾದದ್ದಲ್ಲವೇ? ತಾವಾಗಿ ಇಲ್ಲಿಗೆ ಬರಲು ಅಪೇಕ್ಷೆ ಪಟ್ಟವರನ್ನು ಆಹ್ವಾನಿಸುವುದು ಗಣತಂತ್ರದ ಪ್ರಜೆಗಳಾದ ನಮ್ಮ ಸಜ್ಜನಿಕೆಯಲ್ಲವೇ? ಉಪರಾಜರಾದ ಅಭಯಕುಮಾರರೇ ವಸಂತಹಬ್ಬದ ವ್ಯವಸ್ಥೆಯ ಜವಾಬ್ದಾರಿಯನ್ನು ತೆಗೆದುಕೊಂಡಿದ್ದಾರೆ. ಆದ್ದರಿಂದಲೇ ಈ ವಸಂತಹಬ್ಬ ಎಲ್ಲ ವರ್ಷಗಳಿಗಿಂತಲೂ ಭಿನ್ನವಾಗಿರುತ್ತದೆ ಎಂಬುದು ಎಲ್ಲರ ಕುತೂಹಲದ ನಿರೀಕ್ಷೆ.

**ಮತ್ತೊಬ್ಬ**

**ತರುಣ :** ಹಾಗೋ.....! ಮಗಧದ ಜೊತೆ ವೈಶಾಲಿಯ ಹಗೆತನ ಹಾಗಾದರೆ, ಇನ್ನು ಮುಂದೆ ಇಲ್ಲದಂತಾಯಿತು.

**ಸೂತ್ರಧಾರ:** ಸಣ್ಣವರ ಬಾಯಲ್ಲಿ ದೊಡ್ಡ ದೊಡ್ಡ ಮಾತುಗಳೇಕೆ? ಉಪರಾಜರು ನಿರ್ದೇಶಿಸಿದಂತೆ ನಡೆದುಕೊಳ್ಳುವುದಷ್ಟೇ ನಮ್ಮ ಕೆಲಸ!!

**ಒಬ್ಬ ತರುಣಿ:** ಗೆಳೆಯರೇ ಇಲ್ಲಸಲ್ಲದ ಚರ್ಚೆಯಿಂದ ಕಾಲಹರಣ ಮಾಡುವುದೇಕೆ? ಇದರಿಂದ ಬರುವ ಪ್ರಯೋಜನವಾದರೂ ಏನು? ಬಂದ ಅತಿಥಿಗಳಿಗೆ ಅವಮಾನವಾಗದಂತೆ ವೈಶಾಲಿಯ ಔನ್ನತ್ಯವನ್ನು, ಸುಸಂಸ್ಕೃತಿಯನ್ನು ಮನದಟ್ಟು ಮಾಡಿಕೊಡುವುದರಲ್ಲಿದೆ, ನಮ್ಮ ದೊಡ್ಡತನ. ಬನ್ನಿ ಎಲ್ಲರೂ ಅರಮನೆಯ ರಂಗಮಂದಿರದ ಕಡೆಗೆ ಹೋಗೋಣ.

**ಎಲ್ಲರೂ :** ಹೌದೌದು. ಕೂಡಲೇ ಹೊರಡೋಣ. ಅಲ್ಲಿಯೇ ಮುಂದಿನ ಕಾರ್ಯಕ್ರಮದ ಬಗ್ಗೆ ಆಲೋಚಿಸೋಣ.

**ಸೂತ್ರಧಾರ:** ಧನ್ಯವಾದಗಳು ಗೆಳೆಯರೇ! ನನ್ನ ಮಾತನ್ನು ಮನ್ನಿಸಿ ಬರುತ್ತಿರುವುದಕ್ಕೆ ನನ್ನ ಕೃತಜ್ಞತೆಗಳು.

(ಎಲ್ಲರೂ ಹೊರಡುವರು.)

೦೦

# ದೃಶ್ಯ – ೨

(ವಸಂತಾಗಮನದ ಸಂಭ್ರಮದ ಪರಿಸರ. ಮಂದಗಾಳಿಯ ಸದ್ದು. ಸಾಲವನದ ಸಮೀಪದಲ್ಲಿ ಹರಿಯುತ್ತಿರುವ ಸದಾನೀರ ನದಿಯ ಜುಳುಜುಳು ನಾದ. ಮಧ್ಯೆ ಕೋಗಿಲೆಯ ಇಂಚರ, ಹಕ್ಕಿಗಳ ಕಲರವ, ಪ್ರಶಾಂತ ಪರಿಸರ, ಸಾಲವೃಕ್ಷಗಳ ನೆರಳಿನಡಿಯಲ್ಲಿ ಒಂದು ಸುಂದರ ವೇದಿಕೆ ಸಿದ್ಧವಾಗಿದೆ. ಅದರ ಮೇಲೆ ಆಸನಗಳಿವೆ. ಅವುಗಳ ಮುಂದೆ ಹಣ್ಣು ಹಂಪಲುಗಳು, ನೀರಿನ ಹೂಜಿಗಳಿವೆ. ೪ ಮಂದಿ ಶ್ರೀಮಂತ, ವರಿಷ್ಠಕುಲದ ಯುವಕರು ಪ್ರವೇಶಿಸುತ್ತಾರೆ)

**ಒಬ್ಬ ಯುವಕ:** (ಪ್ರವೇಶಿಸುತ್ತಿದ್ದಂತೆ) ಸೋದರರೇ ಎಲ್ಲ ಸಜ್ಜಾಗಿದೆಯಲ್ಲವೇ?

**ಸೇವಕನೊಬ್ಬ:** ಎಲ್ಲವನ್ನೂ ಸಿದ್ಧಪಡಿಸಿದ್ದೇವೆ ದಣಿಗಳೇ.

**ಒಬ್ಬ ಯುವಕ:** ದಣಿ, ಒಡೆಯ ಎಂದು ಕರೆಯಬೇಡ ಸೋದರ. ಗಣತಂತ್ರ ರಾಷ್ಟ್ರದಲ್ಲಿ ಮನುಷ್ಯ ಮನುಷ್ಯರ ನಡುವೆ ಜಾತಿ, ಕುಲ, ವರ್ಗಗಳ ತಾರತಮ್ಯ ಬೇಡ...

**ಸೇವಕ :** ಹಾಗೆಂದರೆ ಹೇಗೆ ಒಡೆಯ? ನಿಮಗೂ ನಮಗೂ ಎಲ್ಲಿಂದೆಲ್ಲಿಗೆ? (ಅನುಮಾನಿಸುತ್ತಲೇ ನುಡಿಯುತ್ತಾನೆ.)

**ಮತ್ತೊಬ್ಬ :** ಸಂಕೋಚ ಬೇಡ ತಮ್ಮ. ನಾವೆಲ್ಲ ವಜ್ಜಿಗಳು. ಉದಾತ್ತವಾದ ರೀತಿಯಲ್ಲಿ ಆಲೋಚಿಸಬೇಕು. ನಮ್ಮಷ್ಟು ಶ್ರೀಮಂತನಲ್ಲದಿರುವುದಕ್ಕೆ ನೀನಲ್ಲ ಕಾರಣ. ನಿನಗೆ ದೊರೆಯದೆ ಇರುವ ಅವಕಾಶಗಳೇ ಕಾರಣ. ಹಣ, ಶ್ರೀಮಂತಿಕೆಗಳು ಭಾವನೆ ವಿಚಾರಗಳನ್ನು ರೂಪಿಸಬಾರದು. ಇನ್ನು ಮುಂದೆ ನಮ್ಮ ಜೊತೆ ಮಾತ್ರ ಮಾಲಿಕ, ಸೇವಕ ಸಂಬಂಧಗಳನ್ನು ಎತ್ತಬೇಡ ತಿಳಿಯಿತೆ? ನೀನೂ ಬಯಸುವುದಾದರೆ ನಮ್ಮೊಟ್ಟಿಗೇ ಕುಳಿತು ಹಬ್ಬದ ಆನಂದವನ್ನು ಅನುಭವಿಸಬಹುದು.

**ಸೇವಕ :** ಇಲ್ಲ ಅಣ್ಣಂದಿರೆ. ನನ್ನ ಗೆಳೆಯರು ನನಗಾಗಿ ಮಧು ಶಾಲೆಯಲ್ಲಿ ಕಾಯುತ್ತ ಕುಳಿತಿರಬಹುದು. ಬರುತ್ತೇನೆ.

**ಮೊದಲನೆಯವ:** ಆಯಿತು ಹೋಗಿ ಬಾ. ನಿನಗೆ ನಮ್ಮ ಶುಭಾಶಯಗಳು.

(ಸೇವಕ ಹೊರಡುತ್ತಾನೆ. ಯುವಕರೆಲ್ಲರೂ ತಮ್ಮ ತಮ್ಮ ಆಸನಗಳಲ್ಲಿ ಕುಳಿತುಕೊಂಡು ತಮ್ಮ ಮುಂದಿದ್ದ ಹಣ್ಣುಗಳನ್ನು ಸವಿಸವಿದು ತಿನ್ನುತ್ತಾರೆ. ಅವರಲ್ಲಿ ಒಬ್ಬ ಯುವಕ ಅಭಿನಂದನೆಂಬವನನ್ನು ಕುರಿತು ಹೇಳುತ್ತಾನೆ.)

**ಒಬ್ಬ ಯುವಕ:** ಅಭಿನಂದ ಗೆಳೆಯ. ಎಂತಹ ಸುಂದರ ವಾತಾವರಣ? ಸಾಲವೃಕ್ಷಗಳ ತಣ್ಣನೆಯ ನೆರಳು. ಮೇಲೆ ಬಿಚ್ಚಿ ಹರಡಿರುವ ನೀಲಿಯ ಪರದೆ. ಉನ್ಮತ್ತತೆಗೆ ತೂರುತ್ತ ಬೀಸಿ ಬರುತ್ತಿರುವ ಗಂಧ ಸ್ನಿಗ್ಧ ಮಂದ ಮಾರುತ. ಕೇಳಿಯೂ ಕೇಳಿದಂತೆ ಕೇಳಿಸುತ್ತಿರುವ ಸದಾನೀರಾದ ಮಂಜುಳರವ! ಅಬ್ಬ! ಈ ಬಸಂತದ ಮೋಡಿಯೇ ಮೋಡಿ!!

**ಅಭಿನಂದ :** ಹೌದು ಗೆಳೆಯ. ಸದ್ದು ಗದ್ದಲದ ಸಂಭ್ರಮದಲ್ಲಿ ಉನ್ಮತ್ತವಾಗಿ ಕುಣಿದು ನಲಿಯುವುದರಲ್ಲಿನ ಸುಖ ಒಂದು ತೆರನಾದರೆ, ಪ್ರಶಾಂತವಾಗಿ ಜನಜಂಗುಳಿಯಿಂದ ಕಿವಿಗಡಚಿಕ್ಕುವ ಹರ್ಷೋಲ್ಲಾಸದ ಉದ್ಗಾರಗಳ ನಡುವಿನಿಂದ ಹೀಗೆ ದೂರ ಉಳಿದು ನಿಸರ್ಗದೊಳಗಿನ ಅಶ್ರುತ ನಾದ ಮಾಧುರ್ಯದ ಸವಿಗನಸುಗಳಲ್ಲಿ ಭಾವ ಪಾರವಶ್ಯರಾಗುವುದೇ ಮತ್ತೊಂದು ತೆರ.

**ಆನಂದ :** ಅಭಿನಂದ, ನಿನ್ನ ವೀಣೆ ಕೇಳಿ ಬಹಳ ದಿನಗಳಾದವು. ಈಗ ಈ ಸಮಯ ಬಹಳ ಹಿತವಾಗಿದೆ. ಮತ್ತೊಮ್ಮೆ ನಿನ್ನ ವೀಣೆಯ ಮಧುರ ಝುಂಕಾರ ಕೇಳವ ಸುಯೋಗ ನಮ್ಮದಾಗಲಿ. ನಿನಗೆ ಅಭ್ಯಂತರವಿಲ್ಲವೆಂದು ಭಾವಿಸುತ್ತೇವೆ. ತ್ವರೆಮಾಡು ಗೆಳೆಯ. ನಾದ ಸುಧೆಯ ಸವಿಯುಣ್ಣಲು ನಾವು ಕಾತರರಾಗಿದ್ದೇವೆ.

**ಅಭಿನಂದ :** ಗೆಳೆಯರೇ, ನಿಮ್ಮ ಸ್ನೇಹ ಪ್ರೀತಿಗಳ ಸವಿಯುಣ್ಣುತ್ತಿರುವ ನಮಗೆ ಇಂತಹ ಸಣ್ಣ ಕೋರಿಕೆಯನ್ನು ಮನ್ನಿಸಲಾಗದಷ್ಟು ದುಷ್ಟತನವಿಲ್ಲ. ನನ್ನನ್ನು ನೀವು ಪ್ರಾರ್ಥಿಸುವುದಕ್ಕಿಂತ ಗೆಳೆತನದ ಸಲುಗೆಯಿಂದ ಆದೇಶಿಸಿ.

**ಮಣಿಕಂಠ :** ಗೆಳೆಯ ಆನಂದ, ಒಂದು ನಿಮಿಷ ಕಿವಿಗೊಟ್ಟು ಆಲಿಸು. ಎಲ್ಲಿಂದಲೋ ಒಂದು ಹೆಣ್ಣಿನ ಕೊರಲ ಸುಸ್ವರ ಕೇಳಿಬರುತ್ತಿದೆ. (ಎಂದು ಕಿವಿಗೊಟ್ಟು ಕೇಳುತ್ತಾನೆ. ಗೆಳೆಯರೆಲ್ಲರೂ ಅದೇ ರೀತಿ ಗಂಭೀರವಾಗಿ ಆಲಿಸುತ್ತಾರೆ.)

('ಹಾಡು, ಹಾಡು ಕೋಗಿಲೆ' ಎಂಬ ಹಾಡೊಂದು ಅಸ್ಪಷ್ಟವಾಗಿ ಸ್ವಲ್ಪ ಹತ್ತಿರದಿಂದಲೇ ಕೇಳಿಬರುತ್ತದೆ. ಹಾಡಿನಲ್ಲಿ ನೋವಿದೆ. ಕ್ರಮೇಣ ಹಾಡು ಹತ್ತಿರವಾಗುತ್ತದೆ. ಹಾಡು ಕೇಳಿಬರುತ್ತಿರುವ ದಿಕ್ಕಿಗೆ ಎಲ್ಲರೂ ಮುಖಮಾಡಿ ನೋಡುತ್ತಾರೆ.)

**ಮಣಿಕಂಠ :** ಅಬ್ಬ! ಎಷ್ಟೊಂದು ನೋವಿದೆ ಹಾಡಿನಲ್ಲಿ! ಯಾರ ಹೆಣ್ಣೋ ಏನೋ! ಆಕೆಗೆ ಬಂದಿರುವ ಕಷ್ಟವಾದರೂ ಎಂಥಾದ್ದೊ? ಪಾಪ!

**ಆನಂದ :** ವೈಶಾಲಿಗೆ ವೈಶಾಲಿಯೇ ಸಂಭ್ರಮೋತ್ಸಾಹಗಳಿಂದ ಕುಣಿಯುತ್ತಿದ್ದರೆ, ಈ ಬಡಪಾಯಿ ಹೆಣ್ಣಿಗೆ ತೊಂದರೆ ಏನೋ! ಕರೆದು ಮಾತನಾಡಿಸಿ ನಾವು ಸಹಾಯ ಮಾಡಲೇಬೇಕು.

**ಮಣಿಕಂಠ :** ನಾನೇ ಎದ್ದು ಹೋಗಿ ಆಕೆಯನ್ನು ಮಾತನಾಡಿಸುತ್ತೇನೆ.

**ಅಭಿನಂದ :** ಮಾತನಾಡಿಸಿ ಹಾಗೇ ಕಳಿಸಿಬಿಡಬೇಡ. ಆಕೆಯನ್ನು ಇಲ್ಲಿಗೆ ಆಹ್ವಾನಿಸು.

(ಮಣಿಕಂಠ ಎದ್ದು ಹೊರಡುತ್ತಾನೆ. ಎಲ್ಲರೂ ಅವನು ಹೋದ ದಿಕ್ಕನ್ನೇ ಗಮನಿಸುತ್ತಾರೆ. ಸ್ವಲ್ಪ ಹೊತ್ತು ಯಾರೂ ಮಾತನಾಡುವುದಿಲ್ಲ....ಕೆಲಕ್ಷಣಗಳ ನಂತರ ಮ್ಲಾನವದನಳಾಗಿ ಸಂಕೋಚದಿಂದಲೇ ನಿಧಾನವಾಗಿ ಮಣಿಕಂಠನ ಹಿಂದೆ ಹಿಂದೆ ಬರುತ್ತಾಳೆ. ಅವಳು ಪ್ರವೇಶಿಸುತ್ತಿದ್ದಂತೆಯೇ)

**ಅಭಿನಂದ :** ಬಾ ತಂಗಿ ಬಾ! ನಿನಗೆ ಸಂಕೋಚ ಬೇಡ. ನಮ್ಮೊಡನೆ ಈ ಆಸನವನ್ನು ಸ್ವೀಕರಿಸು.

**ಸಾಲವತಿ :** ಅಣ್ಣಂದಿರೇ ನಿಮ್ಮ ಈ ಸ್ನೇಹ, ವಿಶ್ವಾಸಕ್ಕೆ ನನ್ನ ಕೃತಜ್ಞತೆಗಳು. ನಾನು ಯಾರೆಂದು ಬಹುಶಃ ನಿಮಗೆ ತಿಳಿದಿರಲಾರದು. ಆದರೆ ನಾನು ನಿಮ್ಮನ್ನು ಬಲ್ಲೆ. ನೀವು ತತ್ವಜ್ಞಾನಿ ಕುಲಪುತ್ರರು ವಜ್ಜಿ ಸಂಘಕ್ಕೆ ಸೇರಿದವರು.

**ಆನಂದ :** ಬಹಳ ಸಂತೋಷ ತಂಗಿ, ನಿನಗೆ ತೊಂದರೆಯಾಗದಿದ್ದಲ್ಲಿ ನಿನ್ನ ಪರಿಚಯಕ್ಕಾಗಿ ನಾವು ಬಹಳ ಕಾತುರರಾಗಿದ್ದೇವೆ. ನಿನ್ನ ಹಾಡನ್ನು ಕೇಳಿದೆವು. ನಿನ್ನ ಹಾಡು ಹೊಮ್ಮಿಸಿದ ನೋವು ನಮ್ಮೆದೆಗಳನ್ನು ಸ್ಪರ್ಶಿಸಿತು. ನಿನ್ನನ್ನು ಕಂಡು ಮಾತನಾಡಿಸಬೇಕೆನಿಸಿತು. ಅದಕ್ಕಾಗಿ ನಮ್ಮ ಗೆಳೆಯನು ನಿನ್ನಲ್ಲಿಗೆ ಬಂದ. ದಯವಿಟ್ಟು ನಮ್ಮ ಈ ಸಾಹಸವನ್ನು ತಪ್ಪಾಗಿ ಭಾವಿಸಬೇಡ ತಂಗಿ.

**ಸಾಲವತಿ :** ಅಣ್ಣಂದಿರೇ ಈ ಪ್ರಪಂಚದಲ್ಲಿ ಪ್ರಸ್ತುತ ನಾನು ಏಕಾಕಿ, ಅನಾಥೆ. ನನ್ನವರು ಎಂದುಕೊಳ್ಳಲು ನನ್ನ ತಂದೆಯೊಬ್ಬರ ಹೊರತಾಗಿ ಬೇರೆ ಯಾರೂ ಇರಲಿಲ್ಲ. ಆದರೆ ನನ್ನ ದುರಾದೃಷ್ಟ! ಇದ್ದ ತಂದೆಯೂ ಹೋದವರುಷ ತೀರಿಕೊಂಡರು. ನಾನೂ ಹೆಮ್ಮೆಯ ವಜ್ಜಿ ಕುಲದವಳೇ! ನನ್ನ ತಂದೆಯೂ ಪ್ರತಿಷ್ಠಿತ ಕುಲಪುತ್ರರು, ಸ್ವರ್ಣವಿದ್ಯೆಯಲ್ಲಿ ಪಾಂಡಿತ್ಯ ಪಡೆದಿದ್ದ ನನ್ನ ತಂದೆಯಿಂದಾಗಿ ಯಾವುದಕ್ಕೂ ಕೊರತೆಯಿಲ್ಲದಂತೆ ಬಾಳಿದೆವು. ಆದರೆ ಈಗ...ಈಗ ನಾನು ಒಂಟಿ....ಏಕಾಕಿ. ಬಾಳುವುದಕ್ಕೆ ಆಸರೆಯಿಲ್ಲ; ಆಸೆಯೂ ಇಲ್ಲ. ನನಗೆ ನನ್ನ ಭವಿಷ್ಯವೇ ಅಸ್ಪಷ್ಟವಾಗಿದೆ!

**ಆನಂದ** : ಧೈರ್ಯ ತಂದುಕೋ ತಂಗಿ. ಕಾಲ ಹೀಗೇ ಇರುವುದಿಲ್ಲ. ಒಳ್ಳೆಯ ದಿನಗಳು ಬಂದೇ ಬರುತ್ತವೆ.

**ಸಾಲವತಿ** : ಬರುವ ದಿನಗಳಿಗಾಗಿ ಕಾಯುತ್ತ ಕುಳಿತರೆ, ನನ್ನೀಗಿನ ವರ್ತಮಾನವೇನಾಗಬೇಕು? ಬದುಕುವುದಕ್ಕೆ ದಾರಿಯಿಲ್ಲ. ದಯಾಭಿಕ್ಷೆಗೆ ಕೈ ಚಾಚುವುದಿಲ್ಲ. ಬರೀ ಪ್ರಾಣಧಾರಣೆಗೆ ಬದುಕುವುದು ನಿಜವಾದ ಬದುಕಲ್ಲವೆಂದು ನನ್ನ ತಂದೆ ನನಗೆ ಬೋಧಿಸಿದ್ದರು. ಉತ್ತಮವಾದ ಪ್ರತಿಷ್ಠಿತವಾದ ಗೌರವಯುತವಾದ ರೀತಿಯಲ್ಲಿ ಬದುಕಬೇಕೆನ್ನುವುದು ನನ್ನ ತಂದೆಯ ಆಸೆಯಾಗಿತ್ತು; ಅದೇ ಅವರ ನಿರೀಕ್ಷೆಯಾಗಿತ್ತು.

**ವಸಂತಕ** : ಅಂತಹ ಆಸೆ ಸಹಜವಾದ್ದೆ. ಕುಲಪುತ್ರರಾದವರಿಂದ, ವಜ್ಜಿ ಸಂಘದವರಿಂದ ಮಾತ್ರವೇ ಇಂತಹ ನಿರೀಕ್ಷೆಗಳು ಸಾಧ್ಯ. ತಂಗಿ, ಅವರಾಸೆ ನಿನ್ನಿಂದ ಖಂಡಿತವಾಗಿ ಪೂರೈಸುತ್ತದೆ. ಆ ಭರವಸೆ ನಮಗಿದೆ. ನಿನ್ನ ಅಂತರಂಗದ ಆಳದಿಂದ ಹೊರಟ ಮಾತುಗಳೆ ಅದನ್ನು ಪಿಸುಗುಟ್ಟಿವೆ.

**ಸಾಲವತಿ** : ನನ್ನ ಮೇಲಿನ ಪ್ರೀತಿ ವಿಶ್ವಾಸದಿಂದ ಹೀಗೆ ನುಡಿಯುತ್ತಿದ್ದೀರಿ. ಆದರೆ ನನ್ನ ತಂದೆಯ ಆಸೆ ಪೂರೈಸುವುದಾದರೂ ಹೇಗೆ....? ಹೇಗೆ? ಸಂಘದಲ್ಲಿ ಗೌರವ ಪ್ರತಿಷ್ಠೆಗಳು ದಕ್ಕಬೇಕಾದರೆ ಹಣ,...ಹಣ ಸುವರ್ಣ ನಾಣ್ಯಗಳು ಸಮೃದ್ಧವಾಗಿ ಸೇರಿದಾಗ ಮಾತ್ರ ಸಾಧ್ಯ. ಮನುಷ್ಯನಿಗೆ ಮನುಷ್ಯನಾಗಿ ಬೆಲೆ ಬರುವುದು ಅವನಲ್ಲಿ ಚಿನ್ನವಿದ್ದಾಗ ಮಾತ್ರ...ಆದ್ದರಿಂದ ಹಣವಿಲ್ಲದ ನಿರ್ಗತಿಕಳಾದ, ಅನಾಥಳಾದ ನನಗೆ ಸಮಾಜದಲ್ಲಿ ಸ್ಥಾನಮಾನಗಳು, ಗೌರವ ಪ್ರತಿಷ್ಠೆಗಳು ಕೇವಲ ಕನಸು ಮಾತ್ರ.

**ಅಭಿನಂದ** : ಇಷ್ಟು ಸಣ್ಣ ಪ್ರಾಯಕ್ಕೆ ಇಂತಹ ನೋವು! ಅಳಲು! ಉದ್ವಿಗ್ನತೆ!! ನಿನ್ನ ಸಂಕಟ ನಮಗೆ ಅರ್ಥವಾಗುತ್ತದೆ. ಹೇಳು ತಂಗಿ ನಿನಗೆ ನಾವು ಯಾವ ಬಗೆಯಲ್ಲಿ ಸಹಾಯ ಮಾಡಬಲ್ಲೆವು? ನಿಸ್ಸಂಕೋಚವಾಗಿ ಹೇಳು ತಂಗಿ.

**ಸಾಲವತಿ** : ಅಣ್ಣಂದಿರೇ. ನಿಮ್ಮ ಪ್ರೀತಿ, ಔದಾರ್ಯಗಳಿಗೆ ನನ್ನ ಹೃದಯ ತುಂಬಿ ಬಂದಿದೆ. ನಿಜವಾಗಿಯೂ ನೀವು ನನ್ನನ್ನು ತಂಗಿ ಎಂದು ಭಾವಿಸಿರುವುದೇ ಆದರೆ ಹತ್ತಿರದಲ್ಲಿರುವ ನನ್ನ ಕುಟೀರಕ್ಕೆ ದಯಮಾಡಿ ಈ ಬಡವಳ ಆತಿಥ್ಯವನ್ನು ಸ್ವೀಕರಿಸಿ.

(ಸೇವಕನೊಬ್ಬನ ಪ್ರವೇಶ)

**ಸೇವಕ** : ಮಾನ್ಯರೇ, ಅಭಿನಂದನೆಗಳು. ಉಪರಾಜರಾದ ಅಭಯ ಕುಮಾರರು ಮಗಧದಿಂದ ಬಂದಿರುವ ಗೌರವನೀಯ ಅತಿಥಿಗಳೊಂದಿಗೆ ತಮ್ಮನ್ನು ಕಾಣಲಿಚ್ಛಿಸುತ್ತಾರೆ.

**ಅಭಿನಂದ :** (ಆಶ್ಚರ್ಯದಿಂದ) ವೈಶಾಲಿಯ ಉಪರಾಜರು!.... ಮಗಧದ ಅತಿಥಿಗಳು!! ಇದೇನು ವಿಚಿತ್ರ!?... ಇರಲಿ. ಹೋಗು ಮರ್ಯಾದೆಯಿಂದ ಅವರನ್ನು ಕರೆದು ತಾ.

(ಸೇವಕನು ಮತ್ತೆ ಅಭಿವಂದಿಸಿ ಹೋಗುತ್ತಾನೆ. ಒಂದೆರಡು ಗಳಿಗೆಗಳ ನಂತರ ಅಭಯಕುಮಾರ ಒಬ್ಬ ಆಗಂತುಕ ವ್ಯಕ್ತಿಯ ಜೊತೆಗೆ ಪ್ರವೇಶಿಸುತ್ತಾನೆ.)

**ದಾರ್ಶನಕ**

**ಗೆಳೆಯರು :** (ಒಟ್ಟಿಗೆ) ಸ್ವಾಗತ... ಸುಸ್ವಾಗತ. ಉಪರಾಜರಿಗೆ ಮತ್ತು ಅವರ ಗೆಳೆಯರಿಗೆ ನಮ್ಮ ಸಂತೋಷ ಕೂಟಕ್ಕೆ ಹಾರ್ದಿಕ ಸ್ವಾಗತ.

**ಅಭಯಕುಮಾರ:** ನಿಮ್ಮ ಸ್ವಾಗತಕ್ಕಾಗಿ ನಮ್ಮ ಧನ್ಯವಾದಗಳು. ಹಾಗೆಯೇ ನಿಮ್ಮ ಸಂತೋಷಕೂಟದಲ್ಲಿ ಅಕ್ರಮ ಪ್ರವೇಶ ಮಾಡಿ ನಿಮ್ಮ ಸಂತೋಷಕ್ಕೆ ಭಂಗ ತಂದುದಕ್ಕೆ ಕ್ಷಮೆಯಿರಲಿ.

**ಆನಂದ :** ಹಾಗನ್ನಬೇಡಿ. ತಾವು ಬಂದದ್ದು ನಮಗೆ ನಿಜವಾಗಿಯೂ ಸಂತೋಷವಾಗಿದೆ. ನಿರೀಕ್ಷೆಯಿಲ್ಲದೆ ಆಗಮಿಸುವ ಅತಿಥಿ ಅಭ್ಯಾಗತರು ಮತ್ತಷ್ಟು ಮಾನವೀಯರೂ ಸ್ವಾಗತಾರ್ಹರೂ ಆಗುತ್ತಾರೆ. ನಮ್ಮ ಜೊತೆಯಾಗಿ ತಾವೂ ಹಬ್ಬದ ಸಂಭ್ರಮ ಸಂತೋಷಗಳನ್ನು ಹಂಚಿಕೊಳ್ಳುತ್ತಿರುವುದು ನಮ್ಮ ಭಾಗ್ಯ. ತಾವು ಅನ್ಯಥಾ ಭಾವಿಸದಿದ್ದಲ್ಲಿ ತಮ್ಮ ಈ ಮಾನ್ಯ ಅತಿಥಿಗಳ ಪರಿಚಯ...?

**ಅಭಯಕುಮಾರ:** ಕುಲಪುತ್ರರೇ, ನೀವು ಕೇಳುವುದಕ್ಕೆ ಮೊದಲೇ ಇವರನ್ನು ಪರಿಚಯಿಸುವುದು ನಮ್ಮ ಕರ್ತವ್ಯವಾಗಿತ್ತು. ಅವರನ್ನು ಪರಿಚಯಿಸಿದರೆ ನಿಮಗೆ ದಿಗ್ಭ್ರಾಂತಿಯಾಗಬಹುದೇನೋ!

**ಮಣಿಕಂಠ :** ದಿಗ್ಭ್ರಾಂತಿಗೂ ಮೊದಲು ಕುತೂಹಲಿಗಳಾಗಿದ್ದೇವೆ.

**ಅಭಯಕುಮಾರ:** ಇವರು ಮಗಧದ ಮಾನ್ಯ ಮಹಾಮಂತ್ರಿಗಳು. ವೈಶಾಲಿಯ ವಸಂತೋತ್ಸವ, ಸಾಂಸ್ಕೃತಿಕ ಪರ್ವ ಸುತ್ತಮುತ್ತಲ ಗಣ ರಾಜ್ಯಗಳಲ್ಲೇ ಪ್ರಸಿದ್ಧಿ ಪಡೆದಿರುವುದು ನಿಮಗೂ ತಿಳಿದ ವಿಷಯವೇ! ಈ ಸಲದ ವಸಂತೋತ್ಸವರ ಅತಿಥಿಗಳಾಗಿ ನಮ್ಮ ಆನಂದೋತ್ಸಾಹಗಳನ್ನು ಹಂಚಿಕೊಂಡು ಅಭಿನಂದಿಸಿಬೇಕೆಂದು ಮಾನ್ಯ ಮಂತ್ರಿಗಳು ಆಗಮಿಸಿದ್ದಾರೆ. ಅಲ್ಲದೆ ವಜ್ಜಿ ರಾಷ್ಟ್ರದ ಸ್ತ್ರೀಯರ ಲೋಕವಿಖ್ಯಾತ ಸೌಂದರ್ಯವನ್ನು ಪ್ರತ್ಯಕ್ಷವಾಗಿ ಕಾಣಬೇಕೆಂದು ಉತ್ಸುಕರಾಗಿದ್ದಾರೆ.

(ಈ ಮಾತು ನಡೆಯುತ್ತಿದ್ದಂತೆ ಸಾಲವತಿ ನಾಚಿಕೆ ಸಂಕೋಚಗಳಿಂದಲೇ ಕುಲಪುತ್ರರಿಂದ ಬೀಳ್ಕೊಡಲು ಪ್ರಯತ್ನಿಸುತ್ತಾಳೆ.)

**ಸಾಲವತಿ :** ಅಣ್ಣಂದಿರೇ, ಅಪ್ಪಣೆಯಾದಲ್ಲಿ ನಾನು... (ಅಲ್ಲಿಗೇ ನಿಲ್ಲುತ್ತದೆ)

(ಮೂಲೆಯಲ್ಲಿ ಮುದುಡಿ ನಿಂತಿದ್ದ ಸಾಲವತಿಯ ದನಿ ಕೇಳಿ ಆ ಕಡೆ ನೋಡಿದ ಅಭಯಕುಮಾರ ಮತ್ತು ಮಂತ್ರಿ ನಿಬ್ಬೆರಗಾಗಿ ಅವಳನ್ನೇ ದಿಟ್ಟಿಸಿ ನೋಡುವರು.)

**ಅಭಯಕುಮಾರ:** ಕುಲಪುತ್ರರೇ ನಿಮ್ಮನ್ನೊಂದು ಪ್ರಶ್ನೆ ಕೇಳಲೇ?

**ಆನಂದ :** ಮೊದಲನೇ ಪ್ರಶ್ನೆ..... ಊರಿನ ಬೀದಿಗಳಲ್ಲಿ ಜನರೆಲ್ಲ ಒಟ್ಟಿಗೆ ಸೇರಿ ಸಂಭ್ರಮ ಗದ್ದಲಗಳಿಂದ ವಸಂತೋತ್ಸವದ ಆನಂದವನ್ನು ಅನುಭವಿಸುತ್ತಿದ್ದರೆ ನೀವು ಮಾತ್ರ ನಿರ್ಜನವಾದ ಈ ಪ್ರದೇಶದಲ್ಲಿ ಆಡಂಬರವಿಲ್ಲದೆ ಸರಿಯಾಗಿ ಸಾತ್ವಿಕವಾಗಿ ಯಾವುದೋ ತತ್ವಜ್ಞಾನಿಗಳ ಕೂಟದ ಹಾಗೆ ಇಲ್ಲಿ ಸೇರಿ ವಸಂತೋತ್ಸವದ ಆಚರಣೆಯಂದು ಸಂಭ್ರಮಿಸುತ್ತಿದ್ದೀರಿ. ಹೆಂಡವಿಲ್ಲ; ಹೆಣ್ಣುಗಳಿಲ್ಲ; ಉತ್ಸಾಹವಿಲ್ಲ; ಉದ್ವಿಗ್ನತೆಯಿಲ್ಲ.

**ವಸಂತಕ :** ಅದೇ ಈ ನಮ್ಮ ಗೆಳೆಯರ ಗುಂಪಿನ ವೈಶಿಷ್ಟ್ಯ. ಬೇರೆಯವರಿಗಿಂತ ಭಿನ್ನವಾಗಿ ತಮ್ಮ ವೈಯಕ್ತಿಕತೆಯನ್ನೂ, ವಿಶಿಷ್ಟತೆಯನ್ನೂ ರಕ್ಷಿಸಿಕೊಳ್ಳಲು ಪ್ರಯತ್ನಿಸುತ್ತೇವೆ. ಬಹುಶಃ ಇದು ನಿಮಗೆ ಆಶ್ಚರ್ಯವಾಗಿ ತೋರಬಹುದು. ನೋಡಿ ನಾವು ಎಂಟುಮಂದಿ ಆಪ್ತ ಸ್ನೇಹಿತರು ಒಟ್ಟಿಗೇ ಇರುತ್ತೇವೆ. ಆದರೂ ನಾವು ನಮ್ಮ ನಮ್ಮ ಆಲೋಚನೆಗಳಲ್ಲಿ... ವಿಚಾರಗಳಲ್ಲಿ ಒಬ್ಬರಿಗಿಂತ ಒಬ್ಬರು ಬೇರೆಯಾಗಿದ್ದೇವೆ. ಸ್ವತಂತ್ರರಾಗಿದ್ದೇವೆ. ನಾವು ನಮ್ಮ ಸಂತೋಷವನ್ನು ಹೀಗೆ ಹಂಚಿಕೊಳ್ಳುತ್ತೇವೆ. ನಮ್ಮ ಪರಿಚಯ ನೋಡಿ ಹೀಗಿದೆ:– ನಾನು ವಸಂತಕ, ಇವರು ಮಣಿಕಂಠ, ಆನಂದ, ಅಭಿನಂದ, ಸುಭದ್ರ, ಮಿತ್ರಾಯಣ, ಸುಮಂಗಲ, ಸಂಜಯ, ನಾವು ಯಾವಾಗಲೂ ಒಟ್ಟಿಗೆ ಇರುತ್ತೇವೆ. (ಎಂದು ತಮ್ಮೆಲ್ಲರನ್ನೂ ಪರಿಚಯಿಸುತ್ತಾನೆ.) ನಮ್ಮ ನಮ್ಮ ಗುರುಗಳು ಬೇರೆ ಬೇರೆ. ನಮ್ಮ ನಂಬಿಕೆಗಳು, ಸಿದ್ಧಾಂತಗಳೂ ಬೇರೆ ಬೇರೆಯೇ! ಆದರೂ ಅನೇಕತೆಯಲ್ಲಿ ಏಕತೆ ಎಂಬಂತೆ ಸ್ನೇಹಸೂತ್ರದಿಂದ ಒಂದಾಗಿ ಬೆಸೆದುಕೊಂಡಿದ್ದೇವೆ.

**ಮಹಾಮಂತ್ರಿ:** (ತಲೆದೂಗುತ್ತ) ಆಶ್ಚರ್ಯ ಪರಮಾಶ್ಚರ್ಯ (ಎನ್ನುತ್ತಲೇ ಸಾಲವತಿಯ ಕಡೆ ತಿರುಗಿ) ನಿಮ್ಮ ಪರಿಚಯವಾಯಿತು. ಆದರೆ ಈ ಯುವತಿಯ ಪರಿಚಯ?

**ಮಣಿಕಂಠ :** ಓಹ್ ಈಕೆಯೋ! ನಮಗೂ ಈಗಲೇ ಈಕೆಯ ಪರಿಚಯವಾದದ್ದು. ನಮಗಿಂತಲೂ ಈಕೆಯೇ ತನ್ನ ಪರಿಚಯವನ್ನು ಹೇಳಿದರೆ ಸಾಧುವಾದೀತು. (ಸಾಲವತಿಯ ಕಡೆ ತಿರುಗಿ) ತಂಗಿ ನಮ್ಮ ಅತಿಥಿಗಳು ನಿನ್ನ ಪರಿಚಯವನ್ನು ತಿಳಿಯ ಬಯಸಿದ್ದಾರೆ. ದಯಪಿಟ್ಟು ನೀನಾರೆಂದು ತಿಳಿಸುವೆಯಾ?

**ಸಾಲವತಿ :** (ಸಂಕೋಚದಿಂದಲೇ) ಮಾನ್ಯರೇ ನನ್ನ ಪರಿಚಯದಲ್ಲಿ ಯಾವ ವಿಶೇಷತೆಯೂ ಇರಲಾರದು. ಪೂಜ್ಯರಾದ ಕುಲಪುತ್ರರಾದ ದಿವಂಗತ ಧವಳಯಶರ ಏಕಮಾತ್ರ ಪುತ್ರಿ ಸಾಲವತಿ. ನಾನೊಬ್ಬಳು ಸಾಮಾನ್ಯ ಹೆಣ್ಣು.

**ಅಭಯಕುಮಾರ:** ಓಹ್ ಧವಲಯಶರ ಪುತ್ರಿ!! ಸ್ವರ್ಣತಜ್ಞರೆ ಆದ ಧವಳಯುಶರ ಪರಿಚಯವಿಲ್ಲದೇ ಏನು?... ನಿಮ್ಮ ಪರಿಚಯವಾದದ್ದು ಬಹಳ ಸಂತೋಷ. ಧವಳಯಶರಿಗೆ ಇಂತಹ ಅನುಪಮ ಕನ್ಯಾರತ್ನವಾದ ಮಗಳು ಇದ್ದಾಳೆಂಬುದೇ ನಮಗೆ ತಿಳಿದಿರಲಿಲ್ಲ.

**ಮಹಾಮಂತ್ರಿ:** ಕಲ್ಯಾಣಿ ನಿನ್ನನ್ನು ಕಂಡು ನಮಗಾದ ಸಂತೋಷಕ್ಕೆ ಎಣೆಯೇ ಇಲ್ಲ... ಕುಲಪುತ್ರರೇ ನಾನಿಲ್ಲಿಗೆ ಬಂದದ್ದು ಇಷ್ಟೊಂದು ಲಾಭದಾಯಕವಾಗಿ ಪರಿಣಮಿಸಿದ್ದು ನಿಮ್ಮ ಕಾರಣದಿಂದ. ಅದಕ್ಕೆ ನಿಮಗೆ ನನ್ನ ಕೃತಜ್ಞತೆಗಳು. ಈ ಹೆಣ್ಣು ಮಗಳ ರೂಪ ಲಾವಣ್ಯ ಸ್ವರ್ಗೀಯ ಅನುಭೂತಿಯನ್ನು ನಮಗೆ ನೀಡಿದೆ. ನಮ್ಮ ಮಗಧದಲ್ಲಿ ಕಣ್ಣಲ್ಲಿ ಕಣ್ಣಿಟ್ಟು ಹುಡುಕಿದರೂ ಸಿಗಲಾರದ ಸೌಂದರ್ಯವಿದು. ಲೋಕದ ದೃಷ್ಟಿಗೆ ಬೀಳದ ರೂಪವಿದು. ಭಲಾ! ಭಲಾ! ವಜ್ಜಿ ರಾಷ್ಟ್ರದಲ್ಲಿ ಯಾವುದಕ್ಕೂ ಕೊರತೆ ಇಲ್ಲ. ಅಷ್ಟ ಸಂಪತ್ತುಗಳಿಂದಲೂ ತುಂಬಿ ತುಳುಕುತ್ತಿದೆ. ನಮ್ಮ ಅಂಬಾಪಾಲಿಯೇ ಜಗದ್ವಿಖ್ಯಾತ ಸುಂದರಿಯೆಂದು ನಂಬಿ ಬೀಗುತ್ತಿದ್ದ ನಮಗೆ ಈ ಯುವತಿಯ ಸೌಂದರ್ಯದ ಮುಂದೆ ಅದು ಕ್ಷುಲ್ಲಕವೆನಿಸಿದೆ.

**ಸುಮಂಗಲ:** ಅಂಬಾಪಾಲಿ ವೇಶ್ಯೆಯೆಂದು ಕೇಳಿದ್ದೇವೆ, ಆದರೆ....ಈಕೆ..?

**ಮಹಾಮಂತ್ರಿ:** ಹೌದು... ಮೊದಲು ಈಕೆಯನ್ನು ನೋಡಿದಾಗ ನಾನೂ ಈಕೆಯನ್ನು ಹಾಗೆಯೇ ಭಾವಿಸಿದ್ದೆ. ಆದರೆ ಈಕೆಯ ಪರಿಚಯ ತಿಳಿದ ಮೇಲೆ..... (ಮೌನ)

**ಆನಂದ :** ವೈಶಾಲಿಯಲ್ಲಿ ವೇಶ್ಯಾವೃತ್ತಿಗೆ ಅವಕಾಶವಿಲ್ಲ. ಹೆಣ್ಣು ಗೌರವನೀಯಳು. ಪೂಜ್ಯಳು.

**ಮಹಾಮಂತ್ರಿ:** ವೇಶ್ಯಾವೃತ್ತಿ ಕೆಟ್ಟದೆಂದು ನಿಮ್ಮ ಅಭಿಪ್ರಾಯವೇ? ಅಂಬಾಪಾಲಿ ಮಗಧದಲ್ಲಿ ಎಂತಹ ಗೌರವ ಪ್ರತಿಷ್ಠೆಯ ಸ್ಥಾನದಲ್ಲಿದ್ದಾಳೆಂದು ನಿಮಗೆ ತಿಳಿಯದೇ? ಆಕೆ ನಗರವಧು. ಎಲ್ಲಿಗೆ ಯಾರಲ್ಲಿಗೆ ಬೇಕಾದರೂ ಪ್ರವೇಶವಿದೆ. ಆಕೆಯ ಬಾಗಿಲ ಬಳಿ ವರಿಷ್ಠರ, ಪ್ರತಿಷ್ಠಿತರ ಸಾಲುಗಟ್ಟಿರುತ್ತದೆ. ಅರಮನೆ–ಅಂತಃಪುರಗಳಿಗೆ ಮುಕ್ತ ಅವಕಾಶವಿದೆ. ರಾಜಕೀಯ ವಿಚಾರಗಳೂ ಆಕೆಯೊಂದಿಗೆ ಚರ್ಚಿತವಾಗುತ್ತವೆ.

**ಅಭಿನಂದ :** ನೀವು ಹೇಳುವುದೆಲ್ಲ ಸರಿ ಇರಬಹುದು. ಆದರೆ ಆ ಹೆಣ್ಣು ಕೂಡಾ ನಿಮ್ಮಂತೆಯೇ ಆಲೋಚಿಸಿರಬೇಕಲ್ಲ! ಸ್ವ ಇಚ್ಛೆಯಿಂದ ಆರಿಸಿಕೊಂಡಲ್ಲಿ ಅದು ಬೇರೆ ವಿಚಾರ. ಆದರೆ ಅಸಹಾಯಕತೆ, ಬಲವಂತಗಳು ಅವಳನ್ನು ಆ ದಾರಿಗೆ ದೂಡಬಾರದು ತನ್ನ ವ್ಯಕ್ತಿತ್ವಕ್ಕೆ ಸಲ್ಲುತ್ತಿರುವ ಅವಮಾನವೆಂದಾಗಬಾರದು.

**ಆನಂದ :** ಈಗ ಆ ಮಾತುಗಳೇಕೆ? ಒಟ್ಟಾರೆಯಾಗಿ ವೈಶಾಲಿಯಲ್ಲಿ ವೇಶ್ಯಾವೃತ್ತಿಗೆ ಅವಕಾಶವಿಲ್ಲ.

**ಮಹಾಮಂತ್ರಿ:** ಅದು ನಿಮ್ಮ ದುರಾದೃಷ್ಟ. ಇಂತಹ ಅಲೌಕಿಕ ಸೌಂದರ್ಯ ಲೋಕದ ದೃಷ್ಟಿಗೆ ಬೀಳದೆ ಕಾಡಬೆಳಂದಿಗಳಾಗುವುದು ಎಂತಹ ಪುರುಷಾರ್ಥಕ್ಕೆ? ಅಲ್ಲದೆ ಲೋಕೈಕ ಸುಂದರಿಯೊಬ್ಬಳು ನಗರವಧುವಾಗಿ ಇರುವುದು ಆ ರಾಷ್ಟ್ರದ ಹೆಮ್ಮೆ; ಗೌರವ; ಪ್ರತಿಷ್ಠೆಯ ದ್ಯೋತಕ!... ಇರಲಿ ಬಿಡಿ ಅದೆಲ್ಲ. ನಾನು ನಿಮ್ಮನ್ನು ಖಂಡಿತವಾಗಿ ಅಭಿನಂದಿಸಲೇಬೇಕು. ನಿಮ್ಮ ನಿಲುವು ವಿಚಾರ, ಆಲೋಚನೆಗಳು ವಿಚಿತ್ರ! ವಿಭಿನ್ನ! ವಿಶಿಷ್ಟ! .... ಆದರೆ ಇಂತಹ ಪರಿಸ್ಥಿತಿಯಲ್ಲಿ ಒಮ್ಮತ, ಸಹಮತಗಳು ಇರಲು ಸಾಧ್ಯವೇ?

**ಸಾಲವತಿ :** ಯಾಕೆ ಸಾಧ್ಯವಿಲ್ಲ. ವಜ್ಜಿಗಳು ವೈಯಕ್ತಿಕವಾಗಿ ಎಷ್ಟೇ ಭಿನ್ನ ಭಿನ್ನ ವಿಚಾರಗಳುಳ್ಳವರಾದರೂ, ಎಲ್ಲ ವಜ್ಜಿಗಳಿಗೂ ಸೇರಿದಂತೆ ಒಂದು ಅಚಲ ಸಿದ್ಧಾಂತವಿದೆ. ತಾತ್ವಿಕ ಚಿಕಂತನೆಗಳಲ್ಲಿ, ದಾರ್ಶನಿಕ ದೃಷ್ಟಿಯಲ್ಲಿ ಎಷ್ಟೇ ಮತಭೇದವಿದ್ದರೂ ರಾಜನೀತಿ, ಸಮಾಜಗಳಿಗೆ ಸಂಬಂಧಿಸಿದಂತೆ ನಮ್ಮೆಲ್ಲರದೂ ಒಂದೇ ಮತ. ಸಮಷ್ಠಿ ದೃಷ್ಟಿಯೇ ಮುಖ್ಯ. ಭಿನ್ನಾಭಿಪ್ರಯಗಳು ಇರುವುದಿಲ್ಲ. ಯಾಕೆಂದರೆ ನಾವೆಲ್ಲರೂ ವಜ್ಜಿ ಸಂಘದ ಸದಸ್ಯರು!

**ಮಹಾಮಂತ್ರಿ:** ಭಲೆ ಹೆಣ್ಣೆ! ರೂಪ ಸೌಂದರ್ಯದಲ್ಲಿ ಅದ್ವಿತೀಯಳಷ್ಟೇ ಅಲ್ಲ. ಬುದ್ಧಿ ಚಾತುರ್ಯದಲ್ಲಿಯೂ ನಮ್ಮ ತಲೆ ತೂಗಿಸಿಬಿಟ್ಟೆ. ನಿನ್ನನ್ನು ಪಡೆದ ತಂದೆ ತಾಯಿಗಳೇ ಧನ್ಯರು! ವೈಶಾಲಿಗಾಗಿ ಕರುಬುವುದು ಏಕೆಂದು ಈಗ ನಮಗೆ ಅರ್ಥವಾಗಿದೆ.

**ಸಾಲವತಿ :** ಪೂಜ್ಯರೇ ನಿಮ್ಮ ಇಷ್ಟೊಂದು ಹೊಗಳಿಕೆಗೆ ನಾನು ಖಂಡಿತ ಪಾತ್ರಳಲ್ಲ. ನಾನು ಅಲ್ಪಳು. ನಿಮ್ಮ ಈ ಹೊಗಳಿಕೆಯ ಉದ್ದೇಶವೂ ನಮ್ಮ ಅರಿವಿಗೆ ಬರುತ್ತಿಲ್ಲ. ಹೇಳಿಕೊಳ್ಳುವುದಕ್ಕೆ, ಹೆಮ್ಮೆಯಿಂದ ಬೀಗಿಕೊಳ್ಳುವುದಕ್ಕೆ ನನ್ನಲ್ಲಿ ಯಾವ ದೊಡ್ಡಸ್ತಿಕೆಯಾಗಲೀ, ವಿಶೇಷತೆಯಾಗಲಿ ಇಲ್ಲ.

**ಮಹಾಮಂತ್ರಿ:** ನೀನು ಇಲ್ಲವೆಂದ ಮಾತ್ರಕ್ಕೆ ಇಲ್ಲದೆ ಹೋಗುವುದೇ? ಕಲ್ಯಾಣಿ ನಿನ್ನಲ್ಲಿನ ಸುಪ್ತಶಕ್ತಿ, ಸೌಂದರ್ಯಗಳನ್ನು ನೀನು ಗುರುತಿಸದೆ ಹೋಗಬಹುದು. ಆದರೆ ಒಂದಲ್ಲ ಒಂದು ದಿನ ಲೋಕ ನಿನ್ನನ್ನು ಕೊಂಡಾಡುತ್ತದೆ. ನಿನ್ನ ಕಾಲಡಿಯಲ್ಲಿ ನತಮಸ್ತಕವಾಗಿ ಕುಳಿತಿರುತ್ತದೆ.

**ಆನಂದ :** ಧನ್ಯಳಾದೆ ತಂಗಿ. ಮಗಧ ಸಾಮ್ರಾಜ್ಯದ ಮಹಾಮಂತ್ರಿಗಳೇ ನಿನ್ನನ್ನು ಹೀಗೆ ಕೊಂಡಾಡುವುದನ್ನು ನೋಡಿದರೆ ನಮಗೇ ಹೆಮ್ಮೆ ಎನಿಸುತ್ತದೆ. ನಿನ್ನಿಂದ ವಜ್ಜಿ ಸಂಘದ ಗೌರವ ಇಮ್ಮಡಿಸಿತು.

**ಸಾಲವತಿ :** ನಿಮ್ಮೆಲ್ಲರ ಭಾವನೆಗಳಿಗೆ ನನ್ನ ಕೃತಜ್ಞತೆಗಳು. ಈ ಬಡವಳ ಮೇಲೆ ಅನುಗ್ರಹ ತೋರಿ ನೀವೆಲ್ಲರೂ ನನ್ನ ಬಡಕುಟೀರಕ್ಕೆ ಬಂದು ನನ್ನ ಅಲ್ಪ ಆತಿಥ್ಯವನ್ನು ಸ್ವೀಕರಿಸಬೇಕು. ಇದು ನನ್ನ ವಿನಮ್ರ ಪ್ರಾರ್ಥನೆ.

**ಅಭಿನಂದ :** ತಂಗಿ ನಿನ್ನ ಆತಿಥ್ಯದ ಆಹ್ವಾನಕ್ಕೆ ನಮ್ಮ ಧನ್ಯವಾದಗಳು. ಆದರೆ ಈಗ ಸದ್ಯಕ್ಕೆ ಕ್ಷಮಿಸು.

**ಮಹಾಮಂತ್ರಿ:** ಕುಲಪುತ್ರರೇ ಆತಿಥ್ಯದ ಮಾತು ಒತ್ತಟ್ಟಿಗೆ ಇರಲಿ. ಈಗ ನನ್ನದೊಂದು ಪ್ರಾರ್ಥನೆ. ನಿಮ್ಮ ಈ ಗೆಳೆಯರ ಮುಂದೆ ವೀಣೆಯಿದೆ. ನಮಗಾಗಿ ಒಂದು ಗೀತವನ್ನು ನುಡಿಸಲಾರಿರಾ?...ಹಾಗೆಯೇ ಈ ಶುಭಾಂಗಿ ಒಂದು ಗೀತವನ್ನು ತನ್ನ ಮಧುರ ಕಂಠದಿಂದ ಹಾಡಿ ಸವಿಯುಣಿಸುವ ಕೃಪೆ ಮಾಡಿದರೆ...?

**ಸಾಲವತಿ :** ಯಾರು ನಾನೆ?....ಖಂಡಿತ ಸಾಧ್ಯವಿಲ್ಲ. ನಾನು ಸಂಗೀತ ಕಲಿತವಳಲ್ಲ. ಹಾಡಲು ಸಮರ್ಥಳೂ ಅಲ್ಲ. ತಾವೆಲ್ಲ ಕ್ಷಮಿಸುವುದಾದರೆ, ನಾನಿನ್ನು ಹೊರಡುತ್ತೇನೆ.

**ಅಭಿನಂದ :** ನಿಲ್ಲು ತಂಗಿ. ಅತಿಥಿಗಳನ್ನು ನಿರಾಶೆಗೊಳಿಸುವುದು ನಮ್ಮ ಧರ್ಮವಲ್ಲ. ನಿನಗೆ ಬರುವಂತೆ ನೀ ಹಾಡು. ಈಗಷ್ಟೇ ಹಾಡುತ್ತಿದ್ದ ಹಾಡಿನ ಒಂದೆರಡು ಚರಣಗಳನ್ನು ಹಾಡಿ ತೋರಿಸು.

**ಸಾಲವತಿ :** ನನ್ನನ್ನು ಎಂತಹ ಸಂದಿಗ್ಧದಲ್ಲಿ ಸಿಲುಕಿಸಿದಿರಿ... ಆದರೂ ನಿಮ್ಮ ಮನಸ್ಸಂತೋಷಕ್ಕೆ ಹಾಡುತ್ತೇನೆ, ಅಷ್ಟೇ.

(ಸಾಲವತಿ ಹಾಡುತ್ತಾಳೆ.)

ಹಾಡು ಹಾಡು ಕೋಗಿಲೆ
ಮುದವನೆದೆಗೆ ತಾರೆಲೆ

ಏಕೊ ಏನೊ ಮನವನಿಂದು
ಶೂನ್ಯಭಾವ ತುಂಬಿದೆ

ಮೊಳೆತ ರಾಗ ಭಾವವುಡಿದು
ಮರುವೆ ಮನವ ಸುತ್ತಿದೆ
ಕಾರುಕತ್ತಲ ಭೀತಿ ಭೂತವು
ಬಾನು ಬುವಿಯನು ತಬ್ಬಿದೆ
ಕಾಂತಿ ಕಣ್ಣಿಗೆ ಬೇನೆ ತಟ್ಟಿದೆ
ನೋವಿನಲೆಗಳು ಮುತ್ತಿವೆ ॥

ನಗುವರಿಲ್ಲ ನಲಿವರಿಲ್ಲ
ಅಳಲೆ ಹಿಂಡಿದೆ ಮನವನು
ಬಿಸಿಲೆ ನುಂಗಿದೆ ವನವನು
ಸೋತು ಸವೆದಿಹೆ ಪಥವನು ॥

ಎದೆಯ ಬಾವನು ಮರೆಸುತ
ವರುಷ ಹರುಷವ ಸುರಿಸುತ
ಬೆಂದ ಎದೆಗೆ ತಂಪು ತರುತಲಿ
ಹಸಿರ ಮೊಳೆಸುತ ಹಾಡು ಬಾ ॥

**ಎಲ್ಲರೂ :** ಭಲಾ! ಭಲಾ!..... ಅದ್ಭುತವಾಗಿದೆ. ಎಂತಹ ಮಾರ್ದವತೆ! ಎಂತಹ ಆರ್ದ್ರತೆ! ಮಂಗಳೇ! ಮಂಗಳೆ! ನಿನ್ನನ್ನು ಎಷ್ಟು ಕೊಂಡಾಡಿದರೂ ಸಾಲದಾಗಿದೆ!

**ಸಾಲವತಿ :** ಈಗಲಾದರೂ ಅಪ್ಪಣೆಯೇ?

**ಅಭಯಕುಮಾರ:** (ಒಂದೇ ಸಮನೆ ಅವಳತ್ತ ನೋಡುತ್ತ) ಕಲ್ಯಾಣಿ ಈ ದಿನ ಅಪೂರ್ವವಾದ ದಿನ. ನಮ್ಮೊಳಗೇ ಇಂತಹ ಅಮೂಲ್ಯ ನಿಧಿ ಸಂಚಯವೇ ಇದ್ದರೂ ಅದನ್ನು ಗುರುತಿಸಲಾಗದ ಮುರ್ಖರಂತೆ ಇದ್ದೆವು. ಇಂತಹ ಅಪೂರ್ವಮಣಿ ಹೀಗೆ ಅಭದ್ರವಾಗಿ ಎಲ್ಲೆಂದರಲ್ಲಿ ಇರಬಾರದು.

ಇದು ರಾಜನಿಧಿ. ಭದ್ರವಾಗಿ ಕಾಯ್ದುಕೊಳ್ಳಬೇಕಾದ್ದು! ನಮ್ಮ ಅರಮನೆಗೆ ನಿನಗೆ ಮುಕ್ತ ಪ್ರವೇಶವಿದೆ. ನಿನಗೆ ಸ್ವಾಗತಃ ಸುಸ್ವಾಗತ. ಸದ್ಯಕ್ಕೆ ದೇವಿ ಈ ನಮ್ಮ ಕಿರುಕಾಣಿಕೆಯನ್ನು ಸ್ವೀಕರಿಸಿದರೆ, ಧನ್ಯರಾಗುತ್ತೇವೆ. (ಎಂದು ಹೇಳುತ್ತ ಕೊರಳ ಮುತ್ತಿನ ಹಾರವನ್ನು ತೆಗೆದು ಅವಳೆಡೆಗೆ ಚಾಚುತ್ತಾನೆ.)

**ಸಾಲವತಿ** : (ವಿನಯಪೂರ್ವಕವಾಗಿ ನಿರಾಕರಿಸುತ್ತಾಳೆ.) ಕ್ಷಮಿಸಿ. ವಜ್ಜಿಕುಲ ಪುತ್ರಿಯರು ಇನ್ನೊಬ್ಬರ ಅನುಗ್ರಹ ದಾನವನ್ನು ಸ್ವೀಕರಿಸಲಾರರು. (ಎಂದು ಹೇಳುತ್ತಾ ಎಲ್ಲರಿಗೂ ಕೈಮುಗಿದು ಹೊರಡಲು ಅನುವಾಗುತ್ತಾಳೆ. ಅಭಯಕುಮಾರ ಮತ್ತು ಮಂತ್ರಿಗಳು ಸ್ತಬ್ಧರಾಗಿ ಒಬ್ಬರ ಮುಖವನ್ನೊಬ್ಬರು ನೋಡುತ್ತ ನಿಲ್ಲುವರು.)

**ಅಭಯಕುಮಾರ:** ಗೆಳೆಯರೇ, ಇನ್ನು ನಮಗೆ ಅಪ್ಪಣೆ ಕೊಡಿಸಿ. ಇನ್ನೂ ವಸಂತೋತ್ಸವ ಸಮಾರೋಹಕ್ಕೆ ಸಿದ್ಧತೆಗಳು ನಡೆಯಬೇಕು. ಎಲ್ಲ ವ್ಯವಸ್ಥೆಗಳನ್ನು ನಾವೇ ವಹಿಸಿಕೊಳ್ಳಬೇಕಿದೆ.

**ವಸಂತಕ** : ಉಪರಾಜರೇ ಈ ಸಲದ ವಸಂತ ಹಬ್ಬ ವಿನೋ ವಿಶೇಷವಾಗಿ ನಡೆಯಲಿದೆ ಎಂದು ಕೇಳಿದ್ದೇವೆ. ನಿಜವೇನು?

**ಅಭಯಕುಮಾರ:** ನೀವು ಕೇಳಿದ್ದು ಸರಿಯಾಗಿಯೇ ಇದೆ. ಮಗಧದಿಂದ ಬಂದ ಮಹಾಮಂತ್ರಿಗಳ ಗೌರವಾರ್ಥ ವಿಶೇಷವಾಗಿ ಇರಬೇಕಲ್ಲವೇ?

**ಮಹಾಮಂತ್ರಿಗಳು:** ಅಭಯಕುಮಾರರ ಆತ್ಮೀಯತೆ ಅತಿಥಿ ಸತ್ಕಾರಗಳನ್ನು ನಾವು ತುಂಬ ಮೆಚ್ಚಿಕೊಂಡಿದ್ದೇವೆ. ಈ ಹಬ್ಬದ ನೆಪದಿಂದಲಾದರೂ ನಮ್ಮ ನಡುವಿನ ಶತ್ರುತ್ವ ಕೊನೆಯಾಗಲೆಂಬುದೇ ನಮ್ಮ ಹಾರೈಕೆ. ವೈಶಾಲಿ, ಮಗಧಗಳು ಸ್ನೇಹದಿಂದ ಇದ್ದರೆ ಯಾವ ನೆರೆ ರಾಜ್ಯಗಳಿಗೂ ನಮ್ಮ ಕಡೆ ನೋಡುವ ಸಾಹಸವಾಗುವುದಿಲ್ಲ. ಏನೆಂಬಿರಿ ಉಪರಾಜರೇ? (ನಗುತ್ತಲೇ ಅಭಯಕುಮಾರರನ್ನು ದಿಟ್ಟಿಸುವರು.)

**ಅಭಯ** : ನೀವನ್ನುವುದೇನೋ ಸರಿಯಾದ್ದೇ! ಆದರೆ ರಾಜಕಾರಣ ಎನ್ನುವುದು ದ್ಯೂತವಿದ್ದ ಹಾಗೆ! ದಾಳಗಳು ಹೇಗೆ ಹೊರಳಿವರೆ ಹಾಗೆ. ಅದರಂತೆ ನಾವು ಕಾಯಿಗಳು ನಡೆಯಬೇಕು,ಅಷ್ಟೆ. ಆದರೆ ವೈಶಾಲಿಗೆ ನಾನೊಬ್ಬನೇ ಉಪರಾಜನಲ್ಲವಲ್ಲ. ಮಹಾರಾಜರಿದ್ದಾರೆ; ಉಪರಾಜರಿದ್ದಾರೆ.... ಅದಕ್ಕೇ ರಾಜಕೀಯದ ಮಾತುಗಳು ನಮ್ಮ ಶಕ್ತಿಗೆ ಮೀರಿದ್ದು.... ಬನ್ನಿ ಮಂತ್ರಿಗಳೆ ನಾವಿನ್ನು ಹೊರಡೋಣ. (ಹೊರಡುವರು)

(ಅವರನ್ನು ಬೀಳ್ಕೊಡಲು ಮಣಿಕಂಠ, ಆನಂದರು ಎದ್ದು ಬರುತ್ತಾರೆ.)

# ದೃಶ್ಯ – ೩

(ನಗರದ ಬೀದಿ. ಜನ ಗುಂಪುಗುಂಪಾಗಿ ಗುಜುಗುಜುಸುತ್ತಿದ್ದಾರೆ. ಬೀದಿಯ ತುಂಬ ಗದ್ದಲ. ಹಬ್ಬದ ಸಂಭ್ರಮದ ವಾತಾವರಣ. ಡಂಗುರದವನೊಬ್ಬನ ಪ್ರವೇಶ ಮತ್ತು ಎತ್ತರದ ದನಿಯಲ್ಲಿ ಡಂಗುರ ಸಾರುತ್ತಾನೆ.)

**ಡಂಗುರದವ:** ಕೇಳ್ರಪ್ಪೋ ಕೇಳ್ರಿ, ವೈಶಾಲಿಯ ಮಹಾಜನಗಳೇ ಕೇಳಿ. ವಸಂತ ಹಬ್ಬದ ಪ್ರಯುಕ್ತ ಪ್ರಭುತ್ವ ಸಾಂಸ್ಕೃತಿಕ ಮತ್ತು ಸಮರ ಕಲೆಗಳ ಸ್ಪರ್ಧೆಗಳನ್ನು ನಿಯೋಜಿಸಿದೆ. ಸಂಗೀತ, ನೃತ್ಯ, ನಾಟಕ ಮತ್ತು ಕತ್ತಿವರಸೆ, ಮಲ್ಲಯುದ್ಧ ಇತ್ಯಾದಿ ಸ್ಪರ್ಧೆಗಳಲ್ಲಿ ಭಾಗವಹಿಸಲು ವೈಶಾಲಿಯ ಪ್ರಜೆಗಳಿಗೆ ಮಹಾರಾಜರು ಆಹ್ವಾನಿಸಿದ್ದಾರೆ. ಆಸಕ್ತರು, ಪರಿಣತರು ಇದರಲ್ಲಿ ಭಾಗವಹಿಸಬಹುದೂ......... sss ಮಹಾಜನಗಳೇ ಈ ಸಲದ ಇನ್ನೊಂದು ವಿಶೇಷ ಸ್ಪರ್ಧೆಯಿದೆ. ವೈಶಾಲಿಯ ಸುಂದರ ಯುವತಿಯರಿಗೆ ಸುವರ್ಣಾವಕಾಶ. ಮೊದಲ ಬಾರಿಗೆ ಆ ಹೆಣ್ಣು ಮಕ್ಕಳಿಗೆ ಸೌಂದರ್ಯ ಸ್ಪರ್ಧೆ ಇದೆ. ಸ್ಪರ್ಧೆಯಲ್ಲಿ ಆಯ್ಕೆಯಾದ ಯುವತಿಯಿಂದಲೇ ಅನಂಗ ಪೂಜೆಯನ್ನು ಮಾಡಿಸಲಾಗುವುದು. ಸರ್ವಶ್ರೇಷ್ಠ ಸುಂದರಿಯಾಗಿ ಗೆದ್ದು ಬಂದ ಯುವತಿಗೆ ರಾಜಮರ್ಯಾದೆ, ಕಿರೀಟಧಾರಣ ಜೊತೆಗೆ ಅನಂಗ ಪೂಜೆಯ ಗೌರವ ಸಲ್ಲುತ್ತದೆ. ಪ್ರವೇಶ ಪಡೆಯಲಿಚ್ಛಿಸುವ ಯುವತಿಯರು ನಾಳೆ ಬೆಳಗ್ಗೆಯೇ ಸಂಸ್ಥಾಗಾರದಲ್ಲಿ ಸಮಾವೇಶಗೊಳ್ಳಬೇಕು. ಕೇಳ್ರಪ್ಪೋsss..... ಕೇಳಿ.... (ಡಂಗುರ ಹೊಡೆಯುವನು)

(ಜನ ಕುತೂಹಲ, ಸಂದೇಹ, ಆಶ್ಚರ್ಯಗಳಿಂದ ಒಬ್ಬರ ಮುಖವನ್ನೊಬ್ಬರು ನೋಡುತ್ತ ಪರಸ್ಪರ ಗುಜುಗುಜು ಮಾತನಾಡಿಕೊಳ್ಳುವರು.)

**ಒಬ್ಬ ವ್ಯಕ್ತಿ :** ಅಲ್ಲಯ್ಯಾ ಇದೂ ಅಂಥದ ಹೊಸ ಪದ್ಧತಿ ಯಾಕ್ಬಂತು ಹೇಳ್ತೀಯೇನು?

**ಎರಡನೇ ವ್ಯಕ್ತಿ :** ಏನೋ ನಾವ್ಯಾಕ್ತಕೊಂಡು ಮಹಾಪ್ರಭುಗಳು ಏನು ಹೇಳಿದ್ರೆ ಅದನ್ನು ಕೇಳ್ಕೊಂಡು ಕೂತ್ಕೋ

**ಡಂಗುರದವ:** (ಸಮಾಧಾನದಿಂದ) ಸಿಟ್ಟು ಯಾಕೆ ತಮ್ಮ. ಏನೋ ಅನುಮಾನ ಬಂತು. ಅದಕ್ಕೇ ಕೇಳ್ತಾನೆ.

**ಮೂರನೇವ್ಯಕ್ತಿ:** ಅವರಿಬ್ಬರದೂ ಇರಲಿ ಬಿಡಣ್ಣ... ನಾನೊಂದು ಪ್ರಶ್ನೆ ಕೇಳ್ತೀನಿ.... ಅನಂಗ ಪೂಜೆಗೆ ಸುಂದರೀನ ಆರಿಸ್ತಾರೆ ಅಂತ ಹೇಳಿದೆಯಲ್ಲ, ಅದು ಹೇಗೆ ಮಾಡ್ತಾರೆ? ನಮ್ಮ ವಜ್ಜಿ ರಾಷ್ಟ್ರದ ಹೆಣ್ಣುಗಳು ರಸಪೂರಿ ಮಾವಿನ ಹಣ್ಣುಗಳೋ! ನೋಡೋಕೆ ರಂಭೆ, ಊರ್ವಶಿ, ಮೇನಕೇರನ್ನೂ ಮೀರಿಸೋಂತಾವ್ರು!!

**ಡಂಗುರದವ:** ಹೇಗೆ ಮಾಡ್ತಾರೇಂತ ನೀವೆಲ್ಲ ಬಂದು ನೋಡಿ. ಗೊತ್ತಾಗುತ್ತೆ. ನಾನೇನಿದ್ದರೂ ಮಹಾಪ್ರಭುಗಳ ಸಂದೇಶವಾಹಕ. ನಿಮಗೆಷ್ಟು ಗೊತ್ತೊ ನನಗೂ ಅಷ್ಟೆ ಗೊತ್ತು. ಅವರು ಹೇಳಿದ್ದು ಮಾಡುವುದಷ್ಟೇ ನನಗೆ ಗೊತ್ತು. ಅದು ಬಿಟ್ಟು ಇಲ್ಲದ ಪ್ರತಿಷ್ಠೆ ನಂಗ್ಯಾಕೆ?

**ನಾಲ್ಕನೇವ್ಯಕ್ತಿ:** ಹಾಗಲ್ಲ ತಮ್ಮ. ಒಬ್ಬರದು ಬಣ್ಣ ಚೆನ್ನ. ಇನ್ನೊಬ್ಬರದು ಭಂಗಿ ಚೆನ್ನ. ಮೂಗೊಬ್ಬರದು ಮೂತಿ ಒಬ್ಬರದು. ಹೀಗೆ ಜೇರೆ ಜೇರೆ ರೀತಿಯಿಂದ ಚೆಂದ ಚೆಂದ ಕಾಣುವಾಗ ಯಾರನ್ನಂತ ಆರಿಸೋದು?!

**ಮತ್ತೊಬ್ಬ :** ಲೇ ಇವನ! ಮೂಗು. ಮೂತಿ. ಮೈ ಬಣ್ಣ, ಕೈಕಾಲು ನಡಿಗೆ ಎಲ್ಲ ನೋಡಿ. ಎಲ್ಲ ಚಂದವಾಗಿದ್ದರೆ ಸುಂದರೀಂತ ಕಣ್ಲಾ!! ಅಷ್ಟೂ ಗೊತ್ತಾಗೋದಿಲ್ಲ! (ಗಹಗಹಿಸಿ ನಗುತ್ತಾನೆ)

**ಮೊದಲವ್ಯಕ್ತಿ:** ತಗೊಳಪ್ಪ! ಇವನು ಚೆಲುಪೀರ ದಂಡೇ ಕಂಡಿದ್ದೀನಿ ಅಂತ ಹೇಳೋ ಹಾಗೆ ಮಾತಾಡ್ತಾನೆ.

**ಡಂಗುರದವ:** ನೀವ್ಯಾಕ್ರಪ್ಪ, ನಿಮ್ಮ ನಿಮ್ಮೊಳಗೆ ಹೀಗೆ ಕಚ್ಚಾಡ್ತೀರಿ. ನಾಳೆ ಬನ್ನಿರಲ್ಲ! ನಿಮಗೇ ಗೊತ್ತಾಗುತ್ತೆ. ಹೇಗೆ ಮಾಡ್ತಾರೇಂತ!! ವೈಶಾಲಿಯ ವಿಶೇಷತೆಗಳಿಗೆ ಇನ್ನೊಂದೆರಡು ಹೆಚ್ಚಿನ ಪುಕ್ಕ ಸೇರುತ್ತೆ. ತಪ್ಪದೆ ಬನ್ರಪ್ಪೋಽಽ...... (ಡಂಗುರ)

**ಒಬ್ಬ ವ್ಯಕ್ತಿ :** ಬನ್ರೋ ಬನ್ರಿ ನಾವೂ ಕೂಡ ಹೆಂಡದಂಗಡಿ ಕಡೆ ಹೆಜ್ಜೆ ಹಾಕೋಣ. ಮಧುಪಾನ ಮಾಡಿ ಮಸ್ತಿ ಮಾಡೋಣ!! (ಡಂಗುರದವನನ್ನೇ ಹಿಂಬಾಲಿಸುತ್ತ ಎಲ್ಲರೂ ನಿಧಾನವಾಗಿ ಗಮನಿಸುವರು.)

# ದೃಶ್ಯ – ೪

(ಅದೇ ಸಾಲವನ. ಹಿನ್ನೆಲೆಗೆ ಸದಾನೀರ ನದಿಯ ಕಲರವ. ಅವರಿಂದ ಸ್ವಲ್ಪ ದೂರದಲ್ಲಿ ಸುಂದರವಾದ ಕುಟೀರ. ಕುಟೀರದ ಮಣ್ಣಿನ ಗೋಡೆಗಳನ್ನು ಬಣ್ಣ ಬಣ್ಣದ ರಂಗವಲ್ಲಿಗಳಿಂದ ಅಲಂಕರಿಸಲಾಗಿದೆ. ಕುಟೀರದೊಳಗಿಂದ ಹಾಡುತ್ತಿರುವ ಹೆಣ್ಣಿನ ದನಿ ಅಲೆ ಅಲೆಯಾಗಿ ಕೇಳಿ ಬರುತ್ತದೆ. ರಂಗದ ಮೇಲೆ ಸ್ವಲ್ಪ ಹೊತ್ತು ನೀರವತೆ. ಕೆಲ ಕ್ಷಣಗಳ ನಂತರ ಕುದುರೆಗಳು ಖುರಪುಟದನಿ ಕೇಳಿ ಬರುತ್ತದೆ. ಬರಬರುತ್ತ ಕುಟೀರಕ್ಕೆ ತೀರಾ ಹತ್ತಿರ ಬಂದಂತೆನಿಸುತ್ತದೆ.)

(ಅಭಿನಂದ, ಮಣಿಕಂಠ, ಆನಂದರ ಪ್ರವೇಶ. ಕುಟೀರದ ಸಮೀಪಕ್ಕೆ ಬಂದು ಒಮ್ಮೆ ಸುತ್ತಲೂ ಕಣ್ಣಾಡಿಸಿ, ಒಂದು ಕ್ಷಣ ಒಳಗಿನಿಂದ ಕೇಳಿ ಬರುತ್ತಿರುವ ಹಾಡಿನ ಕಡೆಗೆ ಲಕ್ಷ್ಯವಿಟ್ಟು ಒಬ್ಬರನ್ನೊಬ್ಬರು ನೋಡಿಕೊಂಡು ಮುಗುಳ್ನಗುತ್ತಾರೆ.)

**ಆನಂದ :** ಅಭಿನಂದ ಸಾಲವತಿ ತುಂಬ ಸಂತೋಷದಲ್ಲಿ ಇರುವ ಹಾಗಿದೆ. ಅದನ್ನು ಭಂಗಪಡಿಸಲು ಮನಸ್ಸೆ ಬರುತ್ತಿಲ್ಲ.

**ಅಭಿನಂದ :** ಈ ಸಂತೋಷವನ್ನು ಇನ್ನಷ್ಟು ಹೆಚ್ಚಿಸಬೇಕೆಂದೇ ಅಲ್ಲವೆ ನಾವು ಬಂದಿರುವುದು!

**ಮಣಿಕಂಠ :** ಅಭಿನಂದ ನನಗ್ಯಾಕೋ ವಿಷಯ ತಿಳಿಸುವುದಕ್ಕೆ ಹೆದರಿಕೆಯಾಗುತ್ತಿದೆ. ನಾವು ಹೇಳುವುದನ್ನು ಅಪಾರ್ಥ ಮಾಡಿಕೊಂಡು ನೊಂದಿಕೊಂಡರೆ?.... ಅವಳಿಗೆ ಇದೆಲ್ಲ ಇಷ್ಟವಾಗದಿರಬಹುದು. ಮೊದಲೇ ಅವಳು ಬಹಳ ಸ್ವಾಭಿಮಾನಿ; ಸೂಕ್ಷ್ಮ ಮನಸ್ಸಿನವಳು.

**ಅಭಿನಂದ :** ಭಯ ಯಾಕೆ ಗೆಳೆಯ. ಇಂತಹ ಅವಕಾಶ ಮೊದಲ ಬಾರಿಗೆ ದೊರೆಯಲಿದೆ. ಇದರಲ್ಲಿ ಅವಳು ಗೆದ್ದರೆ, ಅವಳ ಭವಿಷ್ಯವೇ ಬೇರೆಯಾಗುತ್ತದೆ. ವಜ್ಜಿ ರಾಷ್ಟ್ರದ ಸರ್ವಶ್ರೇಷ್ಠ ಸುಂದರಿ! ಅನಂಗ ಪೂಜೆಯ ಗೌರವ! ಪದೇ ಪದೇ ಬರುವುದೇನು? ಎಲ್ಲರಿಗೂ ಲಭ್ಯವಾಗುವುದೇನು?

**ಮಣಿಕಂಠ :** ಇದೇನು ಗೆಳೆಯ, ಆಗಲೇ ಅವಳು ಆಯ್ಕೆ ಆಗಿಹೋದಂತೆ ಮಾತನಾಡುತ್ತಿರುವೆ.

**ಅಭಿನಂದ :** ನನ್ನ ಸೋದರಿಯ ಬಗ್ಗೆ ನನಗೆ ಭರವಸೆ ಇದೆ. ಅವಳನ್ನು ಮೀರಿಸುವ ಸೌಂದರ್ಯ ಯಾರಿಗೂ ಸಾಧ್ಯವಿಲ್ಲ. ಆದ್ದರಿಂದ ಅವಳಿಗೆ ಸೋಲೆಂಬುದೇ ಇಲ್ಲ.

**ಮಣಿಕಂಠ :** ಆದರೂ ಅವಕಾಶಗಳ ಭರವಸೆ ಏನು? ನಿನ್ನ ಅಭಿಮಾನವೇ ಅವಳ ವಿಚಾರದಲ್ಲಿ ಹೀಗೆ ಮಾತನ್ನು ಹೇಳಿಸುತ್ತದೆ. ಆದರೆ ಇದರ ಇನ್ನೊಂದು ಸಾಧ್ಯತೆಯನ್ನು ಯೋಚಿಸಿ ಸಿದ್ಧವಾಗಿರಬೇಕಲ್ಲವೇ? ಅವಳಿಗೆ ಸೋಲುಂಟಾದರೆ ಮಾತ್ರ ಅವಳು ಸಹಿಸುವವಳಲ್ಲ.

**ಅಭಿನಂದ :** ಅಂತಹ ಅನುಮಾನವೇ ಬೇಡ. ಮಗಧದ ಮಂತ್ರಿಗಳು ತಂಗಿ ಸಾಲವತಿಯನ್ನು ನೋಡಿ ಏನು ಉದ್ಗರಿಸಿದರು! ನೆನಪಿದೆಯೇನು?... ನನಗೆ ಪೂರ್ಣ ಭರವಸೆ ಇದೆ. ವಜ್ಜಿ ಸಂಘದ ಗೌರವ. ಪ್ರತಿಷ್ಠೆಗಳನ್ನು ಉಳಿಸಿಯೇ ಉಳಿಸುತ್ತಾಳೆ. ನನಗಿಷ್ಟೂ ಸಂದೇಹವಿಲ್ಲ.

**ಮಣಿಕಂಠ :** (ಅನುಮಾನದಿಂದ) ಗೆಳೆಯರೇ, ನನಗ್ಯಾಕೋ ಮಗಧದ ಮಹಾಮಂತ್ರಿಗಳ ಬರುವು ವಿಚಿತ್ರ ಮತ್ತು ಸಂದೇಹಾಸ್ಪದವಾಗಿದೆ. ವಜ್ಜಿಯ ಒಳಿತಿಗಿಂತ ಕೆಡುಕೇ ಅವರ ಆಗಮನದ ಪರಿಣಾಮವಾಗಬಹುದೇನೋ ಎನಿಸುತ್ತಿದೆ.

**ಆನಂದ :** ಮಣಿಕಂಠ, ನಿನಗೆ ಯಾವಾಗಲೂ ಏನಾದರೂ ಸಂದೇಹವಿದ್ದೇ ಇರುವುದು. ನಿನ್ನ ಸಂದೇಹಗಳಿಗೂ ಪ್ರಸ್ತುತ ನಾವು ಮಾಡಬೇಕಾದ ಕೆಲಸಕ್ಕೂ ಸಂಬಂಧವಿಲ್ಲ. ತಿಳಿಯಿತೇ? ಜೊತೆಗೆ ನಾವು ನಿಯತಿವಾದಿಗಳು. ಆಗಬೇಕಾದ್ದು ಆಗಿಯೇ ಆಗುತ್ತದೆ. ಅದನ್ನು ನಿವಾರಿಸಲು ಯಾರಿಂದಲೂ ಸಾಧ್ಯವಿಲ್ಲ.

**ಅಭಿನಂದ :** ಗೆಳೆಯರೇ ನಿಮ್ಮ ಚರ್ಚೆಯನ್ನು ಇಲ್ಲಿಗೇ ಮುಗಿಸಿ. ಇನ್ನು ತಡಮಾಡುವುದು ಬೇಡ. ಆನಂದ ಸ್ವಲ್ಪ ಬಾಗಿಲು ತಟ್ಟಿ ಸೋದರಿಯನ್ನು ಎಚ್ಚರಿಸು. ಬಹಳ ಮೈಮರೆತಿರುವಂತಿದೆ.

(ಆನಂದ ಬಾಗಿಲು ತಟ್ಟುವನು. ಒಳಗಿನಿಂದ 'ಯಾರು'? ಎಂಬ ದನಿ ಕೇಳಿ ಬರುತ್ತದೆ.)

**ಆನಂದ :** ತಂಗಿ ಸಾಲವತಿ, ನಾವು ನಿನ್ನ ಅಣ್ಣಂದಿರು

**ಸಾಲವತಿ :** ಬಂದೆ. (ಎನ್ನುತ್ತಾ ಬಂದು ಬಾಗಿಲು ತೆಗೆದು ಆನಂದ ಮತ್ತು ಇತರರನ್ನು ನೋಡಿ ಸಂಭ್ರಮಾಶ್ಚರ್ಯಗಳಿಂದ) ಓ... ನೀವು.... ನನ್ನ ಪ್ರೀತಿಯ

ಅಣ್ಣಂದಿರು.... ಬನ್ನಿ.... ಬನ್ನಿ... ಒಳಗೆ ಬನ್ನಿ. ಇವತ್ತಿಗೆ ನನ್ನ ಕುಟೀರ ಪಾವನವಾಯಿತು.

**ಅಭಿನಂದ :** ತಂಗಿ ಒಳಗೆ ಬರಲು ಬಿಡುವಿಲ್ಲ. ಕ್ಷಮಿಸು. ನಾವೊಂದು ರಾಜಕಾರ್ಯದ ಮೇಲೆ ಬಂದಿರುವೆವು. ನಿನ್ನ ಮೇಲೆ ನಮ್ಮ ಆಸೆ ಭರವಸೆಗಳು ನಿಂತಿವೆ. ನಮ್ಮ ಕೋರಿಕೆಯನ್ನು ಮನ್ನಿಸುವಿಯೆಂದು ಭಾವಿಸುತ್ತೇನೆ.

**ಸಾಲವತಿ :** ಅಣ್ಣಂದಿರೇ, ನನ್ನ ಮೇಲಿನ ಆಸೆ ಭರವಸೆಗಳಿಗೆ ನಾನು ಕೃತಜ್ಞಳು. ಆದರೆ ಮೊದಲು ವಿಷಯವೇನೆಂದು ತಿಳಿಸಿ. ನನ್ನಿಂದ ಸಾಧ್ಯವಾದರೆ ಖಂಡಿತ ಮಾಡುತ್ತೇನೆ.

**ಆನಂದ :** ಅಷ್ಟು ಸಾಕು.... ಅಭಿನಂದ ನಾವು ಬಂದ ಕಾರಣ ಏನೂಂತ ಸಾಲವತಿಗೆ ಹೇಳು.

**ಅಭಿನಂದ :** ಆನಂದ ನೀನೇ ಸರಿಯಾಗಿ ವಿವರಿಸಿ ತಿಳಿಸು.

**ಆನಂದ :** ಏನಿಲ್ಲ ತಂಗಿ.... ಬಹುಶಃ ನಿನ್ನ ಕಿವಿಗೂ ಬಿದ್ದಿರುವ ಸಾಧ್ಯತೆ ಇದೆ. ಈ ಬಾರಿಯ ವಸಂತೋತ್ಸವದಲ್ಲಿನ ಅನಂಗ ಪೂಜೆಗೆ ವೈಶಾಲಿಯ ಸರ್ವಶ್ರೇಷ್ಠ ಸುಂದರಿಯನ್ನು ಆಯ್ಕೆ ಮಾಡಲಿದ್ದಾರೆ. ಆದ್ದರಿಂದ ವೈಶಾಲಿಯ ಯುವತಿಯರನ್ನು ಸೌಂದರ್ಯ ಸ್ಪರ್ಧೆಗೆ ಆಹ್ವಾನಿಸಿದ್ದಾರೆ.

**ಸಾಲವತಿ :** (ಮಾತನ್ನು ಅಲ್ಲಿಗೇ ಕತ್ತರಿಸಿ) ಅದಕ್ಕೆ ನಾನೇನು ಮಾಡಬೇಕು. ಸ್ಪರ್ಧೆಗೂ ನನಗೂ ಸಂಬಂಧವೇನಿದೆ ಅಣ್ಣಂದಿರೇ?

**ಆನಂದ :** ತಂಗಿ ನೀನೂ ಆ ಸ್ಪರ್ಧೆಯಲ್ಲಿ ಭಗವಹಿಸಬೇಕು.

**ಸಾಲವತಿ :** (ಅನುಮಾನ, ಆಶ್ಚರ್ಯಗಳಿಂದ) ಏನು! ನಾನು ಭಾಗವಹಿಸುವುದೇ?...... ಇನ್ನೊಬ್ಬರ ಮುಂದೆ ನನ್ನನ್ನು ಪ್ರದರ್ಶನಕ್ಕಿರಿಸಿಕೊಳ್ಳುವುದೇ?... ಸಾಧ್ಯವಿಲ್ಲ.... ಖಂಡಿತ ಸಾದ್ಯವಿಲ್ಲ..... ದಯವಿಟ್ಟು ನನ್ನನ್ನು ಕ್ಷಮಿಸಿ.

**ಅಭಿನಂದ :** ತಂಗಿ ಇದರಲ್ಲಿ ಅವಮಾನದ ಪ್ರಶ್ನೆಗಿಂತ ಮಾನದ ಪ್ರಶ್ನೆಯೇ ಹೆಚ್ಚಾಗಿದೆ. ವೈಸಾಲಿಯ ಸುಂದರ ಯುವತಿಯರ ಸುಂದರ ಸಮಾವೇಶ! ಪ್ರಜೆಗಳೇ ತಮ್ಮ ರಾಷ್ಟ್ರದ ಸರ್ವಶ್ರೇಷ್ಠ ಸುಂದರಿಯನ್ನು ಆಯ್ಕೆ ಮಾಡುತ್ತಾರೆ. ವಜ್ಜಿ ಸಂಘ ಸಿರಿ, ಸಂಪತ್ತು, ಆದರ್ಶಗಳಿಗೇ ಅಲ್ಲ, ಅಮೂಲ್ಯ ಸ್ತ್ರೀರತ್ನಗಳೂ ಅಲ್ಲಿವೆ ಎಂಬುದು ವಿದಿತವಾಗಬೇಕು. ಮಗಧದ ಪರಿಚಯ, ಗುರುತುಗಳು ಅಂಬಾಪಾಲಿಯ ಹೆಸರಿನಿಂದಾಗುತ್ತಿದೆ. ಅಂಬಾಪಾಲಿಯ ಅದ್ಭುತ ಸೌಂದರ್ಯವೇ ಮಗಧದ ಪ್ರತಿಷ್ಠೆಯಾಗಿದೆ. ಮಗಧದ ಮಕುಟಮಣಿಯಂತಿದ್ದಾಳೆ. ವೈಶಾಲಿಯಲ್ಲಿ ಯಾವುದಕ್ಕೂ

ಕೊರತೆಯಿಲ್ಲ. ಅಂಬಾಪಾಲಿಯನ್ನೂ ಮೀರಿಸಬಲ್ಲ ಸೌಂದರ್ಯ ರತ್ನವು ವೈಶಾಲಿಯಲ್ಲಿದೆ ಎಂದಾಗಬೇಕು.

**ಸಾಲವತಿ :** ಅಂದರೆ?... ನಾನೂ ಅಂಬಾಪಾಲಿಯಂತೆ ವೇಶ್ಯೆಯಾಗಿ, ನಗರವಧುವಾಗಿ ಚಲಾವಣೆಯಾಗಬೇಕೆ? ನನ್ನ ಮಾನಾಭಿಮಾನಗಳು ಏನಾಗಬೇಕು?

**ಅಭಿನಂದ :** ತಂಗಿ.... ತಂಗಿ. ನೀನು ತಪ್ಪು ತಿಳಿಯುತ್ತಿರುವಿ. ಸರ್ವಶ್ರೇಷ್ಠ ಸುಂದರಿಯೆಂದಾಯ್ಕೆ ಆಗುವುದು ವ್ಯಕ್ತಿಯ, ಸಮಾಜದ, ರಾಷ್ಟ್ರದ ಪ್ರತಿಷ್ಠೆ, ಗೌರವರ ಪ್ರತೀಕ! ಅವಳ ಮಾನಹಾನಿ, ಅಭಿಮಾನ ಹಾನಿಯಾಗುವುದಕ್ಕೆ ಖಂಡಿತ ಅವಕಾಶವಿಲ್ಲ. ನಾವು ಅಂತಹುದಕ್ಕೆ ಅವಕಾಶ ಕೊಡುವುದಿಲ್ಲ. ಅನಂಗ ಪೂಜೆಯ ಅಧಿಕಾರ ಸಾಮಾನ್ಯವಾದ್ದಲ್ಲ! ರಾಜಕುಲದ ಹಕ್ಕು. ಅದು ಈಗ ಗಣತಂತ್ರ ರಾಷ್ಟ್ರದಲ್ಲಿ ಒಬ್ಬ ಸಾಮಾನ್ಯ ಪ್ರಜೆಗೆ ರವಾನೆಯಾಗುತ್ತಿರುವುದು ಹೆಮ್ಮೆಯ ವಿಷಯವಲ್ಲವೇ?.... ನೀನೇ ಹೇಳು. ನಾವು ನಿನ್ನ ಶ್ರೇಯೋಭಿಲಾಷಿಗಳು. ಮಗಧದ ಅಂಬಾಪಾಲಿಯನ್ನು ಮೀರಿರುವ ಸೌಂದರ್ಯ ನಿಧಿ ನಮ್ಮಲ್ಲಿರುವಾಗ ನಾವೇಕೆ ಅದನ್ನು ಬಿಟ್ಟುಕೊಡಬೇಕು? ನೀನೇ ಹೇಳು ನಿನ್ನ ಬುದ್ಧಿ ಚಾತುರ್ಯ, ಚಮತ್ಕಾರಗಳಿಗೆ ಕಿರೀಟವಿಟ್ಟಂತಿರುವ ನಿನ್ನ ಸೌಂದರ್ಯ ವೃಥಾ ಹಾಳಾಗಬಾರದು' ಕಾಡಿನ ಬೆಳ್ದಿಂಗಳಾಗಬಾರದು.

**ಆನಂದ :** ಅಲ್ಲದೆ, ನಿನ್ನ ಭವಿಷ್ಯವೇ ಬದಲಾಗುತ್ತದೆ. ಈ ಅನಾಥತೆ, ಅಸಹಾಯಕತೆ, ದಾರಿದ್ರ್ಯಗಳಿಂದ ಮುಕ್ತಿ ದೊರೆತು, ಸಮಾಜದಲ್ಲಿ ನಿನಗೂ ಒಂದು ಪ್ರತಿಷ್ಠಿತ ಸ್ಥಾನ ಏರ್ಪಡುತ್ತದೆ.

**ಸಾಲವತಿ :** (ಸ್ವಲ್ಪ ಹೊತ್ತು ಮೌನವಾಗಿದ್ದು) ನೀವು ಹೇಳುವುದೆಲ್ಲ ಸರಿಯೆ. ಆದರೆ ಇದರಿಂದ ನಿಮ್ಮ ಅನುಗ್ರಹಕ್ಕೆ ಒಳಗಾದಂತೆ ಆಗುವುದಿಲ್ಲವೇ? ನನಗೆ ಯಾರ ಅನುಗ್ರಹದ ಹಂಗೂ ಒಪ್ಪಿಗೆಯಾಗುವುದಿಲ್ಲ.

**ಆನಂದ :** ಇದರಲ್ಲಿ ನಮ್ಮ ಅನುಗ್ರಹವೇನಿದೆ ತಂಗಿ? ನಾವೇ ನಿನ್ನ ಅನುಗ್ರಹದ ಋಣಿಗಳಾಗುತ್ತೇವೆ. ಅದೂ ನಮ್ಮ ಕೋರಿಕೆಯನ್ನು ಮನ್ನಿಸುವುದಾದರೆ?...

**ಸಾಲವತಿ :** (ನಿಟ್ಟುಸಿರು ಬಿಟ್ಟು) ಹೂಂ! ಹಾಗಾದರೆ ನಾನು ಇದಕ್ಕೆ ಒಪ್ಪಲೇಬೇಕೇನು?

**ಅಭಿನಂದ :** ತಂಗಿ ಒಂದು ಮಾತನ್ನು ನೀನು ಸ್ಪಷ್ಟವಾಗಿ ಗ್ರಹಿಸಬೇಕು. ವಜ್ಜಿ ಸಂಘದ ಪ್ರತಿಷ್ಠೆಯನ್ನು ಹಿಡಿದಿಡಲು ಮಾತ್ರ ನಿನ್ನನ್ನು ಇದಕ್ಕಾಗಿ ಒತ್ತಾಯಿಸುತ್ತಿದ್ದೇವೆ. ಇಷ್ಟಲ್ಲದೆ ಇದರಲ್ಲಿ ನಮ್ಮ ಸ್ವಾರ್ಥವೇನೂ ಇಲ್ಲ. ನಮ್ಮ ಬಲವಂತದ ಹಿಂದಿನ ಮನಸ್ಸನ್ನು, ಉದ್ದೇಶವನ್ನು ನೀನು ಅರ್ಥಮಾಡಿಕೊಳ್ಳಬೇಕು. ನಿನ್ನ ಅಭ್ಯುದಯವೇ ನಮ್ಮ ಸಂತೋಷ!

**ಸಾಲವತಿ** : ಅಣ್ಣಂದಿರೆ ನಾನು ನಿಮ್ಮನ್ನು ನೋಯಿಸಬೇಕೆಂದಾಗಲೀ ನಿಮ್ಮನ್ನು ಅನುಮಾನಿಸಬೇಕೆಂದಾಗಲಿ ಉದ್ದೇಶಿಸಲಿಲ್ಲ. ಆದರೆ ಇದರ ಪರಿಣಾಮಗಳು ಹೇಗ ರೂಪುಗೊಳ್ಳುತ್ತವೆಯೋ ಎಂಬ ಭೀತಿಯೊಂದು ನನ್ನ ಮನಸ್ಸಿನಲ್ಲಿ ಮುಳ್ಳಾಡಿಸಿದೆ. ಅಸ್ಪಷ್ಟ ಅನಿರ್ದಿಷ್ಟ ಭವಿಷ್ಯದ ಕಲ್ಪನೆಯಿಂದಲೇ ನನಗೆ ನಡುಕವುಂಟಾಗಿದೆ!

**ಆನಂದ** : ತಂಗಿ ನಿನ್ನ ಪಾಲಿಗೆ ನಾವೆಲ್ಲ ಇಲ್ಲವೇ? ಅಂದೆ ನಿನ್ನನ್ನು ತಂಗಿಯೆಂದು ಒಪ್ಪಿಕೊಂಡಿರುವಾಗ ನಿನ್ನ ಭವಿಷ್ಯವು ಚೆಲ್ಲಾಪಿಲ್ಲಿಯಾಗಲು ಬಿಡುತ್ತೇವೆಯೇ?

**ಸಾಲವತಿ** : ನನಗೆ ನಿಮ್ಮಿಂದ ಆ ಭರವಸೆ ಇದೆ... ಆಯಿತು ನಿಮ್ಮಿಚ್ಛೆಯಂತೆಯೇ ನಡೆಯುತ್ತೇನೆ. ನನ್ನ ಭವಿಷ್ಯ ನಿಮಗೆ ಸೇರಿದ್ದು; ಆ ದೇವರಿಗೇ ಸೇರಿದ್ದು..... ಈಗ ಸಮಾಧಾನವಾಯಿತೇ?.... ಈಗಲೇ ನಿಮ್ಮೊಟ್ಟಿಗೆ ಹೊರಡಬೇಕೇನು?

**ಅಭಿನಂದ** : ಇಲ್ಲ. ಇನ್ನೊಂದೆರಡು ಗಂಟೆಗಳಲ್ಲಿ ಮಣಿಕಂಠ ರಥವನ್ನು ತರುತ್ತಾನೆ. ನಾವೀಗ ಹೊರಡುತ್ತೇವೆ. ನೀನೂ ಸಿದ್ಧವಾಗಿರು. ಹಾಗೆಯೇ ಜೊತೆಗೊಂದಷ್ಟು ಅಲಂಕಾರ ಸಾಮಗ್ರಿಗಳನ್ನು ಇರಿಸಿಕೊ.

**ಸಾಲವತಿ** : ಪ್ರಸಾದನಗಳಿಂದ ನನ್ನ ಸೌಂದರ್ಯವನ್ನು ಹೆಚ್ಚಿಸಿಕೊಳ್ಳಬೇಕಾದ್ದಿಲ್ಲ. ನನ್ನ ಸಹಜತೆಯೊಳಗೇ ನಾನೆಷ್ಟು ಸುಂದರಿ ಎಂಬುದನ್ನು ಪರೀಕ್ಷಿಸಿಕೊಳ್ಳಬೇಕೆಂದಿದ್ದೇನೆ. ಅಲ್ಲದೆ ನಿಮ್ಮ ನಂಬಿಕೆಗಳು ಎಷ್ಟು ಸತ್ಯವೋ, ಎಷ್ಟು ಪ್ರಬಲವೋ ಎಂಬುದರ ಪರೀಕ್ಷೆಯೂ ಆಗಬೇಕಾಗಿದೆ.

**ಆನಂದ** : ಭಲೆ ತಂಗಿ! ಭಲೆ! ನಿನ್ನ ಆಲೋಚನೆ, ನಿನ್ನ ನಂಬಿಕೆ ಅದ್ಭುತವಾ[illegible]ವೆ... ನಿನ್ನಿಷ್ಟದಂತೆಯೇ ಬಾ... ನಾವಿನ್ನು ಬರುತ್ತೇವೆ.

(ಮೂವರು ಹೋಗುವರು. ಅವರು ಹೋದ ದಾರಿಯನ್ನೇ ದಿಟ್ಟಿಸುತ್ತ ತನ್ನೊಳಗೆ ತನೇ ಮಾತನಾಡಿಕೊಳ್ಳುತ್ತಾಳೆ)

**ಸಾಲವತಿ** : (ವ್ಯಂಗ್ಯ) ಆ ಹಾ ಹ! ಭುವನ ಸುಂದರಿ! ವೈಶಾಲಿಯ ಸರ್ವಶ್ರೇಷ್ಠ ಸುಂದರಿ!!...... (ಮೌನ) ಹೌದು! ಹೌದು! ಸರ್ವಶ್ರೇಷ್ಠ ಸುಂದರಿ!.... ಯಾಕಾಗಬಾರದು? ....ನಾನು ಸೌಂದರ್ಯ ರಾಣಿಯಾಗಿ ಅಭಿಷಿಕ್ತಳಾಗಲೇಬೇಕು.... ವೈಶಾಲಿಯ ಪ್ರತಿಷ್ಠಿತರು ಮೊದಲುಗೊಂಡು ಎಲ್ಲರೂ ಕರುಬುವಂತಾಗಬೇಕು. ಎಲ್ಲರಿಗಿಂತ ಶ್ರೀಮಂತಳಾಗಬೇಕು. ಹಣ..... ಹಣ.... ಹಣದ ಕೋಡಿ ಹರಿದು ಬರಬೇಕು. ಅಪಾರ ಹಣ ಗಳಿಸಬೇಕು.... ಹಣವಿದ್ದರೆ..... ಹಣವಿದ್ದರೆ ಏನೆಲ್ಲ ಗಳಿಸಬಹುದು..... ತಂದೆ ಹೇಳುತ್ತಿದ್ದರು. ಅವರ ಆಸೆ ಪೂರೈಸಬೇಕು.....ನಿಜ.... ನಿಜ....

ನನ್ನ ಭವಿಷ್ಯವನ್ನು ಉಜ್ವಲವಾಗಿ ರೂಪಿಸಿಕೊಳ್ಳುವುದಕ್ಕೆ ಇದು ಒಳ್ಳೆಯ ಅವಕಾಶ!! ರಾಜ ಮರ್ಯಾದೆ, ಕೀರ್ತಿ, ಹಣ.... ಎಲ್ಲವೂ ನನ್ನದಾಗುವುದಲ್ಲವೇ!?...... ಹುಂ! (ನಕ್ಕು) ಈ ಕುಲಪುತ್ರರ ಹುಚ್ಚು!...... ನಾನೇಕೆ ಬೇಡವೆನ್ನಲಿ?..... ನೋಡೋಣ ಈ ಹೆಜ್ಜೆಗಳು ಯಾವ ತಿರುವಿನತ್ತ ಒಯ್ದು ನಿಲ್ಲಿಸುವುದೋ, ಕಾದು ನೋಡೋಣ. ಆಗಬೇಕಾದ್ದು ಆಗಿಯೇ ಆಗುತ್ತದೆ..... (ಒಳಹೋಗುವಳು)

OO

# ದೃಶ್ಯ - ೫

(ರಾಜಾಂಗಣ, ಮಹಾರಾಜರು ವೇದಿಕೆಯ ಮೇಲೆ ಎತ್ತರದಲ್ಲಿ ಕುಳಿತಿದ್ದಾರೆ. ಅವರ ಎರಡೂ ಬದಿಗಳಲ್ಲಿ ಉಪರಾಜರು, ಮಗಧದ ಮಂತ್ರಿಗಳು ಕುಳಿತಿದ್ದಾರೆ. ಸೇವಕರು ಚಾಮರ ಹಾಕುತ್ತಿದ್ದಾರೆ. ಕೆಳಗೆ ಅಂಗಳದಲ್ಲಿ ಸುತ್ತಲೂ ಪ್ರಜೆಗಳು ನಿಂತಿದ್ದಾರೆ. ಒಬ್ಬೊಬ್ಬರಾಗಿ ಸುಂದರ ಯುವತಿಯರು ಪ್ರವೇಶಿಸಿ ಮಹಾರಾಜರಿಗೆ, ರಾಜಪ್ರತಿಷ್ಠಿತರಿಗೆ ವಂದಿಸಿ ಒಂದು ಬದಿಗೆ ಹೋಗಿ ಅವರಿಗಾಗಿ ಮೀಸಲಿರುವ ಆಸನಗಳ್ಲಿ ಕುಳಿತುಕೊಳ್ಳುತ್ತಾರೆ. ಮಣಿಕಂಠ ಮತ್ತು ಇತರರ ಬೆಂಗಾವಿನಲ್ಲಿ ಸಾಲವತಿ ಪ್ರವೇಶಿಸುತ್ತಾಳೆ. ಅವಳ ಪ್ರವೇಶವಾಗುತ್ತಿದ್ದಂತೆಯೇ ಒಂದು ಕ್ಷಣ ಸ್ತಬ್ಧತೆ ವ್ಯಾಪಿಸುತ್ತದೆ. ನಂತರ ನಿಧಾನವಾಗಿ ಗುಜು ಗುಜು ಪ್ರಾರಂಭವಾಗುತ್ತದೆ. ಉಳಿದವರಂತೆಯೇ ಸಾಲವತಿಯೂ ರಾಜರಿಗೆ ರಾಜಪ್ರತಿಷ್ಠಿತರಿಗೆ ಅಭಿವಂದಿಸುತ್ತಾಳೆ.)

**ಪ್ರಭುಗಳು :** (ಸ್ವಗತ) ಅಬ್ಬ! ದೇವಲೋಕದ ಅಪ್ಸರೆಯೇ ಭೂಮಿಗೆ ಇಳಿದು ಬಂದಂತಿದೆ. (ಪ್ರಕಟ) ಕುಲಪುತ್ರರೇ, ಈ ಅನರ್ಘ್ಯ ರತ್ನವನ್ನು ಯಾವ ಖನಿಯಿಂದ ಶೋಧಿಸಿ ತಂದಿರಿ?

**ಅಭಿನಂದ :** ಪ್ರಭು ಈ ರತ್ನ ಎಲ್ಲಿಯದೂ ಅಲ್ಲ, ಇಲ್ಲಿಯದೇ! ಯಾರ ಕಣ್ಣಿಗೂ ಬೀಳದೆ ವೈಶಲಿಯ ಮೂಲೆಯೊಂದರಲ್ಲಿ ಮರೆಯಾಗಿ ಅಡಗಿದ್ದ ಗುಪ್ತನಿಧಿ, ಸಾಲವನದ ಶಾಂತಿ ಕುಟೀರದ ಒಡತಿ. ನಮ್ಮಂತಹ ಕುಲಪುತ್ರರಾದ ಧವಳಯಶರ ಏಕಮಾತ್ರ ಪುತ್ರಿ ಕುಮಾರಿ ಸಾಲವತಿ.

**ಪ್ರಭುಗಳು :** ಇಂತಹ ಅಮೂಲ್ಯ ನಿಧಿ, ಅನರ್ಘ್ಯ ರತ್ನ, ಸೌಂದರ್ಯ ರಾಶಿಯಾದ ಈ ಹೆಣ್ಣು ಇನ್ನೂ ಅವಿವಾಹಿತಳೇ? ಕುಲಪುತ್ರರ ದೃಷ್ಟಿಯಿಂದ ಹೇಗೆ ತಪ್ಪಿಸಿಕೊಳ್ಳಲು ಸಾಧ್ಯವಾಯಿತು? ಆಶ್ಚರ್ಯ! ಆಶ್ಚರ್ಯ!...... (ಮೌನ) ಸರಿ. ಈಗ ಸರ್ವಶ್ರೇಷ್ಠ ಸುಂದರಿ ಯಾರೆಂಬುದು ತೀರ್ಮಾನವಾಗಲಿ. (ಪ್ರಜೆಗಳನ್ನುದ್ದೇಶಿಸಿ) ಪ್ರಜಾಬಂಧುಗಳೇ, ರಾಜ ಪ್ರಮುಖರೇ, ನಿಮ್ಮ ಮುಂದೆ ವೈಶಾಲಿಯ ಸುಂದರ ಯುವತಿಯರಿದ್ದಾರೆ. ಅವರಲ್ಲಿ ಸರ್ವಶ್ರೇಷ್ಠ

ಸುಂದರಿಯಾಗಿ ಒಬ್ಬರನ್ನು ಘೋಷಿಸಿ, ಆಯ್ಕೆ ಮಾಡಬೇಕಾದ ಹೊಣೆ ನಿಮ್ಮೆಲ್ಲರದಾಗಿದೆ. ಇದಕ್ಕೆ ಪ್ರತ್ಯೇಕವಾಗಿ ತೀರ್ಪುಗಾರರಿಲ್ಲ. ಪ್ರಜಾಭಿಪ್ರಾಯಕ್ಕೆ ಪುರಸ್ಕಾರ; ಮಾನ್ಯತೆ. ಆದ್ದರಿಂದ ಪ್ರಜಾ ತಂತ್ರದಲ್ಲಿ ಪ್ರಜೆಗಳೇ ನಿರ್ಣಾಯಕರು. ತಾವೆಲ್ಲರೂ ತಮ್ಮಭಿಪ್ರಾಯವನ್ನು ತಿಳಿಸಬೇಕೆಂದು ನಮ್ಮ ಸವಿನಯ ಪ್ರಾರ್ಥನೆ.

**ಗಣಶ್ರೇಷ್ಠರು:** ಪ್ರಭುಗಳ ತರ್ಕಬದ್ಧ ವಿಚಾರಗಳು ಪ್ರಜಾಸತ್ತಾತ್ಮಕವಾದದ್ದು. ಈ ಗಣ ರಾಷ್ಟ್ರದಲ್ಲಿ ಪ್ರಜಾಸ್ವಾತಂತ್ರ್ಯ, ಪ್ರಜಾಭಿಪ್ರಾಯಗಳಿಗೇ ಮೊದಲ ಸ್ಥಾನ. ಅವರ ಅಭಿಪ್ರಾಯದಂತೆ ಪ್ರಜೆಗಳೇ ಸರ್ವಶ್ರೇಷ್ಠ ಸುಂದರಿ ಯಾರೆಂಬುದನ್ನು ತೀರ್ಮಾನಿಸಲಿ.

**ಪ್ರಭುಗಳು :** ಹೇಳಿ ಬಂಧುಗಳೆ. ಸರ್ವಶ್ರೇಷ್ಠ ಸುಂದರಿ ಯಾರೆಂದು ನಿಮ್ಮ ಅಭಿಪ್ರಾಯ?

**ಪ್ರಜೆಗಳು :** (ಒಕ್ಕೊರಲಿನಿಂದ) ಕುಮಾರಿ ಸಾಲವತಿ. ಧವಳಯಶರ ಪುತ್ರಿ. ಆಕೆಯೇ ವಜ್ಜಿ ರಾಷ್ಟ್ರದ ಸರ್ವಶ್ರೇಷ್ಠ ಸುಂದರಿ! ಸರ್ವಶ್ರೇಷ್ಠ ಸುಂದರಿ! ಸಾಲವತಿಗೆ ಜಯವಾಗಲಿ! ಸಾಲವತಿಗೆ ಜಯವಾಗಲಿ!!

**ಪ್ರಭುಗಳು :** ಈ ಅಭಿಪ್ರಾಯಕ್ಕೆ ವಿರೋಧವಿದ್ದವರು ಧೈರ್ಯದಿಂದ ಮುಂದೆ ಬನ್ನಿ. ಬೇರೆಯವರ ಹೆಸರನ್ನು ಸೂಚಿಸಿ.

**ಪ್ರಜೆಗಳು :** (ಮತ್ತೆ ಎತ್ತರದ ದನಿಯಲ್ಲಿ) ಇಲ್ಲ! ಇಲ್ಲ! ನಮ್ಮ ಅಭಿಪ್ರಾಯಕ್ಕೆ ಎರಡಿಲ್ಲ. ಸಾಲವತಿಯೇ ಸೌಂದರ್ಯರಾಣಿ. ನಮ್ಮೆಲ್ಲರ ಸರ್ವಾನುಮತದಿಂದ ಆಕೆಯೇ ಸರ್ವಶ್ರೇಷ್ಠ ಸುಂದರಿ! ಅನಂಗ ಪೂಜೆಯ ಅಧಿಕಾರಿಣಿ! ವಜ್ಜಿ ರಾಷ್ಟ್ರದ ಹಿರಿಮೆ! ಗೌರವದ ಪ್ರತೀಕ!!

**ಪ್ರಭುಗಳು :** ಪ್ರೀತಿಯ ಪ್ರಜೆಗಳೇ ನಮ್ಮ ಮನೋಭಿಪ್ರಾಯಕ್ಕೆ ನೀವು ದನಿಕೊಟ್ಟಿರಿ. ನಿಮಗೆಲ್ಲರಿಗೂ ನನ್ನ ಕೃತಜ್ಞತೆಗಳು.

**ಅಭಯಕುಮಾರ:** (ಕೈ ತಟ್ಟಿ) ಯಾರಲ್ಲಿ?...... ಸರ್ವಶ್ರೇಷ್ಠ ಸುಂದರಿಗೆ ರಾಜ ಸನ್ಮಾನ ಆರಂಭವಾಗಲಿ. (ಎಂದು ಸೇವಕನೊಬ್ಬನಿಗೆ ಹೇಳಲು ಆತ ಕೂಡಲೇ ವಂದಿಸಿ ಮರೆಯುತ್ತಾನೆ. ಮತ್ತೆರಡು ಕ್ಷಣಗಳಲ್ಲಿ ಸೇವಕಿಯರ ಕೈಯಲ್ಲಿ ಕಾಣಿಕೆಯ ತಟ್ಟೆಗಳನ್ನು ಹೊರಿಸಿಕೊಂಡು ಮಹಾರಾಣಿಯು ಪ್ರವೇಶಿಸುತ್ತಾಳೆ. ಮಹಾರಾಣಿ ವಸ್ತ್ರ ಹೊದಿಸಿ, ಕಿರೀಟ ತೊಡಿಸಿ ಬೆಲೆಬಾಳುವ ವಡವೆ, ವಸ್ತ್ರಗಳಿದ್ದ ಹರಿವಾಣಗಳನ್ನು ಸಾಲವತಿಗೆ ಅರ್ಪಿಸುತ್ತಾಳೆ. ಸಾಲವತಿಯನ್ನು ಕೈ ಹಿಡಿದು ನಡೆಸಿಕೊಂಡು ಬಂದು ವಿಶೇಷವಾಗಿ ಅಲಂಕೃತವಾಗಿದ್ದ ಆಸನದ ಮೇಲೆ ಕೂರಿಸುತ್ತಾಳೆ. ಪ್ರಜೆಗಳೆಲ್ಲ ಜಯಘೋಷ ಮಾಡುತ್ತ ಚಪ್ಪಾಳೆ ತಟ್ಟಿ ತಮ್ಮ ಹರ್ಷವನ್ನು ಸೂಚಿಸುತ್ತಾರೆ.) (ಮಾತು ಮುಂದುವರಿಯುತ್ತದೆ) ಪ್ರಭುಗಳು ಈ ಸಂತೋಷ ಸಮಯದಲ್ಲಿ ನನ್ನದೊಂದು ಸವಿನಯ ಪ್ರಾರ್ಥನೆಯನ್ನು ನಡೆಸಿಕೊಡಬೇಕೆಂದು....

**ಪ್ರಭುಗಳು :** ಅಭಯಕುಮಾರರೇ, ಸಂಕೋಚವೇಕೆ? ನಿಮ್ಮ ಮನಸ್ಸಿನಲ್ಲಿ ಇರುವುದನ್ನು ಧೈರ್ಯವಾಗಿ ಹೇಳಿ. ನಮಗೆ ಸಾಧ್ಯವಾದರೆ ಖಂಡಿತವಾಗಿಯೂ ನಡೆಸಿಕೊಡುತ್ತೇವೆ. ಬಹುಮಾನ ಬೇಕೆ? ಪದವಿಯಲ್ಲಿ ಬಡ್ತಿ ಬೇಕೇ?

**ಅಭಯಕುಮಾರ:** ಪ್ರಭುಗಳು ಮನ್ನಿಸಬೇಕು. ನನಗೆ ಅವುಗಳ ಅಗತ್ಯವಿಲ್ಲ. ನಿಮ್ಮ ಪ್ರೀತಿ, ವಿಶ್ವಾಸಗಳಿರುವಾಗ. ನಮ್ಮ ಬೇಡಿಕೆಗಳು ಇಲ್ಲದೆಯೇ ನಮ್ಮ ವಾಂಛೆಗಳು ಪೂರೈಸುತ್ತಿರುವಾಗ ನಮಗೆ ಅವೆಲ್ಲದರ ಅಗತ್ಯವಿಲ್ಲ ಪ್ರಭು.

**ಪ್ರಭುಗಳು :** ಹಾಗಾದರೆ ಮತ್ತೇನನ್ನು ಬಯಸುವಿರಿ? ಧೈರ್ಯವಾಗಿ ಹೇಳಿ ಉಪರಾಜರೇ! ನಿಮ್ಮ ವಸಂತೋತ್ಸವರದ ವ್ಯವಸ್ಥೆಯನ್ನು ನೋಡಿ ನಾವು ಬಹಳ ಸಂತುಷ್ಟರಾಗಿದ್ದೇವೆ. ನೀವು ಕೇಳಿದ್ದು ನಮ್ಮೆಲ್ಲರಿಗೂ ಸಾಧುವೆನಿಸಿದ್ದಲ್ಲಿ ಖಂಡಿತವಾಗಿಯೂ ಪೂರೈಸುತ್ತೇವೆ.

**ಅಭಯಕುಮಾರ:** ಪ್ರಭು. ಈ ದಿನ ಸರ್ವಶ್ರೇಷ್ಠ ಸುಂದರಿ ಎಂದು ಆಯ್ಕೆಯಾಗಿರುವ ಕುಮಾರಿ ಸಾಲವತಿಯನ್ನು ನೀವು ಒಪ್ಪುವದಾದರೆ ನಾನು ನನ್ನ ಭಾಗಸ್ವಾಮಿನಿಯನ್ನಾಗಿ ಸ್ವೀಕರಿಸುತ್ತೇನೆ. ಆಕೆಗೂ ಯಾರ ರಕ್ಷಣೆಯೂ ಇಲ್ಲ. ಆಕೆಯ ಎಲ್ಲ ಜವಾಬ್ದಾರಿಗಳು ನನ್ನವಾಗುತ್ತವೆ.

**ಪ್ರಭುಗಳು :** ಅಭಯಕುಮಾರರೇ ನಿಮ್ಮ ಅಂತರಂಗ ಅರ್ಥವಾಗುತ್ತದೆ. ನಿಮ್ಮ ಪ್ರಾರ್ಥನೆಯೂ ಸಾಧುವಾದದ್ದೆ! ಆದರೆ ಇದಕ್ಕೆ ನಮ್ಮೊಬ್ಬರ ಅನುಮತಿ ದೊರೆತರೆ ಸಾಲದು. ಆಕೆ ಇನ್ನು ಮುಂದೆ ಈ ವೈಶಾಲಿಯ ಸಂಪತ್ತು, ರಾಷ್ಟ್ರದ ಸ್ವತ್ತು, ಪ್ರಜೆಗಳ, ಪ್ರತಿಷ್ಠಿತರ, ಆಕೆಯ ಆಪ್ತರ, ಸ್ನೇಹಿತರ, ಎಲ್ಲರ ಸ್ವೀಕೃತಿ ಅಗತ್ಯ. ಎಲ್ಲಕ್ಕಿಂತ ಹೆಚ್ಚಾಗಿ ಆಕೆ ನಿರ್ಜೀವ ವಸ್ತುವಲ್ಲ. ಆಕೆಯ ಸಮ್ಮತಿಯೂ ಅನಿವಾರ್ಯವಲ್ಲವೇ?

**ಅಭಯಕುಮಾರ:** ಹೌದು ಪ್ರಭು. ವಜ್ಜಿ ಸಂಘದ ಹಿರಿಯರು, ಕುಲಪುತ್ರರು ಎಲ್ಲರಲ್ಲಿಯೂ ನನ್ನ ಪ್ರಾರ್ಥನೆ. ಸಾಲವತಿಯನ್ನು ಪರಿಗ್ರಹಿಸಲು ತಾವೆಲ್ಲರೂ ತಮ್ಮ ತಮ್ಮ ಅಭಿಪ್ರಾಯವನ್ನು ತಿಳಿಸಬೇಕೆಂದು ಮತ್ತೊಮ್ಮೆ ಬೇಡುತ್ತೇನೆ. ಕುಲವಧುವಾದಲ್ಲಿ ಸಮಾಜದಲ್ಲಿ ಒಂದು ಪ್ರತಿಷ್ಠಿತ, ಗೌರವಯುತ ಸ್ಥಾನವನ್ನು ಕಲ್ಪಿಸಿಕೊಟ್ಟಂತಾಗುವುದು. ದಯವಿಟ್ಟು ಸಂಘವು ಇದಕ್ಕೆ ಅನುಮತಿ ನೀಡಬೇಕು.

(ಸಾಲವತಿಯ ಮುಖದಲ್ಲಿ ರೋಷ ಮತ್ತು ಭಯಗಳು ಕಾಣಿಸಿಕೊಳ್ಳುತ್ತವೆ. ಏನನ್ನೋ ಹೇಳಬೇಕೆಂದು ಬಾಯಿ ತೆರೆಯುವಷ್ಟರಲ್ಲಿ ಮಗಧದ ಮಂತ್ರಿಗಳ ಪಕ್ಕದಲ್ಲಿ ಕುಳಿತಿದ್ದ ಮಣಿಧರ (ಸೇನಾಪತಿ) ಎದ್ದು ನಿಲ್ಲುತ್ತಾನೆ.)

**ಮಣಿಧರ :** ಪ್ರಭುಗಳು, ಗಣಶ್ರೇಷ್ಠರು, ಪ್ರಜೆಗಳು ಮನ್ನಿಸಬೇಕು. ನಾನು ಮಧ್ಯೆ ಪ್ರವೇಶಿಸುತ್ತಿರುವುದನ್ನು ಕ್ಷಮಿಸಬೇಕು. ನಾನಾಡುವ ಮಾತುಗಳ ವಿಚಾರದಲ್ಲಿ ಅನ್ಯಥಾ ಭಾವಿಸಬಾರದು. ಇದರಲ್ಲಿ ನನ್ನ ಸ್ವಾರ್ಥವಾಗಲಿ, ದುರುದ್ದೇಶವಾಗಲಿ ಇಲ್ಲ. ಅದು ಮೊದಲು ತಮಗೆ ಮನವರಿಕೆಯಾಗಬೇಕು. ತಮಗೇ ತಿಳಿದಂತೆ ವಜ್ಜಿ ರಾಷ್ಟ್ರ ಸಮತೆ, ಸಮಾನತೆ, ಸ್ವಾತಂತ್ರ್ಯ ತತ್ವಗಳ ಮೇಲೆ ನಿಂತಿದೆ. ಇದನ್ನು ಕಾಯ್ದುಕೊಂಡು ಬರಬೇಕಾದ್ದು ನಮ್ಮೆಲ್ಲರ ಧರ್ಮ, ಕರ್ತವ್ಯ. ಅನುಪಮವಾದ್ದು, ಅಮೂಲ್ಯವಾದದ್ದು ಅತಿ ಶ್ರೇಷ್ಠವಾದದ್ದು ರಾಷ್ಟ್ರದ ಸ್ವತ್ತು. ಅದು ರಾಷ್ಟ್ರಕ್ಕೇ ಸೇರಬೇಕಾದ್ದು. ಅಂದರೆ ನನ್ನ ಅರ್ಥ ಅದು ಪ್ರಜೆಗಳಿಗೂ ಸೇರಿದ್ದು. ಅದರ ಮೇಲೆ ಯಾರೇ ಒಬ್ಬರ ಅಧಿಕಾರ ಇರಬಾರದು, ಅಂದರೆ ಒಬ್ಬರಲ್ಲಿ ಅದು ಕೇಂದ್ರೀಕೃತವಾಗಬಾರದು. ಅಲ್ಲದೆ ಈಗ ನಮ್ಮ ಮುಂದಿರುವ ಶ್ರೇಷ್ಠ, ಸರ್ವಶ್ರೇಷ್ಠ ಎನ್ನುವಂತಾದ್ದು ಒಂದು ವಸ್ತುವೂ ಅಲ್ಲ. ಜೀವಂತ ವ್ಯಕ್ತಿ. ಯಾವುದೋ ವ್ಯಕ್ತಿಯೊಬ್ಬನಿಗೆ ಸಹಧರ್ಮಿಣಿ, ಧರ್ಮಪತ್ನಿ ಎನ್ನುವ ಮರ್ಯಾದೆಯ ಹೆಸರುಗಳಲ್ಲಿ ಬಂಧಿತಳಾಗುವುದೂ ಸರಿಯಲ್ಲ. ಸ್ವತಂತ್ರವಾಗಿ, ಸ್ವಚ್ಛಂದವಾಗಿ ವೈಭವದಿಂದ ಬದುಕುವ ಅವಕಾಶ ಆಕೆಗೆ ದೊರೆಯಬೇಕು. ಆದ್ದರಿಂದ ಒಬ್ಬರ ಸ್ವಾರ್ಥಕ್ಕೆ, ಸ್ವಂತಕ್ಕೆ ಮಾತ್ರ ಉಳಿಸುವುದು ಎಷ್ಟರ ಮಟ್ಟಿಗೆ ಸಮರ್ಥನೀಯವಾದ್ದು, ನಾವೆಲ್ಲರೂ ಯೋಚಿಸಬೇಕು.

(ಒಂದೆರಡು ನಿಮಿಷಗಳು ರಂಗದ ಮೇಲೆ ನಿಸ್ತಬ್ಧತೆ)

**ಗುಂಪಿನೊಳಗಿಂದ**

**ಒಂದು ದನಿ:** ಸೇನಾಪತಿಗಳು ಹೇಳುತ್ತಿರುವುದರಲ್ಲಿಯೂ ಅರ್ಥವಿದೆ. ಅವರ ತರ್ಕ ಸರಿಯಾದ್ದೆ.

**ಮತ್ತೊಂದು ದನಿ:** ಸೇನಾಪತಿಗಳ ಸೂಚನೆಯ ಕಡೆ ನಾವೆಲ್ಲರೂ ಗಂಭೀರವಾಗಿ ಯೋಚಿಸಲೇಬೇಕಾಗಿದೆ.

**ಮೊದಲ ದನಿ:** ಗಣಶ್ರೇಷ್ಠರು, ಕುಲಪುತ್ರರು ಮೊದಲಾಗಿ ಎಲ್ಲರೂ ಈಗ ನಮ್ಮ ಮುಂದೆ ಎದ್ದಿರುವ ಗಂಭೀರ ಸಮಸ್ಯೆಯ ಬಗ್ಗೆ ಏನನ್ನು ತೀರ್ಮಾನಿಸಿದರೆ ಅದೇ ಸರಿಯಾದ್ದೆಂದು ನಾವು ಭಾವಿಸುತ್ತೇವೆ.

**ಪ್ರಭುಗಳು :** ಸೇನಾಪತಿಗಳೇ ಸಂಭ್ರಮದ ಸನ್ನಿವೇಶವನ್ನು ನಿಮ್ಮ ಮಾತಿನಿಂದ ಜಟಿಲಗೊಳಿಸಿಬಿಟ್ಟರಲ್ಲ!

**ಮಣಿಧರ :** ಪ್ರಭು. ತಮ್ಮೆಲ್ಲರ ಸಂತೋಷವನ್ನು ಹಾಳುಮಾಡಬೇಕೆಂಬುದು ನನ್ನ ಇಚ್ಛೆಯಲ್ಲ. ನನಗೆ ತೋಚಿದ್ದನ್ನು ಪ್ರಜಾತಂತ್ರ ಪರಿಸರದಲ್ಲಿ ಹೇಳುವ

ಸ್ವಾತಂತ್ರ್ಯವಿದೆಯೆನ್ನುವ ನಂಬಿಕೆಯಿಂದ ನುಡಿದೆ. ಅದರ ಮೇಲೆ ತಮ್ಮಿಚ್ಛೆ.

**ಪ್ರಭುಗಳು :** ಛೆ! ಛೆ! ತಮ್ಮ ಹಕ್ಕು, ಸ್ವಾತಂತ್ರ್ಯಗಳನ್ನು ನಾವು ವಿರೋಧಿಸುತ್ತಿಲ್ಲ. ಈ ಸಮಸ್ಯೆಗೆ ಪರಿಹಾರ ಏನು? ಈಗ ಅಭಯ ಕುಮಾರರು ಮದುವೆಯಾಗುವುದು ಬೇಡವಾದರೆ, ಆಕೆಯ ಭವಿಷ್ಯವೇನು? ಆಕೆಯ ಬದುಕಿಗೆ ದಾರಿಯಾವುದು?

**ಮಣಿಧರ :** ಪ್ರಭು. ಅದಕ್ಕೂ ನನ್ನದೊಂದು ಸಲಹೆ ಇದೆ. ವೈಶಾಲಿಯ ಸರ್ವಶ್ರೇಷ್ಠ ಸುಂದರಿಯ ಸ್ಥಾನ ಬಹಳ ಮಹತ್ವದ್ದು; ಎತ್ತರದ್ದು. ನಮ್ಮ ರಾಷ್ಟ್ರ ಗೌರವದ ಪ್ರತೀಕ. ಆಕೆಯನ್ನು ಪೋಷಿಸಬೇಕಾದ್ದು, ರಕ್ಷಿಸಬೇಕಾದ್ದು ರಾಷ್ಟ್ರ ಧರ್ಮ. ಆಕೆ ಸರ್ವತಂತ್ರ ಸ್ವತಂತ್ರಳಾಗಿ ಬಾಳುವ ಅವಕಾಶಗಳು ಲಭಿಸಬೇಕು. ಅರಮನೆಗೆ ಮುಕ್ತ ಪ್ರವೇಶ. ರಾಜ ಮರ್ಯಾದೆಗಳೇ ಅಲ್ಲದೆ ರಾಜ ಬೊಕ್ಕಸದಿಂದ ಒಂದಷ್ಟು ಸುವರ್ಣ ನಾಣ್ಯಗಳು ಆಕೆಯ ಜೀವನ ನಿರ್ವಹಣೆಗೆ ಸಂದಾಯ ಆಗಬೇಕು.

**ಒಬ್ಬ ವ್ಯಕ್ತಿ :** ಸೇನಾಪತಿಗಳೇ ನೀವು ಹೇಳುವುದೆಲ್ಲ ಸರಿಯಾದ್ದೆ. ಆದರೆ ಆಕೆಯೂ ಮನುಷ್ಯಳು. ಎಲ್ಲರಂತೆ ಜೀವನ ಸುಖಗಳನ್ನು ಅನುಭವಿಸಲು ಆಕೆಗೆ ಅವಕಾಶವಿಲ್ಲವೇ.

**ಮಣಿಧರ :** ನಾನು ಆಗಲೇ ಹೇಳಿದೆ. ಆಕೆಗೂ ಸುಖ, ಸಂತೋಷಗಳಿಂದ ಸ್ವತಂತ್ರವಾಗಿ ಬಾಳುವ ಹಕ್ಕಿದೆ. ಆದರೆ ಯಾವುದೋ ಒಬ್ಬ ಪುರುಷನ ವಧುವಾಗಿ ಉಳಿದು ಬಿಡುವುದು ರಾಷ್ಟ್ರಕ್ಕೇ ನಷ್ಟ. ಆಕೆ ಇಚ್ಛಿಸಿದ್ದಲ್ಲಿ, ತನ್ನ ಬಯಕೆಯ ಪುರುಷನೊಂದಿಗೆ ರಾತ್ರಿಗಳನ್ನು ಕಳೆಯಬಹುದು. ಒಂದು ರಾತ್ರಿಗೆ ನೂರು ಸುವರ್ಣ ಮುದ್ರೆಗಳನ್ನು ಪಡೆಯಬಹುದು. 'ನಗರ ವಧು' ವಾಗಿ ರಾಷ್ಟ್ರದ ಸೌಂದರ್ಯ ಪ್ರತಿಮೆಯಾಗಿ ರಾಷ್ಟ್ರದ ಹಿರಿಮೆಯನ್ನು ಎತ್ತಿ ಹಿಡಿಯುವಂತಾಗಬೇಕು.

**ಒಬ್ಬ ವ್ಯಕ್ತಿ :** ಸಾಧು! ಸಾಧು!.... ಬಹಳ ಒಳ್ಳೆಯ ಸಲಹೆ! ಮಗಧದಲ್ಲಿ ಅಂಬಾಪಾಲಿಯಂತೆ. ವೈಶಾಲಿ ರಾಷ್ಟ್ರದಲ್ಲೂ ಸೌಂದರ್ಯ ಪುತ್ಥಳಿಯ ಪ್ರತಿಷ್ಠಾಪನೆ!.... ವೈಶಾಲಿಯ ಕೀರ್ತಿ ಸರ್ವಶ್ರೇಷ್ಠ ಸುಂದರಿಯಿಂದ ಅನ್ಯ ರಾಷ್ಟ್ರಗಳಲ್ಲೂ ವ್ಯಾಪಿಸಿ, ಜನ, ಹಣ ಇಲ್ಲಿಗೆ ಹರಿದು ಬಂದು ರಾಷ್ಟ್ರದ ಆದಾಯ ಇಮ್ಮಡಿಯಾಗಿ ಮುಮ್ಮಡಿಯಾಗಿ ವೃದ್ಧಿಸುತ್ತದೆ. ಅಂಬಾಪಾಲಿಯನ್ನು ಮೀರಿದ ಸೌಂದರ್ಯರಾಶಿ ನಮ್ಮದೆಂಬ ಹೆಮ್ಮೆ ಅನ್ಯ ರಾಷ್ಟ್ರಗಳು ಕರುಬುವಂತೆ ಆಗುತ್ತದೆ.

**ಪ್ರಭುಗಳು :** ಅಭುಕುಮಾರರೇ ಕೇಳಿದಿರಲ್ಲ! ಜನಾಭಿಪ್ರಾಯಕ್ಕೆ ನಿಮ್ಮ ಪ್ರತಿಕ್ರಿಯೆಯೇನು?

**ಸಾಲವತಿ :** ಪ್ರಭು.... ನನ್ನದೊಂದು....

**ಜನ ಗದ್ದಲದಿಂದ**

**ದನಿ :** ಮತ್ತೇನೂ ಮಾತೇ ಬೇಡ. ಸುಂದರಿ ಸಾಲವತಿ ವೈಶಾಲಿಯ ನಗರವಧು! ಅದೇ ಸರಿಯಾದ್ದು. ಸರ್ವಶ್ರೇಷ್ಠ ಸುಂದರಿಗೆ ಜಯುವಾಗಲಿ! ಜಯವಾಗಲಿ! (ಜಯಘೋಷ)

**ಅಭಯಕುಮಾರ:** (ಎತ್ತರದ ದನಿಯಲ್ಲಿ) ಪ್ರಭುಗಳೇ, ಪ್ರಜೆಗಳೇ. ನಾನು ಪ್ರಸ್ತಾಪ ಮಾಡಿದ್ದು, ಅತಂತ್ರ ಅಸಹಾಯಕ ಹೆಣ್ಣಿನ ಉದ್ಧಾರವಾಗುವುದೆಂಬ ಉದ್ದೇಶದಿಂದ. ಇದರಲ್ಲಿ ನನ್ನ ಸ್ವಾರ್ಥವಾಗಲೀ ಸಂಕುಚಿತ ಭಾವನೆಯಾಗಲೀ ಇರಲಿಲ್ಲ. ಈಗ ನಿಮ್ಮೆಲ್ಲರ ಅಭಿಪ್ರಾಯದಲ್ಲಿ ನನ್ನದೂ ದನಿ ಸೇರಿದೆ. ಪ್ರಜಾಭಿಪ್ರಾಯವನ್ನು ಗೌರವಿಸುವುದೇ ನಮ್ಮ ಧರ್ಮ.

**ಪ್ರಭುಗಳು :** (ಸಾಲವತಿಗೆ) ಸುಂದರಿ, ನಮ್ಮೆಲ್ಲರ ಅಭಿಮತ ನಿನಗೆ ಒಪ್ಪಿಗೆಯೆಂದು ಭಾವಿಸುತ್ತೇವೆ. ಇಂದಿನಿಂದ ನೀನು ರಾಜರತ್ನ; ಸೌಂದರ್ಯ ಶಿರೋಮಣಿ. ಅನಂಗ ಪೂಜಾರಿಣಿ! ನಾಳೆ ಶೃಂಗಾರ ವನದಲ್ಲಿ ಅನಂಗ ಪೂಜೆ ನಿನ್ನಿಂದಲೇ ಆಗಬೇಕು. ನೀನೇ ಅದಕ್ಕೆ ಅಧಿಕಾರಿಣಿ. ನಿನ್ನ ದಿಗ್ವಿಜಯಕ್ಕಾಗಿ ನಮ್ಮೆಲ್ಲರ ಅಭಿನಂದನೆಗಳು!! (ಕುಲಪುತ್ರರ ಕಡೆ ತಿರುಗಿ) ಕುಲಪುತ್ರರೇ ಇಂದು ನೀವು ರಾಷ್ಟ್ರಕ್ಕೆ ಅಮೂಲ್ಯ ನಿಧಿಯೊಂದನ್ನು ಶೋಧಿಸಿ ತಂದು ನೀಡಿದ್ದೀರಿ. ರಾಷ್ಟ್ರ ನಿಮ್ಮನ್ನು ಅಭಿನಂದಿಸುತ್ತದೆ. ನಿಮ್ಮುಪಕಾರವನ್ನು ಸ್ಮರಿಸಿ ಸ್ವರ್ಣಾಕ್ಷರಗಳಲ್ಲಿ ಬರೆದಿಡುತ್ತದೆ.... ಪ್ರಜಾಕೋಟಿಗೆ ವಸಂತೋತ್ಸವದ ಹಾರ್ದಿಕ ಶುಭಾಶಯಗಳು. ನಾಳಿನ ಅನಂಗ ಪೂಜೆಗೆ ತಮಗೆಲ್ಲರಿಗೂ ಹಾರ್ದಿಕ ಸ್ವಾಗತ. ಸುಸ್ವಾಗತ.

(ಎಲ್ಲರ ಜಯಘೋಷ ಕೇಳಿ ಬರುತ್ತದೆ. ಸಾಲವತಿ ಮೌನವಾಗಿ ತಲೆತಗ್ಗಿಸಿ ನಿಂತಿದ್ದಾಳೆ. ಅಸಹಾಯಕತೆ ಅವಳ ಮುಖದಲ್ಲಿ ಕಾಣುತ್ತದೆ. ಕುಲಪುತ್ರರೂ ಅಸಹಾಯಕ ದೃಷ್ಟಿಯಿಂದ ಸಾಲವತಿಯ ಕಡೆಗೆ ದಿಟ್ಟಿಸಿ ನೋಡುತ್ತಾರೆ. ಪ್ರಜೆಗಳ ಜಯಘೋಷ ಗದ್ದಲಗಳು ಕ್ರಮೇಣ ಕರಗುತ್ತಿದ್ದಂತೆ ಕತ್ತಲು ಆವರಿಸುತ್ತ ಹೋಗುತ್ತದೆ.)

೦೦

# ಅಂಕ – ೨

## ದೃಶ್ಯ – ೧

(ಸಾಲವತಿ ಹಂಸತೂಲಿಕಾ ತಲ್ಪದಲ್ಲಿ ಚಿಂತಾಮಗ್ನಳಾಗಿ ಕುಳಿತಿದ್ದಾಳೆ. ಪಕ್ಕದಲ್ಲಿ ಸುಂದರವಾದ ದುಂಡನೆಯ ಕಲಾತ್ಮಕವಾದ ಮೇಜಿದೆ. ಅದರ ಮೇಲೆ ಮಧು ಪಾತ್ರ ಮತ್ತು ಬಟ್ಟಲುಗಳನ್ನು ಇರಿಸಿದೆ. ಬೆಳ್ಳಿಯ ಅಗಲ ಬಾಯಿಯ ಪಾತ್ರೆಯಲ್ಲಿ ಹಣ್ಣು ಹಂಪಲುಗಳಿವೆ. ಒಂದೆರಡು ಗಳಿಗೆ ರಂಗದ ಮೇಲೆ ನೀರವತೆ, ಮಂದವಾದ ಬೆಳಕು, ದೀರ್ಘ ನಿಟ್ಟುಸಿರು ಕೇಳಿ ಬರುತ್ತದೆ. ಸಾಲವತಿಯ ಸೇವಕಿ ನೀಲಾ ಒಡತಿಯನ್ನು ಅರಸುತ್ತಾ ಬರುತ್ತಾಳೆ)

**ನೀಲಾ** : ಒಡತಿ! ಒಡತಿ! (ಕೂಗುತ್ತ ಪ್ರವೇಶಿಸುತ್ತಾಳೆ) (ಚಿಂತಾ ಮಗ್ನಳಾಗಿ ಅವನತ ಮುಖಿಯಾಗಿ ಕುಳಿತಿರುವ ಸಾಲವತಿಯನ್ನು ನೋಡಿ) ಇದೇನು ಒಡತಿ ಹೀಗೆ ಕತ್ತಲಲ್ಲಿ ಕುಳಿತಿದ್ದೀರಿ? ತಾಳಿ. ದೀಪವನ್ನು ಹಚ್ಚುತ್ತೇನೆ... ಒಡತಿ ಸ್ವಲ್ಪ ಹೊತ್ತಿಗೆ ಮುಂಚೆ ನಿಮಗಾಗಿ ಎಲ್ಲೆಲ್ಲೂ ಹುಡುಕಿದೆ. ನೀವು ಕಾಣದೆ ಹೋದದ್ದು ನೋಡಿ ನನಗೆ ಗಾಬರಿಯಾಯಿತು. ಎಲ್ಲಿ ಹೋಗಿದ್ದಿರಿ ಒಡತಿ? (ಎಂದು ಮಾತಾಡುತ್ತಲೇ ದೀಪವನ್ನು ಹಚ್ಚಿ ಹತ್ತಿರ ತರುತ್ತಾಳೆ.)

**ಸಾಲವತಿ** : ನೀಲಾ ಆ ದೀಪವನ್ನು ಆರಿಸಿಬಿಡು. ನನಗೆ ಬೆಳಕನ್ನು ಕಂಡರೆ ಆಗದು. ನನ್ನ ಬದುಕೇ ಕತ್ತಲಾಗಿದೆ. ಕತ್ತಲಿಗೆ ನಾನೂ ಒಗ್ಗಿ ಹೋಗಿದ್ದೇನೆ... ಒಮ್ಮೊಮ್ಮೆ ನನಗೆ ಸಾಯಬೇಕೆನಿಸುತ್ತದೆ.

**ನೀಲಾ** : ಒಡತಿ ಏಕಿಷ್ಟು ಬೇಸರಗೊಂಡಿದ್ದೀರಿ. ಮೈ ಸ್ವಸ್ಥವಿಲ್ಲವೇ. ಅಲಂಕಾರವಿಲ್ಲದೆ, ಮ್ಲಾನವದನರಾಗಿ ಹೀಗೆ ಕತ್ತಲಿನಲ್ಲಿ ಕುಳಿತು ಅಳುವಂತಹುದು ಏನಾಗಿದೆ ಒಡತಿ? ನಿಮಗಾಗಿ ವಣಿಕ ಶ್ರೇಷ್ಠರು, ಗಣಶ್ರೇಷ್ಠರು ಕಾದು ಕುಳಿತಿದ್ದಾರೆ. ಅವರು ತಮ್ಮನ್ನು ಕಾಣಲೇಬೇಕಂತೆ!

**ಸಾಲವತಿ** : ನೀಲಾ ಇಂದು ನಮಗೆ ಮೈ ಸ್ವಸ್ಥವಿಲ್ಲವೆಂದು ಹೇಳಿಬಿಡು. ಹಾಗೆಯೇ ಅವರಿಗೆ ನಿರಾಶೆಯುಂಟುಮಾಡಿದ್ದಕ್ಕೆ ನಮ್ಮನ್ನು ಕ್ಷಮಿಸಬೇಕೆಂದು ಹೇಳು.

**ನೀಲಾ** : ಹಾಗೆಯಾ ಆಗಲಿ ಒಡತಿ (ಹೋಗುವಳು)

(ಮತ್ತೆ ಎರಡು ನಿಮಿಷಗಳ ನಂತರ ಹಿಂತಿರುಗಿದ ನೀಲಾಳನ್ನು ಗಮನಿಸಿದ ಸಾಲವತಿ)

**ಸಾಲವತಿ** : ನೀಲಾ! ನೀಲಾ! ನಿನಗೆ ಬಿಡುವಿದ್ದರೆ ಒಂದೆರಡು ತಾಸು ನನ್ನ ಬಳಿ ಕುಳಿತುಕೋ. ಯಾಕೋ ಈ ದಿನ ನನ್ನ ಕಥೆಯನ್ನು, ವ್ಯಥೆಯನ್ನು ನಿನ್ನಲ್ಲಿ ತೋಡಿಕೊಳ್ಳಬೇಕೆಂದಿದ್ದೇನೆ.... ಹೇಳು ನೀಲಾ.... ನಿನಗೆ ಕೇಳಿಸಿಕೊಳ್ಳುವ ತಾಳ್ಮೆ ಇದೆಯೇ?

**ನೀಲಾ** : ಒಡತಿ! ಒಡತಿ! (ಭಾವನೆ ತುಂಬಿ ಬರುತ್ತದೆ) ಇದೇಕೆ ಹೀಗೆ ಕೇಳುವಿರಿ? ನೀವಲ್ಲದೆ ನನಗೆ ಇನ್ಯಾರು ಒಡತಿ? ನಿಮಗಾಗಿ ನನ್ನ ಪ್ರಾಣವನ್ನೇ ಬೇಕಾದರೂ ಕೊಡಬಲ್ಲೆ. ಅಂಥಾದ್ದರಲ್ಲಿ ನಿಮ್ಮ ನೋವನ್ನು ಹಂಚಿಕೊಳ್ಳಲು ನನಗೇನು ಧಾಡಿ! ನಿಮ್ಮ ಪ್ರೀತಿ, ವಿಶ್ವಾಸಗಳು ನನ್ನನ್ನು ಮೂಕಳನ್ನಾಗಿಸಿದೆ. ಹೇಗೆ ನನ್ನ ಕೃತಜ್ಞತೆಯನ್ನು ತಿಳಿಸಬೇಕೋ ನನಗೆ ಅರ್ಥವಾಗುತ್ತಿಲ್ಲ... ನೀವೆಷ್ಟೇ ವೈಭೋಗದಲ್ಲಿದ್ದರೂ ನಿಮ್ಮ ಮನದಾಳದಲ್ಲಿ ಏನೋ ಚಿಂತೆಯ ಹುಳು ಕೊರೆಯುತ್ತಿದೆಯೆಂಬ ಅನುಮಾನ ನನಗೆ ಇದ್ದೇ ಇತ್ತು. ಆದರೆ ಕೇಳುವ ಸಾಹಸವಾಗಲಿಲ್ಲ...ನಾನು ನಿಮ್ಮ ದಾಸಿ; ಒಡತಿಯನ್ನು ಪ್ರಶ್ನಿಸುವ, ಅವಳ ಅಂತರಂಗವನ್ನು ಹಂಚಿಕೊಳ್ಳುವ ಪ್ರಯತ್ನ ದಾರ್ಷ್ಟ್ಯವೆನಿಸೀತೆಂದು ಸುಮ್ಮನಿದ್ದೆ.

**ಸಾಲವತಿ** : ನೀಲಾ ನನ್ನ ಬಗ್ಗೆ ನಿನಗೆ ಯಾವುದೇ ಮುಜುಗರಗಳು ಬೇಕಿಲ್ಲ. ಈ ಎಂಟು ವರ್ಷಗಳಿಂದಲೂ ನನ್ನನ್ನು ತಾಯಿಯಂತೆ, ಗೆಳತಿಯಂತೆ ಪ್ರೀತಿಯಿಂದ, ವಾತ್ಸಲ್ಯದಿಂದ ಆತ್ಮೀಯತೆಯಿಂದ ನನ್ನನ್ನು ನೋಡಿಕೊಂಡಿದ್ದಿ. ನನ್ನ ಹಿರಿಯಕ್ಕನಂತೆ ನನ್ನ ಸುಖ, ಸಂತೋಷಗಳ ಬಗ್ಗೆ ಕೇಳಜಿ ವಹಿಸಿದ್ದಿ. ನಿನ್ನೊಡನೆ ನನ್ನ ಅಂತರಂಗವನ್ನು ತೆರೆದುಕೊಳ್ಳಲು ನನಗೇನು ಹಿಂಜರಿಕೆ ನೀಲ?

**ನೀಲಾ** : ಒಡತಿ ನನ್ನ ಬಗ್ಗೆ ನೀವು ತಳೆದಿರುವ ಭಾವನೆಗಳಿಗೆ ನಾನು ಕೃತಾರ್ಥಳಾದೆ...... ಹೇಳಿ ಒಡತಿ, ನಿಮ್ಮ ಮನಸ್ಸನ್ನು ಕೊರೆದು ಕಾಡುತ್ತಿರುವ ಚಿಂತೆಯೇನು? ನಿಮ್ಮ ಚಿಂತೆಯನ್ನು ದೂರವಿಡಲು ನನ್ನಿಂದ ಎಂತಹ ತ್ಯಾಗವನ್ನಾದರೂ ಮಾಡಲು ನಾನು ಸಿದ್ಧಳಿದ್ದೇನೆ

**ಸಾಲವತಿ** : ಸಾಕು ನೀಲಾ! ಸಾಕು! ಇಷ್ಟು ಸಾಕು. ನಿನ್ನೀ ಮಾತುಗಳನ್ನು ಕೇಳಿ ನನಗೆ ಎಷ್ಟೋ ಸಮಾಧಾನವಾಗಿದೆ... ನೀಲಾ........ ನನ್ನನ್ನು ನೀನು ಈ ವೇಶ್ಯೆಯ ರೂಪದಲ್ಲಿ ನೋಡುತ್ತಿರುವೆಯಲ್ಲ; ನಿನಗೆ ನನ್ನ ವೃತ್ತಿ ಅಸಹ್ಯವೆನಿಸಲಿಲ್ಲವೇ?

ನೀಲಾ : ಒಡತಿ ನಾವು ಬಾಳುವ, ಬಾಳುತ್ತಿರುವ ಬದುಕುಗಳು ಎಷ್ಟೋ ಸಲ ನಮ್ಮ ಆಯ್ಕೆಗಳಾಗಿರುವುದಿಲ್ಲ. ವ್ಯಕ್ತಿಗಳ, ಪರಿಸ್ಥಿತಿಗಳ ಒತ್ತಡ ನಮ್ಮನ್ನು ನಮಗಿಷ್ಟವಿಲ್ಲದ ದಿಕ್ಕಿಗೆ, ದಾರಿಗಳಿಗೆ ದೂಡುತ್ತದೆ. ನಾವು ಆ ದಾರಿಗೆ ಬಿದ್ದ ಮೇಲೆ ಮತ್ತೆ ಅಲ್ಲಿಂದ ಹಿಂತಿರುಗಿ ಹೋಗಲಾಗದ ರೀತಿಯಲ್ಲಿ ಎಲ್ಲ ದಿಕ್ಕಿನ ಬಾಗಿಲುಗಳೂ ಮುಚ್ಚಿಕೊಂಡು, ನಮಗೆ ದಕ್ಕಿದ ಬದುಕನ್ನೇ, ಸ್ವರ್ಗವಾಗಲಿ, ನರಕವಾಗಲೀ, ನಂದನವಾಗಲೀ ಕೊಳೆತು ನಾರುವ ಚರಂಡಿಯಾಗಲಿ.... ವಿಲಿವಿಲಿ ಒದ್ದಾಡುತ್ತಲೇ ಕಡೆ ಗಳಿಗೆಯವರೆಗೆ ಅನುಭವಿಸುತ್ತಲೇ ಇರಬೇಕಾಗುತ್ತದೆ. ಅದು ನಮ್ಮ ದುರ್ದೈವ.

ಸಾಲವತಿ : ನೀಲಾ ನೀನೆಷ್ಟು ಜಾಣೆ. ಎಷ್ಟು ಗಹನವಾಗಿ ಯೋಚಿಸಬಲ್ಲೆ....ನೀನೆಂದಂತೆ ಈ ಬದುಕು ನನ್ನ ಕನಸೂ ಆಗಿರಲಿಲ್ಲ; ಆಯ್ಕೆಯೂ ಆಗಿರಲಿಲ್ಲ. 'ಸರ್ವಶ್ರೇಷ್ಟ ಸುಂದರಿ' 'ನಗರವಧು' ಎಂದು ಮರ್ಯಾದೆಯ ಮಾತುಗಳಲ್ಲಿದ್ದರೂ, ನಾನೊಬ್ಬಳು ಸೂಳೆ! ಮೇಲಂತಸ್ತಿನ ವೇಶ್ಯೆ! ಸುಖ, ಸಂತೋಷ, ವೈಭವಗಳು ನನ್ನದಾಗಿವೆಯೇನೋ ನಿಜ. ಆದರೆ....ಆದರೆ....ಅದು ಸುಖವೇ? ಸುಖವೆಂದು ಕಳೆಯುವ ಒಂದೊಂದು ರಾತ್ರಿಯೂ ಹಿಂಸೆ, ನೋವು, ನರಕ! ನನ್ನ ಮುಖ ನನ್ನ ದೇಹದ ಅಂಗುಲಂಗುಲವನ್ನೂ ಕಾಮುಕ ಕಣ್ಣುಗಳಿಂದ ಪರ್ಯಟಿಸಿ, ನನ್ನ ಸ್ಪರ್ಶ ಮಾತ್ರದಿಂದಲೇ ಇಂದ್ರ ಪದವಿಯನ್ನು ಗಳಿಸಿದಷ್ಟು ಹಿಗ್ಗುವ ಈ ಶ್ರೀಮಂತ ಗಂಡಸರನ್ನು ನೋಡಿದಾಗ ಅಸಹ್ಯವೆನಿಸುತ್ತದೆ... ಮನೆಯಲ್ಲಿ ಹೆಂಡತಿಯರಿದ್ದೂ ಈ ಎಂಜಲು ಮೈಗಾಗಿ ಹಪಹಪಿಸುವ ಅವರನ್ನು ನೋಡಿದರೆ ಜಿಗುಪ್ಸೆಯಾಗುತ್ತದೆ; ... ಕನಿಕರವೆನಿಸುತ್ತದೆ. ಲೆಕ್ಕವಿಲ್ಲದ ರಾತ್ರಿಗಳನ್ನು ಕಳೆದರೂ ಯಾವೊಬ್ಬ ಪುರುಷನೂ ನನ್ನ ಮನಸ್ಸನ್ನು ತಟ್ಟಲಿಲ್ಲ; ಮುಟ್ಟಲಿಲ್ಲ. ನನಗೂ ಗಂಡ, ಮಕ್ಕಳು, ಮನೆ ಎಲ್ಲ ಇದ್ದು ಎಲ್ಲರಂತೆ ಬಾಳಬೇಕೆಂಬ ಆಸೆ ಇತ್ತು. ಆದರೆ...... ಆದರೆ.....? (ಶೂನ್ಯದೃಷ್ಟಿ)

ನೀಲಾ : ಹೇಳಿ ಒಡತಿ. ಹೇಳಿ. ಆದರೆ.... ಆದರೆ.... ಏನಾಯಿತು?

ಸಾಲವತಿ : ವಿಧಿ ನನ್ನನ್ನು ಇಂತಹ ದರಿದ್ರ ಬದುಕಿಗೆ ದೂಡಿತು. ನಾನೂ ಹುಟ್ಟಿ ಬೆಳೆದದ್ದು ಉತ್ತಮ ವಂಶದಲ್ಲಿಯೇ. ಸ್ವರ್ಣ ತಜ್ಞರಾದ ಕುಲಪುತ್ರ ದವಳಯಶರ ಏಕಮಾತ್ರ ಪುತ್ರಿ. ಕುಲಮರ್ಯಾದೆ, ವಂಶಮರ್ಯಾದೆಯನ್ನು ರಕ್ಷಿಸುವುದಕ್ಕಾಗಿ ಬಡತನವನ್ನು ಅನುಭವಿಸಿದರೂ ಯಾರ ಹಂಗಿಗೂ ಒಳಗಾಗದೆ ದೈನ್ಯತೆಯಿಂದ ಕೈಚಾಚದೆ, ಅಪ್ಪನಿಗೆ ಗೊತ್ತಿದ್ದ ಸುವರ್ಣ ಕಲೆಯ ಸಹಾಯದಿಂದ

ಹೇಗೋ ಜೀವನ ಸಾಗುತ್ತಿತ್ತು. ನನ್ನ ದುರಾದೃಷ್ಟ!...ನನಗೆ ಎಂಟೂ ವರ್ಷವೂ ಇರಲಾರದು ನನ್ನ ತಾಯಿ ತೀರಿಕೊಂಡಳು. ಅಪ್ಪನ ಪೋಷಣೆಯಲ್ಲಿ ಬೆಳೆದೆ. ನಾನು ದೊಡ್ಡವಳಾಗುತ್ತಿದ್ದಂತೆ ಅಪ್ಪನಿಗೆ ನನ್ನ ಮದುವೆಯ ಚಿಂತೆ ಕಾಡತೊಡಗಿತು. ನಾನೂ ಪ್ರಾಯಕ್ಕೆ ತಕ್ಕಂತಹ ಕನಸುಗಳನ್ನು ಕಾಣತೊಡಗಿದೆ.

**ನೀಲಾ** : ಒಡತಿ, ಲೋಕೈಕ ಸುಂದರಿಯಾಗಿರುವ ನಿಮಗೆ ಮದುವೆಯೊಂದು ಸಮಸ್ಯೆಯೇ ಅಲ್ಲ. ಯಾರಾದರೂ ರಾಜಕುಮಾರನೇ ಬಂದು ನಿಮ್ಮನ್ನು ಯಾಚಿಸಿ ಮದುವೆಯಾಗುತ್ತಿದ್ದ.

**ಸಾಲವತಿ** : ಹೌದು ನೀನು ಊಹಿಸಿದಂತೆ ನಾನೂ ರಾಜಕುಮಾರನನ್ನೇ ಕನಸು ಕಾಣುತ್ತಿದ್ದೆ. ಅರಮನೆ, ಐಶ್ವರ್ಯ, ವಸ್ತ್ರ, ಒಡವೆ, ಹೆಜ್ಜೆ ಹೆಜ್ಜೆಗೂ ದಾಸಿಯರ ದಂಡು! ಎಲ್ಲ.... ಎಲ್ಲ ಊಹಿಸಿಕೊಳ್ಳುತ್ತಿದ್ದೆ..... ಸದಾನೀರದ ದಂಡೆಯಲ್ಲಿ ಕುಳಿತು ಗಂಟೆಗಟ್ಟಲೆ ಕನಸುಗಳಲ್ಲಿ ವಿಹರಿಸುತ್ತ ಮೈ ಮರೆಯುತ್ತಿದ್ದೆ. ....ಬಿಳೀ ಕುದುರೆ ಏರಿ ಚಿಕ್ಕೆಗಳ ಲೋಕದಿಂದ ರಾಜಕುಮಾರನೊಬ್ಬ ಬಂದೇ ಬರುತ್ತಾನೆ. ಬೆನ್ನ ಹಿಂದೆ ನಿಂತು ನನ್ನ ಕಣ್ಣು ಮುಚ್ಚಿ ಮುತ್ತು ಕೊಟ್ಟು, ಮೆಲ್ಲನೆ ಎತ್ತಿ ಕುದುರೆ ಮೇಲೆ ಕೂರಿಸಿಕೊಂಡು ನಾಗಾಲೋಟದಿಂದ ಓಡಿ ದೂರ ದೂರ ಕ್ಷಿತಿಜದ ಆಚೆ ಯಾವುದೋ ಯಕ್ಷಲೋಕಕ್ಕೆ ಒಯ್ದಂತೆ ಕನಸು..... ಬರೀ ಕನಸುಗಳೇ ನನ್ನ ಬದುಕನ್ನು ತುಂಬಿದ್ದವು.... ಅಪ್ಪ ಹೇಳುತ್ತಿದ್ದರು, 'ಹಣ... ಹಣ.... ಸುವರ್ಣ ಮುದ್ರೆಗಳು..... ಇವೇ ಬದುಕಿನ ಅರ್ಥ. ಅದೊಂದಿದ್ದರೆ ಜೀವನದಲ್ಲಿ ಅಸಾಧ್ಯವಾದುದೆಲ್ಲವನ್ನೂ ಸಾಧ್ಯವಾಗಿಸಿಕೊಳ್ಳಬಹುದು. ಮನುಷ್ಯನ ಎಲ್ಲ ಲೋಪಗಳೂ ಚಿನ್ನದ ಹಳದಿ ಬೆಳಕಿನಲ್ಲಿ ಕರಗಿ ಹೋಗುತ್ತವೆ. ಆದ್ದರಿಂದ ಹಣದ ವಿಚಾರದಲ್ಲಿ ಜೋಪಾನ ಮಗು ಎನ್ನುತ್ತಿದ್ದರು.

**ನೀಲಾ** : ನಿಮ್ಮ ಕನಸುಗಳು, ನಿಮ್ಮ ತಂದೆಯ ಮಾತುಗಳು ಎಲ್ಲವೂ ಸತ್ಯವಾಗುತ್ತಿದೆಯಲ್ಲ ಒಡತಿ.

**ಸಾಲವತಿ** : (ನಿಟ್ಟುಸಿರಿಟ್ಟು) ಹೂಂ! ಸತ್ಯ.... ಸತ್ಯ.... ಎಲ್ಲಿಯ ಸತ್ಯ! ನನ್ನಲ್ಲಿ ಕೊಪ್ಪರಿಗೆ ಗಟ್ಟಲೆ ಹಣ ಇದೆ. ಸುಖ ಇದೆ. ಭವ್ಯವಾದ ಅರಮನೆ ಇದೆ. ಆದರೆ ನಾನೇ ಇಲ್ಲ..... ನಿನಗೆ ನಾನು ಹೇಳುತ್ತಿರುವುದು ಆಶ್ಚರ್ಯವೆನಿಸುತ್ತಿದೆಯಲ್ಲ?... ನಾನು..... ನಾನು..... ಸದಾ ನೀರದ ದಂಡೆಯಲ್ಲಿ ಬಡ ಕುಟೀರದಲ್ಲಿ, ನನ್ನದೇ ಒಂದು ಮುಗ್ಧ ಜಗತ್ತಿನಲ್ಲಿ ಬದುಕುತ್ತಿದ್ದವಳು ಈಗೆಲ್ಲಿ? 'ನಾನು' ಎಂದೊ ಸತ್ತು ಹೋದೆ.

ನೀಲಾ : ಒಡತಿ ಇಷ್ಟೊಂದು ಉದ್ವಿಗ್ನತೆ ಬೇಡ.

ಸಾಲವತಿ : ಈಗ....? ಈಗ ನಾನು ಯಾರು....? (ಹೆಮ್ಮೆಯಿಂದ ಬೀಗಿಕೊಳ್ಳುವಂತೆ) ನಾನು ಅನಂಗ ಪೂಜಾರಿಣಿ! ವೈಶಾಲಿಯ ಸರ್ವಶ್ರೇಷ್ಠ ಸುಂದರಿ!! ಹಗಲಿರುಳೂ ನನ್ನ ಕೃಪಾಕಟಾಕ್ಷಕ್ಕಾಗಿ ಸಾಲುಗಟ್ಟಿ ನಿಂತಿರುವ ಶ್ರೀಮಂತರು, ವರಿಷ್ಠರು, ರಾಜಪುರುಷರು........ ಆರಾಧಿಸುವ ಸೌಂದರ್ಯದ ಅಧಿದೇವತೆ!!!

ನೀಲಾ : ಮತ್ತೇಕೆ ಚಿಂತೆ ಒಡತಿ?

ಸಾಲವತಿ : ನೀಲಾ ಮನುಷ್ಯನ ಸಂತೋಷಕ್ಕೆ ಹಣ, ಐಶ್ವರ್ಯ, ಪ್ರತಿಷ್ಠೆಗಳಷ್ಟೇ ಸಾಲದು. ನಾನು ಬಯಸಿದ್ದು ಇವಿಷ್ಟನ್ನು ಮಾತ್ರವಲ್ಲ. ಅಲ್ಲದೆ ಇದಕ್ಕೆಲ್ಲ ನಾನು ಕೊಡಬೇಕಾಗಿ ಬಂದ ಬೆಲೆ?!....ನಾನೊಂದು ತೆರೆದ ಬೀದಿ! ಬಂದವರೆಲ್ಲ ಹೆಜ್ಜೆಗಳನ್ನು ಬಿಟ್ಟು ಹೋದರು. ಹೆಜ್ಜೆಗಳ ಮೇಲೆ ಹೆಜ್ಜೆಗಳು!! ಯಾರ ಯಾರದೆಂದು ಗುರುತಿಸಲಾಗದಷ್ಟು ದಟ್ಟವಾಗಿ ಮೂಡಿದ ಹೆಜ್ಜೆಗಳು!.... ರಾತ್ರಿಗಳಿಗಾಗಿ ಹಪಹಪಿಸುವ ಕಾಮಾತುರರು ಬೆಳ್ಳನೆಯ ಬೆಳಕಿನಲ್ಲಿ ಮರ್ಯಾದಸ್ತರಂತೆ ತೋರಿಸಿಕೊಳ್ಳುತ್ತ ನನ್ನ ನೆರಳಿನಿಂದಲೂ ದೂರ ಇರಲು ಪ್ರಯತ್ನಿಸುತ್ತಾರೆ....

ನೀಲಾ : ಮತ್ತೇಕೆ ಈ ಬದುಕನ್ನು ಆರಿಸಿಕೊಂಡಿರಿ?

ಸಾಲವತಿ : ನಾನು ಬಯಸಿ ಬಯಸಿ ಇದನ್ನು ಆರಿಸಿಕೊಂಡನೆಂದು ತಿಳಿದೆಯಾ? ಅಧಿಕಾರದಲ್ಲಿನ ನಯವಂಚಕತೆ, ವಿಚಾರ ಸ್ವಾತಂತ್ರ್ಯದ ದುಷ್ಪರಿಣಾಮಗಳೇ ನನ್ನನ್ನು ಈ ಕೂಪಕ್ಕೆ ತಳ್ಳಿದವು. ಯಾವ ಜನ್ಮದ ಸೇಡೋ ಈ ಪುರುಷ ಜಾತಿ ನನ್ನ ಮೇಲೆ ತೀರಿಸಿಕೊಳ್ಳುತ್ತಿದೆ.

ನೀಲಾ : (ಆಶ್ಚರ್ಯದಿಂದ) ಸೇಡು?...... ನಿಮ್ಮ ಮೇಲೇಕೆ ಸೇಡು? ನೀವೇನು ಮಾಡಿದಿರಿ ಆ ಪುರುಷರಿಗೆ?

ಸಾಲವತಿ : ನಾನೇನೂ ಮಾಡಲಿಲ್ಲ. ಮಾಡಬೇಕಾಗಿಲ್ಲ. ನನ್ನ ರೂಪವೇ ನನ್ನ ಪಾಲಿಗೆ ಶತ್ರುವಾಯಿತು.

ನೀಲಾ : ನನಗೆ ಅರ್ಥವಾಗಲಿಲ್ಲ ಒಡತಿ.

ಸಾಲವತಿ : ಎಂಟು ವರ್ಷಗಳ ಹಿಂದೆ....ಇದೇ ವೈಶಾಲಿಯಲ್ಲಿ ಮೊದಲ ಬಾರಿಗೆ ಸುಂದರಿಯರ ಆಯ್ಕೆ ಸ್ಪರ್ಧೆ. ಸರ್ವಶ್ರೇಷ್ಠ ಸುಂದರಿಯಾಗಿ ಆಯ್ಕೆ ಆದವಳಿಗೆ ದೊರೆತದ್ದೇನು ಗೊತ್ತೆ?....ಸೂಳೆಗಾರಿಕೆ! ಇದರ ಹಿಂದೆ ದೊಡ್ಡ ಪಿತೂರಿಯೇ ನಡೆದಿರಬೇಕು! ನಾನು ತೋರಿದ ಸಣ್ಣ

ಉದ್ಧಟತನಕ್ಕಾಗಿ ದೊರೆತ ಶಿಕ್ಷೆ! ಸ್ವತಂತ್ರವಾಗಿ ಬಾಳುವ ಹಕ್ಕನ್ನು ಕೊಡುತ್ತಲೇ ನಿರ್ಬಂಧದ ನೇಣನ್ನು ಸುತ್ತಿದರು....ವಜ್ಜಿ ರಾಷ್ಟ್ರದ ಸರ್ವಶ್ರೇಷ್ಠ ಸುಂದರಿ ಯಾರೋ ಒಬ್ಬರಿಗೆ ದಕ್ಕಬಾರದಂತೆ!! ಸಮಾನತೆಯ ತತ್ವದ ಮೇಲೆ ನಿಂತಿರುವ ವಜ್ಜಿ ರಾಷ್ಟ್ರದಲ್ಲಿ ಎಲ್ಲದರ ಹಂಚಿಕೆಯಾಗಬೇಕಂತೆ!! ಸ್ವಾರ್ಥಪರನಾದ ಅಸೂಯಾಪರನಾದ ವ್ಯಕ್ತಿಯೊಬ್ಬನಿಂದ ಸರಕಿನಂತೆ ಹಂಚಿಕೆಯಾಗಬೇಕಾಗಿ ಬಂತು. ಒಬ್ಬ ಸ್ವಾರ್ಥಿ ಸಂಪೂರ್ಣವಾಗಿ ದಕ್ಕಿಸಿಕೊಂಡು ಯಜಮಾನನಾಗಿ ಸೇಡು ತೀರಿಸಿಕೊಳ್ಳಬೇಕೆಂದು ಹವಣಿಸಿದ; ಮತ್ತೊಬ್ಬ ಅದನ್ನು ತಪ್ಪಿಸಿ ತನಗೆ ದಕ್ಕಿಸಿಕೊಳ್ಳುವುದಕ್ಕಾಗಿ ಸಮಾನತೆ, ಸ್ವಾತಂತ್ರ್ಯ ಎಂದು ಏನೇನೋ ಬಡಬಡಿಸಿ ನನ್ನನ್ನು ಈ ಸ್ಥಿತಿಗೆ ತಂದು ಇರಿಸಿದ. ನನಗೆ ಸ್ವಾತಂತ್ರ್ಯ, ಮುಕ್ತ ಅವಕಾಶಗಳನ್ನು ಕೊಡಿಸುತ್ತಲೇ ನನ್ನ ಜೊತೆಗಿನ ರಾತ್ರಿಗಳಿಗೆ ತಾನೇ ಬೆಲೆಯನ್ನೂ ನಿರ್ಧರಿಸಿಬಿಟ್ಟ!! (ವ್ಯಂಗ್ಯ)

**ನೀಲಾ** : (ನೋವಿನಿಂದ) ಅಯ್ಯೋ ಒಡತಿ! ಇಷ್ಟೆಲ್ಲ ಆಗುತ್ತಿದ್ದರೂ ನೀವೇಕೆ ಸುಮ್ಮನಿದ್ದಿರಿ? ನಿಮಗೂ ಮಾತನಾಡುವ ಸ್ವಾತಂತ್ರ್ಯ ಇತ್ತಲ್ಲ? ನೀವೂ ಒಬ್ಬ ಮನುಷ್ಯಳೆಂಬುದನ್ನು ಚೀರಿ ಹೇಳಬೇಕಿತ್ತು. 'ತನ್ನ ಬದುಕಿನ ಭವಿಷ್ಯವನ್ನು ತಾನೇ ರೂಪಿಸಿಕೊಳ್ಳಬಲ್ಲಳು' ಎಂದು ಅಬ್ಬರಿಸಿ ಹೇಳಬೇಕಿತ್ತು.

**ಸಾಲವತಿ** : ಅದೇ ನನ್ನ ದುರಂತ! ಅಪ್ಪನಿಲ್ಲದೆ ಅನಾಥಳಾಗಿದ್ದ ನನಗೆ ಈ ಎಂಟು ಜನ ದಾರ್ಶನಿಕ ಕುಲಪುತ್ರರು ಅಣ್ಣಂದಿರಾಗಿ ದೊರೆತರು. ಅವರ ದಾಕ್ಷಿಣ್ಯಕ್ಕೆ ಒಳಗಾಗಿ ತೆಪ್ಪಗಿದ್ದೆ. ಈ ಅಸಹಾಯಕತೆಯ ಜೊತೆಗೆ ಪ್ರಜಾತಂತ್ರ ವ್ಯವಸ್ಥೆ! ಜನಾಭಿಪ್ರಾಯ, ಪ್ರಜಾಭಿಪ್ರಾಯ!! ಇಂತಹ ಸಲಹೆ, ಸೂಚನೆಗೆ ದೊರೆತ ಪ್ರಚಂಡ ಪುರಸ್ಕಾರ. ಒಪ್ಪಿಗೆ; ಒತ್ತಾಸೆ. ಪ್ರಜಾರಾಜ್ಯದಲ್ಲಿ ಪ್ರಜಾಭಿಪ್ರಾಯಕ್ಕೆ, ಬಹುಮತಕ್ಕೆ ಮನ್ನಣೆ. ಅವರನ್ನು ವಿರೋಧಿಸಿ ನಿಲ್ಲುವ ಸಾಹಸ ನನ್ನಲ್ಲಿ ಆಗ ಇರಲಿಲ್ಲ....ಅಲ್ಲದೆ ಮಗಧದೊಂದಿಗೆ ಸ್ಪರ್ಧೆ!! ಅಲ್ಲಿನ ಅಂಬಾಪಾಲಿಯ ಆಕರ್ಷಣೆಯಿಂದ ತಪ್ಪಿಸಿ ವೈಶಾಲಿಯೆಡೆಗೆ ಸೆಳೆದುಕೊಳ್ಳಬೇಕೆನ್ನುವ ಛಲ. ರಾಷ್ಟ್ರ ಸಂಪತ್ತಿಯ ಅಭಿವೃದ್ಧಿಯ ಕನಸು.... ಎಲ್ಲವೂ ಒಟ್ಟಾಗಿ ನನ್ನನ್ನು ಪ್ರತಿಷ್ಠಿತ ಸೂಳೆಯನ್ನಾಗಿ ತೀರ್ಮಾನಿಸಿತು.

**ನೀಲಾ** : ಅಂದರೆ....? ಬಲವಂತ.....? ಒತ್ತಾಯಗಳಿಂದಾದುದು.

**ಸಾಲವತಿ** : ಹೂಂ! ಒಂದು ರೀತಿಯಲ್ಲಿ ಹೌದು.... ಆದರೆ.... ಆದರೆ.... ಅವುಗಳ ಜೊತೆಗೆ ನಾನೂ ಕೂಡ ನನ್ನ ಈ ಸ್ಥಿತಿಗೆ ಕಾರಣಳಾಗಿದ್ದೀನಿ.

ನೀಲಾ....ಇದೆಲ್ಲ ಆಗುವ ಕಾಲದಲ್ಲಿ ಆಗಿನ್ನೂ ನನ್ನದು ಕನಸು ಕಾಣುವ ವಯಸ್ಸು. ಹಸಿ ಭಾವನೆಗಳು; ಅಪ್ರಬುದ್ಧ ಸ್ಥಿತಿ. ಅಲ್ಲದೆ ನನ್ನ ಮುಂದೆ ಕಣ್ ಕುಕ್ಕುವ ಸಿರಿ ಸಂಪತ್ತಿನ, ಭೋಗ ಜೀವನದ ಆಸೆಯ ಸೆಳವು. ನನ್ನೊಳಗಿನ ಅಹಂ ಹೆಡೆ ಬಿಚ್ಚಿತು........ ಕಾಮನ ಬಿಲ್ಲಿನ ಕನಸುಗಳು ಬಿಚ್ಚಿಕೊಂಡವು!! ಇಷ್ಟೆಲ್ಲ ಗೌರವ, ಮರ್ಯಾದೆ, ಸುಖ ಸಂಪತ್ತು ವೈಭೋಗಗಳು ನನ್ನ ಮುಂದೆ ತೆರೆದು ನಿಂತಿರುವಾಗ ನಾನೇಕೆ ಹಿಂಜರಿಯಬೇಕೆನಿಸಿತು. ರಾತ್ರಿಗಳು ತಂದು ಕೊಡಬಹುದಾದ ನೋವಿನ ಅನುಭವದ ಕಲ್ಪನೆ ನನಗಿಲ್ಲವಾಗಿತ್ತು. ನನಗೂ ಕೆಲವರ ಮೇಲೆ ಸೇಡು ತೀರಿಸಿಕೊಳ್ಳಬೇಕೆಂಬ ಬಯಕೆಯೊಡೆಯಿತು. ನನ್ನ ಈ ಸೌಂದರ್ಯದ ಚಾಟಿಯಿಂದ ಗಂಡುಗಳನ್ನು ಬುಗುರಿಯಾಡಿಸಿ ನೋಡಬೇಕೆನಿಸಿತ್ತು!

**ನೀಲಾ** : ಹೋಗಲಿ ಆ ಸಮಾಧಾನವಾದರೂ ಸಾಧ್ಯವಾಯಿತೇ?

**ಸಾಲವತಿ** : ಅದೇ ನನಗೆ ನೋವು, ಯಾರನ್ನು ಆಡಿಸಬೇಕೆಂದಿದ್ದೇನೋ ಗುಲಾಮನನ್ನಾಗಿಸಿಕೊಳ್ಳಬೇಕೆಂದಿದ್ದೆನೋ. ಅವರಲ್ಲಿ ಒಬ್ಬನು ಮಾತ್ರ ನನ್ನ ಬಲೆಗೆ ಬಿದ್ದ. ಆದರೆ...ಆದರೆ ಆ ಇನ್ನೊಬ್ಬ ತನ್ನ ನೆರಳನ್ನೂ ಇತ್ತ ಸುಳಿಯ ಬಿಡಲಿಲ್ಲ. ನನ್ನನ್ನು, ನನ್ನ ಸೌಂದರ್ಯವನ್ನು ನಿರ್ಲಕ್ಷಿಸಿ, ನಿರಾಕರಿಸಿ ಎಂತಹ ಅವಮಾನ ಮಾಡಿದ ಗೊತ್ತೆ? ಸಾವಿರಾರು ಮಂದಿಯನ್ನಾದರೂ ಸೆಳೆದು ಕುಣಿಸಬಲ್ಲವಳಾದ ನಾನು ಇವನನ್ನು ಸೆಳೆಯಲಾರದೆ, ಸೋಲಿಸಲಾರದೆ ಹೋದೆ....ಎಂತಹ ಅಪಮಾನ... ನೀಲಾ.... ಎಂತಹ ಅಪಮಾನ!.....ಸರ್ವಶ್ರೇಷ್ಠ ಸುಂದರಿಯ ಅಭಿಮಾನ ಭಂಗ.... ಇಲ್ಲ.... ಇಲ್ಲ.... ಬಿಡುವುದಿಲ್ಲ. ಪ್ರಾಣ ಹೋಗುವುದಕ್ಕೆ ಮೊದಲು ಒಮ್ಮೆಯಾದರೂ ನಾನು ಅವನನ್ನು ಸೋಲಿಸಲೇ ಬೇಕು.... ನನ್ನ ತೋಳುತೆಕ್ಕೆಯಲ್ಲಿ ತನ್ನೆಲ್ಲ ಪೌರುಷವನ್ನು ಕರಗಿಸಿ ಬಿಡಬೇಕು!.... ನಾನಿಲ್ಲದೆ ಅವನಿಗೆ ಬದುಕು ಸಾಧ್ಯವಿಲ್ಲವೆನಿಸುವಂತಾಗಬೇಕು. ಅಲ್ಲಿಯವರೆಗೆ ನಾನು ಬಿಡಲಾರೆ.... ಬಿಡಲಾರೆ ನೀಲಾ (ಉದ್ವಿಗ್ನಳಾಗುತ್ತಾಳೆ)

**ನೀಲಾ** : ಒಡತಿ! ಒಡತಿ! ಇಷ್ಟೊಂದು ಉದ್ವಿಗ್ನತೆ ಕೂಡದು. ನಿಮ್ಮ ಆರೋಗ್ಯಕ್ಕೆ ಒಳ್ಳೆಯದಲ್ಲ.

**ಸಾಲವತಿ** : ನೀಲಾ.... ನೀಲಾ...... (ಕನಸಿನಂತೆ) ಈಗ ಅದು..... ಅದು......

**ನೀಲಾ** : ಒಡತಿ! ..... ಒಡತಿ!.... ಏನನ್ನು ನೆನಪಿಸಿಕೊಳ್ಳುತ್ತಿದ್ದಿರಿ?

**ಸಾಲವತಿ** : ಅದೇ ನೀಲಾ....ಆ ನನ್ನ ಕೂಸು.... ಈಗ ದೊಡ್ಡದಾಗಿರಬೇಕಲ್ಲ....? ತನ್ನನ್ನು ಅನಾಥವಾಗಿ ಎಸೆದ ತಾಯಿಯನ್ನು ಶಪಿಸುತ್ತಿರಬೇಕಲ್ಲ.....? ಇಲ್ಲ......ಅದು ಸತ್ತು ಹೋಗಿರಬೇಕು....... ಹೌದು ಸತ್ತಿರುವುದೇ ಖಂಡಿತ!!

**ನೀಲಾ** : ಒಡತಿ ಗತಿಸಿಹೋದುದನ್ನು ನೆನಪಿಗೆ ತಂದುಕೊಂಡೇಕೆ ಕೊರಗುತ್ತೀರಿ?

**ಸಾಲವತಿ** : ಅಬ್ಬ! ನಾನೆಂತಹ ಚಂಡಾಲ ತಾಯಿ! ಪ್ರಪಂಚದಲ್ಲಿ ನನ್ನಂತಹ ಹೆಣ್ಣೊಂದು ಇರಲಾಗದು. ತನ್ನೊಡಲ ಭಾಗವನ್ನು, ತನ್ನೆದೆಯ ಖಂಡವನ್ನು ಸ್ವತಃ ತಾಯಿಯೇ ಕತ್ತರಿಸಿ ಬಿಸಾಡುವುದನ್ನು ನೋಡಿರುವೆಯಾ ನೀಲಾ?.....

**ನೀಲಾ** : ಒಡತಿ, ಒಡತಿ.... ಬೇರೆ ಏನನ್ನಾದರೂ ಮಾತಾಡಿ ಅದೆಲ್ಲಿಯೋ, ಯಾರದೋ ಖಳಿ ಕ್ಷೇಮವಾಗಿ, ಸುಖವಾಗಿ ಬೆಳೆಯುತ್ತಿರಬೇಕು. ಅದನ್ನು ಮರೆತು ಬಿಡಿ.

**ಸಾಲವತಿ** : ಇಲ್ಲ ನೀಲಾ.... ನನಗೆ ಅದು ಬೇಕು.... ಅದು ಬೇಕು. ಅದನ್ನು ಅಪ್ಪಿ ಮುದ್ದಾಡಬೇಕೆನಿಸುತ್ತಿದೆ. ರಾತ್ರಿಯ ಕನಸುಗಳಲ್ಲಿ ಅಸ್ಪಷ್ಟವಾಗಿ ಮೂಡಿ ಬಂದು ಚೀರಿ ಚೀರಿ ಕೆಳುತ್ತದೆ. 'ನನ್ನನ್ನೇಕೆ ಹೀಗೆ ಎಸೆದೆ?....ನೀನು ತಾಯಿಯಲ್ಲ ರಾಕ್ಷಸಿ... ರಾಕ್ಷಸಿ' ಎಂದು.

**ನೀಲಾ** : ನೀವೇ ಅಲ್ಲವೆ ಒಡತಿ. ಅದನ್ನು ಒಂದು ಹುಣ್ಣಿನಂತೆ ಕತ್ತರಿಸಿ ಬಿಸಾಡಿ ಬಾ ಎಂದದ್ದು...... ಪಾಪ! ಮುದ್ದಾದ ಮುಖ. ಮುಗ್ಧವಾದ ನಗೆ!!.... ಅದನ್ನು ತೊರೆದು ಬರುವಾಗ ನನ್ನೆದೆ ಹಿಂಡಿದಂತಾಯಿತು.... ಆದರೆ ನಮ್ಮ ಅಸಹಾಯಕ ಸ್ಥಿತಿಯಲ್ಲಿ ಏನನ್ನೂ ಮಾಡುವಂತಿರಲಿಲ್ಲ.

**ಸಾಲವತಿ** : ಅದು ಬೆಳೆದು ದೊಡ್ಡದಾಗಿ ಅಪ್ಪ ಯಾರೆಂದು ಕೇಳಿದರೆ ಹೇಳುವ ಸ್ಥಿತಿಯಲ್ಲಿ ನಾನಿರುವೆನೇ? ತಾಯಿ ನಾನಿರಬಹುದು. ಯಾವ ತಂದೆಯ ಮಗುವೆಂದು ಗುರುತಿಸುವುದು?...ಅಲ್ಲದೆ ಯಾರ ಕಣ್ಣಿಗೂ ಬೀಳದಂತೆ ಗುಟ್ಟಾಗಿ ಬೆಳೆಸುವುದಾದರೂ ಹೇಗೆ?....ಈ ಎಲ್ಲ ಸಮಸ್ಯೆಗಳನ್ನರಿತೇ.... ಹಾಗೆ ಮಾಡಬೇಕಾಗಿ ಬಂತು. ಅದೊಂದೇ ದಾರಿ ನನ್ನ ಮುಂದೆ ಇದ್ದುದು... ನೀನೇ ಹೇಳು ನೀಲಾ.... ನಾನು ಕ್ರೂರವಾಗಿ ನಡೆದುಕೊಂಡುದು, ಬೇರೆ ಗತ್ಯಂತರವಿಲ್ಲದೇ ತಾನೇ?!

**ನೀಲಾ** : ನಿಮ್ಮನ್ನು, ನಿಮ್ಮ ನೋವನ್ನು ನಾನು ಅರ್ಥಮಾಡಿಕೊಂಡಿದ್ದೇನೆ ಒಡತಿ. ಗತಿಸಿಹೋದ ಕಹಿ ನೆನಪುಗಳನ್ನು ತಂದುಕೊಂಡೇಕೆ ಮನಸ್ಸನ್ನು ಹಿಂಸಿಸಿಕೊಳ್ಳುತ್ತೀರಿ. ಆಗಬೇಕಾದ್ದು ಆಗುತ್ತದೆ. ಮುಂದಿನದನ್ನು ಯೋಚಿಸಿ ಸುಖವಾಗಿರಿ ಒಡತಿ.

**ಸಾಲವತಿ** : (ಆರ್ತದನಿಯಲ್ಲಿ) ನೀಲಾ, ದೇವರು ನನಗೇಕೆ ಈ ಶಿಕ್ಷೆ ಕೊಟ್ಟ? ನಾನು ಮಾಡಿದ ಪಾಪವಾದರೂ ಏನು? ಬರುವ ಪ್ರತಿಯೊಬ್ಬನೂ ಹಸಿದ ಹೆಬ್ಬುಲಿಯಂತೆ ಆಕ್ರಮಣ ಮಾಡಿ ದೇಹ, ಮನಸುಗಳನ್ನು

ಗಾಯಗೊಳಿಸುತ್ತಾನೆ. ಯಾರೊಬ್ಬರಿಗೂ ನನ್ನ ಮನಸ್ಸು ಬೇಕಿಲ್ಲ; ನನ್ನ ಭಾವನೆಗಳು ಬೇಕಿಲ್ಲ. ನನ್ನ ಅಂದಚೆಂದಗಳ ಬೊಕ್ಕಸವನ್ನು ಬರಿದು ಮಾಡುತ್ತಾರೆ. ಸಿಕ್ಕಿದಷ್ಟು ದೋಚಿಕೊಂಡು ಸಲೀಸಾಗಿ ನಡೆದು ಬಿಡುತ್ತಾರೆ...... ಅವರ ಕಾಮದ ಹಸಿವು ತೀರುವವರೆಗೆ ಎಷ್ಟು ಮಾದಕವಾಗಿ, ಮೋಹಕವಾಗಿ ಮಾತನಾಡುತ್ತಾರೆ. ಗೊತ್ತೇ ನೀಲಾ? ನನ್ನ ದೇಹದ ಅಂಗುಲಂಗುಲವನ್ನೂ ಬಣ್ಣ ಬಣ್ಣದ ಶಬ್ದಗಳಲ್ಲಿ ಬಣ್ಣಿಸಿ ಹಾಡುತ್ತಾರೆ; ಕವಿತೆ ಕಟ್ಟುತ್ತಾರೆ. ಈ ಶೃಂಗಾರ ಕವಿಗಳು!! ಆದರೆ ನಿಜವಾಗಿಯೂ ಅವರಿಗೆ ನಾನು ಬೇಕಿಲ್ಲ... ನಾನೇ ಬೇಡವೆಂದಾದ ಮೇಲೆ ನನ್ನ ಕರುಳಿನ ಕುಡಿಯನ್ನು ಒಪ್ಪಿಕೊಳ್ಳುತ್ತಾರೆಯೇ?.... ಅದನ್ನು ಉಳಿಯಗೊಡುತ್ತಾರೆಯೇ?....ಅದಕ್ಕೇ ನಾನು ಆ ರೀತಿ ಮಾಡಿದೆ.... ಇದರಲ್ಲಿ ನನ್ನದೇನು ತಪ್ಪು?

ನೀಲಾ : ಸಮಾಧಾನ ಮಾಡಿಕೊಳ್ಳಿ ಒಡತಿ...... ಎಲ್ಲವೂ ವಿಧಿವಿಲಾಸ, ನಾನು ಮೊದಲೇ ಹೇಳಿದಂತೆ, ನಮ್ಮ ಬದುಕಿನ ಬ್ರಹ್ಮರು ನಾವಲ್ಲ. ಆದ್ದರಿಂದ ನಾವೇ ನಮ್ಮನ್ನೇಕೆ ನಿಂದಿಸಿಕೊಳ್ಳಬೇಕು?...... ಬನ್ನಿ ಒಡತಿ ಹೊರಗೆ ಹುಣ್ಣಿಮೆಯ ಚಂದ್ರನ ಆ ತಂಪು ಬೆಳಕಲ್ಲಿ ಒಳಗಿನ ಉರಿಯನ್ನಷ್ಟು ಹೊರಕ್ಕೆ ಚೆಲ್ಲಿ ಬರೋಣ. ಮನಸ್ಸಿಗೆ ಸ್ವಲ್ಪವಾದರೂ ಹಾಯೆನಿಸೀತು.

OO

# ದೃಶ್ಯ – ೨

(ವೈಶಾಲಿಯ ರಾಜಬೀದಿ. ಅದರಿಂದ ಸ್ವಲ್ಪ ದೂರದಲ್ಲಿ ಚೌಕಾಕಾರದ ಜಗುಲಿ. ಅದಕ್ಕೆ ಸುತ್ತಲೂ ಮೆಟ್ಟಿಲುಗಳಿವೆ. ಮೆಟ್ಟಿಲುಗಳ ಮೇಲೆ ಎಂಟು ಹತ್ತು ಮಂದಿ ನಾಗರಿಕರು ಕುಳಿತಿದ್ದಾರೆ. ರಾಜಭಟರು ತರಾತುರಿಯಿಂದ ಓಡಾಡುತ್ತಿದ್ದಾರೆ. ಜಗುಲಿ ಮೆಟ್ಟಿಲುಗಳ ಮೇಲೆ ವ್ಯಕ್ತಿಗಳು ತಮ್ಮ ತಮ್ಮಲ್ಲೇ ಮಾತನಾಡಿಕೊಳ್ಳುತ್ತಿದ್ದಾರೆ. ಇಡೀ ಪರಿಸರದಲ್ಲಿ ಒಂದು ಬಗೆಯ ಆತಂಕ, ಅನಿರ್ದಿಷ್ಟತೆಗಳು ಕಾಣಿಸಿಕೊಳ್ಳುತ್ತವೆ. ರಾಜಭಟರು ತರಾತುರಿಯಿಂದ ಓಡಾಡುವುದನ್ನು ಗಮನಿಸಿದ ಒಬ್ಬ ವ್ಯಕ್ತಿ ರಾಜಭಟನನ್ನು ಕೂಗಿ ಕರೆಯುತ್ತಾನೆ.)

**ವ್ಯಕ್ತಿ** : ಓ ಅಣ್ಣಾ! ಅಣ್ಣಾ! ಸ್ವಲ್ಪ ನಿಲ್ಲು (ಎಂದು ಎದ್ದು ಬರುತ್ತಾನೆ.) ಯಾಕೆ ಇಷ್ಟು ಅವಸರ. ಗಾಬರಿಯಿಂದ ಓಡಾಡುತ್ತಿದ್ದೀ?

**ರಾಜಭಟ** : ಅವಸರ, ಗಾಬರಿಗಳಲ್ಲದೆ ಇನ್ನೇನು ಇರಲು ಸಾಧ್ಯ. ದೇಶ ಹತ್ತಿಕೊಂಡು ಉರೀತಿರಬೇಕಾದರೆ?

**ವ್ಯಕ್ತಿ** : ಯಾಕಣ್ಣ, ಯುದ್ಧದ ಸಮಾಚಾರ ಏನಾಯಿತು? ನಮಗೆ ಗೆಲುವು ಸಿಗೋ ಸಾಧ್ಯತೆ ಇದೆಯೇ?

**ರಾಜಭಟ** : ಏನು ಹೇಳೋಕೆ ಆಗುತ್ತೆ ಅಣ್ಣ? ನಮ್ಮ ಕಡೆಯ ಸೈನಿಕರು ಬಹಳ ಪರಾಕ್ರಮದಿಂದಲೇ ಹೋರಾಡುತ್ತಿದ್ದಾರೆ. ಸ್ವತಃ ಮಣಿಧರ ಸೇನಾಪತಿಗಳೇ ಕಣಕ್ಕಿಳಿದು ನಮ್ಮವರನ್ನು ಹುರಿದುಂಬಿಸಿ, ಪ್ರಾಣವನ್ನು ಲೆಕ್ಕಿಸದೆ ಹೋರಾಟಕ್ಕೆ ಇಳಿದಿದ್ದಾರೆ. ಆದರೂ ನೋಡಬೇಕು.

**ವ್ಯಕ್ತಿ** : ಜನ ಈಗ ತಾನೇ ಏನೋ ಗುಸು ಗುಸು ಮಾತನಾಡಿಕೊಳ್ಳುತ್ತಿದ್ದರು. ಅವರಲ್ಲಿ ಏನೋ ಭಯ ತೋರಿದ ಹಾಗಿತ್ತು.

**೨ ನೇ ರಾಜಭಟ:** ಲೋ ಗಿರಿಧರ ಇಲ್ಲೇನು ಮಾತಿಗೆ ನಿಂತೆ. ನಡೆ ಸಮರ ಭೂಮಿಯಿಂದ ಈಗ ತಾನೇ ಸಂದೇಶವಾಹಕರು ಬಂದು ಪ್ರಭುಗಳನ್ನು ಆತುರವಾಗಿ

ಕಾಣಲು ಹೊರಟಿದ್ದಾರೆ. ಅವನ ಗಾಬರಿ, ಮುಖದ ಮೇಲಿನ ಭೀತಿ, ಅವನ ಆತುರ ಇದೆಲ್ಲ ನೋಡಿದರೆ, ಏನೋ ಅನಾಹುತ ಆದ ಹಾಗೇ ಇದೆ. ಮಂತ್ರಾಲೋಚನೆಗೆ ಈಗಾಗಲೇ ಉಪರಾಜರುಗಳು, ಮಂತ್ರಿಗಳು. ಪ್ರಭುಗಳು ಗೂಢಗೃಹ ಸೇರಲು ಹೊರಟಿದ್ದಾರೆ.

**ವ್ಯಕ್ತಿ** : (ದುಃಖದಿಂದ) ವೈಶಾಲಿಯ ಭವಿಷ್ಯ ಏನಾಗುವುದೋ?.... ಅಲ್ಲ, ಇಷ್ಟೊ ವರ್ಷಗಳು ಮೈತ್ರಿಯಿಂದ ಇದ್ದು ಈಗ ದಿಢೀರನೆ ಯುದ್ಧ ಘೋಷಿಸುವ ಅಗತ್ಯವೇನಿತ್ತು?

**ರಾಜಭಟ** : ಇದೆಲ್ಲ ಆ ಮಹಾತಾಯಿಯಿಂದ? (ಕೋಪ, ತಿರಸ್ಕಾರ)

**ವ್ಯಕ್ತಿ** : ಅಂದರೆ? ಮಹಾತಾಯಿ?........ ಯಾರು ಆ ಮಹಾತಾಯಿ?

**ರಾಜಭಟ** : ಇನ್ನಾರು? ಅವಳೇ! ಸರ್ವಶ್ರೇಷ್ಠ ಸುಂದರಿ.

**೨ ನೇ ರಾಜಭಟ:** ಅವಳನ್ನೇಕೇ ದೂರುತ್ತೀ ಮಿತ್ರಾ. ಮಗಧವು ಮೊದಲಿನಿಂದಲೂ ವೈಶಾಲಿಯನ್ನು ಶತ್ರುದೇಶವೆಂದೇ ಪರಿಗಣಿಸುತ್ತ ಬಂದಿದೆ. ಏನೋ ಒಂದು ಏಳೆಂಟು ವರ್ಷಗಳಿಂದ, ಅದೇ ಮಹಾಮಂತ್ರಿಗಳು ವಸಂತೋತ್ಸವಕ್ಕೆ ಬಂದಾಗಿನಿಂದ ಮೈತ್ರಿ ಸಾಧಿಸಿತು. ಸಾಲವತಿಯಂತಹ ಸುಂದರಿ 'ರಾಷ್ಟ್ರ ಪ್ರತಿಷ್ಠೆ' ಯಾದಳು. ಬೇರೆ ಬೇರೆ ದೇಶದ ಜನ ಇಲ್ಲಿಗೆ ಬರುವುದು, ಇದರಿಂದ ಅವರ ಹಣ ಈ ರಾಷ್ಟ್ರದ ಬೊಕ್ಕಸ ಸೇರುವುದು. ಇದೆಲ್ಲವೂ ಮತ್ತು ವೈಶಾಲಿಯ ಅಭಿವೃದ್ಧಿಯೂ ಮಗಧದ ಕಣ್ಣುಕುಕ್ಕಿತು.

**ವ್ಯಕ್ತಿ** : ಅದಕ್ಕೇ ಯುದ್ಧ ಮಾಡಬೇಕೆ?

**೨ ನೇ ರಾಜಭಟ:** ಅದಷ್ಟೇ ಇರಲಾಗದು. ನಮ್ಮ ರಾಷ್ಟ್ರದ ಹೆಮ್ಮೆಯ ಸಾಲವತಿಯನ್ನು ಅಪಹರಿಸಿಕೊಂಡು ಹೋಗುವ ಪಿತೂರಿ ಬೆಳಕಿಗೆ ಬಂತು. ವೈಶಾಲಿ ಅದನ್ನು ಬಹಿರಂಗಪಡಿಸಿ ಮಗಧದ ನಡತೆಯನ್ನು ಪ್ರಶ್ನಿಸಿತು. ಬಲವಂತದಿಂದಲಾದರೂ ಅವಳನ್ನು ಪಡೆಯಲು ಈ ಯುದ್ಧ ಅನಿವಾರ್ಯವಾಯಿತು.

**ವ್ಯಕ್ತಿ** : ಅಯ್ಯೋ ರಾಮ. ಆ ಒಬ್ಬ ಸೂಳೆಗೆ ದೇಶಾನ ಬೆಂಕಿಗೆ ಹಾಕುವ ಪರಿಸ್ಥಿತಿ ಬಂತೆ?

**ರಾಜಭಟ** : ಏಯ್! ಏನು ಮಾತನಾಡುವುದು. ಸೂಳೆ. ಗೀಳೆ ಅಂತ ನಿನ್ನ ಬಾಯಲ್ಲಿ ಬಂದದ್ದೆ ಆದರೆ, ನಾಲಿಗೆ ಸಿಗಿದುಬಿಟ್ಟೇನು. ಆಕೆ ರಾಜಶ್ರೇಷ್ಠ ನಗರವಧು. ತಿಳಿಯಿತೇ?

**೨ ನೇ ರಾಜಭಟ:** ನಡೆ ತಮ್ಮ. ನಮಗೆ ಬೇಗ ಅರಮನೆ ಕಡೆ ಹೋಗಬೇಕಿದೆ. ಪ್ರಭುಗಳ ಆದೇಶ ಏನು ಬರುವುದೋ? (ಹೊರಡುತ್ತಾರೆ)

**ಇನ್ನೊಬ್ಬ ವ್ಯಕ್ತಿ:** ಲೇ ಅಣ್ಣ, ಯುದ್ಧಭೂಮಿಯಿಂದ ಏನು ಸುದ್ದಿ ಬಂದಿರಬಹುದು?... ಅಂತೂ ಇಂತೂ ಈ ಸಮಯದಲ್ಲೇ ಯುದ್ಧ ಆಗಬೇಕಾಯ್ತು! ಇದೇ ಸಮಯದಲ್ಲಿ ೮ ವರ್ಷಗಳ ಹಿಂದೆ ಎಷ್ಟೊಂದು ಸಂಭ್ರಮ, ಗದ್ದಲ ಇತ್ತು. ಈಗ ನೋಡಿದರೆ ಯುದ್ಧ.... ನೋವು..... ಸಾವು. ಯುದ್ಧಕ್ಕೆ ಹೋದವರು ಮರಳಿ ಬರ್ತಾರೋ ಇಲ್ಲವೋ!

**ಮೊದಲವ್ಯಕ್ತಿ:** ಯಾಕೆ ಇಷ್ಟೊಂದು ಹತಾಶೆ! ವೈಶಾಲಿ ರಾಷ್ಟ್ರ, ಸಂಸ್ಕೃತಿ, ಸಂಪತ್ತು ಅಷ್ಟಕ್ಕೆ ದೊಡ್ಡದಲ್ಲ. ಇಲ್ಲಿನವರ ಪರಾಕ್ರಮವೂ ಸಾಮಾನ್ಯವಾದುದ್ದಲ್ಲ. ಖಂಡಿತವಾಗಿಯೂ ಮಗಧಕ್ಕೆ ತಕ್ಕ ಶಾಸ್ತಿ ಮಾಡಿ ವೈಶಾಲಿ ಸೈನಿಕರು ಜಯಘೋಷದೊಂದಿಗೆ ಹಿಂತಿರುಗುತ್ತಾರೆ. ಹೋಗಿರುವವರು ಸಾಮಾನ್ಯ ಸೈನಿಕರಲ್ಲ. ಅಲ್ಲದೆ ಮಣಿಧರ ಸೇನಾಪತಿಗಳೇ ಪರಾಕ್ರಮದಿಂದ ಹೋರಾಟ ನಡೆಸಿದ್ದಾರಂತೆ!

**ಇನ್ನೊಬ್ಬ :** ಮಣಿಧರ ಸೇನಾಪತಿಗಳನ್ನು ಆ ಸಾಲವತಿ ಹೋಗಲು ಬಿಟ್ಟಳೆ?....... ಮೂರು ಹೊತ್ತೂ ಅವಳ ಅಂತಃಪುರದಲ್ಲೇ ಇದ್ದು ಬಿಡುತ್ತಿದ್ದರೆಂಬ ಸುದ್ದಿ ಕೇಳಿದ್ದೆ.

**ಮೊದಲವ್ಯಕ್ತಿ:** ನೀನು ಕೇಳಿರುವ ಸುದ್ದಿಯೇನೋ ಸರಿಯಾದ್ದೆ! ಮಣಿಧರ ಸೇನಾಪತಿಗಳೇ ಸಾಲವತಿಯ ಖಾಯಂ ಗಿರಾಕಿ. ಬಹಳ ಆಪ್ತ ಸ್ನೇಹ. ಒಬ್ಬರನ್ನೊಬ್ಬರು ತುಂಬ ಪ್ರೀತಿಸುತ್ತಿದ್ದರಂತೆ!!.... ಅದೆಲ್ಲ ನಿಜವಿರಬಹುದು. ಆದರೆ ಅವರ ಖಾಸಗಿ ವಿಚಾರಗಳು ನಮಗ್ಯಾಕೆ? ಮಣಿಧರರು ಒಬ್ಬ ಸಮರ್ಥ ಸೇನಾಪತಿಗಳು ಅನ್ನುವುದಷ್ಟೇ ನಮಗೆ ಮುಖ್ಯ.

(ಮಾತನಾಡುತ್ತಿದ್ದಂತೆ ಡಂಗುರದವನ ಪ್ರವೇಶವಾಗುತ್ತದೆ. ಡಂಗುರದ ಸದ್ದು ಕೇಳಿ ಅಲ್ಲಲ್ಲಿ ಚದುರಿ ನಿಂತು ಮಾತನಾಡುತ್ತಿದ್ದವರೆಲ್ಲರೂ ಒಂದು ಕಡೆ ಸೇರಿ ಗುಂಪುಗೂಡುತ್ತಾರೆ. ಮತ್ತು ಕುತೂಹಲದಿಂದ ಡಂಗರದವನ ಮಾತುಗಳ ಕಡೆ ಲಕ್ಷ್ಯ ಕೊಡುತ್ತಾರೆ.)

**ಡಂಗುರದವ:** ಕೇಳ್ರಪ್ಪೋ ಕೇಳ್ರಿ, ಎಲ್ಲ ಮಹಾಜನಗಳು ರಾಜಾಂಗಣದಲ್ಲಿ ಸೇರಬೇಕೆಂದು ಪ್ರಭುಗಳು ಆದೇಶ ಹೊರಡಿಸಿದ್ದಾರೆ. ವೈಶಾಲಿ ಮತ್ತು ಮಗಧದ ಯುದ್ಧ ವಿಚಾರವನ್ನು ಮಾತನಾಡಲು ಅಪೇಕ್ಷಿಸಿದ್ದಾರೆ. ಹಾಗೆಯೇ ಹೊಸ ಸೇನಾಪತಿಗಳನ್ನೂ ಆರಿಸಲಾಗುವುದು. ತಾವೆಲ್ಲರೂ ತಪ್ಪದೆ ಈ ಕೂಡಲೇ ಹೊರಟು ಬರಬೇಕ್ರಪ್ಪೋsss...! ಎಂದು ಎರಡು ಮೂರು ಸಲ ಘೋಷಿಸಿ ಹೊರಡಲು ಒಬ್ಬ ವ್ಯಕ್ತಿ ಆತನನ್ನು ನಿಲ್ಲಿಸಿ ಪ್ರವೇಶಿಸುತ್ತಾನೆ.

**ವ್ಯಕ್ತಿ** : ಅಣ್ಣ ಇದೇನು ನೀನು ಹೇಳುತ್ತಿರುವುದು. ವೈಶಾಲಿಗೆ ಇಬ್ಬರು ಸೇನಾಪತಿಗಳೇ?

**ಡಂಗುರದವ:** ಇಬ್ಬರೆಲ್ಲಿ? ಒಬ್ಬರೇ ಹೌದು.

**ವ್ಯಕ್ತಿ** : ಮತ್ತೆ ನಮ್ಮ ಮಣಿಧರ ಸೇನಾಪತಿಗಳು?

**ಡಂಗುರದವ:** ತಮ್ಮ, ಒಂದು ದುಃಖದ ಸಂಗತೀನೂ ಕೇಳಬೇಕಾಗಿ ಬಂದಿದೆ. ಮಣಿಧರ ಸೇನಾಪತಿಗಳು ನಿನ್ನೆಯ ಯುದ್ಧದಲ್ಲಿ ವೀರಸ್ವರ್ಗ ಪಡೆದರಂತೆ.

**ವ್ಯಕ್ತಿ** : (ಜೋರಾಗಿ) ಏನು! ವೀರಸ್ವರ್ಗವೇ?... ಅಯ್ಯೋ.... ಗೆಳೆಯರೇ..... ಕೇಳಿ..... ಕೇಳಿ ಗೆಳೆಯರೇ. ನಮ್ಮ ಮಣಿಧರ ಸೇನಾಪತಿಗಳು ವೀರಸ್ವರ್ಗ ಪಡೆದರಂತೆ!!

**ಜನ** : (ಹೌಹಾರಿ) ಏನು? ನಮ್ಮ ಮಣಿಧರರು ಇನ್ನಿಲ್ಲವೇ? ಅಯ್ಯೋ ದೇವರೇ!! ಹಾಗಾದರೆ ವೈಶಾಲಿಯ ಗತಿ?...ನಾವು ಇನ್ನು ಸೋತಂತೆಯೇ!!

**ವ್ಯಕ್ತಿ** : ಛೆ! ಛೆ! ವೈಶಾಲಿಗೆ ಸೋಲೇ! ಸಾಧ್ಯವಿಲ್ಲ. ವೈಶಾಲಿಯಲ್ಲಿ ವೀರಭಟರಿಗೆ ಕೊರತೆಯಿಲ್ಲ. ಸಮಯ ಬಂದರೆ ಪ್ರತಿಯೊಬ್ಬ ಪ್ರಜೆಯೂ ಖಡ್ಗ ಹಿಡಿದು ಹೋರಾಡಬಲ್ಲ.

**ಡಂಗುರದವ:** ಅದಕ್ಕೆಂದೇ ಈ ಆತುರದ ಸಭೆ!..... ಹೊಸ ಸೇನಾಪತಿಗಳ ಆಯ್ಕೆ ಆಗಬೇಕು.

**ವ್ಯಕ್ತಿ** : ಅವರಷ್ಟೇ ಸಮರ್ಥರು ನಮ್ಮ ಅಭಯಕುಮಾರ ಉಪ ರಾಜರಿಲ್ಲವೇ?

**ಡಂಗುರದವ:** ಸರಿಯಾಗಿ ಊಹಿಸಿದೆ ತಮ್ಮ. ಉಪರಾಜರಾದ ಅಭಯ ಕುಮಾರರೇ ಮುಂದಿನ ಸೇನಾಪತಿಗಳು!! ಅವರಿಗೇ ಸೇನಾಪತಿ ಪಟ್ಟ!....ಎಲ್ಲ ಮಹಾಜನಗಳು ಸೇರಿ ಅವರಿಗೆ ಬೀಳ್ಕೊಡಬೇಕು. ನಮ್ಮ ಪ್ರೋತ್ಸಾಹ, ಉತ್ತೇಜನಗಳನ್ನು ಅಭಿವ್ಯಕ್ತಿಸಬೇಕು.

**ಜನಗಳು** : ಬನ್ನಿ ಗೆಳೆಯರೆ, ನಾವು ಈಗಲೇ ಹೊರಟು ಆ ವೀರ ಪುರುಷರಿಗೆ ಶುಭ ಹಾರೈಸೋಣ.... (ಡಂಗುರದವನನ್ನು ಕುರಿತು) ನಡಿಯಣ್ಣ ನಾವೂ ನಿನ್ನ ಹಿಂದೆಯೇ ಬರುತ್ತೇವೆ.

(ಜನ ಹೋಗುವರು)

೦೦

## ದೃಶ್ಯ - ೩

(ಸಾಲವತಿ ಮಂಚದ ಮೇಲೆ ಕುಳಿತಿದ್ದಾಳೆ. ನೀಲಾ ಮಧುಪಾತ್ರೆಗೆ ಮಧುವನ್ನು ಸುರಿದು ಸುರಿದು ಕೊಡುತ್ತಿದ್ದಾಳೆ.)

**ಸಾಲವತಿ :** (ರೋಷ, ಆಕ್ರೋಶಗಳಿಂದ) ಅಪಮಾನ! ಅಪಮಾನ!! ಅಬ್ಬ! ಎಂತಹ ಅಪಮಾನ!....ನಾನು ಹೋಗುತ್ತಿದ್ದರೆ ನನ್ನನ್ನು ಜನ ಹೇಗೆ ನೋಡುತ್ತಿದ್ದರು ಗೊತ್ತೆ ನೀಲಾ! ಅವರ ಕಣ್ಣುಗಳಲ್ಲಿ ಚಿಂತೆ; ಮಾತುಗಳಲ್ಲಿ ಮುಳ್ಳು!.... ಮೊನಚು ಮುಳ್ಳು!! ತಿರಸ್ಕಾರ, ಅವಹೇಳನಗಳಿಂದ ನನ್ನನ್ನು ಏನೆಂದು ಸಂಬೋಧಿಸಿದರು ಗೊತ್ತೆ?.... ನಾನು ದರಿದ್ರ ಸೂಳೆಯಂತೆ! ರಾಕ್ಷಸಿಯಂತೆ!! ವೈಶಾಲಿಯ ಶಾಪವಂತೆ. ಸೌಂದರ್ಯದ ಹೆಸರಿನಲ್ಲಿರುವ ವಿಷ ವೃಕ್ಷವಂತೆ!!... ಇನ್ನೂ ಏನೆಲ್ಲ ಅಂದರು ಗೊತ್ತೆ?.... ಅವರಿಗೆ ನಾನೇನು ಮಾಡಿದೆ ನೀಲಾ?.... ಅವರೇಕೆ ನನ್ನನ್ನು ಹೀಗೆ ಕೊಲ್ಲುತ್ತಿದ್ದಾರೆ? (ಬಿಕ್ಕಿ ಬಿಕ್ಕಿ ಅಳುತ್ತಾಳೆ.)

**ನೀಲಾ :** ಸಮಾಧಾನ ತಂದುಕೊ ಒಡತಿ. ಅವರ ಹೊಟ್ಟೆ ಬೆಂಕಿ ಹೀಗೆ ಮಾತಿನಲ್ಲಿ ಹೊರಚೆಲ್ಲುತ್ತಿದೆ. ಅವರ ಸಂಕಟ, ತಳಮಳ, ಗಂಡ ಮಕ್ಕಳನ್ನು ಯುದ್ಧದಲ್ಲಿ ಕಳೆದುಕೊಂಡ ವಿಹ್ವಲತೆ–ಎಲ್ಲವೂ ಅವರ ವಿವೇಕ, ತಾಳ್ಮೆಗಳನ್ನು ಕಸಿದುಕೊಂಡಿದೆ. ಅದೆಲ್ಲವನ್ನು ಕಾರಿಕೊಳ್ಳಲು ನಿಮ್ಮನ್ನು ನೆಪವಾಗಿಸಿಕೊಂಡಿದ್ದಾರೆ. ಪರಿಸ್ಥಿತಿ ಹತೋಟಿಗೆ ಬಂದ ಮೇಲೆ ಅವರಿಗೇ ಅವರು ಮಾಡಿದ ತಪ್ಪಿನ ಅರಿವಾಗುತ್ತದೆ..... ಆದ್ದರಿಂದ ಸದ್ಯಕ್ಕೆ ಅದೆಲ್ಲವನ್ನೂ ಮನಸ್ಸಿಗೆ ಹಚ್ಚಿಕೊಂಡು ಕೊರಗಬೇಡಿ.

**ಸಾಲವತಿ :** ಹೇಗೆ ಸಮಾಧಾನ ತಂದುಕೊಳ್ಳಲಿ ಹೇಳು ನೀಲಾ? ನನ್ನ ನೆರಳನ್ನೂ ತಿರಸ್ಕರಿಸುವ. ಮಾತು ಮಾತಿಗೂ ಕಟಕಿಯಾಡುತ್ತ, ಚುಚ್ಚ ಕೊಲ್ಲುತ್ತಾ ಇರುವಾಗ ಆ ನೋವನ್ನೆಲ್ಲ ಹೇಗೆ ಸಹಿಸಿಕೊಳ್ಳಲಿ?....ಯುದ್ಧವನ್ನು

ನಾನು ಸೃಷ್ಟಿಸಿದೆನೇ?....ಯುದ್ಧದಲ್ಲಿ ಸಾಯುವವರಿಗೆ ನಾನು ಹೊಣೆಯೇ? ಎಲ್ಲಿಂದ ಎಲ್ಲಿಗೆ? ರಾಜಕೀಯ ಜೂಜಾಟದಲ್ಲಿ ನನ್ನನ್ನೇ ಸಿಲುಕಿಸುವುದು ಯಾವ ನ್ಯಾಯ?

**ನೀಲಾ** : ಒಡತಿ!.... ಈ ಯುದ್ಧ ಸಂಭವಿಸಲು ನೀವೂ ಒಂದು ಕಾರಣ ಎಂಬುದು ಜನಕ್ಕೆ ತಿಳಿದಿದೆ. ಅಲ್ಲದೆ ಅವರ ಆಪ್ತರ, ಆತ್ಮಜರ, ಗಂಡಂದಿರ, ಒಡಹುಟ್ಟಿದವರ ಸಾವು ನೋವುಗಳು ಅವರನ್ನು ಹುಚ್ಚರನ್ನಾಗಿಸಿದೆ.

**ಸಾಲವತಿ** : ಇನ್ನೂ ಏನೆಂದರು ಗೊತ್ತೇ ನೀಲಾ... ವಿಚಾರ ಸ್ವಾತಂತ್ರ್ಯವೆಂಬ ಸಮುದ್ರದೊಳಗೆ ಉದ್ಭವಿಸಿದ ಹಾಲಾಹಲವಂತೆ !... ಓಹ್ ಒಂದೇ ಎರಡೇ !.... ಎಷ್ಟೊಂದು ಬೈಗಳು. ಸ್ವಾತಂತ್ರ್ಯ...... ಸ್ವಾತಂತ್ರ್ಯ...... ಸ್ವಾತಂತ್ರ್ಯದ ಹೆಸರಿನಲ್ಲಿ ಪರಾಧೀನತೆಯ ಬೇಡಿ ತೊಡಿಸಿದ.... ನರಕಕ್ಕೆ ತಳ್ಳಿದ, ಕೇವಲ ಒಂದು ಕಲ್ಪನೆಯನ್ನು, ಕನಸನ್ನು ಸಾಕಾರಗೊಳಿಸಿದ, ವೈಶಾಲಿಯಲ್ಲಿ ಇಲ್ಲದಿದ್ದ ಒಂದು ದರಿದ್ರ ಪರಂಪರೆಯನ್ನು ಹುಟ್ಟುಹಾಕಿದ ಸೌಂದರ್ಯ ಸ್ಪರ್ಧೆ..?.... ಅಲ್ಲ... ಅಲ್ಲ... ಅದು ಅನಿಷ್ಟ ಸೂಳೆಗಾರಿಕೆ? ... ಅವನ ಸಾವು... ಅವನಿಗೆ ದೊರೆತ ದಂಡನೆಯೇ ಆಗಿದೆ.

**ನೀಲಾ** : ಒಡತಿ ! ಒಡತಿ ! ಸಾಕು ಮಾಡಿ..... ನಿಮ್ಮ ಮನಸ್ಸನ್ನು ಹತೋಟಿಗೆ ತಂದುಕೊಳ್ಳಿ.... ನೀವು ಇಷ್ಟೊಂದು ಅವರ ಬಗ್ಗೆ ರೋಷದಿಂದ, ಸೇಡಿನಿಂದ ಮಾತನಾಡುತ್ತಿದ್ದೀರಿ..... ನಾನು ನಿಮ್ಮನ್ನು ಒಂದು ಪ್ರಶ್ನೆ ಕೇಳಿದರೆ, ನೀವು ತಪ್ಪು ತಿಳಿಯಬಾರದು.

**ಸಾಲವತಿ** : ಏನದು ನೀಲಾ?

**ನೀಲಾ** : ಸೇನಾಪತಿಗಳನ್ನು ನೀವು ನಿಜವಾಗಿಯೂ ದ್ವೇಷಿಸುತ್ತಿದ್ದಿರಾ?.... ಒಂದು ದಿನ ಬರದಿದ್ದರೆ ನೀವು ಎಷ್ಟೊಂದು ಚಡಪಡಿಸುತ್ತಿದ್ದಿರಿ. ಪದೇ ಪದೇ ನನ್ನನ್ನು ಕಳಿಸಿ ಮಣಿಧರರ ವಿಚಾರ ತಿಳಿದು ಬರಲು ಹೇಳುತ್ತಿದ್ದಿರಿ.

**ಸಾಲವತಿ** : (ಗಟ್ಟಿಯಾಗಿ ನಕ್ಕು) ನೀಲಾ! ನೀಲಾ! ..... ಅದನ್ನೆಲ್ಲ ನಿಜವೆಂದು ನಂಬಿದೆಯಾ?.... ಅದು ಬರೀ ನಾಟಕ! ನಾಟಕ!... ಅವನಿಗೆ ನಂಬಿಕೆ ಬರುವಂತೆ ಮಾಡಬೇಕಿತ್ತು. ಅವನಿಗಾಗಿ ನಾನು ಹೇಗೆ ಸಾಯುತ್ತೇನೆ ಎಂದು ನಂಬಿ ಸಂಪೂರ್ಣವಾಗಿ ನನ್ನ ಸೌಂದರ್ಯದ ಬಲೆಯಲ್ಲಿ ಬಿಡಿಸಿಕೊಳ್ಳಲಾಗದಂತೆ ಸಿಲುಕಿಕೊಂಡು ನಾನಿಲ್ಲದೆ ಒಂದು ಕ್ಷಣದ ಬದುಕೂ ಅಸಹನೀಯವೆನ್ನುವ ಭಾವನೆ ಬಲಿಯಬೇಕಿತ್ತು. ಎಂತಹ ವೀರ! ಎಂತಹ ಶೂರ!.... ನನ್ನ ನೆನಪೇ.... ನನ್ನ ಚಿಂತೆಯೇ ಅವನಲ್ಲಿನ ಪರಾಕ್ರಮ, ಶೌರ್ಯಗಳನ್ನು ಕಬಳಿಸಿರಬೇಕು. ಯುದ್ಧದಲ್ಲಿ ಮನವಿಲ್ಲದೆ

ಕಬಳಿಸಿರಬೇಕು. ಯುದ್ಧದಲ್ಲಿ ಮನವಿಲ್ಲದೆ ಶತ್ರುಗಳಿಗೆ ಸುಲಭ ತುತ್ತಾಗಿರಬೇಕು.

**ನೀಲಾ** : ಒಡತಿ ನಿಮ್ಮ ಆಲೋಚನೆಗಳು ಸಾಧುವಲ್ಲ. ಇದೂ ಒಂದು ರೀತಿಯ ದೇಶದ್ರೋಹವೇ ಅಲ್ಲವೇ?

**ಸಾಲವತಿ** : ದೇಶದ್ರೋಹ!.... ಯಾವ ದೇಶ ನನ್ನನ್ನು ಈ ಸ್ಥಿತಿಗೆ ತಂದು ನಿಲ್ಲಿಸಿದೆಯೋ ಆ ದೇಶದ ಬಗ್ಗೆ ಪ್ರೀತಿ ಹೇಗೆ ಮೂಡಲು ಸಾಧ್ಯ... ದೇಶಪ್ರೇಮಿಯಾದ ಅವನಿಗೆ ಮನಸ್ಸಿನ ನಿಗ್ರಹದ ಅಗತ್ಯ ಇತ್ತು.... ಯುದ್ಧಕ್ಕೆ ಹೋಗುವಾಗಲೂ.... ನೆನಪಿದೆಯಾ? ಅವನಿಂದ ಒಂದು ಪತ್ರ ಬಂದಿತ್ತು. ಅದರಲ್ಲಿ ನನಗೆ ಏನು ಬರೆದಿದ್ದ! ಅಬ್ಬ!.... "ವೈಶಾಲಿಯ ಸೌಂದರ್ಯ ದೇವತೆ! ನೀನಿಲ್ಲದೆ ನನ್ನ ಮನಸ್ಸಿಗೆ ಹೇಗೆ ಹೇಗೋ ಇದೆ. ಯಾವುದರಲ್ಲಿಯೂ ಆಸಕ್ತಿ ಇಲ್ಲ; ಯುದ್ಧವೆಂದರೆ ಆಟವೆಂದು ಭಾವಿಸಿ ಮುನ್ನುಗ್ಗುತ್ತಿದ್ದ ನನಗೆ ಈಗ ಅದರಲ್ಲಿ ಆಸಕ್ತಿಯಾಗಲೀ ಉತ್ಸಾಹವಾಗಲಿ ಇಲ್ಲ. ಎಂದಿಗೆ ಹಿಂತಿರುಗಿ ಬಂದು ನಿನ್ನನ್ನು ನೋಡುವೆನೋ! ನಿನ್ನ ಬಾಹುಬಂಧನದಲ್ಲಿ ಸ್ವರ್ಗಸುಖವನ್ನು ಅನುಭವಿಸುವೆನೋ ಎಂದು ಹಾತೊರೆಯುತ್ತಾ ಕಾಯುತ್ತಿದ್ದೇನೆ." ಎಂದೆಲ್ಲ ಬಡಬಡಿಸಿ ಬರೆದಿದ್ದ. ಮಾನಸಿಕವಾಗಿ ನನ್ನನ್ನು ಕೊಂದ ಅವನು ಕೊಲೆಗಾರ! ಇದೇ ಸರಿಯಾಗಿ ಶಿಕ್ಷೆ ಅನುಭವಿಸಲಿ! ಪ್ರೇಮದ ಬೆಂಕಿಯಲ್ಲಿ ಬಿದ್ದು ಸಾಯುವ ಹುಳು!! "ಆಹಾ!.... ಸಾಲವತಿ.... ಸೌಂದರ್ಯರಾಣಿ!!.... ಸಾಲವನದ ವಿಹಂಗಿಣಿ!! ...... ಎಂದು ಏನೇನೋ ಬಿರುದುಗಳನ್ನು ನೀಡಿದ್ದ. ಆದರೆ..... ಆದರೆ..... ಅದೆಲ್ಲ ಈಗೆಲ್ಲಿ?.... ಇನ್ನೆಲ್ಲಿ?.... ಮೈಯ್ಯ ಸುಕ್ಕುಗಳು, ಎದೆಯ ನೋವುಗಳು!.... ಇನ್ನು ಮುಂದೆ ಯಾರನ್ನೂ ಸೆಳೆಯಲಾರದು. ಈಗ ನಾನೇನು ಮಾಡಬೇಕು ನೀಲಾ.... ನಾನೇನು ಮಾಡಬೇಕು?..... ಉಕ್ಕುತ್ತಿರುವ ಯೌವನ.... ಚಿಮ್ಮಿ ಚೆಲ್ಲುವ ಸೌಂದರ್ಯದ ಕಾಲ ಮುಗಿದ ಮೇಲೆ ನನ್ನ ಒಳಗಿನ ಸೌಂದರ್ಯಕ್ಕಾಗಿ ಯಾರೂ ಬರುವುದಿಲ್ಲ. ಮನುಷ್ಯ ಪ್ರೀತಿಗಾಗಿ..... ಸ್ನೇಹಕ್ಕಾಗಿ ತಹತಹಿಸಬೇಕಾಗಿ ಬರುತ್ತದೆ ನೀಲಾ......ನಮ್ಮ ಮುಂದಿನ ಬದುಕಿನ ದುರಂತದ ಘೋರತೆಯ ಕಲ್ಪನೆಯಾದರೂ ನಿನಗೆ ಇದೆಯೇ?

**ನೀಲಾ** : ನನಗೆ ನಿಮ್ಮ ನೋವಿನ ಆಳದ ಕಲ್ಪನೆ ಇದೆ ಒಡತಿ. ಆದರೆ ಈಗ ಮಾಡುವುದನ್ನಾದರೂ ಏನು? ಮುಂದೆ ಸರಿದ ಬದುಕನ್ನು ಹೇಗೂ ಹಿಂದಕ್ಕೆ ಮರಳಿಸಲಾರೆವು. ಭೂತವನ್ನು ವರ್ತಮಾನ ಮಾಡಲು ಮನುಷ್ಯ ಮಾತ್ರನಿಗೆ ಸಾಧ್ಯವೆ? ಭೂತದ ಅಂದರೆ ಗತಕಾಲದ ಬದುಕಿನಿಂದ ವರ್ತಮಾನದ ಪಾಠವನ್ನು ಕಲಿಯಬೇಕಾಗಿದೆ.

**ಸಾಲವತಿ** : ಈ ತತ್ವದ ಮಾತುಗಳೆಲ್ಲ, ಮಾತಾಡಲು ಮಾತ್ರವೇ ಸರಿ. ನನಗೆ ನನ್ನ ವರ್ತಮಾನವೂ ಬೇಡ; ಭವಿಷ್ಯವೂ ಬೇಡ. ನನಗೆ ಸಾಯಬೇಕೆನಿಸಿದೆ. ಮೈಲಿಗೆಯಾದ ಈ ಮೈಯ ಸೌಂದರ್ಯಕ್ಕೆ ಬೆಂಕಿ ಇಡಬೇಕೆನಿಸುತ್ತಿದೆ.

**ನೀಲಾ** : ಒಡತಿ ಇಂತಹ ಹುಚ್ಚು ಆಲೋಚನೆಗಳಿಗೆ ಅವಕಾಶ ಕೊಡಬೇಡಿ. ಹೇಡಿಯಂತೆ ಆತ್ಮಹತ್ಯೆ ಮಾಡಿಕೊಳ್ಳುವುದರಿಂದ ನಮ್ಮ ಸಮಸ್ಯೆಗೆ ಪರಿಹಾರ ದೊರೆತಂತಾಗಲಿಲ್ಲ. ನೀವು ಹೆಜ್ಜೆಯಿಟ್ಟು ಪ್ರವೇಶಿಸಿದ ಪ್ರಪಂಚವನ್ನು ಧೈರ್ಯದಿಂದ ಗೆಲ್ಲಬೇಕು. ಇಲ್ಲವಾದಲ್ಲಿ ಅದನ್ನು ಬದಲಾಯಿಸಬೇಕು.

**ಸಾಲವತಿ** : ಬದಲಾಯಿಸುವುದೇ?... ಹೇಗೆ.... ಹೇಗೆ? ಏಳು ವರುಷಗಳಿಂದಲೂ ನಿರಂತರವಾಗಿ ಮತ್ತೆ ಮತ್ತೆ ನನ್ನದೇ ಚರಿತ್ರೆ ಪುನರಾವರ್ತನೆಯಾಗುತ್ತಿದೆ. ನನ್ನಂತೆ ನನ್ನ ಸೋದರಿಯರು ಎಷ್ಟೋ ಮಂದಿ ಈ ಅನಿಷ್ಟ ಪರಂಪರೆಯ ಗ್ರಾಸವಾಗಿದ್ದಾರೆ. ಕಾಲಾಂತರದಲ್ಲಿ ಕ್ರಮೇಣ ಈ ಸೌಂದರ್ಯ, ಈ ಪ್ರಾಯಗಳು ಸೋರಿ ಹೋಗಿ, ಅವರ ಕಡೆ ದೃಷ್ಟಿಯನ್ನೂ ಹರಿಸದೆ ಹೊಸ ಹೊಸ ಬಲಿಪಶುಗಳ ಬೆನ್ನು ಹತ್ತಿದಾಗ ಇವರೆಲ್ಲರ ಪಾಡೇನು? ಮುಪ್ಪು, ರೋಗಗಳಲ್ಲಿ ಇವರೇನು ಮಾಡಬೇಕು. ಇವರೆಲ್ಲರೂ ಕುಷ್ಠರಂತೆ ಅಸ್ಪೃಶ್ಯರೆನಿಸಿ, ಸಮಾಜ.... ಸಮಾಜ ಬಹಿಷ್ಕೃತರಾಗುತ್ತಾರೆ!! ಭಿಕ್ಷೆ ಬೇಡಲೂ ಅನರ್ಹರೆನಿಸಿ ಕಡೆಗೆ ನನ್ನಂತೆ ಆತ್ಮಹತ್ಯೆಯನ್ನೇ ಆಯ್ದುಕೊಳ್ಳುತ್ತಾರೆ. ಪ್ರಲೋಭನೆಗಳ ಕ್ಷಣಿಕತೆಯನ್ನು ಅರ್ಥಮಾಡಿಕೊಳ್ಳದ ಅಪ್ರಬುದ್ಧತೆಗೆ ಇಂತಹ ಭಯಂಕರ ಶಿಕ್ಷೆಯನ್ನು ಅನುಭವಿಸಬೇಕೆ? ನಾವೆಲ್ಲ ಬದುಕಿನ ವಸಂತಗಳನ್ನು ಕಳೆದುಕೊಂಡು ಬೋಳು ಬೋಳಾಗಿ ಕಡಿದು ಬೀಳಲು ನಿಂತ ಒಣಮರಗಳು!.... ನನ್ನ ಭವಿಷ್ಯ ನನಗೆ ಹೆದರಿಕೆ ಹುಟ್ಟಿಸುತ್ತಿದೆ.

**ನೀಲಾ** : ನಿಮ್ಮ ಭವಿಷ್ಯಕ್ಕೆ ಏನೂ ತೊಂದರೆಯಿಲ್ಲ ಸುಖವಾಗಿ ನಿಮ್ಮ ಜೀವನ ಸಾಗುತ್ತದೆ. ಗೌರವದಿಂದಲೇ ಬಾಳಬಹುದು.

**ಸಾಲವತಿ** : ಹೀಗಾಗಬೇಕಾದರೆ ನನ್ನ ಮುಂದೆ ಇರುವ ಸಾಧ್ಯತೆಗಳು ಕೇವಲ ಎರಡು : ಆತ್ಮಹತ್ಯೆ ಮತ್ತು ಯಾರ ಹಂಗಿಗೂ ಒಳಗಾಗದ ಸ್ವಾವಲಂಬನೆ... ಅಂದರೆ ನನ್ನ ಅರ್ಥ ನಮ್ಮ ಆರ್ಥಿಕ ಪರಿಸ್ಥಿತಿ.

**ನೀಲಾ** : ನಮ್ಮ ಆರ್ಥಿಕ ಪರಿಸ್ಥಿತಿ ಭದ್ರವಾಗಿದೆ. ಶತಾಯುಷಿಯಾಗಿ ಬದುಕಿರುವವರೆಗೆ ಮಹಾರಾಣಿಯಂತೆ ಎಲ್ಲ ವೈಭವಗಳಿಂದಲೂ ಜೀವಿಸಬಹುದಾದಷ್ಟು ಸ್ವರ್ಣ ಸಂಗ್ರಹಣೆ ಇದೆ.

**ಸಾಲವತಿ** : ನೀನು ಪರೀಕ್ಷಿಸಿರುವೆಯಾ? ಯಾಕೆ ಕೇಳುತ್ತೇನೆಂದರೆ, ಹಣ, ಚಿನ್ನ ಬದುಕಲು ಬಹಳ ಮುಖ್ಯ. ಅದು ಇದ್ದಲ್ಲಿ ಪರಾಧೀನತೆಯ ನರಕವೂ ಇರುವುದಿಲ್ಲ. ನಮ್ಮ ಗೌರವ ಪ್ರತಿಷ್ಠೆಗಳೂ ಸಾಯುವುದಿಲ್ಲ.

**ನೀಲಾ** : ನಾನು ಹೇಳಿದೆನಲ್ಲ ಒಡತಿ. ನಿಮ್ಮ ಬದುಕಿನ ವಿಚಾರದಲ್ಲಿ ನೀವು ನಿಶ್ಚಿಂತರಾಗಿರಿ. ಆದರೆ ನಾನು ಮೊದಲೇ ಹೇಳಿದಂತೆ ನೀವು ಮಾಡಬೇಕಾದ ಮುಖ್ಯಕಾರ್ಯವೊಂದಿದೆ. ಅದು ನಿಮ್ಮಿಂದಲೇ ಆಗಬೇಕು.

**ಸಾಲವತಿ** : ಹೇಳು ನೀಲಾ. ನನ್ನಂತಹ ಪಾಪಿ ಹೆಣ್ಣಿನಿಂದ ಪ್ರಯೋಜನಕರವಾದ ಕೆಲಸವೇನಾದರೂ ಆಗುವಂತಿದ್ದರೆ, ನನ್ನ ಬದುಕಿಗೇ ಒಂದು ಅರ್ಥ ಸಿಕ್ಕಂತೆ ಭಾವಿಸುತ್ತೇನೆ. ನನಗೂ ಒಂದು ಒಳ್ಳೆಯ ಕೆಲಸ ಮಾಡಿದ ತೃಪ್ತಿ ಸಿಕ್ಕುತ್ತದೆ. ನನ್ನೊಳಗಿನ ಕುದಿ, ಚಡಪಡಿಕೆಗಳಿಗೆ ನೆಮ್ಮದಿ ಸಿಗುತ್ತದೆ.

**ನೀಲಾ** : ಒಡತಿ ನಿಮ್ಮಿಂದಲೇ ಪ್ರಾರಂಭವಾದ ಈ ಅನಿಷ್ಟ ಪರಂಪರೆ ಇನ್ನು ಮುಂದೆ ಮುಂದುವರಿಯದಂತೆ ನೀವೇ ಕೊನೆಗಾಣಿಸಬೇಕು. ನೀವು ಅನುಭವಿಸಿದ ಮಾನಸಿಕ ಯಾತನೆಯ ದುರದೃಷ್ಟ ಇನ್ನು ವೈಶಾಲಿಯ ಯಾವ ಹೆಣ್ಣಿಗೂ ಲಭಿಸಬಾರದು. ನಿಮ್ಮನ್ನು ಕಿತ್ತು ತಿನ್ನುತ್ತಿರುವ ಪಾಪಪ್ರಜ್ಞೆಗೆ ಇದೇ ಪರಿಹಾರವಾಗಬೇಕು. ಈ ಪದ್ಧತಿಯ, ಪರಂಪರೆಯ ನಿರ್ಮೂಲನವೇ ನೀವು ಮಾಡಿಕೊಳ್ಳುವ ಪ್ರಾಯಶ್ಚಿತ್ತವಾಗಬೇಕು. ನಿಮ್ಮನ್ನು ಥೂಕರಿಸಿದ ಛೀಮಾರಿ ಹಾಕಿದ ಜನಗಳ ಎದೆಯಲ್ಲಿ ನೀವು ದೇವತೆಯಾಗಿ ನಿಲ್ಲಬೇಕು. ನಿಮ್ಮನ್ನು ಪ್ರಜೆಗಳು, ವಿಶೇಷವಾಗಿ ಇದಕ್ಕೆ ಬಲಿಯಾಗಬಹುದಾಗಿದ್ದ ಹೆಣ್ಣು ಮಕ್ಕಳೂ ಪೂಜಿಸುವಂತೆ, ಆರಾಧಿಸುವಂತೆ ಆಗಬೇಕು.

**ಸಾಲವತಿ** : ನೀಲಾ.... ನೀಲಾ..... ನೀನೆಷ್ಟು ದೂರ ಯೋಚಿಸಬಲ್ಲೆ. ಅಬ್ಬ! ನೀನು ಸಲಹಾಮಂತ್ರಿಯಾಗಿ ರಾಜಸಭೆಯಲ್ಲಿ ಇರಬೇಕಿತ್ತು..... ನೀಲಾ.... ನೀಲಾ..... ನಿನ್ನನ್ನು ಅಪ್ಪಿ ಮುದ್ದಾಡಬೇಕೆನಿಸುತ್ತದೆ. ನನಗೆ ನೀನು ದೊರೆತದ್ದು ನನ್ನ ಅದೃಷ್ಟ! ಮಹಾಭಾಗ್ಯ!!

**ನೀಲಾ** : ಒಡತಿ, ನಾನು ನಿಮ್ಮ ದಾಸಿ. ಇಷ್ಟೊಂದು ಹೊಗಳಿ ಬಿಡಬೇಡಿ.... ನನ್ನ ತಲೆ ತಿರುಗೀತು!!

**ಸಾಲವತಿ** : ಹಾಗೆನ್ನಬೇಡ ನೀಲಾ. ನೀನೆಂದೂ ದಾಸಿಯಂತೆ ನಡೆದುಕೊಳ್ಳಲಿಲ್ಲ. ನನ್ನೆಲ್ಲ ಕಷ್ಟ ಸುಖಗಳಲ್ಲಿ ನೀನು ಭಾಗಿಯಾಗಿದ್ದೆ. ನೀನು ದಾಸಿಯಲ್ಲ ನೀಲಾ... ನನ್ನ ಅಂತರಂಗದ ಗೆಳತಿ. ನನ್ನ ಜೊತೆ ಎಷ್ಟು ಸಹಕರಿಸಿದ್ದೆ.

**ನೀಲಾ** : ನಾನೇನು ಮಾಡಿರುವೆ ಒಡತಿ? ಹೆಚ್ಚಿನದೇನನ್ನೂ ನಾನು ನಿಮಗೆ ಮಾಡಲಿಲ್ಲ. ನನ್ನ ಧರ್ಮ, ನನ್ನ ಕರ್ತವ್ಯಗಳಷ್ಟನ್ನೇ ನಿರ್ವಹಿಸಿದೆ. ನಿಮ್ಮಂತಹ ಒಡತಿ ದೊರೆತದ್ದೂ ನನ್ನ ಜನ್ಮ ಜನ್ಮಾಂತರ ಪುಣ್ಯ.

**ಸಾಲವತಿ** : ಈಗ ಹೇಳು ನೀಲಾ......... ಮುಂದೆ ನಾನೇನು ಮಾಡಬೇಕು?

**ನೀಲಾ** : ಏನಿಲ್ಲ ಒಡತಿ. ಈ ಬಾರಿಯ ಸೌಂದರ್ಯ ಸ್ಪರ್ಧೆಗೆ ನೀವು ಹೋಗಬೇಕು.

**ಸಾಲವತಿ** : (ದಿಗ್ಭ್ರಮೆಯಿಂದ) ಹಾಂ!.... ನಾನು ಸೌಂದರ್ಯ ಸ್ಪರ್ಧೆಗೆ ಹೋಗಬೇಕೆ?... ನೀಲಾ ನೀನು ಹೇಳುತ್ತಿರುವುದೇನು.... ಇಷ್ಟು ಹೊತ್ತೂ ಜಾಣೆಯಂತೆ ಮಾತನಾಡಿದವಳು, ಈಗ ಏನಾಯಿತು ನಿನಗೆ? ಯಾವುದರ ದುಷ್ಪರಿಣಾಮಗಳಿಗಾಗಿ ಅಳುತ್ತಿದ್ದೇನೆಯೋ ಅದನ್ನೇ ಮತ್ತೆ ಮಾಡು ಎನ್ನುತ್ತಿರುವೆಯಾ?

**ನೀಲಾ** : ಒಡತಿ! ಒಡತಿ! ಅದಕ್ಕೆ ಹೇಳುವುದು, ನಿಮಗೆ ಸ್ವಲ್ಪವೂ ತಾಳ್ಮೆಯಿಲ್ಲ, ಎಂದು. ಕೆಟ್ಟದ್ದೆಂದು ಹೇಳಿದ ನಾನೂ ಅದನ್ನು ಪುರಸ್ಕರಿಸುತ್ತೇನೆಯೇ? ನಾನು ಹೇಳಿದ್ದು ಸೌಂದರ್ಯ ಸ್ಪರ್ಧೆಗೆ ಹೋಗಿ ಎಂದೆನೇ ಹೊರತಾಗಿ, ನೀವೂ ಭಾಗವಹಿಸಿ, ಎಂದೆನೇ? ಅಷ್ಟರಲ್ಲಿಯೇ ನಿಮಗೆ ಆತುರ!

**ಸಾಲವತಿ** : ನಿನ್ನ ಉದ್ದೇಶ? (ಅನುಮಾನಿಸುತ್ತ)

**ನೀಲಾ** : ನನ್ನ ಉದ್ದೇಶ ಇಷ್ಟೆ. ಈ ಎಂಟು ವರುಷಗಳಲ್ಲಿ ಸುಂದರಿಯರಾಗಿ ಆಯ್ಕೆಯಾದವರು ನಿಮ್ಮಷ್ಟು ಅದೃಷ್ಟಶಾಲಿಗಳಲ್ಲ. ಸಾಮಾನ್ಯರ ಕಾಮದ ಹಸಿವನ್ನು ಅಲ್ಪ ಆದಾಯಕ್ಕೇ ತೀರಿಸಿ ಬದುಕುತ್ತಿದ್ದಾರೆ. ಈಗಲೂ ನಿಮ್ಮಲ್ಲಿ ಹೊಡೆದೆದ್ದು ಕಾಣುತ್ತಿರುವ ಸೌಂದರ್ಯಕಾಂತಿಯಲ್ಲಿ ಹತ್ತನೇ ಒಂದು ಭಾಗವೂ ಅವರಲ್ಲಿ ಉಳಿದಿಲ್ಲ. ಬರಬೇಕಾದ ವೇಳೆಗಿಂತ ಮೊದಲೇ ಆಕ್ರಮಣಗಳ ಪರಿಣಾಮವಾಗಿ ಬಂದು ತಪ್ಪಿರುವ ಮುಪ್ಪು ಅವರನ್ನು ತಲ್ಲಣಗೊಳಿಸಿದೆ.... ಒಡತಿ ಅವರಿಗೆ ಭವಿಷ್ಯವೇ ಇಲ್ಲದಂತಾಗಿದೆ... ಏನಾದರೂ ಪ್ರಯತ್ನಿಸಿ ನಿಮಗೆ ರಾಜಾನುಗ್ರಹವಿದೆ. ನಿಮ್ಮ ಮಾತಿಗೆ, ನಿಮಗೆ ಬೆಲೆಯಿದೆ. ನಿಮ್ಮನ್ನು ರಾಜಾಧಿಕಾರವು ಗೌರವಿಸುತ್ತದೆ. ನಿಮಗಿರುವ ಈ ಅವಕಾಶವನ್ನು ಸಮಾಜಕ್ಕಾಗಿ, ಹೆಣ್ಣುಮಕ್ಕಳ ಒಳಿತಿಗಾಗಿ ಬಳಸಿಕೊಳ್ಳಿ.

**ಸಾಲವತಿ** : ಹೌದು ನೀಲಾ. ನೀನು ಹೇಳುವುದು ಸರಿ. ಇದೇ ಸರಿಯಾದ ಅವಕಾಶ. ಇಂದೇ ರಾತ್ರಿ ನನ್ನ ಕುಲಪುತ್ರ ಅಣ್ಣಂದಿರ ಮನೆಗಳಿಗೆ ಹೋಗಿ ಈ ವಿಷಯವಾಗಿ ಮಾತಾಡಿ ಬರುತ್ತೇನೆ. ನನಗೊದಗಿದ ಸ್ಥಿತಿಗಾಗಿ ಅವರೂ ಬಹಳ ನೊಂದಿದ್ದಾರೆ. ತಾವೇ ನನ್ನ ಈ ಸ್ಥಿತಿಗೆ ಕಾರಣವೆಂದು

ಹೇಳಿಕೊಳ್ಳಲಾಗದ ಸಂಕಟಕ್ಕೆ ಗುರಿಯಾಗಿದ್ದಾರೆ. ನನ್ನನ್ನು ಮುಖಾಮುಖಿಯಾಗಿ ಎದುರಿಸುವ ಸಾಹಸವೂ ಇಲ್ಲದಂತಾಗಿದೆ. ಜನಾಭಿಪ್ರಾಯದ ಮೊರೆತದ ಮುಂದೆ ದನಿಯೂ ಎತ್ತಲಾಗದ ಅಸಹಾಯಕತೆಯನ್ನು ನೆನೆಸಿಕೊಂಡಾಗ ಅವರ ಮೇಲಿನ ಕೋಪ, ದ್ವೇಷ, ರೋಷಕ್ಕಿಂತ ಕರುಣೆ ಮರುಕಗಳೇ ಹೆಚ್ಚಾಗುತ್ತವೆ. ಈಗ ನನ್ನ ಪ್ರಯತ್ನಕ್ಕೆ, ನನ್ನ ಅಭಿಪ್ರಾಯಕ್ಕೆ ಮೆಚ್ಚಿ ಕುಣಿದು ಕುಪ್ಪಳಿಸುತ್ತಾರೆ. ನಿಯತಿವಾದಿಗಳಾದ ಅವರಿಂದ ನಿಯತಿಯನ್ನೂ ಬದಲಾಯಿಸುವಂತೆ ಮಾಡೋಣ.

**ನೀಲಾ** : ಬಹಳ ಒಳ್ಳೆಯ ಕೆಲಸ. ಬೇಗನೆ ಮಾಡಬೇಕು ಒಡತಿ. ನೀವು ಸಿದ್ಧರಾಗಿ, ನಾನು ಸಾರಥಿಗೆ ಹೇಳಿಬರುತ್ತೇನೆ.

(ನೀಲಾ ಹೊರಡುತ್ತಾಳೆ. ಸಾಲವತಿ ಯೋಚನಾಮಗ್ನಳಾಗುತ್ತಾಳೆ)

OO

# ದೃಶ್ಯ – ೪

(ಸಂಸ್ಥಾಗಾರದಲ್ಲಿ ಸಭೆ ಸೇರಿದೆ. ರಾಜಾ, ಉಪರಾಜ, ಸೇನಾಪತಿ ಮತ್ತು ಕುಲಪುತ್ರರೆಲ್ಲರೂ ಉಚಿತಾಸನಗಳಲ್ಲಿ ಕುಳಿತಿದ್ದಾರೆ. ವೈಶಾಲಿಯ ಪ್ರಜೆಗಳೆಲ್ಲರೂ ಇಕ್ಕೆಲದಲ್ಲಿ ತುಂಬಿದ್ದಾರೆ. ಸಭೆಯ ಎಡಭಾಗದಲ್ಲಿ ವಿಶೇಷ ಆಸನಗಳಲ್ಲಿ ಹಿಂದಿನ ವರ್ಷಗಳಲ್ಲಿ ಆಯ್ಕೆಯಾದ ಶ್ರೇಷ್ಠ ಸುಂದರಿಯರೂ ನಗರ ವಧುಗಳೂ ಆದ ಎಂಟು ಮಂದಿ ಸುಂದರ ಸ್ತ್ರೀಯರು ಕುಳಿತಿದ್ದಾರೆ. ಬಲಭಾಗದಲ್ಲಿ ಸ್ಪರ್ಧೆಗೆಂದು ಬಂದ ಸುಂದರ ಯುವತಿಯರು ಆಸೀನರಾಗಿದ್ದಾರೆ. ಎಲ್ಲರ ಮುಖಗಳಲ್ಲಿ ಉಲ್ಲಾಸ, ಸಂಭ್ರಮಗಳು ತುಂಬಿವೆ. ಸ್ಪರ್ಧೆಯ ಕಾರ್ಯಕ್ರಮ ಆರಂಭವಾಗಬೇಕಿದೆ. ಸ್ವಲ್ಪ ದೂರದಲ್ಲಿ ವೇಗವಾಗಿ ಬರುತ್ತಿರುವ ರಥದ ಶಬ್ಧ ಕೇಳಿ ಬರುತ್ತದೆ. ಜನ ಕುತೂಹಲದಿಂದ ಅತ್ತ ನೋಡುತ್ತಾರೆ. ಬರುತ್ತಿದ್ದವರು ಯಾರೆಂದು ಗುರುತಿಸಿದ ವ್ಯಕ್ತಿಯೊಬ್ಬ ಉದ್ಗಾರ ತೆಗೆದು, 'ಓಹ್ ಸಾಲವತಿ ಸುಂದರಿ' ಎನ್ನುತ್ತಾನೆ)

**ಜನರಲ್ಲಿ ಒಬ್ಬ:** ಅರೆ! ಸಾಲವತಿ! ವೈಶಾಲಿಯ ಸರ್ವಶ್ರೇಷ್ಠ ಸುಂದರಿ!

**ಮತ್ತೊಂದುದನಿ:** ಆಹಾ! ಸುಂದರಿ! ಆ ಅನಿಷ್ಟ ಪಿಶಾಚಿ ಇಲ್ಲಿಗೇಕೆ ಬಂದಳು?

**ಹೆಣ್ಣಿನ ಧ್ವನಿ:** ಮತ್ತೇನು ಅನಿಷ್ಟವನ್ನು ಸೃಷ್ಟಿ ಮಾಡಲಿದ್ದಾಳೋ!

**ಮತ್ತೊಂದು ಹೆಣ್ಣಿನ ಧ್ವನಿ:** ಸುಮ್ಮನಿರೆ ತಾಯಿ. ಅವಳನ್ನೇಕೆ ದೂರುತ್ತೀ. ನಿನಗವಳು ಮಾಡಿದ ಅನ್ಯಾಯ ಏನು?

**ಗಂಡು ದನಿ:** ತಾಯಂದಿರೇ ಸ್ವಲ್ಪ ಸುಮ್ಮನಿರಿ. ಆ ಸೌಂದರ್ಯವನ್ನು ನೋಡುವ ಭಾಗ್ಯ ಎಷ್ಟೋ ದಿನಗಳ ಮೇಲೆ ಈಗ ಸಿಕ್ಕಿದೆ,

**ಹೆಣ್ಣಿನ ಧ್ವನಿ:** ಸೌಂದರ್ಯವಂತೆ ಸೌಂದರ್ಯ! ನಮ್ಮ ಗಂಡಂದಿರನ್ನು ಕೊಂದವಳು!

**೨ನೇ ಹೆಣ್ಣಿನ ಧ್ವನಿ:** ನನ್ನ ಮಕ್ಕಳನ್ನು ನುಂಗಿ ನೀರು ಕುಡಿದವಳು.

**ಗಂಡು ದನಿ:** ಏನೇ ಹೇಳಿ. ಇಂದಿಗೂ ಅವಳೇ ವೈಶಾಲಿಯ ಸರ್ವಶ್ರೇಷ್ಠ ಸುಂದರಿ! ವಜ್ಜಿ ರಾಷ್ಟ್ರದ ಹೆಮ್ಮೆ.

**ಹೆಣ್ಣಿನ ದನಿ:** ಅದೇನು ಮೋಡಿ ಹಾಕುತ್ತಾಳೋ. ನಮ್ಮ ಗಂಡಸರು ಬಾಯಿಬಾಯಿ ಬಿಟ್ಟುಕೊಂಡು ಅವಳಿಗೆ ಸಾಯುತ್ತಾರೆ.

(ರಥ ಇಳಿದು ಬರುತ್ತಿರುವ ಸಾಲವತಿಯನ್ನು ರಾಜಭಟರು ಅಭಿವಂದಿಸುತ್ತಾರೆ. ಪ್ರಭುಗಳು ಗಣಶ್ರೇಷ್ಠರು "ನಮ್ಮ ಸರ್ವಶ್ರೇಷ್ಠ ಸುಂದರಿ ಸಾಲವತಿ, ದಯಮಾಡಿಸಬೇಕು. ಇಲ್ಲಿ ಈ ಆಸನವನ್ನು ಸ್ವೀಕರಿಸಬೇಕು" ಎಂದು ೮ ಮಂದಿ ಸುಂದರಿಯರು ಕುಳಿತಿದ್ದ ಆಸನಗಳಿಂದ ಸ್ವಲ್ಪ ದೂರದಲ್ಲಿ ಎತ್ತರದಲ್ಲಿ ಖಾಲಿಯಿದ್ದ ಆಸನದ ಕಡೆಗೆ ರಾಜ ಸೇವಕರು ಕರೆದೊಯ್ಯುತ್ತಾರೆ. ಗುಜುಗುಜು ಶಬ್ದ ಆರಂಭವಾಗುತ್ತದೆ. ಪ್ರಭುಗಳು ಒಮ್ಮೆ ಜನಸ್ತೋಮವನ್ನು ನೋಡಿ ಎದ್ದು ನಿಲುತ್ತಾರೆ.)

**ಪ್ರಭುಗಳು :** (ಎದ್ದುನಿಲ್ಲುತ್ತಾ) ದಯವಿಟ್ಟು ಎಲ್ಲರೂ ಶಾಂತವಾಗಿರಿ! ಶಾಂತವಾಗಿರಿ... (ಸದ್ದಡಗುತ್ತದೆ) ನನ್ನ ಪ್ರೀತಿಯ ಪ್ರಜೆಗಳೇ. ವೈಶಾಲಿಯ ಪ್ರಪ್ರಥಮ ಸರ್ವಶ್ರೇಷ್ಠ ಸುಂದರಿಯುನ್ನು ವೈಶಾಲಿಯ ಹೆಮ್ಮೆಯು ಪ್ರತೀಕ. ಅಮೂಲ್ಯನಿಧಿ. ಈ ಸೌಂದರ್ಯ ರಾಶಿಯ ಮುಂದೆ ಮಗಧದ ಅಂಬಾಪಾಲಿಯೇ ತಲೆತಗ್ಗಿಸಿದಳೆಂದರೆ ಸಾಲವತಿಯ ಹಿರಿಮೆ ನಿಮಗೆ ಅರ್ಥವಾದೀತು. ಇಂತಹ ಅಮೂಲ್ಯ ಮಣಿಯನ್ನು ತುಡುಕಿದ್ದಕ್ಕೆ, ಕೈ ಹಾಕಿದ್ದಕ್ಕೆ, ಮಗಧಕ್ಕೆ ಪಾಠ ಕಲಿಸಬೇಕಾದ ಅಗತ್ಯಬಿತ್ತು. ನೆರೆಯ ರಾಜ್ಯಗಳೆಲ್ಲವುಗಳ ಕಣ್ಣು ಕುಕ್ಕುತ್ತಿವೆ. ಆಕೆಯನ್ನು ರಕ್ಷಿಸಿಕೊಳ್ಳುವುದು ನಮ್ಮ ಕರ್ತವ್ಯವಾದ್ದರಿಂದ ಮಗಧದೊಂದಿಗೆ ಯುದ್ಧ ಅನಿವಾರ್ಯವಾಯಿತು. ಅದಕ್ಕಾಗಿ ಆಕೆಯನ್ನು ದೂಷಿಸುವುದರಲ್ಲಿ ಅರ್ಥವಿಲ್ಲ.

**ಒಬ್ಬ ವ್ಯಕ್ತಿ :** ನಮ್ಮ ಪ್ರೀತಿಯ ಸೇನಾಪತಿಗಳು ಇವಳಿಂದಲೇ ಸಾವನ್ನಪ್ಪಿದರು.

**ಪ್ರಭುಗಳು :** ಅರ್ಥವಿಲ್ಲದೆ ಆರೋಪಗಳನ್ನು ಮಾಡಬಾರದು. ಯುದ್ಧವೆಂದರೆ ಸೋಲು, ಗೆಲುವು, ನೋವು, ಸಾವುಗಳು ಅನಿವಾರ್ಯ. ಒಮ್ಮೆ ಸೋತರೆ, ಮತ್ತೊಮ್ಮೆ ಗೆಲುವು. ಈಗ ನಮ್ಮ ಅಭಯ ಕುಮಾರರು, ಕುಲಪುತ್ರರು ಯುದ್ಧಭೂಮಿಯಿಂದ ಗೆಲುವಿನ ಪತಾಕೆಯನ್ನು ಹಿಡಿದು ವೈಶಾಲಿಯ ಕೀರ್ತಿಯನ್ನು ಮೆರೆಸುತ್ತ ಹಿಂತಿರುಗಲಿಲ್ಲವೇ? ಆದ್ದರಿಂದ ಸೋಲು, ಗೆಲುವುಗಳು ಅನಿಶ್ಚಿತ... ನಮಗೆ ದೊರೆತ ದಿಗ್ವಿಜಯದ ಸಮಾರಂಭವೂ ವಸಂತೋತ್ಸವದೊಂದಿಗೇ ಆಚರಿಸುವ ವಿಶೇಷ ಸಂದರ್ಭ ಏರ್ಪಟ್ಟಿದೆ. ೮ ವರ್ಷಗಳ ಹಿಂದೆ ಇದೇ ಸಭೆಯಲ್ಲಿ ಈಕೆ ಸರ್ವಶ್ರೇಷ್ಠ ಸುಂದರಿಯಾಗಿ ಆಯ್ಕೆಯಾದ ಆ ಕ್ಷಣಗಳು ಮತ್ತೆ ನೆನಪಿಗೆ ಬರುತ್ತಿವೆ. ಈ ಸಲ ಆಕೆ ಆಗಮಿಸಿರುವುದು ಹಬ್ಬಕ್ಕೆ ಕಳೆಕಟ್ಟಿದಂತಿದೆ.

**ದನಿಗಳು** : ಅಭಯಕುಮಾರರಿಗೆ ಜಯವಾಗಲಿ! ವೈಶಾಲಿ ರಾಷ್ಟ್ರವು ಚಿರಾಯುವಾಗಲಿ!!

**ಪ್ರಭುಗಳು** : ಅಭಯಕುಮಾರ ಸೇನಾಪತಿಗಳೇ, ಈ ಶುಭ ಸಂದರ್ಭದಲ್ಲಿ ವಸಂತೋತ್ಸವ ಸಂಭ್ರಮದಲ್ಲಿ ಪ್ರಜೆಗಳು ತಮ್ಮನ್ನು ನಮ್ಮ ಪರಮ ವೀರರಾದ ಕುಲಪುತ್ರರನ್ನು ಅಭಿನಂದಿಸಬೇಕೆಂದಿದ್ದಾರೆ. ದಯವಿಟ್ಟು ಅವರನ್ನುದ್ದೇಶಿಸಿ ಒಂದೆರಡು ಮಾತನಾಡಬೇಕೆಂದು ನಮ್ಮ ಪ್ರಾರ್ಥನೆ.

**ಅಭಯಕುಮಾರ:** ನನ್ನ ಪ್ರೀತಿಯ ಬಂಧುಗಳೇ, ಅಣ್ಣ ತಮ್ಮಂದಿರೇ, ಅಕ್ಕ–ತಂಗಿಯರೇ, ತಾಯಂದಿರೆ, ಸಮಯಕ್ಕಾಗಿ, ನೆಪಕ್ಕಾಗಿ ಹೊಂಚುಹಾಕುತ್ತಾ ವಿನಾಕಾರಣ ಸಮರಕ್ಕೆಳೆಯುವ ಸನ್ನಾಹದಲ್ಲಿದ್ದ ಮಗಧ ರಾಷ್ಟ್ರಕ್ಕೆ ಸರಿಯಾದ ಪಾಠ ಕಲಿಸುವ ಪ್ರಯತ್ನದಲ್ಲಿ ನಮ್ಮ ನೆಚ್ಚಿನ ಸೇನಾಪತಿ ಮಣಿಧರರು ಸಾವನ್ನಪ್ಪಿದ್ದು ತೀರಾ ವಿಷಾದನೀಯ. ಅವರ ಸಾವು ನಿಮಗೆ ಮಾತ್ರವಲ್ಲ. ನಮಗೂ ನೋವಿನ ಸಂಗತಿಯಾಗಿದೆ. ಅಂತಹ ಒಬ್ಬ ಶೂರ ಸೇನಾನಿಯ ಸಾವಿಗೆ ಕಾರಣವಾದ ಮಗಧಕ್ಕೆ ಸರಿಯಾದ ರೀತಿಯಲ್ಲಿ ನಾವೂ ಪಾಠ ಕಲಿಸಬೇಕೆಂದೇ ಸಿಡಿದೆದ್ದು. ಖಡ್ಗ ಹಿರಿದು ಕಣಕ್ಕಿಳಿದೆವು. ಖಡ್ಗವನ್ನು ಹಿಡಿದು ಹೋರಾಡಿ ಅನುಭವವೇ ಇಲ್ಲದ ನಮ್ಮ ತತ್ವಜ್ಞಾನಿಗಳೆಯರೂ ಕೂಡ ದೇಶಪ್ರೇಮದಿಂದಾಗಿ ದೇಶರಕ್ಷಣೆಗಾಗಿ ಪ್ರಾಣವನ್ನೂ ಲೆಕ್ಕಿಸದೆ ನಮ್ಮೊಂದಿಗೆ ವೀರಾವೇಶದಿಂದ ಹೋರಾಡಿ ಇವತ್ತು ನಾವು ಆಚರಿಸುತ್ತಿರುವ ವಿಜಯೋತ್ಸವಕ್ಕೆ ಕಾರಣರಾಗಿದ್ದಾರೆ. ಈ ಗೆಲುವಿನಲ್ಲಿ, ಈ ದಿಗ್ವಿಜಯದಲ್ಲಿ ನಮ್ಮ ಬೆನ್ನಿಗೆ ಇದ್ದದ್ದು ನಿಮ್ಮೆಲ್ಲರ ಪ್ರೀತಿ. ವಿಶ್ವಾಸ, ಹಾರೈಕೆ, ಪ್ರೋತ್ಸಾಹಗಳೇ! ಆದ್ದರಿಂದ ನಮ್ಮೆಲ್ಲರ ಗೆಲುವು ನಿಮ್ಮೆಲ್ಲರ ಗೆಲುವು! ನೀವು ತೋರಿಸುತ್ತಿರುವ ಈ ಪ್ರೀತಿಗೆ ನಾನು ಮತ್ತು ನನ್ನ ಮಿತ್ರರಾದ ಕುಲಪುತ್ರರು ಕೃತಜ್ಞರಾಗಿದ್ದೇವೆ..... ಎಂದಿನಂತೆ ಇಂದೂ ಈ ವರ್ಷವೂ ಸೌಂದರ್ಯ ಸ್ಪರ್ಧೆಯಲ್ಲಿ ನಿಮ್ಮೆಲ್ಲರ ಸಮಾಧಾನಕರವಾದ ಸಹಯೋಗ ಬೇಕಿದೆ. ಅದಕ್ಕೆ ನೀವು ಸಮ್ಮತಿಸುತ್ತೀರೆಂದು ಭಾವಿಸುತ್ತೇನೆ. ಈ ಸ್ವತಂತ್ರ ರಾಷ್ಟ್ರದಲ್ಲಿ ಪ್ರಜಾತಂತ್ರ ಪ್ರಭುತ್ವದಲ್ಲಿ ಪ್ರತಿಯೊಬ್ಬ ವ್ಯಕ್ತಿಗೂ ವಿಚಾರ ಸ್ವಾತಂತ್ರ್ಯವಿದೆ. ಆದರೆ ಹಾಗೆಂದು ಅದು ತರ್ಕರಹಿತ ಗದ್ದಲ, ಗೊಂದಲ ಆಗಬಾರದು. ನಾವು ಆಡುವ ಮಾತು, ಮಾಡುವ ಕಾರ್ಯ ರಾಷ್ಟ್ರದ. ಸಂಘದ ಹಿತಕ್ಕೆ. ಕ್ಷೇಮಕ್ಕೆ, ಅಭಿವೃದ್ಧಿಗೆ ಪ್ರತಿಕೂಲವಾಗಬಾರದು. ಈ ಎಚ್ಚರಿಕೆಯೊಂದಿಗೆ ನಾವು ಹೆಜ್ಜೆ ಇಡಬೇಕು.

**ದನಿಗಳು** : ಅಭಯಕುಮಾರರಿಗೆ ಜಯವಾಗಲಿ!

**ಪ್ರಭುಗಳು** : ಈಗ ಮುಂದಿನ ಕಾರ್ಯಕ್ರಮ ಶ್ರೇಷ್ಠ ಸುಂದರಿಯ ಆಯ್ಕೆ!.... ಪ್ರೀತಿಯ ಪ್ರಜೆಗಳೇ ಎಂದಿನಂತೆ ಇಂದೂ ನೀವೇ ಈ ವರ್ಷದ ಸುಂದರಿಯಾರಾಗಬೇಕೆಂಬುದನ್ನು ತೀರ್ಮಾನಿಸಿ.

**ಒಬ್ಬ ವ್ಯಕ್ತಿ :** 'ಸರ್ವಶ್ರೇಷ್ಠ ಸುಂದರಿ' ಸಾಲವತಿಯೇ ತೀರ್ಮಾನಿಸಲಿ!

**ಪ್ರಭುಗಳು :** ಸ್ಪರ್ಧಿಗಳು ದಯವಿಟ್ಟು ಮುಂದೆ ಬರಬೇಕು. ಬಂದು ತಮ್ಮ ಹೆಸರುಗಳನ್ನು ಘೋಷಿಸಲಿ..... ಹಾಗೆಯೇ ಸರ್ವಶ್ರೇಷ್ಠ ಸುಂದರಿ ಸಾಲವತಿ ಈ ಸ್ಪರ್ಧೆಯನ್ನು ಉದ್ಘಾಟಿಸಿ ಮಾತನಾಡಬೇಕೆಂದು ನನ್ನ ವಿನಂತಿ.

(ಸ್ವಲ್ಪ ಹೊತ್ತು ಮೌನ. ಯಾವೊಬ್ಬ ಯುವತಿಯೂ ಸಾಲವತಿಯ ಮುಂದೆ ಬರಲು ಸಾಹಸ ಮಾಡುವುದಿಲ್ಲ. ಅವರ ಮುಖಗಳಲ್ಲಿ ಸಂಕೋಚ, ಅಧೀರತೆಗಳಿವೆ. ಅವರ ಮೌನ, ಹಿಂಜರಿಕೆ, ಅವರ ಮುಖದಲ್ಲಿನ ಅಸ್ವಸ್ಥತೆಗಳನ್ನು ಗಮನಿಸಿದ ಸಾಲವತಿಯ ಮುಖದ ಮೇಲೆ ಒಮ್ಮೆ ವಿಜಯ ಗರ್ವ ಮೂಡಿವರೆ. ಮತ್ತೊಮ್ಮೆ ಸಹಾನುಭೂತಿ, ಕನಿಕರಗಳು ಕಾಣಿಸಿಕೊಳ್ಳುತ್ತವೆ.)

**ಸಾಲವತಿ :** (ಎದ್ದು ನಿಂತು ಮಂದಹಾಸದಿಂದ) ನನ್ನ ಪ್ರೀತಿಯ ಸೋದರಿಯರೇ, ತಾಯಂದಿರೇ, ಅಣ್ಣಂದಿರೇ, ಪ್ರಭುಗಳು ಈಗ ತಾನೇ ನನ್ನನ್ನು ಸೌಂದರ್ಯ ಸ್ಪರ್ಧೆಯನ್ನು ಉದ್ಘಾಟಿಸಲು, ಮಾತನಾಡಲು ಆದೇಶಿಸಿದರು. ನನ್ನ ಬಗ್ಗೆ ಅವರಿಗಿರುವ ಅಭಿಮಾನ, ಗೌರವಗಳಿಗಾಗಿ ನಾನು ಕೃತಜ್ಞಳಾಗಿದ್ದೇನೆ. ಪ್ರಭುಗಳು ಇವತ್ತಿನ ಸ್ಪರ್ಧೆಗೆ ನನ್ನ ಸೋದರಿಯರನ್ನು ಆಹ್ವಾನಿಸಿದರು. ಆದರೂ ನನ್ನ ಸೋದರಿಯರು ಏಕೋ ಸಂಕೋಚದಿಂದ ಹಿಂಜರಿಯುತ್ತಿದ್ದಾರೆ..... ನನ್ನ ದೃಷ್ಟಿಯಲ್ಲಿ ಇದೂ ಒಳ್ಳೆಯದೆ. ನಾನು ಸ್ಪರ್ಧೆಯನ್ನು ಉದ್ಘಾಟಿಸಲು ಇಲ್ಲಿ ಬಂದು ನಿಂತಿರುವೆನೆಂಬುದು ನಿಮ್ಮ ಭಾವನೆ. ಆದರೆ ನಾನು ಸ್ಪರ್ಧೆಯ ಉದ್ಘಾಟನೆಗೆ ನಿಂತಿಲ್ಲ; ಅದರ ಸಮಾರೋಪಕ್ಕೆ, ಅಂದರೆ ಅದರ ಮುಗಿತಾಯಕ್ಕೆ ನಿಂತಿದ್ದೇನೆ.!!
(ಎಂದಾಗ ಜನರಲ್ಲಿ ಗದ್ದಲ. ರಾಜಪ್ರಮುಖರಾದಿಯಾಗಿ ಒಬ್ಬರ ಮುಖವನ್ನೊಬ್ಬರು ಆಶ್ಚರ್ಯದಿಂದ ನೋಡುತ್ತಾರೆ.)

**ಪ್ರಭುಗಳು :** (ಅಚ್ಚರಿಯಿಂದ) ಸುಂದರಿ. ಸಾಲವತಿ! ಇದೇನು ನಡೆಯುತ್ತಿದೆ!

**ಸಾಲವತಿ :** ಪ್ರಭುಗಳು ಮನ್ನಿಸಬೇಕು. ನನ್ನ ಮೇಲೆ ನಿಮ್ಮ ಅಪಾರ ಅನುಗ್ರಹ ಇದೆ. ಅಭಿಮಾನ ಇದೆ. ಇದು ನಿಜವಾದರೆ ನನ್ನದೊಂದು ಪ್ರಾರ್ಥನೆ ಇದೆ. ಅದನ್ನು ನಡೆಸಿಕೊಡಲೇಬೇಕೆಂದು ವಿನಯ ಪೂರ್ವಕವಾಗಿ ಒತ್ತಾಯಿಸುತ್ತೇನೆ.

**ಪ್ರಭುಗಳು :** (ಅನುಮಾನಿಸುತ್ತ) ಅದೇನು ಹೇಳು ಸುಂದರಿ!

**ಸಾಲವತಿ :** (ಎತ್ತರದ ದನಿಯಲ್ಲಿ) ಹಾಗಾದರೆ ಇಂದಿನಿಂದ ವೈಶಾಲಿಯಲ್ಲಿ ಸೌಂದರ್ಯ ಸ್ಪರ್ಧೆ ನಡೆಯಬಾರದು. ವೇಶ್ಯೆಯರು ಇರಬಾರದು. ಯಾವ ಹೆಣ್ಣಿಗೂ 'ವೇಶ್ಯೆ' ಎಂಬ ಹೆಸರು ಬರಬಾರದು.

**ಒಂದು ಹೆಣ್ಣು ಧ್ವನಿ:** (ತಿರಸ್ಕಾರ ವ್ಯಂಗ್ಯಗಳಿಂದ) ಯಾಕೆ ತಾಯಿ, ನೀನೇ ನಿನ್ನ ಸಿಂಹಾಸನವನ್ನು ಭದ್ರಪಡಿಸಿಕೊಳ್ಳಬೇಕೆಂದಿರುವೆಯೇನು? ಕುಲಸ್ತ್ರೀಯರ ಸೌಭಾಗ್ಯವನ್ನು ಕೊಳ್ಳೆ ಹೊಡೆಯುತ್ತಲೇ ನೀನು ಮಹಾರಾಣಿಯಾಗಿ ಒಬ್ಬಳೇ ಮೆರೆಯಬೇಕೆಂದು ತೀರ್ಮಾನಿಸಿದ್ದೀಯೇನು. ಬೇರೆಯವರ ಬಾಯಿ ಹೊಡದು, ಹೊಟ್ಟೆ ಹೊಡೆದು ಎಲ್ಲರ ಅನ್ಯಾಯವನ್ನೂ ಕಸಿದುಕೊಂಡು ಕಬಳಿಸಬೇಕೆಂದಿರುವೆಯೇನು ಮಹಾತಾಯಿ!!

**ಸಾಲವತಿ :** ಕೋಪಿಸಿಕೊಳ್ಳಬೇಡಿ. ನಾನು ಹೇಳುವುದನ್ನು ಪೂರ್ತಿಯಾಗಿ ಸಮಾಧಾನವಾಗಿ ಕೇಳಿಸಿಕೊಳ್ಳಿ.... ನೋಡಿದಿರಾ ನನ್ನ ಪ್ರಸ್ತಾಪ ಬಂದ ಕೂಡಲೇ ನಿಮಗೆಷ್ಟು ಸಿಟ್ಟು ಬಂತು? ಅಂದರೆ ಸೂಳೆಯರಿಂದ, ವೇಶ್ಯೆಯರಿಂದ ನಿಮ್ಮ ಗಂಡಸರು, ನಿಮ್ಮ ಕುಟುಂಬ ಹಾಳಾಗುತ್ತಿದೆ ಎಂಬ ಕೋಪ. ಇಂತಹ ಕೋಪಕ್ಕೆ ನೊಂದವರ ಶಾಪಕ್ಕೆ ನನ್ನಂತಹ ಸೋದರಿಯರು ಗುರಿಯಾಗಬಾರದು. ಕೇವಲ ಸುಂದರಿ ಎಂದು ಕರೆಸಿಕೊಳ್ಳುವ ಪ್ರಲೋಭನಕ್ಕೆ ಒಳಗಾಗಿ ಸ್ಪರ್ಧೆಗೆ ಬಂದು ವೇಶ್ಯೆಯಾಗಿ ಉಳಿಯಬೇಕಾದ ಅನಿವಾರ್ಯತೆ, ಮತ್ತು ಉಳಿಸುವ ಸಂಪ್ರದಾಯಕ್ಕೆ ಗುರಿಯಾಗಿ ಅವರು ಅನುಭವಿಸುವ ಯಾತನೆಯ ಕಲ್ಪನೆ ನಿಮಗಿರಲಾರದು. ಅವರೂ ಮನುಷ್ಯರು, ಅವರಿಗೂ ಅವರದೇ ಆದ ಆಸೆ ಆಕಾಂಕ್ಷೆಗಳಿರುತ್ತವೆ. ಎಲ್ಲ ಕುಲಸ್ತ್ರೀಯರಂತೆ ಸಮಾಜದಲ್ಲಿ ಗಂಡ, ಮಕ್ಕಳು ಇತ್ಯಾದಿಯಾದ ಕುಟುಂಬ ವ್ಯವಸ್ಥೆಯೊಳಗೆ ಗೌರವ, ಪ್ರತಿಷ್ಠೆಗಳಿಂದ ಬಾಳಬೇಕೆಂಬ ಆಸೆ ಇರುತ್ತದೆ. ಆದರೆ ವೇಶ್ಯೆಯಾದವಳಿಗೆ ಸಮಾಜ ಆ ಅವಕಾಶಗಳನ್ನು ಎಲ್ಲಿ ಕಲ್ಪಿಸಿ ಕೊಟ್ಟಿದೆ? ಸೌಂದರ್ಯ ಪ್ರಾಯ ಇರುವವರೆಗೂ ಗಂಡುಗಳು ಅವಳನ್ನು ಸುತ್ತುವರಿದು, ಹಿಂಡಿ ಹಿಪ್ಪೆ ಮಾಡಿ ಅದೆಲ್ಲವೂ ಇಲ್ಲವಾದಾಗ ಸಮಾಜದಲ್ಲಿ ಯಾರು ಅವಳತ್ತ ಹಾಯುತ್ತಾರೆ? ಅವಳ ವೃದ್ಧಾಪ್ಯದಲ್ಲಿ ಯಾರು ಆಸರೆ ನೀಡುತ್ತಾರೆ? ಯಾವ ಗಂಡು ತಾನೇ ತನಗೆ ಸುಖ ಕೊಟ್ಟವಳೆಂದು ಅವಳಿಗಾಗಿ ತುಡಿಯುತ್ತಾನೆ? ನಡೆದು ಹೋದ ದಾರಿಯತ್ತ ಹಿಂತಿರುಗಿ ನೋಡುತ್ತಾನೆ?.... ಅವಳ ಉಳಿದ ಬಾಳೆಲ್ಲವೂ ನರಕವಾಗಬೇಕೆ? ಎಲ್ಲರಂತೆ ಬಾಳುವ ಅವಕಾಶದಿಂದ ಅವಳನ್ನು ವಂಚಿಸಬೇಕೆ? ಇದರಿಂದ ಹುಟ್ಟಿಕೊಳ್ಳುತ್ತಿರುವ 'ವೇಶ್ಯೆ'ಯ ಕುಲವನ್ನು ಪುರಸ್ಕರಿಸಿ, ಪ್ರೋತ್ಸಾಹಿಸುತ್ತಾ ಹೋಗಬೇಕೆ? ಅನಿಷ್ಟಕಾರಕವಾಗಿ ಪ್ರಾರಂಭವಾಗಿರುವ ಈ ಸಂಪ್ರದಾಯ ಇಂದಿಗೇ ಮುಗಿಯಲಿ! ವೇಶ್ಯೆಯ ಕುಲ ಅಳಿಯಲಿ. ಇವರು ಅನುಭವಿಸುವ ನೋವು, ವೇದನೆಗಳಿಗೆ ಇಂದೇ ಕಡೆಯಾಗಲಿ. ದಯಪಿಟ್ಟು ನನ್ನ ಮಾತಿನಲ್ಲಿ ಇರುವ ಕಳಕಳಿ.

ಅದರ ಹಿಂದಿನ ನನ್ನ ನೋವು, ನನ್ನ ವಿಚಾರವನ್ನು ಅರ್ಥಮಾಡಿಕೊಂಡು ಪ್ರಭುಗಳು, ಗಣಶ್ರೇಷ್ಠರು ತಮ್ಮ ಅಭಿಪ್ರಾಯವನ್ನು ತಿಳಿಸಲಿ.

**ಕುಲಪುತ್ರರು:** ಸಾಧು! ಸಾಧು! ತಂಗಿ ಸಾಲವತಿ ನಿನ್ನ ಈ ಎಲ್ಲ ವಿಚಾರಗಳನ್ನೂ ನಾವು ಮೆಚ್ಚುತ್ತೇವೆ. ಒಳ್ಳೆಯ ಸಲಹೆ ನಿನ್ನದು ತಂಗಿ! ಒಳ್ಳೆಯ ಸಲಹೆ!!

**ಸಾಲವತಿ :** ಪ್ರಭು ನಾನು ಹೇಳಿದ್ದನ್ನು ಗಂಭೀರವಾಗಿ ಆಲೋಚಿಸಿ. ಇಂದು ಈ ಸಭೆಯಲ್ಲಿ ತಲುಪುವ ತೀರ್ಮಾನವೂ ವೈಶಾಲಿಯ ಹಿರಿಮೆಯನ್ನೇ ಸಂಕೇತಿಸುತ್ತದೆ. ನಮ್ಮ ವಿಚಾರ ಗಹನತೆಯನ್ನು ಲೋಕ ಗೌರವಿಸುತ್ತದೆ. ಇದರಿಂದ ವಜ್ಜಿ ರಾಷ್ಟ್ರದ ಹೆಣ್ಣು ಮಕ್ಕಳನ್ನು ಎಷ್ಟು ಗೌರವಿಸಲಾಗುತ್ತಿದೆ ಎಂಬುದು ಬೇರೆಲ್ಲರಿಗೂ ತಿಳಿಯುತ್ತದೆ. ಆಲೋಚಿಸಿ ಪ್ರಭು....ನನ್ನ ಮಾತುಗಳು ವಿದ್ರೋಹಕವೆನಿಸಿದರೆ, ಉದ್ಧಟವೆನಿಸಿದರೆ ನನಗೆ ಶಿಕ್ಷೆ ಕೊಡಿ..... ಸೆರೆಮನೆಯೋ..... ಬಹಿಷ್ಕಾರವೋ, ಯಾವುದಾದರೂ ನಾನು ಶಿರಸಾವಹಿಸುತ್ತೇನೆ. ಗಣಪ್ರಮುಖರೊಡನೆ ಸಮಾಲೋಚಿಸಿ ತೀರ್ಮಾನಕ್ಕೆ ಬನ್ನಿ ಪ್ರಭು.

**ಅಭಯಕುಮಾರ:** ಪ್ರಭುಗಳೆ ಸುಂದರಿ. ಸಾಲವತಿಯ ಮಾತುಗಳಲ್ಲಿ ಪ್ರಾಮಾಣಿಕತೆಯಿದೆ. ಸ್ವಂತ ಅನುಭವದ ಅಗಾಧತೆಯಿದೆ. ಇಂತಹ ಸಂಪ್ರದಾಯಕ್ಕೆ ದಾರಿ ಮಾಡಿದ್ದ ನಮ್ಮ ಸೇನಾಪತಿ ಮಣಿಧರರು ಈಗಿಲ್ಲ. ಆದರೆ ಯಾವುದೋ ಒಂದು ಉತ್ಸಾಹ, ಭಾವಾವೇಶದ ಕ್ಷಣಗಳಲ್ಲಿ ಇದು ಆರಂಭವಾಯಿತು. ೮ ವರುಷಗಳ ಅನುಭವದಲ್ಲಿ, ಒಂದು ಹೆಣ್ಣು ಹೆಣ್ಣಿನ ಮನದ ನೋವನ್ನು ಅರ್ಥಮಾಡಿಕೊಂಡು ನೋವನ್ನು ಅನುಭವಿಸಿ, ಅಂತಹ ನೋವು ಯಾವ ಹೆಣ್ಣಿಗೂ ಬರಬಾರದೆಂಬ ಆರ್ತ ಪ್ರಾರ್ಥನೆಯಿದೆ. ಅದನ್ನು ನಾವೆಲ್ಲರೂ ಗಂಭೀರವಾಗಿ ಯೋಚಿಸಬೇಕು. ಗೌರವದಿಂದ, ಮರ್ಯಾದೆಯಿಂದ ಬದುಕಬೇಕೆಂಬ, ತನ್ನ ಬದುಕನ್ನು ತಾನೇ ತನಗಿಷ್ಟವಿದ್ದಂತೆ ಆಯ್ದುಕೊಳ್ಳಬೇಕೆಂಬ ತುಡಿತ ಪ್ರತಿ ಹೆಣ್ಣಿಗೂ ಸ್ವಾಭಾವಿಕವೇ. ಅವರ ಬದುಕಿನ ಆಯ್ಕೆಯ ಸ್ವಾತಂತ್ರ್ಯವನ್ನು ಪರಿಗಣಿಸಬೇಕಾದ್ದು, ಸ್ತ್ರೀ ಜಾತಿಯನ್ನು ಗೌರವಿಸಬೇಕಾದ್ದು ನಮ್ಮೆಲ್ಲರ ಮತ್ತು ರಾಷ್ಟ್ರದ ಧರ್ಮ.

**ಜನಸ್ತೋಮ:** ಹೌದು! ಹೌದು. ಸಾಲವತಿಯ-ಅಭಯಕುಮಾರರ ವಿಚಾರಗಳು ಸಾಧುವಾದದ್ದೇ. ಅವುಗಳನ್ನು ಪರಿಗಣಿಸಲೇಬೇಕು.

**ಪ್ರಭುಗಳು :** ಹೂಂ! ನಿಮ್ಮೆಲ್ಲರ ಮಾತಿನ ಧೋರಣೆ ಒಂದೇ ಆಗಿದೆ. ಪ್ರಜಾನೀಕವು ಏನು ಅಭಿಪ್ರಾಯವನ್ನು ವ್ಯಕ್ತಪಡಿಸುತ್ತದೆಯೋ ಅದನ್ನೇ ನಾವೂ

ಮನ್ನಿಸುತ್ತೇವೆ. ಅಲ್ಲದೆ ವೈಯಕ್ತಿಕವಾಗಿಯೂ ಇದಕ್ಕೆ ನನ್ನ ವಿರೋಧವಿಲ್ಲ. ವೈಶಾಲಿಯ ಸ್ತ್ರೀಯರನ್ನು ಅಗೌರವದಿಂದ ಕಾಣಬೇಕೆಂಬ ಉದ್ದೇಶವೂ ನಮಗಿಲ್ಲ. ಸೌಂದರ್ಯ ಸ್ಪರ್ಧೆಯ ಸಂಪತ್ತನ್ನು ಗುರುತಿಸಬೇಕೆನ್ನುವುದು ಮಾತ್ರ. ಆದರೆ ಇದರಿಂದ ಇಷ್ಟೆಲ್ಲ ಅನಾಹುತ ಆಗಿದೆಯೆಂಬುದು ತಿಳಿದ ಮೇಲೆ ನಮಗೂ ಅದನ್ನು ಮುಂದುವರಿಸುವ ಇಚ್ಛೆಯಿಲ್ಲ. ಇಲ್ಲಿಯುವರೆಗೆ ಸುಂದರಿಯರೆಂದು, ನಗರ ವಧುಗಳೆಂದು ಗುರುತಿಸಲಾಗಿರುವ ಈ ಸ್ತ್ರೀಯರನ್ನು ಮಾಡಬೇಕೇನು? ಅವರನ್ನು ಅವರ ವೃತ್ತಿಯಲ್ಲಿಯೇ ಮುಂದುವರಿಯಲು ಆದೇಶಿಸುವುದೇ ಅಥವಾ ಅವರ ಪುನರ್ವಸತಿಯ ಆಲೋಚನೆ ಮಾಡಬೇಕೆ?... ಪುನರ್ವಸತಿ ಎಂದಾದರೆ, ಹೇಗೆ ಮಾಡಬೇಕು?

**ಆನಂದ** : ಪ್ರಭು! ಪುನರ್ವಸತಿ ಸಾಧ್ಯವಾಗುವುದು, ಅವರಿಗೆ ವಾಸಾಸನ ವರ್ಷಾಶನಗಳನ್ನು ನೀಡುವುದರಿಂದಲ್ಲ. ಅದು ಚಿರಂತನ ಪರಿಹಾರವೂ ಆಗುವುದಿಲ್ಲ. ಇನ್ನು ಮುಂದೆ ಅವರು ಸಮಾಜದಲ್ಲಿ ತಲೆ ಎತ್ತಿಕೊಂಡು ಗೌರವದಿಂದ ಎಲ್ಲರಂತೆ ಬಾಳುವುದಕ್ಕೆ ಅವಕಾಶವಾಗಬೇಕು. ಅಂದರೆ ಅವರು ಹೊಸಬಾಳನ್ನು ಬಾಳುವಂತಾಗಬೇಕು.

**ಪ್ರಭುಗಳು** : ಅಂದರೆ ನಿಮ್ಮ ಉದ್ದೇಶ?

**ಆನಂದ** : ಉದ್ದೇಶ ಇಷ್ಟೇ ಪ್ರಭು. ಇವರುಗಳನ್ನು ಉದಾರವಂತ ಗಂಡಸರು ಯಾರಾದರೂ ಮದುವೆ ಆಗಬೇಕು.

**ಪ್ರಭುಗಳು** : ಶೀಲವನ್ನು, ಯೌವ್ವನವನ್ನು ಕಳೆದುಕೊಂಡ ಈ ಅಸಹಾಯಕ ಹೆಣ್ಣುಗಳನ್ನು ಮದುವೆಯಾಗಲು ಯಾವ ಗಂಡಸರು ಮುಂದೆ ಬಂದಾರು....?... ಅಂತಹ ಉದಾರಿ ಪುರುಷರು ವೈಶಾಲಿಯಲ್ಲಿದ್ದರೆ, ವೈಶಾಲಿಯ ಕೀರ್ತಿ ಕಿರೀಟಕ್ಕೆ ಮತ್ತೊಂದು ಮಣಿ ಸೇರಿದಂತೆಯೇ!!.... ಕುಲಪುತ್ರರೇ ನೀವೇ ಇದಕ್ಕೊಂದು ಪರಿಹಾರ ಸೂಚಿಸಿ.

**ಅಭಿನಂದ** : ಪ್ರಭುಗಳೇ, ಪರೋಕ್ಷವಾಗಿ ನಾವೂ ಕೂಡಾ ಈ ಅನಿಷ್ಟ ಪದ್ಧತಿಗೆ ಕಾರಣವಾಗಿರುವುದರಿಂದ, ಇದರ ನಿರ್ಮೂಲನದ ಜವಾಬ್ದಾರಿಯೂ ನಮ್ಮ ಮೇಲಿದೆ. ಸಂಘವು ಅನುಮತಿ ನೀಡುವುದಾದರೆ ನಾವು ೮ ಮಂದಿ ಗೆಳೆಯರೂ ಶೀಲ ಖಂಡಿತರಾದ ಈ ವೇಶ್ಯಾ ಸುಂದರಿಯರನ್ನು ಪರಿಗ್ರಹಿಸುತ್ತೇವೆ. ನಮ್ಮ ಜೀವನ ಸಂಗಾತಿಗಳನ್ನಾಗಿ ಸ್ವೀಕರಿಸುತ್ತೇವೆ. ಗೌರವ ಪ್ರತಿಷ್ಠೆಗಳಿಂದ ವಂಚಿತರಾದ ಅವರಿಗೆ ಅವುಗಳು, ಸಮಾಜದಲ್ಲಿ ಮತ್ತೆ ಲಭಿಸುವಂತೆ ಮಾಡುತ್ತೇವೆ.

**ದನಿಗಳು** : ಈ ಕುಲಪುತ್ರರಿಗೆ ಎಲ್ಲೋ ಹುಚ್ಚು. ಮಾನ ಮರ್ಯಾದೆ ಕಳೆದುಕೊಂಡ ಈ ಸೂಳೆಯರನ್ನು ಮದುವೆಯಾಗುತ್ತಾರಂತೆ!... ನಿಜವಾಗಿಯೂ

ಇವರಿಗೆ ಬುದ್ಧಿ ನೆಟ್ಟಗಿಲ್ಲ... ಮದುವೆ ಆಗೋ ಹುಚ್ಚಿದ್ದರೆ ಇವರಿಗೇನು ಕಡಿಮೆ? ರಾಜಪುತ್ರಿಯರೇ ಸಾಲುಗಟ್ಟಿ ನಿಲ್ಲುತ್ತಾರೆ.

**ರಾಜಸೇವಕ:** ಸದ್ದು! ಸದ್ದು!... ಯಾರೂ ಮಾತಾಡಬಾರದು. ಪ್ರಭುಗಳು, ಗಣ ಪ್ರಮುಖರು ಆಲೋಚಿಸಿ ಅಭಿಪ್ರಾಯ ಹೇಳಲಿದ್ದಾರೆ. ತಾವೆಲ್ಲ ಸ್ವಲ್ಪ ತಾಳ್ಮೆಯಿಂದ ಸುಮ್ಮನಿರಿ.

**ಸಾಲವತಿ :** (ಸಂತೋಷದಿಂದ ಎದ್ದು ಬಂದು) ಅಣ್ಣಂದಿರೇ ಅಭಿನಂದನೆಗಳು. ಜೀವನ ಪಲಾಯನವಾದಿಗಳೆಂದು ನಂಜಿದ ನಾನು ಇಂದು ನಿಮ್ಮ ಈ ನಿಲುವಿನಿಂದ ಮೂಕಳಾಗಿದ್ದೇನೆ. ನಾನು ಸುಖದ ಸುಪ್ಪತ್ತಿಗೆಯಲ್ಲಿದ್ದರೂ, ನನ್ನ ಮನಸ್ಸೆಂದೂ ಅರಳಲಿಲ್ಲ. ತೀವ್ರವಾದ ಅಪರಾಧ ಪ್ರಜ್ಞೆಯೊಂದು ನನ್ನೆದೆಯಲ್ಲಿ ನಾಟಿ ನನ್ನ ಬದುಕಿನ ಎಲ್ಲ ಸಂತೋಷಗಳನ್ನೂ ಚುಚ್ಚಿ ಹಿಂಸಿಸುತ್ತಿತ್ತು. ಒಂದೊಂದು ರಾತ್ರಿಯೂ ನರಕದ ಅನುಭವವನ್ನೇ ನೀಡುತ್ತಿತ್ತು. ಇಂತಹ ನೋವು, ಯಾತನೆಗಳು ಯಾರಿಗೂ ಬೇಡ. ಅವರಿಗೆ ನೀಡಲಿರುವ ಹೊಸ ಬದುಕು ನಿಮ್ಮ ಪಾಲಿಗೆ ಅದ್ಭುತ ಅಲೌಕಿಕ ಸುಖದ ಅನುಭವವಾಗಿ ದಕ್ಕಲಿ. ನಿಮ್ಮನ್ನೆಷ್ಟು ಹೊಗಳಿದರೂ ಸಾಲದು.

**ಆನಂದ :** ತಂಗಿ, ನಿನ್ನ ಈ ಸ್ಥಿತಿಗೆ ನಾವೇ ಕಾರಣ. ಎಲ್ಲಿಯೋ ಮುಗ್ಧವಾಗಿ ಸುಖವಾಗಿ ಇದ್ದ ನಿನ್ನನ್ನು ಎಂತಹ ಯಾತನೆಯ ಬದುಕಿಗೆ ದೂಡಿದೆಯೆಂಬುದು ನೆನಪಾದಾಗಲೆಲ್ಲ ಸಾವಿರಾರು ಚೇಳು [illegible] ಕುಟುಕಿದಂತಾಗುತ್ತಿತ್ತು. ನಿನ್ನ ಬದುಕನ್ನು ಬದಲಿಸಲೂ ಆಗದ ಅಸಹಾಯಕತೆ ಕ್ಷಣ ಕ್ಷಣವೂ ನಮ್ಮನ್ನು ಕಾಡುತ್ತಿತ್ತು. ವಾಹ್! ತಂಗಿ. ವೈಶಾಲಿಯ ಇತಿಹಾಸದಲ್ಲೇ ನಿನ್ನ ಹೆಸರು ಸುವರ್ಣಾಕ್ಷರಗಳಲ್ಲಿ ಬರೆದಿಡಬೇಕು. ಎಂತಹ ವಿಚಾರಗಳು! ಎಂತಹ ಕ್ರಾಂತಿ!! ಎಷ್ಟು ಒಳ್ಳೆಯದನ್ನು ಮಾಡಿದೆ ತಂಗಿ!!.... ನಿಜವಾಗಿಯೂ ನಾವು ಅದೃಷ್ಟ ಶಾಲಿಗಳು!

**ಅಭಿನಂದ :** ಪ್ರಭು ಗಣಪ್ರಮುಖರು. ಸಂಘದ ಅಭಿಪ್ರಾಯವು ಏನೆಂದು ತಿಳಿಯಬಹುದೇ?

**ಪ್ರಭುಗಳು :** ಕುಲಪುತ್ರರೇ ನಿಮ್ಮ ಉದಾರತೆ, ವಿಶಾಲ ಮನಸ್ಸು ನಮ್ಮನ್ನು ಮೂಕರನ್ನಾಗಿಸಿದೆ. ಸಂಘದ ಸಮಸ್ತ ಹಿರಿಯರೂ ಅಭಿನಂದನೆಗಳೊಂದಿಗೆ ಅನುಮತಿಸಿದ್ದಾರೆ.

**ಕುಲಪುತ್ರರು:** ಧನ್ಯರಾದೆವು ಪ್ರಭು. ಇದಕ್ಕೆ ಸಮ್ಮತಿಸಿದ ಸರ್ವರಿಗೂ ಪ್ರೀತಿಯ ಪ್ರಜಾಬಂಧುಗಳಿಗೂ ನಮ್ಮ ಕೃತಜ್ಞತೆಗಳು. ಸಂಘದ ಸಾಕ್ಷಿಯಾಗಿ.

ಪ್ರಜಾ ಪ್ರಮುಖರ ಸಾಕ್ಷಿಯಾಗಿ, ದೈವ ಸಾಕ್ಷಿಯಾಗಿ ಇವರೆಂಟು ಮಂದಿಯನ್ನೂ ನಾವು ಎಂಟೂ ಜನರೂ ಬಾಳಗೆಳತಿಯರಾಗಿ ಸ್ವೀಕರಿಸುತ್ತೇವೆ.

**ಅಭಯಕುಮಾರ:** ಗೆಳೆಯರೇ, ನಿಮ್ಮ ಉದಾತ್ತ ನಿಲುವಿಗೆ ನನ್ನ ಅಭಿನಂದನೆಗಳು. ನಿಮ್ಮ ಸಮಸ್ಯೆಗೇನೋ ಪರಿಹಾರ ದೊರೆಯಿತು. ಆದರೆ ನನ್ನ ಸಮಸ್ಯೆಯೊಂದಿದೆ. ನನಗೆ ಮದುವೆ ಬೇಕಿಲ್ಲ. ಆದರೆ ಈ ನನ್ನ ಮುದ್ದು ಬಾಲಕನಿಗೆ ತಾಯಿಯೊಬ್ಬಳ ಅಗತ್ಯವಿದೆ.... ಎಂಟು ವರುಷಗಳ ಹಿಂದೆ ಅನಾಥವಾಗಿ ಸಿಕ್ಕ ಈ ಮಗುವಿನ ತಾಯಿ ಯಾರೆಂದು ಹುಡುಕುತ್ತಿದ್ದೇವೆ. ಎಂತಹ ಕಟುಕ, ಕ್ರೂರಮನಸ್ಸಾಗಿರಬೇಕು ಆ ತಾಯಿಯದು. ಸಾಲವೃಕ್ಷಗಳ ಹಸಿರು ನೆರಳಲ್ಲಿ ಸೂರ್ಯಕಾಂತಿಯಂತೆ ಹೊಳೆಯುತ್ತ ತನ್ನ ಸ್ಥಿತಿಯನ್ನೇ ಅರಿಯದೆ ಮುಗ್ಧವಾಗಿ ಕೈಕಾಲು ಆಡಿಸುತ್ತ ಮಲಗಿದ್ದ ಈ ಕೂಸನ್ನು ಕಸದಂತೆ ಎಸೆದು ಹೋಗುವ ಅಸಹಾಯಕ ಸ್ಥಿತಿಯಾದರೂ ಆ ತಾಯಿಗೆ ಏನಿತ್ತು. ತಂದೆ ಯಾರೆಂದು ತಾಯಿ ಯಾರೆಂದು ತಿಳಿಯದ ಮಗು ನನ್ನನ್ನೇ ತಂದೆಯೆಂದು ಬೆಳೆದು ಈಗ ಬಾಲಕನಾಗಿದ್ದಾನೆ. ಈ ಬಾಲಕನನ್ನು ನೋಡಿದರೆ ಎಂಥವರಿಗಾದರೂ ಪ್ರೀತಿ ತುಂಬಿ ಬಂದೀತು...! ದುರ್ಬಲ ಕ್ಷಣಗಳಲ್ಲಿ ಮಾಡಿರುವ ಅಪರಾಧವನ್ನು ಮರೆತು, ಈ ಬಾಲಕನ ತಾಯಿ ಯಾರೇ ಆಗಿರಲಿ, ಬಂದು ಸ್ವೀಕರಿಸಬೇಕೆಂದು ನನ್ನ ಮನವಿ.

(ಒಂದೆರಡು ಕ್ಷಣಗಳ ಕಾಲ ನಿಸ್ತಬ್ಧತೆ ಕವಿಯುತ್ತದೆ. ನಂತರ ದೂರದಲ್ಲಿ ನಿಂತಿದ್ದ ಸಾಲವತಿ ಹುಚ್ಚಿಯಂತೆ ವೇಗವಾಗಿ ನಡೆದು ಬಂದು ಆ ಬಾಲಕನನ್ನು ಬರಸೆಳೆದು ಬಿಗಿದಪ್ಪಿಕೊಳ್ಳುತ್ತಾರೆ.)

**ಸಾಲವತಿ :** ಸೇನಾಪತಿಗಳೇ ನನ್ನನ್ನು ಕ್ಷಮಿಸಿ. ಪ್ರಭುಗಳೇ, ಗಣ ಶ್ರೇಷ್ಠರೇ, ಪ್ರಜೆಗಳೇ ನನ್ನ ಈ ಮಹಾಪರಾಧಕ್ಕಾಗಿ ತಾವೆಲ್ಲರೂ ಕ್ಷಮಿಸಬೇಕು. ಎಂಟು ವರುಷಗಳ ಹಿಂದೆ ನನ್ನಿಂದಾದ ಆಕಸ್ಮಿಕದ ಪರಿಣಾಮವಾಗಿ ಹುಟ್ಟಿದ ಈ ಮಗುವನ್ನು ನಾನೇ ಸಾಲವನಗಳ ನೆರಳಿನಲ್ಲಿ ತೊರೆದು ಬರುವಂತೆ ಆದೇಶಿಸಿದೆ. ವೈದ್ಯರೊಂದಿಗೆ ಗುಟ್ಟಾಗಿ ನಡೆದ ವ್ಯವಹಾರ. ಇಷ್ಟೂ ಕಾಲ ಯಾರ ಕಣ್ಣಿಗೂ ಬೀಳಲಿಲ್ಲ. ನನ್ನ ಪ್ರಾಯ, ನನ್ನ ಸೌಂದರ್ಯಗಳನ್ನು ರಕ್ಷಿಸಿಕೊಳ್ಳಲು ಮತ್ತು ನಾನು ಮಗುವಿನ ತಾಯಿ ಎಂದರೆ ಯಾವ ಪುರುಷನೂ ಬರಲಾರನೆಂದು ಈ ಅಕಾರ್ಯಕ್ಕೆ ಕೈ ಹಾಕಿದೆ.... ಆದರೆ ಪ್ರಭು, ಅದು ದೈಹಿಕವಾಗಿ ನನ್ನಿಂದ ದೂರವಾಯಿತೇ ಹೊರತು ನನ್ನ ಮನಸ್ಸಿನಿಂದ ಆ ಮಗುವಿನ ನೆನಪನ್ನು ಅಳಿಸಿಹಾಕಲು ನನಗೆ ಸಾಧ್ಯವೇ ಆಗಲಿಲ್ಲ. ಒಂದೊಂದು ಕ್ಷಣವೂ

ನನ್ನ ಮಾತೃ ಹೃದಯ ತಲ್ಲಣಿಸಿತು. ನನಗೆ ಯಾವುದೂ ಬೇಡವಾಯಿತು. ಆದರೆ ನಾನೂ ಬೇರೆಯವರಿಗೆ ಬೇಕಾಗಿತ್ತು. ಹೇಗೋ ಈ ಎಂಟು ವರುಷಗಳನ್ನು ಕಳೆದೆ.... ಅದಕ್ಕೇ ಈ ದಿನ ನಾನಿಷ್ಟು ನೊಂದು ಈ ಸಂಪ್ರದಾಯಕ್ಕೆ ಕೊನೆಯಾಗಲೆಂದು ದನಿ ಎತ್ತಿದ್ದು! ಪ್ರಭು ಈ ಬಾಲಕ ನನ್ನವನು....ನನ್ನ ಮಗು! ನನ್ನ ಪ್ರೀತಿಯ ಮಗು!

**ಬಾಲಕ :** (ಅಭಯಕುಮಾರನ ಕಡೆ ನೋಡುತ್ತ) ಅಪ್ಪಾಜಿ.... ಯಾರು ಈ ಹೆಂಗಸು..... ನನಗೆ ನೀನು ಬೇಕು ಅಪ್ಪಾಜಿ.... ನಾನು ನಿನ್ನನ್ನು ಬಿಟ್ಟು ಹೋಗುವುದಿಲ್ಲ.

**ಸಾಲವತಿ :** ಸೇನಾಪತಿಗಳೇ ಈಗ ನಾನೇನು ಮಾಡಲಿ?...ನನ್ನ ಅಪರಾಧವನ್ನು ಕ್ಷಮಿಸಿ. ಈ ಮಗುವಿಗಾಗಿಯಾದರೂ ನನ್ನನ್ನು ಸ್ವೀಕರಿಸಿ....ಒಮ್ಮೆ ನನಗಾಗಿ ಬಯಸಿದಿರಿ. ನಾನು ಅಹಂಕಾರದ ತುತ್ತ ತುದಿಯಲ್ಲಿದ್ದೆ. ನೀವು ಬಂದೇ ಬರುತ್ತೀರಿ. ನಿಮ್ಮನ್ನು ಆಗ ಕಾಡಬೇಕೆಂದಿದ್ದೆ. ನನಗಾಗಿ ನೀವು ಚಡಪಡಿಸುತ್ತೀರೆಂದುಕೊಂಡೆ. ಆದರೆ ನನ್ನ ನಿರೀಕ್ಷೆ ಸುಳ್ಳಾಯಿತು. ನನ್ನ ಕಡೆ ನಿಮ್ಮ ಸಂನ್ಯಾಸ.....ನಿರ್ಲಕ್ಷ್ಯ......ನನಗೆ ಅವಮಾನವೆನಿಸಿ ಕುದಿಯುತ್ತಿದ್ದೆ....ಆದರೆ....ಆದರೆ ವಿಧಿ ಏನೇನೋ ಹಂಚಿಕೆ ಹೂಡಿತು. ನನ್ನ ಮಗು ನಿಮ್ಮ ಕೈಗೇ ಸೇರಿತು.....ನನ್ನ ಋಣ ಹೇಗೆ ತೀರಿತು? ನನಗೊಂದು.....ಒಂದೇ ಒಂದು ಅವಕಾಶ ಕೊಡಿ ಸೇನಾಪತಿಗಳೇ....ನಿಮ್ಮನ್ನು ಸೇವಿಸುತ್ತೇನೆ; ಆರಾಧಿಸುತ್ತೇನೆ. (ಕಾಲಿಗೆ ಬೀಳುತ್ತಾಳೆ)

**ಪ್ರಭುಗಳು :** ಅಭಯಕುಮಾರರೇ ನಿಮ್ಮ ಆಲೋಚನೆಯೇನು? ನಿಮ್ಮ ಗೆಳೆಯರ ಗುಂಪಿಗೇ ಸೇರುತ್ತೀರೆಂದು ಭಾವಿಸುತ್ತೇನೆ. ಈ ಸರ್ವಶ್ರೇಷ್ಠ ಸುಂದರಿಯನ್ನು ಸ್ವೀಕರಿಸಿ ನಿಮ್ಮ ಔದಾರ್ಯವನ್ನು ತೋರಿಸುತ್ತೀರೆಂದು ಭಾವಿಸುತ್ತೇನೆ.

**ಅಭಯಕುಮಾರ:** (ಸಾಲವತಿಯನ್ನು ಎರಡೂ ಕೈಗಳಿಂದ ಎತ್ತಿ) ಏಳು ಸುಂದರಿ ನನ್ನಭಾಗ ಸ್ವಾಮಿನಿಯಾಗಬೇಕೆಂದೇ ವಿಧಿನಿಯಮವಿದ್ದಂತಿದೆ. (ಬಾಲಕನ ಕಡೆ ಕೈಚಾಚಿ) ಬಾ ಉದಯ. ನೀನು ತಾಯಿ ಬೇಕೆಂದು ಕೇಳಿದ್ದೆಯಲ್ಲ ಇವರೇ ನಿಮ್ಮ ತಾಯಿ.

**ಉದಯ :** (ಸಂತೋಷದಿಂದ) ಅಪ್ಪಾಜಿ! (ಎಂದು ಹೋಗಿ ಅಭಯ ಕುಮಾರನ ಕುತ್ತಿಗೆಯನ್ನು ಬಳಸುವನು. ಅಭಯ ಬಾಲಕನನ್ನು ಎತ್ತಿಕೊಳ್ಳುವನು)

('ಪ್ರಭುಗಳಿಗೆ ಜಯವಾಗಲಿ! ವೈಶಾಲಿಗೆ ಜಯವಾಗಲಿ' ಎಂದು ಜಯಘೋಷಗಳು ಕೇಳಿಸಬೇಕು.)

೦೦

# ಪಾತ್ರವರ್ಗ

| | | |
|---|---|---|
| ಭಾಗವತ | – | |
| ನಟಿ | – | |
| ಅಮರಸೇನ | – | ಪ್ರದ್ಯೋತಪುರದ ಅರಸು |
| ದೇವಸೇನ | – | ಅಮರಸೇನನ ಮಗ |
| ಇಂದುಮತಿ | – | ದೇವಸೇನನ ಪ್ರೇಯಸಿ |
| | | ಕಾತ್ಯಾಯಿನಿಯ ದಾಯಾದಿ ಸೋದರಿ |
| ಕಾತ್ಯಾಯನಿ | – | ದೇವಸೇನನ ಮಡದಿ |
| | | ಸಾಳ್ವಪುರದ ಸಾಮಂತನ ಮಗಳು |
| ರಾಣಿ (ಭುವನೇಶ್ವರಿ ) | | |
| ನಾಗದೇವ | – | |
| ಬೋಪದೇವ | – | ಕೊಲೆಗಡುಕ ದ್ರೋಹಿಗಳು |
| ಗಜಪತಿ | – | |
| ಧೀರನಾಯಕ | – | ದೇವಸೇನನ ಆಪ್ತ ಸಹಾಯಕ |
| ಗೋವಿಂದ ನಾಯ್ಕ | | |
| ಅಚ್ಯುತ ಮಂತ್ರಿ | – | ಅಮರಸೇನರ ಖಾಸಗೀ ಜನ |
| (ಅಚ್ಯುತೇಂದ್ರ) | | |
| ಸುಮಂತ್ರ | | |
| ಜನಗಳು ಮೊದಲಾದವರು | | |

# ದೃಶ್ಯ – ೧

(ರಂಗದ ಮೇಲೆ ಭಾಗವತ ಕಾಣಿಸಿಕೊಳ್ಳುತ್ತಾನೆ. ಅವನ ಮೇಲೆ ಬೆಳಕು ಬೀಳಬೇಕು. ಏನನ್ನೋ ಯೋಚಿಸುತ್ತಿರುವ ಭಂಗಿಯಲ್ಲಿ ಇದ್ದಾನೆ. ಒಳಗಡೆಯಿಂದ ನಟಿ, ಭಾಗವತಪ್ಪ! ಭಾಗವತಪ್ಪ ಎಂದು ಕೂಗುತ್ತಿರುವುದು ಕೇಳಿಸುತ್ತದೆ.)

**ನಟಿ** : [ಪ್ರವೇಶಿಸಿ ಭಾಗವತನನ್ನು ಅಡಿಯಿಂದ ಮುಡಿಯವರೆಗೆ ನೋಡುತ್ತ ನಿಟ್ಟುಸಿರಿಟ್ಟು] ಹುಂ! ಸರಿ ಹೋಯ್ತು! ಈ ಭಾಗವತಪ್ಪನಿಗೆ ಏನಾಯ್ತೊಂತ! [ಗಲ್ಲದ ಮೇಲೆ ಕೈಯಿರಿಸಿ ಮುಖ ತಿರುಗಿಸಿ] ಏಯ್ ಭಾಗವತಪ್ಪ, ಏನಾಯ್ತೊಂತೀ ಹೀಗೆ ಗರಬಡಿದವನ ಹಾಗೆ ನಿಂತುಬಿಟ್ಟೆಯಲ್ಲ. ಹೊರಗಡೆ ಪ್ರೇಕ್ಷಕರು ನಾಟಕ ಯಾಕೆ ಶುರುವಾಗ್ತಿಲ್ಲ ಅಂತ ಗದ್ದಲ ಮಾಡ್ತಿದ್ದಾರೆ.

**ಭಾಗವತ** : ಅಮ್ಮ ತಾಯಿ ನಟೀಮಣಿ. ಪ್ರೇಕ್ಷಕರ ಕುತೂಹಲ ಅಸಹನೆಗಳ ಪ್ರಜ್ಞೆ ನನಗೂ ಇದೆ. ನಾನು ಯೋಚ್ನೆ ಮಾಡ್ತಿರೋದು ಏನು ಗೊತ್ತಾ?

**ನಟಿ** : ನೀನು ಮಾಡ್ತಿರೋ ಯೋಚ್ನೆ ನನಗೆ ಹೇಗೆ ಗೊತ್ತಾಗ್ಬೇಕು ಭಾಗವತಪ್ಪ?

**ಭಾಗವತ** : ನಾನಾಡಿಸ್ತಿರೋ ಹೊಸಾ ನಾಟಕದ ಪರಿಚಯ ಸಭೆಗೆ ಹೇಗೆ ಮಾಡಿಕೊಡಬೇಕೂಂತ ಯೋಚಿಸ್ತಿದ್ದೆ.

**ನಟಿ** : ಇದೇನು ಭಾಗವತಪ್ಪ ಹೀಗೆ ಮಾತಾಡ್ತೀ. ನಾಟಕ ಆಡೋದು ಆಡಿಸೋದು ನಿನಗೇನು ಹೊಸದಲ್ಲ.

**ಭಾಗವತ** : ನಾಟಕ ಆಡಿಸೋದು ಹೊಸದೂಂತ ನಾನು ಹೇಳ್ತಿಲ್ಲ. ಹೊಸ ನಾಟಕಾಂತ ಹೇಳಿದ್ದೀನಿ.

**ನಟಿ** : ಅದೇ ತಾನೇ ಅದೇನೋ ಪ್ರೇಮ ಸಮಾಧೀನೋ ಗೀಮ ಸಮಾಧೀನೋ ಅಂತ ಏನೋ ಹೇಳ್ತಿದ್ದೆಯಲ್ಲ.

**ಭಾಗವತ** : ಅಮ್ಮ ನಟೀಮಣಿ ಅಷ್ಟು ತಿರಸ್ಕಾರದಿಂದ ಮಾತಾಡಬೇಡ. ಪ್ರೇಮ, ಪ್ರೀತಿ ಅನ್ನೋದು ಪ್ರಪಂಚದಲ್ಲಿ ಎಷ್ಟು ವಿಚಿತ್ರ ಅಂತೀಯ? ಪ್ರೇಮ,

ಪ್ರೀತಿಗಳ ಅಖಂಡ ಶಕ್ತಿ ರಾಜ್ಯಗಳನ್ನೇ ಅಳಿಸಿ ಹಾಕುತ್ತೆ, ಜೀವಗಳನ್ನೇ ಹೊಸಕಿ ಹಾಕುತ್ತೆ. ದಕ್ಕದ ಪ್ರೀತಿಯಿಂದ ಎಂಥ ವಿನಾಶ!

ನಟೀ : ಪ್ರೀತಿಯಿಂದ ವಿನಾಶ ಒಂದು ಕಡೆ ಇರಲಿ, ಪ್ರೀತಿ ಹುಚ್ಚುಹೊಳೆಯಾಗಿ ವಿವೇಕವನ್ನೇ.ಕಳಕೊಂಡು ವಿಚಿತ್ರವಾಗಿ ನಡ್ಕೋಳ್ಳೊ ಜನಕ್ಕೇನು ಕಮ್ಮೀನ?

ಭಾಗವತ : ನೀನು ಸರಿಯಾಗಿ ಹೇಳಿದೆ. ನಾನು ಆಡಿಸಲಿರುವ ನಾಟಕದ ನಾಯಕನೂ ಇಂತಹ ಹುಚ್ಚು ಪ್ರೀತಿಯ ಕೆಚ್ಚಿನ ಧೀರ. ರಾಜಕುಮಾರ ದೇವಸೇನ ಸತ್ತು ಸಮಾಧಿಯಾಗಿದ್ದ ಪ್ರಣಯಿನಿಯ ಅಸ್ಥಿಪಂಜರವನ್ನೇ ಅಲಂಕರಿಸಿ ಜೊತೆಯಿರಿಸಿಕೊಂಡು ರಾಜ್ಯಾಭಿಷೇಕ ಮಾಡಿಕೊಂಡ ಸಂಗತಿ ಕೇಳಿದರೆ ಬೆಚ್ಚಿ ಬೀಳುವಂತೆ ಆಗುತ್ತೆ.

ನಟೀ : ಅಯ್ಯೋ ಈ ರಾಜವಂಶಗಳ ಬದುಕಿನ ಒಳ ಗುಟ್ಟುಗಳಲ್ಲಿ ಇಂತಹ ಪ್ರೀತಿ ಪ್ರಣಯಗಳ, ಸಂಬಂಧಗಳ ಬಗ್ಗೆ ಮಾತಾಡಿ ನೆನೆಸಿಕೊಂಡರೇನೇ ಸಾಕು ಭಯಂಕರ ಅನಿಸುತ್ತೆ, ಅಸಹ್ಯವೂ ಆಗುತ್ತೆ.

ಭಾಗವತ : ಛಿ! ಛಿ! ನಾನು ಹೇಳ ಹೊರಟ ಕತೆಯಲ್ಲಿ ಅಂತಹ ಅಶ್ಲೀಲ ಗಿಶ್ಲೀಲ ಅನ್ನೋದು ಯಾವುದೂ ಇಲ್ಲ. ಬದಲಾಗಿ ಅಯ್ಯೋ ಪಾಪ ಅನಿಸುತ್ತೆ. ಪರಿಸ್ಥಿತಿಯಿಂದಾಗಿ ನಿರ್ವ್ಯಾಜ್ಯ ಪ್ರೇಮದಿಂದ ಒಂದಾಗಿ ಸುಖವಾಗಿ ಸಂತೋಷವಾಗಿ ಇದ್ದ ಪ್ರಣಯ ದಂಪತಿಗಳ ಬದುಕಿನಲ್ಲಿ ಬಿದ್ದ ಕಿಚ್ಚು ನಿಸ್ವಾರ್ಥ ಪ್ರಣಯಿನಿಯ ದುರಂತ ಸಾವು ನಮ್ಮೆಲ್ಲರನ್ನು ತಲ್ಲಣಗೊಳಿಸುತ್ತೆ.

ನಟೀ : ಅಯ್ಯಾ ಭಾಗವತ ಇಲ್ಲೇ ನಿಂತು ನಾಟಕದ ಕತೆಯೆಲ್ಲವನ್ನೂ ನನಗೇ ಒಪ್ಪಿಸಿ ಬಿಡ್ತೀಯ ಇಲ್ಲ ಪ್ರೇಕ್ಷಕರ ಬಳಿಗೆ ಹೋಗಿ ಅವರಿಗೆ ಇದೆಲ್ಲ ಹೇಳಿ ನಾಟಕ ಶುರೂ ಮಾಡಿಸ್ತೀಯ.

ಭಾಗವತ : ಹೌದಮ್ಮಾ ಹೌದು. ನೀನು ಹೇಳಿದ್ದು ಸಮಂಜಸವೇ. ಅವರ ಸಹನೆಯ ಪರೀಕ್ಷೆ ಇನ್ನು ಸಾಕು. ನೀನು ಹೋಗಿ ನಟರೆಲ್ಲರೂ ಸಿದ್ಧವಾಗಿದ್ದಾರಾ ನೋಡಿಬಾ. ನಾನು ಈಗಲೇ ಪ್ರೇಕ್ಷಾಂಗಣಕ್ಕೆ ಹೋಗಿ ಸಭಿಕರಿಗೆ ಅಭಿವಂದಿಸಿ ಬರುತ್ತೇನೆ.

ನಟೀ : ಆಯ್ತು ಭಾಗವತಪ್ಪ. ದೊಡ್ಡ ದೊಡ್ಡೋರೆಲ್ಲ ಬಂದಿದ್ದಾರೆ. ನೀನು ಆಡಿಸೋ ನಾಟಕ ಸಕತ್ತಾಗಿರಬೇಕು.

ನಟೀ : ಖಂಡಿತವಾಗಿಯೂ ಮೈ ನವಿರೇಳಿಸುವಂತೆ ಆಡಿಸುತ್ತೇನೆ.

ನಟೀ : ಇದೋ ಹೊರಟೆ. ಇನ್ನೆರಡು ಕ್ಷಣಗಳಲ್ಲಿ ನಾಟಕ ಆರಂಭವಾಗಲಿ. ತಿಳಿಯಿತೇ? (ಹೋಗುತ್ತಾಳೆ) [ಭಾಗವತ ನಟೀ ಹೋದ ದಿಕ್ಕಿಗೆ ವಿರುದ್ಧವಾಗಿ ಹೋಗುತ್ತಾನೆ.]

೦೦

# ದೃಶ್ಯ – ೨

(ಭಾಗವತನ ಪ್ರವೇಶ)

**ಭಾಗವತ :** ಪ್ರೇಕ್ಷಕರಿಗೆ ನಮಸ್ಕಾರ. ನಾಟಕ ಶುರುವಾಗೋದು ಸ್ವಲ್ಪ ತಡವಾಯಿತು ಕ್ಷಮಿಸಬೇಕು.

**ಪ್ರೇಕ್ಷಕರು :** ಕ್ಷಮೆಯಿರಲಿ. ಮೊದಲು ನೀನು ಯಾವ ನಾಟಕ ಆಡಿಸುವವನಿದ್ದೀ ಹೇಳು.

**ಭಾಗವತ :** ತಾಳ್ಮೆ! ತಾಳ್ಮೆ! ಜಗತ್ತಿನ ಇತಿಹಾಸದಲ್ಲಿ ಎಷ್ಟೊಂದು ಪ್ರೇಮ ಕತೆಗಳಿವೆ. ಆದರೆ ನಾನು ಆಡಿಸಲಿರುವ ಪ್ರೇಮಕತೆ ಕೇಳಿದರೆ ಕುಳಿತಲ್ಲೇ ರೋಮಾಂಚಗೊಳ್ಳುತ್ತೀರಿ.

**ಪ್ರೇಕ್ಷಕರು :** ಹಾಗಾದರೆ ಅದೇನೂಂತ ಹೇಳಿ ಬಿಡ್ರೆಲ್ಲಾ?

**ಭಾಗವತ :** ಕತೆಯೆಲ್ಲ ಹೇಳಿ ಬಿಟ್ಟರೆ ಸ್ವಾರಸ್ಯ ಎಲ್ಲಿದ್ದೀತು? ಆದರೂ ನಾನು ಹೇಳ ಹೊರಟಿರೋದು ಪ್ರದ್ಯೋತಪುರದ ರಾಜಕುಮಾರ ದೇವಸೇನನ ಪ್ರಣಯಕತೆ. ತಂದೆ ಅಮರಸೇನನ ಏಕಮಾತ್ರ ಪ್ರಿಯಪುತ್ರ,

(ದೇವಸೇನನ ಪ್ರವೇಶ, ದುಃಖ, ದುಗುಡಗಳು ಕವಿದಿವೆ.)

**ದೇವಸೇನ :** ಪ್ರದ್ಯೋತಪುರದ ಅಮರಸೇನನ ಮಗನಾದ ನಾನು ದೇವಸೇನ ಎಷ್ಟೋ ಆಸೆ ಕನಸುಗಳನ್ನು ಎದೆ ತುಂಬಿಕೊಂಡು ಕಾತ್ಯಾಯಿನಿಯನ್ನು ಮದುವೆಯಾದೆ. ಆದರೆ ಪ್ರಯೋಜನವೇನು? ಪ್ರೀತಿಯನ್ನು ಉಣಲಿಲ್ಲ. ಇಚ್ಛೆಯಿಲ್ಲದ ದೇಹಸುಖ ಒಳಗಿನ ಬೆಂಕಿಯನ್ನು ಆರಿಸಲಾಗದು. ಅವಳು ನನ್ನನ್ನು ತಿರಸ್ಕರಿಸುತ್ತಾಳೆ; ಹಂಗಿಸುತ್ತಾಳೆ.

**ಭಾಗವತ :** ಮನಪಿಲ್ಲದೆ ಮದುವೆ
ಮಾಡಿ ನೆರವ ಪಡೆದನು

ನೋಡಿ ಮಗಳ ಸುಖ
ವನೆ ಕೋರಿದನು ಅಮರಸೇನ

**ದೇವಸೇನ :** ರಾಜವಂಶದ ವ್ಯವಹಾರಗಳಲ್ಲಿ ವೈಯಕ್ತಿಕ ಬೇಕು ಬೇಡಗಳ ಲಕ್ಷ್ಯವೇ ಇರೋದಿಲ್ಲ. ಸಾಳ್ವ ಮತ್ತು ಪ್ರದ್ಯೋತಪುರಗಳ ಸಂಬಂಧವೂ ರಾಜಕೀಯ ವಿವಾಹದಿಂದ ಆದದ್ದೆ. ಅಕ್ಕ ಮಾಲಿನಿಯನ್ನು ತಿರಸ್ಕರಿಸಿದ್ದವನನ್ನು ಮತ್ತೆ ಕಾಲು ಹಿಡಿದು ಕೂತಿದ್ದಾನೆ. ಅಷ್ಟೊಂದು ಕೀಳಾಗಿ ನಿಕೃಷ್ಟವಾಗಿ ಕಂಡ ಅಮರುಕ ದೊರೆಯನ್ನು ಅಂದರೆ ನನ್ನ ಭಾವನನ್ನು ಮತ್ತೆ ಹತ್ತಿರಕ್ಕೆ ಸೇರಿಸಿಕೊಳ್ತಿರೋದ್ರಲ್ಲಿ ಅಪ್ಪನ ಉದ್ದೇಶ ನನಗೆ ಗೊತ್ತು.

**ಭಾಗವತ :** ನಿಮ್ಮ ತಂದೆ ಮಾಡುವ
ನಾದರೂ ಏನು ಅಮರುಕನ
ನರಿ ಬುದ್ಧಿ ತಿಳಿಯದಾಯಿತು
ಕೇಳಿ ಹೇಡಿ ಬರ್ಬರ ದಾಳಿಗೆ
ಹೆದರಿ ಕೋರಿದನು ಸ್ನೇಹವನು
ಒಪ್ಪಿದನು ಮರಳಿ ಮಡದಿ
ಯನು ಸ್ವೀಕರಿಸೆ.

**ದೇವಸೇನ :** ಹೌದೌದು ನನ್ನ ತಂದೆಗೆ ಮಗಳ ಸುಖ ಹೆಚ್ಚಾಯಿತು. ಪ್ರಣವಪುರದ ಸಾಮಂತನ ಮಗಳ ಸ್ವಭಾವ ಗುಣ ತಿಳೀದೆ ನನಗೆ ಮದುವೆ ಮಾಡಿಸೋ ಅಗತ್ಯವೇನಿತ್ತು? ಕಾತ್ಯಾಯನಿಯನ್ನು ನೋಡಿದ ಕೂಡಲೇ ಅವಳ ಚೆಲುವಿಗೆ ನಾನೂ ಬೇಸ್ತು ಬಿದ್ದೆ. ಅವಳಿಗೆ ನಾನು ಕುರೂಪಿಯಂತೆ ಕಾಣಿಸುತ್ತಿದ್ದೇನೆ. ರಾತ್ರಿಗಳೆಂದರೆ ನನಗೆ ಹೆದರುವಂತಾಗಿದೆ. ಅವಳ ಒಂದೊಂದು ಮಾತೂ ವ್ಯಂಗ್ಯದ ವಿಷದಿಂದ ಕೂಡಿರುತ್ತೆ.

(ಇಂದುಮತಿಯ ಪ್ರವೇಶ)

**ಇಂದುಮತಿ:** ಯುವರಾಜರೇ ನೀವು ಇಲ್ಲೇನು ಮಾಡುತ್ತಿದ್ದೀರಿ. ಕಾತ್ಯಾಯಿನಿ ನಿಮಗಾಗಿ ಅರಮನೆಯಲ್ಲೆಲ್ಲ ಹುಡುಕಾಡುತ್ತಿದ್ದಾಳೆ.

**ದೇವಸೇನ :** (ಆಶ್ಚರ್ಯದಿಂದ) ಯಾಕೆ? ರಾತ್ರಿಯ ವಿಷಬಾಣಗಳನ್ನು ಬೆಳಗಿಗೂ ಉಳಿಸಿಕೊಂಡಿದ್ದಾಳೇನು? ಅವಳ ಮುಖವನ್ನು ನೋಡುವುದಕ್ಕೂ ನನಗೆ ಇಷ್ಟವಾಗುವುದಿಲ್ಲ. ಆದರೆ ಅರಮನೆಯ ಗೌರವ ಸಿಡಿದು ಹೋಳಾಗಬಾರದೆಂದು ಅವಳನ್ನು ಸಹಿಸಿಕೊಂಡಿದ್ದೇನೆ.

**ಇಂದು :** ಯುವರಾಜರೇ ನೀವು ಇಷ್ಟೊಂದು ಅಸ್ವಸ್ಥರಾಗಬಾರದು. ಹೊರಗಿನ ನೋಟಕ್ಕೆ ನಿಷ್ಠುರವಾಗಿ ಕಾಣುತ್ತಾಳೆಯೇ ಹೊರತಾಗಿ ಅವಳ ಮನಸ್ಸು

ಮೃದು ಮಲ್ಲಿಗೆಯಂತೆ. ಸ್ವಲ್ಪ ದಿನ ಹೋದರೆ ಸರಿಹೋಗುತ್ತಾಳೆ.

**ದೇವಸೇನ :** ನೀನು ಅವಳ ಬಗ್ಗೆ ಕೆಟ್ಟದ್ದನ್ನು ಹೇಗೆ ತಾನೆ ಮಾತನಾಡೀಯೆ? ಅವಳು ನಿನ್ನ ಸೋದರಿಯಲ್ಲವೇ?

**ಇಂದು :** ಅದಕ್ಕೆಂದೇ ನನಗೆ ಅವಳ ಸ್ವಭಾವ ತಿಳಿದಿದೆ. ನೀವು ಅವಳ ವಿಚಾರವಾಗಿ ತಲೆಕೆಡಿಸಿಕೊಳ್ಳಬೇಡಿ. ಅವಳಿಗೆ ನಾನು ಬುದ್ದಿ ಹೇಳುತ್ತೇನೆ. ನಿಮ್ಮನ್ನು ಖಂಡಿತವಾಗಿಯೂ ಪ್ರೀತಿಸುತ್ತಾಳೆ.

**ಭಾಗವತ :** ಇಂದುಮತಿ ಸತ್ಯವನೆ

ನುಡಿವಳು ಕೇಳು ಕುಮಾರ

ಕಾಲವೇ ಮದ್ದಾಗಿ ಒಲಿಯುವಳು

ಮುದ್ದಾಗಿ ಬಿಡದೆ. ನಿನ್ನ

**ದೇವಸೇನ :** ಹಾಗಾದರೆ ನೀವು ಹೇಳುವುದಾದರೂ ಏನು?

**ಇಂದುಮತಿ:** ನಾವು ಹೇಳುವುದಿಷ್ಟೇ. ಅವಳ ಕೋರಿಕೆಯಂತೆ ನೀವು ಹೋಗಿ ಅವಳನ್ನು ಮಾತಾಡಿಸಿ ಬನ್ನಿ.

**ದೇವಸೇನ :** ನೀವು ಹೇಳುತ್ತೀರೆಂದು ನಾನು ಹೋಗುತ್ತೇನೆ. ಮತ್ತೆ ನಮ್ಮಿಬ್ಬರ ನಡುವೆ ಬೆಂಕಿ ಹೊತ್ತಿಕೊಂಡರೆ ಜನ್ಮದಲ್ಲಿ ಅವಳ ಮುಖ ನೋಡಲಾರೆ.

**ಇಂದುಮತಿ:** ಇಂಥ ನಿಷ್ಠುರ ತೀರ್ಮಾನ ಸಲ್ಲದು. ನೀವೇ ಹೇಳಿದಿರಿ ಅರಮನೆಯ ಪ್ರತಿಷ್ಠೆ, ಗೌರವಗಳು ಬೀದಿಪಾಲಾಗಬಾರದು. ಸಾಮಾನ್ಯ ಪ್ರಜೆಗಳಲ್ಲಿ ಇಂತಹ ಪ್ರಸಂಗಗಳು, ಗಂಡಹೆಂಡಿರ ನಡುವಿನ ಮನಸ್ತಾಪಗಳು ಸುದ್ದಿಯಾಗುವುದಿಲ್ಲ. ಆದರೆ ಅರಮನೆಯಲ್ಲಿ ಏನೇ ನಡೆದರೂ ರೆಕ್ಕೆ ಪುಕ್ಕಗಳು ಮೂಡಿ ನಡೆದದ್ದಕ್ಕಿಂತ ನೂರು ಪಟ್ಟು ದೊಡ್ಡದಾಗಿ ಗಾಳಿಸುದ್ದಿಯಾಗಿ ಕಡೆಗೆ ರಾಜ್ಯಕ್ಕೂ ಹಾನಿಯುಂಟಾಗುವಷ್ಟು ಗಂಭೀರವಾಗಿ ಪರಿಣಮಿಸುತ್ತೆ.

**ಭಾಗವತ :** ಅದಕೆ ಹೇಳುವೆ
ಕೇಳು ಕುಮಾರ ಮಡದಿ
ಮನವನು ಒಲಿಸಿಕೊಳುವ
ವಿಧವ ಯೋಚಿಸು ಬೇಗನೆ.

**ದೇವಸೇನ :** ಆಯಿತು. ಆದರೆ ನನ್ನ ಪ್ರೀತಿಯ ದಾಹ? ಸುಖದ ನೆಮ್ಮದಿಗಳು?

**ಭಾಗವತ :** ದೇವರಿಚ್ಛೆಯಂತೆ ನಡೆಯುತ್ತವೆ.
ಮನುಜರೆಲ್ಲರು ಒಂದೆ

ತೆರನ ಇರಲು ಸಾಧ್ಯವೆ
ಅರಿತು ನಡೆಯಲು
ಸುಖವು ತಾನೇ ದೊರೆವುದು
ಗೆಲುವು ನಿನಗೇ ಸಲುವುದು
ಶಾಂತಿ ನಿನ್ನಯ ಸೇರ್ವುದು

ದೇವಸೇನ : ಹಾಗಾದರೆ ಹೊರಡುತ್ತೇನೆ.

೧೦

## ದೃಶ್ಯ – ೩

(ಅಂತಃಪುರದ ಒಳಭಾಗ. ಹಂಸತೂಲಿಕಾ ತಲ್ಪದ ಮೇಲೆ ಕಾತ್ಯಾಯಿನಿ ಕುಳಿತಿದ್ದಾಳೆ. ಇಂದುಮತಿ ಪ್ರವೇಶಿಸುತ್ತಾಳೆ)

**ಕಾತ್ಯಾಯನಿ:** (ಇಂದು ಪ್ರವೇಶಿಸಿದ್ದನ್ನು ನೋಡಿ) ಬಾ ಇಂದು. ಹೋದವಳು ಇಷ್ಟು ಹೊತ್ತಾದರೂ ಬರಲಿಲ್ಲವೇಕೆ ಎಂದು ಯೋಚಿಸುತ್ತಿದ್ದೆ. ಏನೆಂದರು ನಿಮ್ಮ ಪ್ರೀತಿಯ ಯುವರಾಜರು?

**ಇಂದುಮತಿ:** (ನಗುತ್ತಾ) ಯಾಕೆ ಕಾತ್ಯಾ ನಿನಗೂ ಅವರು ಪ್ರಿಯರೇ ಅಲ್ಲವೇ?

**ಕಾತ್ಯಾಯನಿ:** (ವ್ಯಂಗ್ಯವಾಗಿ ನಕ್ಕು) ಇಂದೂ ನನ್ನ ಮನಸ್ಸು ನಿನಗೆ ಅರ್ಥವಾಗುವುದಿಲ್ಲ. ಪ್ರೀತಿಸಬೇಕೆಂದುಕೊಳ್ಳುತ್ತೇನೆ; ಪೂರ್ತಿಯಾಗಿ ಅವರನ್ನು ತೆಕ್ಕೆಗೆ ತೆಗೆದುಕೊಳ್ಳಬೇಕೆಂದುಕೊಳ್ಳುತ್ತೇನೆ. ಆದರೆ ನಾನೇನು ಮಾಡಲಿ? ಹತ್ತಿರ ಸರಿದಂತೆ ಬೆಚ್ಚಿ ಬೀಳುವಂತಾಗುತ್ತದೆ. ಅಸಹ್ಯವೆನಿಸುತ್ತದೆ. ಮನಸ್ಸನ್ನು ಒಪ್ಪಿಸಲು ಪ್ರಯತ್ನಿಸುತ್ತೇನೆ. ಆದರೆ ನನ್ನ ಹತೋಟಿ ಮೀರಿ ನನ್ನ ವರ್ತನೆಯಿರುತ್ತದೆ.

**ಇಂದುಮತಿ:** ಕಾತ್ಯಾ ಯುವರಾಜರನ್ನು ನಿನ್ನ ಭಾಗಸ್ವಾಮಿಯಾಗಿ ಪಡೆಯಲು ಅದೃಷ್ಟ ಮಾಡಿರಬೇಕು. ಮುಂದೆ ನೀನೇ ಪ್ರದ್ಯೋತ ಪುರದ ಮಹಾರಾಣಿಯಾಗುವಿ. ರಾಜಮಾತೆಯಾಗುವ ಗೌರವ ನಿನ್ನದಾಗುವುದು. ಅವರದು ತುಂಬ ಒಳ್ಳೆಯ ಮನಸ್ಸು. ನಿನ್ನನ್ನು ಎಷ್ಟೊಂದು ಪ್ರೀತಿಸುತ್ತಾರೆಂಬ ಕಲ್ಪನೆಯಾದರೂ ನಿನಗಿದೆಯೇ?

**ಕಾತ್ಯಾಯನಿ:** ಇಂದೂ ನಾರಾಯಣ ಪಕ್ಷಿಯಂತೆ ಉದ್ದವಾದ ಆ ಕೊರಲು, ಮೊಂಡು ಮೂಗು, ದಢೂತಿ ದೇಹ ಕಂಡರೆ ನನಗೆ ಏನೊ ಒಂದು ಬಗೆಯ ಅಸಹ್ಯ. ನನಗರಿವಿಲ್ಲದಂತೆ ನನ್ನ ಪ್ರೀತಿಯ ಕವಾಟಗಳು ಮುಚ್ಚಿಕೊಂಡು ಬಿಡುತ್ತವೆ. ಎಷ್ಟೇ ಪ್ರಯತ್ನಿಸಿದರೂ ಒಳಗೆ ಬರಮಾಡಿಕೊಳ್ಳಲಾಗುವುದಿಲ್ಲ.

**ಇಂದುಮತಿ:** ಕಾತ್ಯಾ ನಾನು ನಿನಗಿಂತ ವಯಸ್ಸಿನಲ್ಲಿ ಚಿಕ್ಕವಳಿರಬಹುದು ಆದರೆ ನಿನ್ನ ಈ ರೀತಿಯಿಂದ ಅಮೂಲ್ಯವಾದುದೆಲ್ಲವನ್ನೂ ಕಳೆದುಕೊಳ್ಳಬೇಕಾಗುತ್ತದೆ. ಇನ್ನೂ ನಿನಗೆ ತವರಿನ ಹಂಬಲ ಬಿಟ್ಟಿಲ್ಲ. ಸದಾ ನಿಟ್ಟುಸಿರಿಡುತ್ತಾ ಕಂಬನಿಗರೆಯುತ್ತಾ ಕೂತರೆ ನೀನು ಸಾಧಿಸುವುದಾದರೂ ಏನನ್ನು?

**ಕಾತ್ಯಾಯನಿ:** ನನಗೆಷ್ಟೋ ಸಲ ಈ ಮದುವೆಯಲ್ಲಿ ಅಪ್ಪನ ಸ್ವಾರ್ಥವಿದೆಯೇನೋ ಎನಿಸುತ್ತದೆ.

**ಇಂದುಮತಿ:** ನೀನೆನ್ನುವ ಸ್ವಾರ್ಥ ಅಪ್ಪನ ಸ್ವಂತ ಸುಖಕ್ಕಲ್ಲ. ರಾಜ್ಯದ ಕ್ಷೇಮಕ್ಕಾಗಿ, ರಾಜಕೀಯ ವಿವಾಹಗಳಿಂದ ದೊಡ್ಡ ದೊಡ್ಡ ರಾಜ್ಯಗಳ ಸ್ನೇಹ ಸಂಬಂಧಗಳು ಲಭಿಸಿ ಭದ್ರತೆ, ಸುರಕ್ಷತತೆಯ ಅವಕಾಶಗಳಿರುತ್ತೆ. ಹೊರಗಿನ ಶತ್ರುಗಳನ್ನು ಒಗ್ಗಟ್ಟಾಗಿ ಎದುರಿಸುವ ಸಾಧ್ಯತೆಗಳಿರುತ್ತವೆ. ಪ್ರದ್ಯೋತಪುರದ ಸಂಬಂಧವೆಂದರೆ ಪ್ರತಿಷ್ಠೆಯ ಸಂಕೇತ!

**ಕಾತ್ಯಾಯನಿ:** ಇಂದೂ ನೀನು ಎಷ್ಟೇ ಹೇಳಿದರೂ ನನಗೇಕೋ ಅವ್ಯಕ್ತ ಭೀತಿಯೊಂದು ಕಾಡುತ್ತಿದೆ. ಇಲ್ಲಿ ನಾನು ಪರಕೀಯಳಂತೆ ಅನಾಥಳಂತೆ ಅನಿಸುತ್ತಿದೆ. ಎಲ್ಲವೂ ಹೊಸದು. ಹೊಸ ಪರಿಸರ, ಹೊಸಜನ ಹೊಸದಾದ ರೀತಿನೀತಿಗಳು! ನನಗೆ ಯಾವುದಕ್ಕೂ, ಯಾರೊಂದಿಗೂ ಹೊಂದಿಕೊಳ್ಳಲಾಗುತ್ತಿಲ್ಲ. ಅತ್ತೆ, ಮಾವ, ಗಂಡ ಯಾರೂ ನನ್ನವರೆಂಬ ಭಾವನೆ ಬರುತ್ತಿಲ್ಲ.

ಇಂದೂ! ಇಂದೂ! ನೀನು ನನ್ನ ಜೊತೆ ಇಲ್ಲದಿದ್ದರೆ ನಾನೇನಾಗುತ್ತಿದ್ದೆನೋ? ನಮ್ಮ ಆ ಬಾಲ್ಯದ ದಿನಗಳು ಎಷ್ಟು ಚೆನ್ನಾಗಿದ್ದವು! ನಾನು ನಿನಗೆ ಹಿರಿಯಳಾದರೂ ಸದಾ ನನ್ನ ಸಂತೋಷಕ್ಕೇ ಹಾತೊರೆಯುತ್ತಿದ್ದೆ. ವಸಂತೋತ್ಸವ, ನೌಕಾವಿಹಾರ, ಬೆಳ್ದಿಂಗಳೂಟ. ಜಲಕ್ರೀಡೆ, ಚಿತ್ರಸ್ಪರ್ಧೆ, ನಾವು ಓಡಾಡಿದ ಉದ್ಯಾನಗಳು, ಆಡಿದ ಜೋಕಾಲಿಯಾಟ-ಹುಲಿ ಬೇಟೆಗೆಂದು ಹೋಗಿ ನರಿ ಬೇಟೆಯಾಡಿದ್ದು ಎಲ್ಲವೂ ನೆನಪಾಗುತ್ತದೆ. ಅಲ್ಲಿನ ಸ್ವಚ್ಛಂದತೆ, ಸ್ವಾತಂತ್ರ್ಯಗಳನ್ನು ಬಿಟ್ಟುಕೊಟ್ಟು ಉಸಿರುಗಟ್ಟುವ ಬಂದೀವಾಸ! ನೆನೆಸಿಕೊಂಡಷ್ಟೂ ನೋವಿನ ಊಟೆಯೊಡೆಯುತ್ತದೆ (ನಿಟ್ಟುಸಿರು)

**ಇಂದುಮತಿ:** ಕಾತ್ಯಾ ನಿನ್ನ ಆಲೋಚನೆಗಳು ಅರ್ಥವಿಲ್ಲದ್ದು. ಹೆಣ್ಣು ಮಕ್ಕಳು ಸದಾ ತೌರಿನಲ್ಲಿಯೇ ಇರಲು ಹೇಗೆ ಸಾಧ್ಯ? ಒಂದಲ್ಲ ಒಂದು ದಿನ ತವರು ಬಿಟ್ಟು ಅತ್ತೆ ಮನೆ ಸೇರಲೇ ಬೇಕಲ್ಲವೇ? ನೀನೂ ಹಾಗೇ ಇಲ್ಲಿಗೆ ಬಂದಿದ್ದೀ. ನೀನು ಬಂದ ಪರಿಸರಕ್ಕೆ ನಿನ್ನನ್ನು ಹೊಂದಿಸಿಕೊಂಡು

ಹೋಗಬೇಕೇ ಹೊರತು ಅದು ಸರಿಯಿಲ್ಲವೆಂದು ಗೋಳಿಡುತ್ತಾ ಪರಿಸರದಿಂದ ದೂರ ದೂರವಾಗುತ್ತ ಮುದುಡಿಕೊಳ್ಳುವುದು ಯಾವ ಜಾಣತನ?

**ಕಾತ್ಯಾ :** ಇಂದೂ ಇಷ್ಟೆಲ್ಲ ವೇದಾಂತ ಹೇಳುವ ನೀನಾದರೆ ಹೀಗೆ ಹೊಂದಿಕೊಳ್ಳುತ್ತಿದ್ದೆಯೇನು?

**ಇಂದುಮತಿ:** ಖಂಡಿತವಾಗಿಯೂ. ನನಗೆ ಎಂತಹ ಪ್ರಪಂಚವೇ ಸಿಗಲಿ ಅದರಲ್ಲಿ ಸುಖದ ಬೀಜಗಳನ್ನು ಬಿತ್ತಿ ಬೆಳೆ ತೆಗೆಯಬಲ್ಲೆ. ಯಾರ ಸ್ನೇಹ ಪ್ರೀತಿಗಳನ್ನಾದರೂ ಗೆದ್ದುಕೊಳ್ಳಬಲ್ಲೆ, ಆ ಆತ್ಮವಿಶ್ವಾಸ ನನಗಿದೆ.

**ಕಾತ್ಯಾಯಿನಿ:** ಏನಮ್ಮ ಇಂದೂ ನಿನ್ನ ಮಾತಿನ ಧಾಟಿ ನೋಡಿದರೆ ನನ್ನವರನ್ನೇ ಹಾರಿಸಿಕೊಂಡು ಹೋಗುವಂತಿರುವೆಯಲ್ಲ?......... ನಿನಗೆ ನೆನಪಿದೆಯೇ ಒಮ್ಮೆ ನೀನು ಎಲ್ಲಿಂದಲೋ ಒಂದು ಸೌಗಂಧಿಕ ಪುಷ್ಪವನ್ನು ತಂದೆ. ಅದರ ಪರಿಮಳ ಅಂದಕ್ಕೆ ಮನತೆತ್ತು ನನಗೆ ಅದು ಬೇಕೆಂದಾಗ ಕಿಂಚಿತ್ತೂ ಬೇಸರಗೊಳ್ಳದೆ ಅದನ್ನು ನನಗೆ ಕೊಟ್ಟುಬಿಟ್ಟೆ. ಅದನ್ನೇ ನೆನಪಿನಲ್ಲಿ ಇಟ್ಟುಕೊಂಡು ಯುವರಾಜರನ್ನೂ ಅಪಹರಿಸಬೇಕೆಂದು ಕೊಳ್ಳುತ್ತಿರುವೆಯಾ ಹೇಗೆ?

**ಇಂದುಮತಿ:** ಕಾತ್ಯಾ ಕಾತ್ಯಾ.......... ನನ್ನ ಮೇಲೆ ನಿನಗೆ ಇಂಥ ಅನುಮಾನ ಯಾಕೆ ಬಂತು? ನಿನ್ನ ಸುಖ ಸಂತೋಷಗಳೇ ನನ್ನವೂ ಎಂದು ಭಾವಿಸಿರುವವಳ ಮೇಲೆ ಆರೋಪವೇ?

**ಕಾತ್ಯಾ :** ಸಿಟ್ಟಾಗಬೇಡ ಮರಿ. ವಿನೋದಕ್ಕೆಂದು ಹಾಗೆಂದೆ. ಒಂದು ವೇಳೆ ನಿಜವಾಗಿಯೂ ಯುವರಾಜನನ್ನು ಬಯಸುವೆಯಾದರೆ ನಿನಗೇ ಧಾರೆಯೆರೆದು ಕೊಟ್ಟು ಬಿಡಲು ನನಗೆ ಅಭ್ಯಂತರವಿಲ್ಲ.

**ಇಂದುಮತಿ:** ಛಿ! ಛಿ! ನಿನ್ನ ಬಾಯಿಂದ ಈ ಮಾತುಗಳೇ! ಅಸಂಬದ್ಧ ಪ್ರಲಾಪವನ್ನು ನಿಲ್ಲಿಸಿ ನಿನ್ನ ಪ್ರೀತಿಗಾಗಿ ಹಸಿದು ಬಳಲಿ ಬರುವ ಯುವರಾಜರನ್ನು ಸಂತೈಸು. ಯುವರಾಜರು ನಿನ್ನ ಚಿಂತೆಯಲ್ಲಿ ಎಷ್ಟು ಸೊರಗಿ ಹೋಗಿದ್ದಾರೆಂಬ ಕಲ್ಪನೆಯಿದೆಯೇ? ಊಟ, ತಿಂಡಿಯ ಪರಿವೆಯಿಲ್ಲದೆ ಹಗಲು ರಾತ್ರಿಗಳಲ್ಲೂ ನಿದ್ದೆಯಿಲ್ಲದೆ ನಿನ್ನ ಕನವರಿಕೆಗಳಲ್ಲೇ ಕಳೆಯುತ್ತಾ ಅರೆ ಹುಚ್ಚರಂತಾಗಿದ್ದಾರೆ.

**ಕಾತ್ಯಾ :** ಅರೆ ಹುಚ್ಚರಾಗಿದ್ದಾರೆ, ಪೂರ್ತಿ ಹುಚ್ಚರಾಗಲಿ ಬಿಡು.

**ಇಂದುಮತಿ:** ಬೇಡ ಕಾತ್ಯಾ. ನೀನು ಮಾಡುತ್ತಿರುವುದು ಸರಿಯಲ್ಲ. ರಾಜಪರಿವಾರದವರೆಲ್ಲ ಯುವರಾಜರ ಸ್ಥಿತಿಯಿಂದ ಬಹಳ ವ್ಯಗ್ರರಾಗಿದ್ದಾರೆ. ರಾಜವೈದ್ಯರನ್ನೂ

ಕರೆಸಿ ಚಿಕಿತ್ಸೆಗೆ ಪ್ರಯತ್ನಿಸಿದರು. ಆದರೆ ಔಷಧಿಗಳು ಕೆಲಸ ಮಾಡುತ್ತಿಲ್ಲ. ಮಾನಸಿಕ ವೇದನೆ. ಅತೃಪ್ತ ಬಯಕೆಗಳೇ ಇದಕ್ಕೆ ಕಾರಣವೆಂದು ವೈದ್ಯರು ಹೇಳಿರುವುದಾದರೂ ಅಮರಸೇನ ಮಹಾರಾಜರು ಮತ್ತು ರಾಜಮಾತೆಯವರು ಯುವರಾಜರನ್ನು ಎಷ್ಟೇ ಬಗೆಯಲ್ಲಿ ಬೇಡಿದರೂ ತಿಳಿಯಲಾಗದೆ ಬಹಳ ನೊಂದಿದ್ದಾರೆ.

**ಕಾತ್ಯಾ** : ಇಂದೂ ಇನ್ನು ಸಾಕು ಮಾಡು. ಯುವರಾಜ ಪುರಾಣವನ್ನು ಮತ್ತೆ ಮತ್ತೆ ಕೇಳಿಸಿಕೊಳ್ಳಲು ನಾನು ಸಿದ್ಧಳಿಲ್ಲ.

**ಇಂದುಮತಿ:** ಮತ್ತೆ ಅವರನ್ನು ಕರೆದು ತಾ ಎಂದು ನನ್ನ ಕೈಲಿ ಹೇಳಿ ಕಳಿಸಿದ್ದೇಕೆ?

**ಕಾತ್ಯಾ** : ಏಕೆಂದರೆ? ಏಕೆಂದರೆ (ಅನುಮಾನಿಸುತ್ತಾ) ಹೇಳಲೇಬೇಕೇನು......... ಆದರೆ ಅದನ್ನು ಕೇಳಿದರೆ ನೀನು ಗಾಬರಿಗೊಳ್ಳುತ್ತೀ.

**ಇಂದುಮತಿ:** ಪರವಾಗಿಲ್ಲ ಹೇಳು ಕಾತ್ಯಾ. ನಿನ್ನ ಒಂಟಿತನ, ನೋವುಗಳನ್ನು ಹಂಚಿಕೊಳ್ಳಲೆಂದೇ ಅಲ್ಲವೆ ನಾನಿಲ್ಲಿಗೆ ಬಂದದ್ದು. ನಿನ್ನ ಅಂತರಂಗವನ್ನು ನನ್ನ ಮುಂಷೆ ತೆರೆದಿಡಲಾಗದಿದ್ದಲ್ಲಿ ಮತ್ತೆ ಇಲ್ಲಿ ಹೇಳಿಕೊಳ್ಳಲು ನಿನಗೆ ಯಾರಿದ್ದಾರೆ? ಹೇಳು ಎಂತಹ ಗುಟ್ಟನ್ನಾದರೂ ಎದೆ ಒಳಗೇ ಸಮಾಧಿಗೊಳಿಸಿ ಇರಿಸಿಕೊಳ್ಳುತ್ತೇವೆ.

**ಕಾತ್ಯಾ** : ಯುವರಾಜರು ಇನ್ನು ಮುಂದೆ ನನ್ನ ಅಂತಃಪುರಕ್ಕೆ ಬರಕೂಡದು. ಅವರು ಬೇರೆಯೆಡೆ ಪ್ರತ್ಯೇಕವಾಗಿ ಮಲಗಿಕೊಳ್ಳಲಿ ಎಂದು ಹೇಳಲೆಂದು ಅವರನ್ನೂ ಬರಹೇಳಿದೆ.

**ಇಂದುಮತಿ:** ಇದರ ಪರಿಣಾಮ ಏನಾಗಬಹುದು ಗೊತ್ತೇ?

**ಕಾತ್ಯಾ** : ಪರಿಣಾಮದ ಬಗ್ಗೆ ನನಗೆ ಚಿಂತೆಯಿಲ್ಲ.

**ಇಂದುಮತಿ:** ನೀನು ಬೇಡವೆಂದರೆ ಅವರು ಅಂತಃಪುರದಲ್ಲಿನ ಬೇರೆ ಹೆಂಗಸರ ಸ್ನೇಹಕ್ಕೆ ಹಾರೈಸಬಹುದು.

**ಕಾತ್ಯಾ** : ಹಾಗೆ ಬಯಸುವುದೇ ಆದರೆ. ಈ ಹೆಂಗಸನ್ನು (ಇಂದೂವಿನ ಕಡೆ ಬೊಟ್ಟು ಮಾಡಿ) ಹೊರತು ಪಡಿಸಿ ಬೇರೆ ಯಾರೇ ಆದರೂ ನನಗೆ ತೊಂದರೆಯಿಲ್ಲ. ನನ್ನ ತಂಟೆಗೆ ಬರದೆ ನನ್ನ ಪಾಡಿಗೆ ನನ್ನನ್ನು ಬಿಟ್ಟರೆ ಆಯಿತು.

**ಇಂದುಮತಿ:** (ಅಚ್ಚರಿಯಿಂದ) ನಾನೇಕೆ ಆಗಬಾರದು ಕಾತ್ಯಾ? ನನ್ನ ಬಗ್ಗೆ ನಿನ್ನ ದ್ವೇಷವೇಕೆ?

**ಕಾತ್ಯಾ** : (ಪ್ರೀತಿಯಿಂದ) ಇಂದೂ! ಇಂದೂ! ನನಗೆ ನಿನ್ನ ಮೇಲೆ ದ್ವೇಷವೇ? ನಿನಗೆ ಯುವರಾಜನಲ್ಲ ಯಾವುದಾದರೂ ಪ್ರಸಿದ್ಧ ದೇಶದ ಸುಂದರ

ರೂಪನಾದ ಮಹಾರಾಜರನ್ನೇ ತಂದು ಮದುವೆ ಮಾಡಿಸುತ್ತೇನೆ. ಅದು ಬಿಟ್ಟು ನನಗೇ ಇಷ್ಟವಿಲ್ಲದ ವ್ಯಕ್ತಿಯ ಮೋಹದ ಬಲೆಗೆ ನೀನೂ ಬೀಳುವುದು ನನಗೆ ಇಷ್ಟವಿಲ್ಲ.

**ಇಂದುಮತಿ:** ತಪ್ಪಾಯಿತು ಕಾತ್ಯಾ. ನಿನ್ನ ಮನಸ್ಸನ್ನು ಸರಿಯಾಗಿ ಗ್ರಹಿಸಲಿಲ್ಲ. ಆದರೆ, ಕಾತ್ಯಾ ನನಗೆ ಯುವರಾಜರನ್ನು ನೋಡಿದರೆ ಸಂಕಟವಾಗುತ್ತದ. ನೀನು ಅವರನ್ನು ಸರಿಯಾಗಿ ನೋಡಿಲ್ಲವೆನಿಸುತ್ತದೆ. ಪೂರ್ವಗ್ರಹದ ಮನಸ್ಸಿನಿಂದ ನೋಡುವುದರಿಂದ ನಿನಗೆ ಅವರಲ್ಲಿನ ಸೌಂದರ್ಯ ಗಮನಕ್ಕೆ ಬರುತ್ತಿಲ್ಲ.

(ದಾಸಿಯೊಬ್ಬಳ ಪ್ರವೇಶ)

**ದಾಸಿ** : (ನಮಸ್ಕರಿಸಿ) ಅಮ್ಮ ಊಟಕ್ಕೆ ವೇಳೆಯಾಯಿತೆಂದು ತಿಳಿಸಲು ರಾಜಮಾತೆಯವರ ಅಪ್ಪಣೆಯಾಗಿದೆ.

**ಕಾತ್ಯಾ** : ಈ ಕೂಡಲೇ ಬರುತ್ತೇವೆಂದು ತಿಳಿಸು ಹೋಗು.

**ದಾಸಿ** : ಅಪ್ಪಣೆ (ಹೋಗುತ್ತಾಳೆ).

೦೦

# ದೃಶ್ಯ – ೪

**ಭಾಗವತ :** ಮಳೆಯು ಹನಿಯದೆ
ಪ್ರೀತಿಯೂರದೆ
ಸೊರಗಿ ಬಾಡಿತು ಸಸಿಯದು
ಆಸೆ ಹೂಗಳು ಕಮರಿ
ಕುವರನ ಹೃದಯ
ವಾಯಿತು ಮರುವದು

**ದೇವಸೇನ :** (ಪ್ರವೇಶಿಸಿ) ದೇವರೇ ನನಗೇಕೆ ಈ ಯಾತನೆ? ನನ್ನ ಕಾತ್ಯಾ ನನಗೇಕೆ ದಕ್ಕುತ್ತಿಲ್ಲ. ತೀರದ ಬಯಕೆಗಳು ಭುಗಿಲೆದ್ದು ಸುಡುತ್ತಿವೆ. ಕನಸಿನ ಅರಮನೆಯು ನೆಲಕ್ಕೆ ಕುಸಿದಿದೆ. ಮರಗಟ್ಟಿ ನಿಲ್ಲುವ ಅವಳ ಸ್ಪರ್ಷ ಮಂಜು ಬೆಟ್ಟವನಪ್ಪಿದ ಅನುಭವವನ್ನೇ ನೀಡುತ್ತದೆ. ಅವಳ ನೋಟ, ಮಾಟ, ಬೇಟಗಳು ಶಿಕಾರಿಯ ಕ್ರೌರ್ಯದಂತೆ ಇರುತ್ತವೆ. ನನ್ನ ಬದುಕಿನ ಮರುಭೂಮಿಯಲ್ಲಿ ಜೀವ ಚಿಲುಮೆಗಾಗಿ ಹಂಬಲಿಸಿದೆ; ನನ್ನೆದೆಯಾಗಸದಲ್ಲಿ ಕನಸು ಕಾಮನ ಜಿಲ್ಲುಗಳ ರಂಗೋಲಿಗಾಗಿ ಹಾತೊರೆದೆ. ಅಸ್ವಸ್ಥ ಜೀವಕ್ಕೆ, ಮೃತಪ್ರಾಯ ಮನಸ್ಸಿಗೆ ಸಂಜೀವಿನಿಯಾಗುವುದನ್ನು ಬಯಸಿದೆ. ಆದರೆ! ಆದರೆ ನನ್ನ ಪಾಲಿಗೇಕೆ ಈ ಘೋರ ನರಕ? ನನ್ನನ್ನು ತಣಿಸುವವರು, ನನ್ನೆದೆಗೆ ರಸ ಸಿಂಚನ ಮಾಡುವವರು ಯಾರೂ ಇಲ್ಲವೇ?

**ಭಾಗವತ :** ಇದ್ದಾರೆ ಕುಮಾರ
ಎಲ್ಲ ಹೆಣ್ಣುಗಳೂ
ನಿಷ್ಠುರರಲ್ಲ, ಧೂರ್ತರಲ್ಲ
ಆರ್ತ ಮನಸುಗಳನ್ನು
ಸ್ನೇಹ ಗಂಗೆಯಲಿ

ತಣಿಸ ಬಲ್ಲಹರಿಹರು
ಜಗದಲಿ ಕಣ್ಣ ತೆರೆದು

ಹುಡುಕು ಬಗಲಲಿ ಕುಮಾರ. ಒಂದು ಸಂಜೀವಿನಿಯ ಬಳ್ಳಿ ಕೈ ಜಾರಿದರೇನು? ಒಂದು ಚಿಲುಮೆ ಬತ್ತಿದರೇನು? ಲೋಕ ಗೊಡ್ಡು ಬಿದ್ದಿಲ್ಲ. ಎಲ್ಲರೂ ಕಟುಕರಾಗಿಲ್ಲ ನಿನಗೆ ಸ್ನೇಹ ಪ್ರೀತಿಗಳನ್ನೆರೆದು ಚಿಗುರಿಸುವ ಹೃದಯವೊಂದು ಅವತರಿಸುತ್ತದೆ.

(ಇಂದುಮತಿಯ ಪ್ರವೇಶ)

**ಇಂದುಮತಿ:** ಯುವರಾಜರೇ, ನಡೆದದ್ದೆಲ್ಲವೂ ತಿಳಿಯಿತು. ಕಾತ್ಯಾಳನ್ನು ಹಲವು ವಿಧದಲ್ಲಿ ಮಾತನಾಡಿಸಿ, ಬುದ್ಧಿ ಹೇಳಿ ನೋಡಿದೆ. ಅವಳದು ಬಂಡೆ ಮನಸ್ಸು ಯಾವುದಕ್ಕೂ ಕರಗುವುದಿಲ್ಲ. ನೀವು ಹೀಗೆ ಅವಳ ಚಿಂತೆಯಲ್ಲಿಯೇ ಕೊರಗಿ ಸಾಯುವುದರಿಂದ ಯಾರಿಗೂ ಪ್ರಯೋಜನವಿಲ್ಲ. ಏನನ್ನೂ ಸಾಧಿಸಿದಂತಾಗುವುದಿಲ್ಲ ಎಲ್ಲವನ್ನೂ ಮರೆತು ರಾಜಕಾರ್ಯಗಳಲ್ಲಿ ನಿಮ್ಮ ಮನಸ್ಸನ್ನು ಲಗ್ನಗೊಳಿಸಿ. ನಾನು ನನ್ನ ಕೈಲಾದ ಸಹಾಯ ಮಾಡುತ್ತೇನೆ.

**ದೇವಸೇನ :** (ಅಚ್ಚರಿಯಿಂದ) ನೀನು ನನಗೆ ಸಹಾಯ ಮಾಡುತ್ತೀಯ? ಯಾವ ರೀತಿ?

**ಇಂದುಮತಿ:** ಗೊತ್ತಿಲ್ಲ. ನೀವೇ ಹೇಳಬೇಕು.

**ದೇವಸೇನ :** ನಾ ಬೇಡುವ ಸಹಾಯಕ್ಕೆ ನಿನ್ನ ಸಮ್ಮತಿ ಇದೆಯೇ?

**ಭಾಗವತ :** ಇಂದೂ ರೂಪದಿ ರತಿಯ ಕಂಡ
ಸ್ನೇಹ ಸೊಲ್ಲಲಿ ಸವಿಯನುಂಡ
ದಾಹ ತೀರಲು ಪ್ರೀತಿ ಗಂಗೆಯ
ಬೊಗಬೊಗಸೆಯನ್ನೇ ಹೀರಿದ

**ದೇವಸೇನ :** ಇಂದೂ..... ಇಂದೂ...... ನಿನ್ನಿಂದ ನಾನೇನನ್ನೂ ಹೆಚ್ಚಿಗೆ ಬೇಡಲಾರೆ. ನನ್ನ ಬೆಂದೆದೆಯಲ್ಲಿ ಶೀತಲವಾಹಿನಿಯಾಗು ಮರುಭೂಮಿಯಲ್ಲಿ ರಸ ಚಿಲುಮೆಯಾಗು. ತೃಷ್ಣೆಯಲಿ ಕುದಿವ ದೇಹವನ್ನು ರಸಸೇಚನೆಯಿಂದ ಸಾಂತ್ವನಗೊಳಿಸು.

**ಭಾಗವತ :** ಇಂದು ನಿಂದಳು
ಅವನ ಸೇವೆಗೆ
ಪ್ರೀತಿ ಮಲಮನು
ಸವರಿಗಾಯವ
ಮಾದು ಮರೆಸಿದಳು.

**ಇಂದು** : ಯುವರಾಜ ನಿಮ್ಮ ಯಾತನೆಯ ಕಲ್ಪನೆಯಿದೆ; ಅವಳ ಅನಾದರದ ಅರಿವಿದೆ. ನಿಮ್ಮಿಬ್ಬರ ನಡುವೆ ಪ್ರೀತಿ ಸಾಮರಸ್ಯಗಳು. ಕರುಬುವಂತಹ ದಾಂಪತ್ಯ ಸಂಬಂಧಗಳು ಚಿಗುರೊಡೆದು ಹೆಮ್ಮರವಾಗಬೇಕೆಂದು ಮನಃಪೂರ್ವಕವಾಗಿ ಪ್ರಯತ್ನಿಸಿದೆ. ಆದರೆ ವಿಧಿ ದೊಡ್ಡದು. ನನ್ನ ಪ್ರಯತ್ನಗಳೆಲ್ಲವೂ ನೀರಿನಲ್ಲಿ ಹೋಮ ಮಾಡಿದಂತಾಯಿತು. ಉತ್ತಮರ, ಯೋಗ್ಯರ ಸುಖಕ್ಕೆ ಎಂತೆಂತಹ ತ್ಯಾಗಗಳೊ ನಡೆದಿವೆ. ಅಂತಹದರಲ್ಲಿ ನಾನು ನನ್ನ ಸರ್ವಸ್ವವನ್ನೂ ಅರ್ಪಿಸುತ್ತೇನೆ. ನಿಮ್ಮ ಬದುಕು ಹಸನಾಗಬೇಕು. ನೀವು ಗೆಲುವಾಗಬೇಕು. ಕಳೆದುಕೊಂಡ ಸಂತೋಷವು ಮರಳಿ ಮತ್ತೆ ನೀವು ರಾಜಕಾರ್ಯಗಳಲ್ಲಿ ನಿಮ್ಮ ಸಾಧನೆಗಳಲ್ಲಿ ಹೊಸ ಹುರುಪಿನಿಂದ ತೊಡಗಿಸಿಕೊಳ್ಳಬೇಕು.

**ದೇವಸೇನ** : (ಗೆಲುವಿನಿಂದ) ಉಪಕಾರವಾಯಿತು ಇಂದೂ. ಕಾತ್ಯಾಳನ್ನು ಕಂಡಂದೇ ನಿನ್ನನ್ನೂ ಕಂಡು ನಿನ್ನ ಈ ಅದ್ಭುತ ಸೌಂದರ್ಯಕ್ಕೆ ಕ್ಷಣಕಾಲ ದಿಗ್ಭ್ರಮೆಗೊಂಡಿದ್ದೆ. ಆದರೆ ಮದುವೆಯೂ ಒಂದು ರಾಜಕೀಯ ವ್ಯವಹಾರದಂತೆ ನಡೆದು ಹೋಯಿತು. ದೊಡ್ಡವರು ಈ ನಮ್ಮ ವಿವಾಹ ಸಂಬಂಧದಲ್ಲಿ ರಾಜಕೀಯ ಪ್ರಯೋಜನಗಳನ್ನು ಕಂಡಿರಬೇಕೆಂದೂ, ದೊಡ್ಡವರ ಮಾತನ್ನು ನಿರಾಕರಿಸಬಾರದೆಂದೂ ಕಾತ್ಯಾಳೊಂದಿಗೆ ವಿವಾಹಕ್ಕೆ ಒಪ್ಪಿಕೊಂಡೆ.

**ಭಾಗವತ** : ಮುಗ್ಧ ನಿಸ್ಪೃಹ
ಜೀವವೆರಡೂ ಪ್ರಣಯ
ರಂಗಕೆ ಸಂದವು
ಚಕೋರ ಚಂದ್ರರ
ಬಯಕೆಯೊಲು
ಕೂಡಿ ಸೊಗವನೆ
ಪಡೆದರು. ದಾಹತೀರಿತು
ದಣಿವು ಜಾರಿತು
ಶಿಶಿರ ಕಳೆಯಿತು
ಮಧುಮಹೋತ್ಸವ
ಪಿಳಿಮ ಭೂಮಿಗೆ
ಸ್ವರ್ಗವೇ ಶಾಪಾಯಿತು.

ಂಂ

## ದೃಶ್ಯ – ೫

**ಭಾಗವತ :** ಪ್ರೇಮ ಪ್ರಣಯದ
ಕತೆಯು ಹಾರಿತು
ಅರಮನೆಯ ಒಳ
ಹೊರಗೆಲ್ಲ ಹೆಡೆಯಾಡಿತು
ಬೀದಿ ಬೀದಿ ಬಾವಿಕಟ್ಟೆ
ಕೂಡು ಜಾಗದ ಸುದ್ದಿಯಾಯಿತು.

**ಕಾತ್ಯಾಯನಿ:** (ರೋಷದಿಂದ ಪ್ರವೇಶಿಸಿ) ಎಲ್ಲಿ? ಎಲ್ಲಿ ಅವಳು ನಯವಂಚಕಳು! ನನಗೆ ಬುದ್ಧಿ ಹೇಳುತ್ತಲೇ ನಾನು ನಿರೀಕ್ಷಿಸಿದಂತೆಯ ನನ್ನ ಬಾಳಿಗೆ ಕೊಳ್ಳಿ ಇಟ್ಟಳು.

**ಭಾಗವತ :** ಅಮ್ಮ ಕಾತ್ಯಾಯಿನಿ. ಅವಳ ಮೇಲೇಕೆ ಸಿಟ್ಟಾಗುತ್ತೀ ಆಕೆ ಪಾಪದ ಹುಡುಗಿ. ನಿಮ್ಮ ತಿರಸ್ಕಾರ ನೀವು ತೋರಿದ ನಿಷ್ಠುರ ಸ್ವಭಾವಗಳಿಂದ ಅತ್ಯಂತ ವಿಕ್ಷಿಪ್ತರಾಗಿದ್ದ ಯುವರಾಜರಿಗೆ ಕೂಡಲೇ ಸಾಂತ್ವನ ದೊರೆಯದಿದ್ದಲ್ಲಿ ದೊಡ್ಡ ದುರಂತ ಅಪಾಯಗಳನ್ನೇ ಕಾಣಬೇಕಾಗುತ್ತಿತ್ತು. ನೀವು ಅವರನ್ನು ಹೊರದೂಡಿದಾಗ ಪ್ರೀತ್ಯಾದರಗಳಿಂದ ಕರೆದುಕೊಂಡು ಆದರಿಸಿದರು. ಇದರಲ್ಲಿ ಯಾವುದು ತಪ್ಪಿದೆ?

**ಕಾತ್ಯಾಯಿನಿ:** ಅದು ಯಾವುದೂ ನನಗೆ ಬೇಡ. ನನ್ನ ಗಂಡ ಮತ್ತು ನಾನು ನಮ್ಮಿಬ್ಬರ ಮಧ್ಯೆ ಯಾರ ಪ್ರವೇಶದ ಅಗತ್ಯವೂ ಇರಲಿಲ್ಲ. ನಮ್ಮ ಪಾಡಿಗೆ ನಮ್ಮನ್ನು ಬಿಟ್ಟಿದ್ದರೆ ಸಾಕಿತ್ತು. ಇಂದು ಕಚ್ಚಾಡುತ್ತೇವೆ; ಒಬ್ಬರಿಗೊಬ್ಬರು ದೂರವಾಗುತ್ತೇವೆ; ಹಾಗೆಂದ ಮಾತ್ರಕ್ಕೆ ಶಾಶ್ವತವಾಗಿ ಬೇರೆಯಾಗಬೇಕೇ? ನಾನು ಈ ಪ್ರದ್ಯೋತ ಪುರಕ್ಕೆ ವಾರಸುದಾರನನ್ನು

ಹೆತ್ತು ಕೊಡಬೇಕಿದೆ; 'ರಾಜಮಾತೆ' ಎಂದು ಕರೆಸಿಕೊಳ್ಳಬೇಕಿದೆ. ನಾನು ಅವಳನ್ನು ಸುಮ್ಮನೆ ಬಿಡುವುದಿಲ್ಲ. ಅವಳು ನನ್ನ ಸಂಗಾತಿಯಾಗಿ ಸೋದರಿಯಾಗಿ ನನ್ನ ಕ್ಷೇಮ ಚಿಂತನೆಯಲ್ಲಿಯೇ ಇರುತ್ತಾಳೆ. ನನ್ನ ಹಿತೈಷಿಯಾಗಿ ನನಗೆ ಭದ್ರ ಕವಚವಾಗಿ ನಿಲ್ಲುತ್ತಾಳೆ. ನನ್ನೊಂಟಿತನದಲ್ಲಿ ನನಗೆ ಊರುಗೋಲಾಗುತ್ತಾಳೆಂದು ಇಲ್ಲಿಗೆ ಕರೆದು ತಂದರೆ ಉಂಡ ಮನೆಗೇ ಎರಡು ಬಗೆದಿದ್ದಾಳೆ. ಅವಳನ್ನು ಇಲ್ಲಿಗೆ ತಂದದ್ದು ಕೆಂಡವನ್ನು ಉಡಿಯಲ್ಲಿಟ್ಟುಕೊಂಡು ಬಂದಂತಾಯಿತು. ಈಗಲೇ ಹೋಗಿ ಮಹಾರಾಜರಲ್ಲಿ ದೂರಿತ್ತು ನ್ಯಾಯ ಕೇಳುತ್ತೇನೆ. [ಹೋಗುತ್ತಾಳೆ]

(ಸ್ವಗತ)

**ಭಾಗವತ** : ಕತೆ ಮುಗಿದಂತೆಯೇ! ಇನ್ನೇನು ಇಷ್ಟರಲ್ಲೆ ರಾಮಾಯಣ, ಮಹಾಭಾರತಗಳು ಸೃಷ್ಟಿಯಾಗುತ್ತವೆ. ಯುವರಾಣಿಯವರು ಕೆಂಡ ಉರುಬಿ ಕಾಳ್ಗಿಚ್ಚಾಗಿಸಿ ರಾಜ್ಯವನ್ನು ಆಹುತಿಯಾಗಿಸುವುದರಲ್ಲಿ ಸಂದೇಹವೇ ಉಳಿದಿಲ್ಲ. ಭಗವಂತ! ಮುಂದೇನಾಗುವುದೋ ನೀನೇ ಕಾಪಾಡಬೇಕು. ಆ ಬಡಪಾಯಿ ಹುಡುಗಿಗೆ ನಿನ್ನ ಸ್ನೇಹರಕ್ಷೆಯಿರಲಿ. ಪಾಪ! ನಿಷ್ಕಲ್ಮಶ ಮನಸ್ಸಿನ ಹುಡುಗಿ!.... ಇನ್ನು ವಿಚಾರಣೆ ಅದೂ ಇದೂ ಅಂತ ಏನೆಲ್ಲ ಅವಮಾನ, ಭರ್ತ್ಸನೆ, ತಿರಸ್ಕಾರಗಳನ್ನು ಎದುರಿಸಬೇಕಾಗುವುದೋ! ......... ಈಗಾಗಲೇ ಅಮರ ಸೇನರ ಕಿವಿಗೂ ಬಿದ್ದಿರಬೇಕು..... ಹೋಗಿ ನೋಡುತ್ತೇನೆ ಈ ಪ್ರಸಂಗ ಹೇಗೆ ಮುಂದುವರೆಯುತ್ತೋ.

೦೦

# ದೃಶ್ಯ – ೬

(ಮಂತ್ರಾಲೋಚನಾ ಗೃಹ. ಅಮರಸೇನರು ತಮ್ಮ ಮಂತ್ರಿ ಮಂಡಳದೊಂದಿಗೆ ವಿರಾಜಿಸಿದ್ದಾರೆ. ಎಲ್ಲರ ಮುಖದಲ್ಲೂ ಚಿಂತಾಪರತೆ ಎದ್ದು ಕಾಣುತ್ತಿದೆ)

**ಅಮರಸೇನ:** ಗೋವಿಂದಾಮಾತ್ಯರೇ ಈ ಸಮಸ್ಯೆಯನ್ನು ಪರಿಹರಿಸುವ ವಿಧಾನವೇನು?

**ಗೋವಿಂದನಾಯ್ಕ:** ಪ್ರಭುಗಳೇ ಯುವರಾಜರ ಈ ಕೃತಿಯಿಂದ ನೀವು ಅಷ್ಟೊಂದು ಅಸ್ವಸ್ಥರಾಗಬೇಕಿಲ್ಲ. ರಾಜ ಪರಿವಾರಗಳಲ್ಲಿ ಅನೈತಿಕ ಸಂಬಂಧಗಳು ಇದ್ದೇ ಇರುತ್ತವೆ. ಹಾಗೆ ನಿಮಗೆ ಇದಕ್ಕೆ ಪರಿಷ್ಕಾರ ಬೇಕೇ ಬೇಕೆನ್ನುವುದಾದರೆ ಅವರಿಬ್ಬರನ್ನೂ ಕರೆದು ಬುದ್ಧಿ ಹೇಳಿ.

**ಸುಮಂತ್ರ :** ಇದು ಸಣ್ಣ–ತಪ್ಪಾಗಿ ನಿಮಗೆ ಕಾಣುತ್ತಿರಬಹುದು ಗೋವಿಂದಾಮಾತ್ಯರೇ. ಇದರಿಂದ ನಾಳೆ ಉದ್ಭವಿಸುವ ಸಮಸ್ಯೆಗಳ ಪರಿವೆ ನಿಮಗಿಲ್ಲ. ಮಗಳ ಸಮಸ್ಯೆಯಿಂದ ಪ್ರಭುಗಳು ಈಗ ತಾನೇ ಚೇತರಿಸಿಕೊಂಡರೆ ಮತ್ತೆ ಮಗನ ಸಮಸ್ಯೆ ಪ್ರಾರಂಭವಾಗಿದೆ. ಪ್ರಣವಪುರದ ಸಾಮಂತರಿಗೆ, ದಕ್ಷ ಪ್ರಭುಗಳಿಗೆ ವಿಷಯ ತಿಳಿದರೆ ಗೌರವದಿಂದ ತಲೆ ಎತ್ತಿ ಓಡಾಡುವುದಕ್ಕೇ ಆಗುವುದಿಲ್ಲ.

**ಅಚ್ಯುತಮಂತ್ರಿ:** ನನ್ನನ್ನು ಕೇಳಿದರೆ ಇಂದುಮತಿಯವರನ್ನು ಸುಮ್ಮನೆ ಅವರ ತಂದೆಯ ಬಳಿಗೆ ಕಳಿಸಿ ಬಿಟ್ಟರೇ ಕ್ಷೇಮ. ಇದೊಂದೇ ಪರಿಹಾರಕ್ಕೆ ದಾರಿ.

**ಅಮರಸೇನ:** ಈ ಹಗರಣ ಹಾದಿರಂಪ ಬೀದಿರಂಪ ಆಗುವುದಕ್ಕೆ ಮೊದಲೇ ನಮ್ಮ ನಮ್ಮೊಳಗೇ ತಣ್ಣಗೆ ಹೂತು ಬಿಡುವುದು ಒಳ್ಳೆಯದೆನಿಸುತ್ತದೆ.

**ಸುಮಂತ್ರ :** ಯುವರಾಜರನ್ನು ಕರೆದು ವಿಚಾರಿಸಿದಿರಾ? ಅವರಿವರ ಸುದ್ದಿಗಳನ್ನು ಕೇಳಿ ನಾವು ದಿಢೀರನೆ ಯಾವುದೇ ತೀರ್ಮಾನಕ್ಕೆ ಬರುವುದು ಬೇಡ. ಯುವರಾಜರಿಗೆ ಕರೆದು ಬುದ್ಧಿ ಹೇಳಿದರೆ ಅರ್ಥಮಾಡಿಕೊಂಡಾರು.

**ಅಚ್ಯುತೇಂದ್ರ:** ನಾವಿಷ್ಟೆಲ್ಲಾ ಮಾತಾಡುತ್ತಿದ್ದೇವೆ. ಲಕ್ಷ್ಮೀದೇವಿಯಂತೆ ರತೀದೇವಿಯಂತೆ ಇರುವ ಮಡದಿಯನ್ನು ಮರೆತು ಇಂದುಮತಿಯವರ ಸ್ನೇಹ

ಬಯಸಿದರೆಂದರೆ ಬಲವಾದ ಕಾರಣವೇ ಇರಬೇಕು. ಪ್ರಭುಗಳು ರಾಜವಾತೆಯುವವರು ಎಂದಾದರೂ ಅವರ ಅನ್ಯೋನ್ಯತೆಯು ಬಗ್ಗೆಯಾಗಲೀ ದಾಂಪತ್ಯಸುಖದ ವಿಚಾರದಲ್ಲಿಯಾಗಲೀ ಗಮನ ಹರಿಸಿದ್ದೀರೇನು?

**ಅಮರಸೇನ:** ಗಮನಹರಿಸುವುದೇನಿದೆ? ಎಲ್ಲ ರಾಜಕೀಯ ವಿವಾಹಗಳಂತೆಯೇ ಇದೂ ಕೂಡಾ, ಯಾವುದಕ್ಕೂ ಕೊರತೆಯಿಲ್ಲದ ಈ ರಾಜ ಕುಟುಂಬದಲ್ಲಿ ಸಮಸ್ಯೆಗಳಿರಲು ಸಾಧ್ಯವೇ ಇಲ್ಲ. ಹಾಗಿರುವಾಗ ನಾನೇಕೆ ತಲೆ ಕೆಡಿಸಿಕೊಳ್ಳಲಿ.

**ಅಚ್ಯುತೇಂದ್ರ:** ಅಲ್ಲೇ ನೀವು ತಪ್ಪು ಮಾಡುತ್ತಿರುವುದು. ಕೆಲವು ದಿನಗಳ ಹಿಂದೆ ಯುವರಾಜರ ಅಸ್ವಸ್ಥತೆ, ಖಿನ್ನತೆಗಳ ಬಗ್ಗೆ ಎಷ್ಟೊಂದು ಗಾಬರಿಗೊಂಡಿದ್ದಿರಿ ಔಷಧಿಗಳಿಗೂ ಜಗ್ಗದ್ದನ್ನು ನೋಡಿ ವಿಚಾರಿಸಿದಾಗ ಇದಕ್ಕೆಲ್ಲಾ ಮನೋವ್ಯಾಧಿಯೇ ಕಾರಣವೆಂದದ್ದನ್ನು ಮರೆತಿರಾ? ಆಗಲಾದರೂ ಯುವರಾಜರನ್ನು ವಿಚಾರಿಸಿ ಕಾರಣ ತಿಳಿಯಬಹುದಿತ್ತಲ್ಲ.

**ಅಮರಸೇನ:** ತಿಳಿಯಲು ಪ್ರಯತ್ನಿಸಿದೆ. ಆದರೆ ಯುವರಾಜರು ಬಾಯಿ ಬಿಡಲೇ ಇಲ್ಲ.

**ಗೋವಿಂದನಾಯ್ಕ:** ಈಗ ನೋಡಿ ಯುವರಾಜರನ್ನು! ಯಾವುದೋ ದಿಗ್ವಿಜಯದಿಂದ ಉಲ್ಲಾಸಗೊಂಡಂತೆ ಕಾಣಿಸುವುದಿಲ್ಲವೇ? ಮೊದಲಿನ ಖಿನ್ನತೆ, ಅನ್ಯಮನಸ್ಕತೆಗಳಾವುವೂ ಇಲ್ಲದೆ ಬಹಳ ಗೆಲುವಿನಿಂದಲೇ ಇರುವುದನ್ನು ಸೂಕ್ಷ್ಮವಾಗಿ ಗಮನಿಸಿದರೆ ಸಮಸ್ಯೆಗೆ ಸುಳಿವು ಸಿಗುತ್ತದೆ.

**ಸುಮಂತ್ರ :** ಪ್ರಭು ಇದೇನೋ ಹೊರಗಿನ ಗಂಭೀರವಾದ ಗಡಿ ಸಮಸ್ಯೆಯೂ ಅಲ್ಲ; ಶತ್ರು ಸಮಸ್ಯೆಯೂ ಅಲ್ಲ. ಕುಟುಂಬದೊಳಗಿನ ಸಮಸ್ಯೆ. ಅಪರಾಧಿಗಳೆಂದು ಭಾವಿಸುತ್ತಿರುವವರೂ ರಕ್ತ ಸಂಬಂಧಿಗಳೇ! ಅಲ್ಲದೆ ಇದು ದಾಂಪತ್ಯ ಸಮಸ್ಯೆ! ಪ್ರೀತಿ, ಪ್ರಣಯಗಳ ಸಮಸ್ಯೆ! ವಿಚಾರಣೆ ಗಿಚಾರಣೆ ಎನ್ನುವುದೆಲ್ಲವನ್ನೂ ಮರೆತು, ಸುಲಭ ಪರಿಹಾರಕ್ಕೆ ಪ್ರಯತ್ನಿಸೋಣ (ಮಿಕ್ಕವರ ಕಡೆ ತಿರುಗಿ) ಏನಂತೀರಿ ಮಂತ್ರಿವರ್ಯರೇ?

**ಗೋವಿಂದನಾಯ್ಕ**

**ಅಚ್ಯುತೇಂದ್ರ :** ನೀವು ಹೇಳುವುದೂ ಒಂದು ರೀತಿ ಸರಿಯೇ. ನಮ್ಮದೂ ಅದೇ ಅಭಿಪ್ರಾಯವಿತ್ತು.

**ಅಮರಸೇನ:** ನಾನಿನ್ನು ಯುವರಾಜರನ್ನು ಕಂಡು ಮಾತಾಡಿಸುತ್ತೇನೆ. ಮುಂದಿನದನ್ನು ಆಲೋಚಿಸೋಣ.

**ಭಾಗವತ :** ದೊರೆಯು ನಡೆದನು
ಕುವರನೆಡೆಗೆ ಕೇಳಿ
ಅರಿತನು ಕತೆಯನೆಲ್ಲವ
ಕರುಣೆ ಕತೆಯನು
ಕೇಳಿ ಕರಗಿದ ಮನದಿ
ನೊಂದನು ಮಗನ ಸ್ಥಿತಿಗೆ

ಮಹಾರಾಜರಿಗೇನೋ ನೋವಾಯಿತು. ಆದರೆ ತನ್ನ ಮಗಳಿಗೆ ಗಂಡನ ಅನಾದರಣೆಯಿಂದ ತನಗೆಷ್ಟು ನೋವಾಯಿತೆಂಬುದನ್ನು ತಿಳಿದಿದ್ದ ಕಾರಣ ಮಗಳಿಗೆ ಅಳಿಯನಿಂದ ಅನ್ಯಾಯವಾಯಿತೆಂದು ಪ್ರಣವಪುರದ ಸಾಮಂತರು ನೊಂದು ಕೆರಳಿದರೆ ಮತ್ತೆ ರಾಜಕೀಯ ಸಮಸ್ಯೆ ಉದ್ಭವವಾದೀತು ಎಂದು ಹೆದರಿದ್ದಾರೆ.

**ಅಮರಸೇನ:** ಅಣ್ಣಾ ಭಾಗವತ. ನಮ್ಮ ಮಕ್ಕಳೊಂದಿಗೆ ಸ್ವಲ್ಪ ಮಾತನಾಡಬೇಕಿದೆಯಾದ್ದರಿಂದ ಸ್ವಲ್ಪ ಬರಹೇಳುತ್ತಿರಾ?

**ಭಾಗವತ :** ಮಗನ ಕರೆದು ಬುದ್ದಿ
ಹೇಳಲು ತವಕಗೊಂಡು
ಕುದಿವನು ಮಗನ ತರ್ಕದ
ಮಾತಕೇಳಿ ಮರೆತ
ಮಾತಿನ ಜಾಡನು
ಓ ಅಗೋ! ಕುಮಾರರೇ ಬಂದರಲ್ಲ!

**ದೇವಸೇನ :** (ಪ್ರವೇಶಿಸಿ) ಅಪ್ಪಾ ವಂದಿಸುತ್ತೇನೆ.

**ಅಮರಸೇನ:** ಬಾ ಕುಮಾರ ನಿನ್ನನ್ನು ಕಾಣಬೇಕೆಂಬ ತವಕದಲ್ಲಿ ಕಾಯುತ್ತಿದ್ದೇನೆ.

**ದೇವಸೇನ :** ಕರೆದದ್ದೇಕೆಂದು ಅಪ್ಪಣೆ ಕೊಡಿಸಿ.

**ಅಮರಸೇನ:** ಮಗು ನಾನು ಕರೆಸಿರುವ ಕಾರಣ ನಿನಗೆ ತಿಳಿಯದ್ದೇನಲ್ಲ. ತಿಳಿಯದವನಂತೆ ವರ್ತಿಸಬೇಡ.

**ದೇವಸೇನ :** ಅಪ್ಪ ಒಗಟುಗಳನ್ನು ಬದಿಗಿಟ್ಟು ನೇರವಾಗಿ ವಿಷಯವೇನೆಂದು ತಿಳಿಸಿ. ನನ್ನ ಮೇಲೆ ದೋಷಾರೋಪಣವೇನಾದರೂ ಇದೆಯೇನು?

**ಅಮರಸೇನ:** ಕುಮಾರ ದೋಷ ನಿರ್ದೋಷಗಳೆಂದು ತೀರ್ಮಾನಿಸಿ ಹೇಳುತ್ತಿಲ್ಲ..... ಇಂದುಮತಿಯೊಡನೆ ನಿನ್ನ ಸಲಿಗೆ ಸುತ್ತಾಟಗಳು ಅತಿಯಾಗಿ ಅರಮನೆಯ ಒಳಗೆ ಹೊರಗೆ ಗುಲ್ಲೆದ್ದಿದೆ. ದೇವತೆಯಂತಹ ಹೆಂಡತಿಯಿದ್ದೂ

ಅವಳಸೋದರಿಯ ಸಹವಾಸವೇಕೆ ಬೇಕಾಯಿತು?.... ನಿನ್ನುತ್ತರವಾದರೂ ಏನಿದೆ?

**ಭಾಗವತ :** ಬಾಯಾರಿ ಬಾವಿಬಳಿ
ಹೋದವನಿಗೆ ಬತ್ತಿದ
ಬಾವಿ ಎದುರಾಗಲು
ಮತ್ತೊಂದು ಬಾವಿಯರಸಿ
ಪೋಗಲು ದೋಷವಹುದೇ?

**ದೇವಸೇನ :** ಅಪ್ಪ ನನ್ನ ಸಂಕಟ, ನಾನು ಅನುಭವಿಸಿದ ಯಾತನೆಯ ಅರಿವಿಲ್ಲ. ರಾಜಕೀಯ ವರ್ಚಸ್ಸಿಗಾಗಿ, ರಾಜ್ಯ ಕ್ಷೇಮಕ್ಕಾಗಿ, ಅಕ್ಕನ ದಾಂಪತ್ಯದ ಪುನರುಜ್ಜೀವನಕ್ಕಾಗಿ ನೀವೇನೋ ಈ ಮದುವೆ ಮಾಡಿದಿರಿ. ಮದುವೆಯಾಗಿ ಬಿಟ್ಟರೆ ಸಾಕು ಪ್ರೀತಿ, ವಿಶ್ವಾಸಗಳು ಮೊಳೆಯುತ್ತವೆ ಎಂದು ನಂಬಿ ಬಿಟ್ಟಿರಿ. ಆದರೆ ಆದದ್ದೇನು? ನಿಮ್ಮ ಸೊಸೆ ನನ್ನನ್ನು ಕಾಲಕಸಕ್ಕಿಂತ ಕಡೆಯಾಗಿ ಕಂಡಳು.

**ಭಾಗವತ :** ಕುರೂಪಿಯೆಂದಳು
ಕೊಕ್ಕರೆಯೆಂದಳು
ಒರಟು ದೇಹದ
ಒನಕೆಯೆಂದಳು
ಹತ್ತಿರ ಸಾರಲು ಸರಿ ಸರಿ
ಎಂದಳು॥

**ದೇವಸೇನ :** ಅವಳು ನನ್ನನ್ನು ನಡೆಸಿಕೊಂಡ ರೀತಿ ನೋಡಿದರೆ ಆತ್ಮಹತ್ಯೆ ಮಾಡಿಕೊಳ್ಳಬೇಕೆನಿಸಿತ್ತು. ಅವಮಾನ, ಅನಾದರ, ಭರ್ತ್ಸನೆ, ತಿರಸ್ಕಾರ, ಚುಚ್ಚು ಮಾತುಗಳು!!..... ಒಂದೇ ಎರಡೇ!!

**ಅಮರಸೇನ:** (ಚಿಂತಾಕ್ರಾಂತನಾಗಿ) ಇದೆಲ್ಲವನ್ನೂ ನಮಗೇಕೆ ಹೇಳಲಿಲ್ಲ ಕುಮಾರ?

**ದೇವಸೇನ :** ನಮ್ಮ ಕಷ್ಟ ಸುಖ ಕೇಳಿಸಿಕೊಳ್ಳುವ ಪುರಸೊತ್ತೆಲ್ಲಿದೆ. ನಿಮ್ಮ ವಿಲಾಸ, ಚದುರಂಗದಾಟ, ರಾಜ್ಯವಿಸ್ತರಣೆಯ ಹಂಬಲ!! ಇವುಗಳ ನಡುವೆ ನಮ್ಮ ಗೋಳು ನಿಮ್ಮನ್ನು ಹೊಕ್ಕೀತು ಹೇಗೆ?

**ಭಾಗವತ :** ಬೆಂದ ಮನಕೆ ತಂಪುಗಾಳಿ
ದಣಿದ ಕಣ್ಣಿಗೆ ಬೆಳುದಿಂಗಳ
ಸರಯೂ ಬಿಸಿಲಿನ
ಮಳೆಗೆ ನೆರಳಿನ ಕೊಡೆಯು

**ದೇವಸೇನ :** ಇಂಥ ಹೊತ್ತಲ್ಲಿ ನನಗೆ ಪ್ರೀತಿಸೋ ಜೀವ ಬೇಕಿತ್ತು ನೋವಿನಗಾಯಗಳಿಗೆ ಮುಲಾಮು ಬೇಕಿತ್ತು. ಸೇದಿ ಹೋಗುತ್ತಿದ್ದ ಜೀವದ ನಾಲಿಗೆಗೆ ಒಂದೆರಡು ಹನಿ ಅಮೃತ ಬೇಕಿತ್ತು. ಉಸಿರು ಕಟ್ಟಿ ಸಾಯುತ್ತಿದ್ದವನಿಗೆ ತಣ್ಣನೆಯ ಗಾಳಿ ಬೇಕಿತ್ತು, ಕರುಣೆಯ ಹೊಳೆ ಬೇಕಿತ್ತು, ಬದುಕೋದಕ್ಕೆ ಆಸೆ ಬೇಕಿತ್ತು, ಹಾಯಾಗಿ ಮಲಗೋಕೆ ಮಡಿಲು ಬೇಕಿತ್ತು, ನನ್ನನ್ನು ಪ್ರೀತಿಯಿಂದ ತನ್ನ ಕಣ್ಣುಗಳಲ್ಲಿ ಭದ್ರವಾಗಿಸಿಕೊಳ್ಳೊ ರೆಪ್ಪೆ ಬೇಕಿತ್ತು!!.... ಹೇಳು.... ಈಗ ಹೇಳು ಅಪ್ಪ!....... ಇವೆಲ್ಲ ಸಿಗೋದಾರಿಗೆ ಹೋಗಿದ್ದು ತಪ್ಪಾ! ಕ್ಷಣ ಮಾತ್ರದಲ್ಲಿ ನನ್ನೆದುರಿಗೇ ಇದೆಲ್ಲವನ್ನೂ ಇಂದ್ರಜಾಲದಂತೆ ತಂದಿರಿಸುವ ಜೀವಸಿಕ್ಕಿದಾಗ ಅದಕ್ಕೆ ಜೋತುಬಿದ್ದದ್ದು ತಪ್ಪಾ!!

○○

# ದೃಶ್ಯ – ೭

(ದೇವಸೇನ ಇಂದುಮತಿಯರು ಅಂತಃಪುರದಲ್ಲಿ ಮಂಚದ ಮೇಲೆ ಕುಳಿತಿದ್ದಾರೆ. ಇಂದುಮತಿ ಬಿಕ್ಕಿ ಬಿಕ್ಕಿ ಅಳುತ್ತಿದ್ದಾಳೆ. ದೇವಸೇನ ಅವಳನ್ನು ಸಮಾಧಾನ ಪಡಿಸುತ್ತಿದ್ದಾನೆ)

**ದೇವಸೇನ :** ಇಂದೂ......... ನನ್ನ ಪ್ರೀತಿಯ ಇಂದೂ. ನನ್ನ ಮುದ್ದಿನ ಅರಗಿಣಿಯೇ..... ನಿನ್ನ ದುಃಖವನ್ನು ನಿಲ್ಲಿಸಲಾರೆಯಾ?

**ಇಂದು :** ಯುವರಾಜರೇ ನಾನು ದುಃಖ ಅವಮಾನಗಳಿಂದ ಸಾಯುತ್ತಿದ್ದರೆ, ನೀವು ಪ್ರೀತಿಯ ಮಾತುಗಳನ್ನು ಆಡುತ್ತಿದ್ದೀರಿ. ಅರಮನೆಯಲ್ಲಿ ನಮ್ಮಿಬ್ಬರ ಸಂಬಂಧ ಎಲ್ಲರಿಗೂ ತಿಳಿದು ಹೋಗಿದೆ. ಕಾತ್ಯಾಳಿಗೂ ಈಗಾಗಲೇ ಅನುಮಾನ ಬಂದಿದೆ. ನನ್ನ ಮೇಲೆ ಹದ್ದುಗಣ್ಣು ಇರಿಸಿದ್ದಾಳೆ. ಅಲ್ಲದೆ ಒಂದಿಬ್ಬರು ಗೂಢಚಾರರನ್ನೂ ನನ್ನ ಬೆನ್ನಿಗೆ ಕಳಿಸುತ್ತಿದ್ದಾಳೆಂಬ ಅನುಮಾನವಿದೆ.

**ದೇವಸೇನ :** ಇಂದೂ ನನಗೆ ಅವಳ ಹೆದರಿಕೆಯಿಲ್ಲ. ಅಷ್ಟೇ ಅಲ್ಲ ಇಷ್ಟು ದೂರ ಬಂದ ಮೇಲೆ ನನಗೆ ಯಾರ ಹೆದರಿಕೆಯೂ ಇಲ್ಲ. ತಿಳಿಯ ಬೇಕಾದವರೆಲ್ಲರಿಗೂ ನಮ್ಮ ವಿಷಯ ತಿಳಿದು ಹೋಗಿದೆ. ಅಪ್ಪನ ಮುಂದೆ ನನ್ನ ವಿಚಾರಣೆಯೂ ಮುಗಿದು ಹೋಯಿತು.

**ಇಂದು :** ಅಯ್ಯಯ್ಯೋ ಮಹಾಪ್ರಭುಗಳಿಗೆ ತಿಳಿದು ಹೋಯಿತೇ! ಇನ್ನು ನನ್ನ ಕತೆ ಮುಗಿಯಿತು. ನನ್ನಪ್ಪ ಚಿಕ್ಕಪ್ಪಂದಿರಿಗೆ ತಿಳಿದರೆ ಏನಾಗುವುದೋ ಎಂದು ಹೆದರಿಕೆಯಾಗುತ್ತಿದೆ.

**ದೇವಸೇನ :** ಹೆದರಬೇಕಾದ ಅಗತ್ಯವಿಲ್ಲ ಇಂದೂ. ನಾವೇನು ತಪ್ಪು ಮಾಡುತ್ತಿಲ್ಲ. ಇಬ್ಬರೂ ಪರಸ್ಪರರ ಅನುರಾಗವನ್ನು ಹಂಚಿಕೊಂಡೆವು ಅಷ್ಟೇ! ಅಗತ್ಯಬಿದ್ದರೆ ಎಲ್ಲರನ್ನೂ ಎದುರಿಸಿ ನಿನ್ನನ್ನು ವಿವಾಹವಾಗುತ್ತೇನೆ.

(ರಭಸದಿಂದ ಕಾತ್ಯಾಯಿನಿಯ ಪ್ರವೇಶ)

**ಕಾತ್ಯಾ** : (ವ್ಯಂಗ್ಯವಾಗಿ) ಕ್ಷಮಿಸಬೇಕು ಯುವರಾಜರು. ನಿಮ್ಮ ಏಕಾಂತಕ್ಕೆ ಭಂಗ ತಂದೆ. ಅಪ್ಪಣೆಯಿಲ್ಲದೆ ಒಳಗೆ ಬಂದು ಬಿಟ್ಟೆ! ನಿಮ್ಮ ಪ್ರಣಯ ಲೀಲೆಗಳು, ವಿಲಾಸಗಳು ರಾಸಕ್ರೀಡೆಗಳು.........! ಓಹ್! ಎಂಥ ಕೆಲಸ ಮಾಡಿ ಬಿಟ್ಟೆ! ರಸಭಂಗವಾಯಿತಲ್ಲವೇ?....

**ದೇವಸೇನ** : (ಸಿಟ್ಟಿನಿಂದ) ಕಾತ್ಯಾ ನಿಲ್ಲಿಸು ನಿನ್ನ ಈ ಚುಚ್ಚು ಮಾತುಗಳನ್ನು, ವ್ಯಂಗ್ಯದ ವಿಷವನ್ನು.

**ಕಾತ್ಯಾ** : (ವ್ಯಂಗ್ಯ) ಯೇಕೆ ನಿಲ್ಲಿಸಬೇಕು ಯುವರಾಜರೇ? ಹೇಳುವುದಕ್ಕೆ ಬೇಕಾದಷ್ಟಿದೆ. ಇದು ಕೇವಲ ಪ್ರಸ್ತಾವನೆ.

**ದೇವಸೇನ** : ಸರಿ ಸರಿ ಏನು ಹೇಳಬೇಕೆಂದು ಕೊಂಡಿದ್ದೀಯೋ ಹೇಳಿಬಿಟ್ಟು ತೊಲಗು.

**ಕಾತ್ಯಾ** : ಹೇಳಿಬಿಟ್ಟು ತೊಲಗಲು ನಾನು ಬಂದಿಲ್ಲ. ಈ ನಿಮ್ಮ ಸೂಳೆ ಇದ್ದಾಳಲ್ಲ ಇವಳನ್ನು ಇಲ್ಲಿಂದ ತೊಲಗಿಸಲು ಬಂದಿದ್ದೇನೆ. (ಇಂದುವಿನ ಕಡೆಗೆ ದೃಷ್ಟಿಹಾಯಿಸಿ) ಏನೇ ಮನೆ ಹಾಳಿ! ನಿನ್ನ ಹಾದರಕ್ಕೆ ಬೇರೆ ಯಾರೂ ಸಿಗಲಿಲ್ಲವೇ. ನಾನೇ ಹೇಳಿದ್ದೆನಲ್ಲ, ಯಾವನಾದರೂ ರಾಜಕುಮಾರನನ್ನು ನೋಡಿ ನಿಮಗೂ ಮದುವೆ ಮಾಡಿಸುತ್ತೇನೆಂದು, ಅಷ್ಟರಲ್ಲಿಯೇ ನಿನಗೆ ಅವಸರವಾಯಿತೇ?

**ಇಂದುಮತಿ**: ಕಾತ್ಯಾ ನಿಲ್ಲಿಸು ನಿನ್ನ ಆರೋಪಗಳನ್ನು. ನಾನೇನು ತಪ್ಪು ಮಾಡಿರುವೆ. ನಿನಗೆ ಎಷ್ಟು ರೀತಿಯಿಂದ ತಿಳಿಸಿ ಹೇಳಿದೆ. ನೀನು ಮಾಡುತ್ತಿರುವುದು ಸರಿಯಲ್ಲ. ಮುಂದೆ ನೀನು ಕೆಟ್ಟ ದಿನಗಳನ್ನು ಕಾಣ ಬೇಕಾಗುವುದೆಂದು ಎಚ್ಚರಿಸಿದೆ. ನೀನು ಕೇಳಿಸಿಕೊಂಡರೆ ತಾನೇ?

**ಕಾತ್ಯಾ** : ಹಾಗಂತ ನಿನ್ನ ಬಲೆಗೆ ಬೀಳಿಸಿಕೊಳ್ಳಬೇಕೆಂದು ಹೇಳಿದೆನೇ? ನನ್ನ ಜಾಗವನ್ನು ನಿನಗೆ ಆಕ್ರಮಿಸಲು ಹೇಳಿದೆನೇ?

**ಇಂದು** : ನಾನೇನೂ ಬಲೆಗೆ ಬೀಳಿಸಿದ್ದಿಲ್ಲ. ಗಾಯಗೊಂಡು ಚಡಪಡಿಸುತ್ತಿದ್ದ ಹಕ್ಕಿಯನ್ನೆತ್ತಿ ಕರುಣೆಯಿಂದ ಅದರ ಗಾಯಗಳಿಗೆ ಚಿಕಿತ್ಸೆ ಮಾಡಿದೆ. ಪ್ರೀತಿಯೆರೆದು ಎದೆಗಪ್ಪಿಕೊಂಡೆ ತಪ್ಪೇನು?

**ಕಾತ್ಯಾ** : ಛಿ! ಛಿ! ನಾಚಿಕೆಯಿಲ್ಲದವಳಂತೆ ಮಾತನಾಡಬೇಡ ತುದಿನಾಲಗೆಯ ಸವಿಗೂ ಸಲ್ಲದೆಂದು ಬಿಸಾಡಿದ್ದನ್ನು, ಎಂಜಲನ್ನು ಎತ್ತಿ ಸವಿಯಲು ಹೇಸಿಗೆಯೆನಿಸುವುದಿಲ್ಲವೆ?

**ಇಂದುಮತಿ**: ಎಷ್ಟು ಬೇಕಾದರೂ ಬೊಗಳುತ್ತಿರು ಕಾತ್ಯಾ. ಯುವರಾಜರು ರತ್ನದಂತಹ ಗುಣವುಳ್ಳವರು. ಅವರನ್ನು ಸರಿಯಾಗಿ ಗ್ರಹಿಸದೆ ಮಣ್ಣಿನ ಹೆಂಟೆಯೆಂದು ಬಿಸಾಡಿದ್ದ ಬಿದ್ದಿದ್ದ ಮಣಿರತ್ನದ ಬೆಲೆಯರಿತು ಎದೆಯ ಪದಕವಾಗಿ ಇರಿಸಿಕೊಂಡೆ. ನಾನು ಜಾಣೆಯಾದೆ: ನೀನು ಮೂರ್ಖಳಾದೆ?

**ಕಾತ್ಯಾ** : ನೀನೊಬ್ಬಳು ತಾಟಕಿ. ಹೆತ್ತದ್ದನ್ನೇ ತಿನ್ನುವಂತಹ ಚೇಳು ನೀನು. ನನ್ನ ಸೋದರಿ. ನನ್ನಾತ್ಮ ಸಖಿ ಎಂದು ಜೊತೆಗೆ ಕರೆದು ತಂದು ನನ್ನ ಬಾಳಿಗೆ ನಾನೇ ಕಿಚ್ಚಿಟ್ಟುಕೊಂಡೆ. ನನ್ನ ಗಂಡನಿಗೇ ಸೆರಗು ಹಾಸಿ. ಬಲೆ ಬೀಸಿ ನನ್ನ ಅಧಿಕಾರಗಳನ್ನೆಲ್ಲಾ ಕಸಿಯುವ ಆಲೋಚನೆ ನಿನಗೆ ಹೇಗೆ ಬಂತೇ ದರಿದ್ರದವಳೇ?

**ಇಂದುಮತಿ:** ಅನ್ನು ಅನ್ನು ಕಾತ್ಯಾ. ನಿನಗೆ ಇವರಿಂದ ಸಮಾಧಾನ ಸಿಗುವುದಾದರೆ ಬೇಕಾದಷ್ಟು ಅನ್ನುತ್ತಿರು.

**ದೇವಸೇನ :** (ಅಸಹನೆಯಿಂದ) ಮುಗಿಯಿತಾ. ನಿನ್ನ ಮೊನಚು ಮಾತಿನ ಬತ್ತಳಿಕೆ ಖಾಲಿಯಾಯಿತಾ?.... ಬಾಯಿಮುಚ್ಚಿ ಬಂದದಾರಿಗೆ ಹೋಗು. ಇನ್ನೊಂದು ಮಾತು ಇಂದುವಿನ ಬಗ್ಗೆ ಆಡಿದರೆ ಪರಿಣಾಮ ನೆಟ್ಟಗಾಗುವುದಿಲ್ಲ.

**ಕಾತ್ಯಾ** : ಏನು ಅವಳನ್ನು ವಹಿಸಿಕೊಂಡು ಬರುತ್ತಿದ್ದೀರಿ? ನಿಮ್ಮ ಧರ್ಮ ಪತ್ನಿಗಿಂತ ಮೂರು ಕಾಸಿನ ಈ ಸೂಳೆ ನಿಮಗೆ ಹೆಚ್ಚಾಯಿತೇ?

**ದೇವಸೇನ :** ನಾಲಗೆ ಬಿಗಿ ಹಿಡಿದು ಬರಲಿ. ಅಸಹ್ಯದ ಪದಗಳನ್ನು ಬಳಸಲು ನಿನಗೆ ಅಧಿಕಾರ ಕೊಟ್ಟವರು ಯಾರು?... ಧರ್ಮ ಪತ್ನಿಯಂತೆ? ಎಂದಾದರೂ ನೀನು ನನ್ನನ್ನು ಗಂಡನಾಗಿ ನಡೆಸಿಕೊಂಡಿದ್ದೀಯ? ಗೌರವ ಪ್ರೀತಿಗಳಿಗೆ ಅವಕಾಶ ಕೊಟ್ಟಿದ್ದೀಯ?

**ಕಾತ್ಯಾ** : ಹಾಗೆಂದು ಕಂಡವರ ಹಿಂದೆ ಹೋಗಲು ಹೇಳಿದೆನೇ? ಯಾವುದೋ ಕ್ಷಣಗಳಲ್ಲಿ ನಿಷ್ಠುರವಾಗಿ ನಡೆದುಕೊಂಡಿರಬಹುದು. ಆದರೆ ಜೀವನ ಪರ್ಯಂತ ಹಾಗೇ ಉಳಿಯುತ್ತೇನೆಂದನೇ?

**ದೇವಸೇನ :** ನಿನ್ನಲ್ಲಿ ಪ್ರೀತಿ ಮೊಳೆಯುವವರೆಗೂ ನನ್ನ ಪ್ರಾಯ ಕಾಯುವುದಿಲ್ಲ. ನಾನೇನು ಸಂತನಲ್ಲ; ಜಿತೇಂದ್ರಿಯನಲ್ಲ, ನಿನ್ನಿಚ್ಛೆಯ ಕ್ಷಣದಲ್ಲಿ ಎಸೆಯುವ ಪ್ರೀತಿಯ ಎಂಜಲಿಗೆ ಕೈಯೊಡ್ಡಿ ಕೂರಲು.

**ಕಾತ್ಯಾ** : ಲೇ ಇಂದೂ. ನನ್ನ ಗಂಡನನ್ನು ನನ್ನ ಪಾಲಿಗೆ ಬಿಟ್ಟು ಈ ರಾಜ್ಯವನ್ನೇ ತೊರೆದು ಹಾಳಾಗಿ ಹೋಗು. ನೀನಾಗಿ ಹೋಗಲಿಲ್ಲವೆಂದರೆ ಅಪ್ಪನಿಗೆ. ದೊಡ್ಡಪ್ಪನಿಗೆ ಪತ್ರ ಬರೆದು ನಿನ್ನ ದರಿದ್ರ ದ್ರೋಹವನ್ನು. ಹಾರವನ್ನು ತಿಳಿಸಿ ನಿನ್ನ ತಲೆ ಚಂಡಾಡಿಸುತ್ತೇನೆ. ನಿನ್ನನ್ನು ಸುಮ್ಮನೆ ಬಿಡುವುದಿಲ್ಲ. ನಿನಗೆ ಸಾವನ್ನು ಕಾಣಿಸದೆ ನನಗೆ ನೆಮ್ಮದಿಯಿಲ್ಲ.... ನನಗೆ ಯುವರಾಜರು ಬೇಕು.... ಬೇಕೇ ಬೇಕು. (ಎಂದು ಕಿರಿಚುತ್ತಾ ಬಿಕ್ಕಿ ಬಿಕ್ಕಿ ಅಳುವಳು)

**ದೇವಸೇನ :** ನಿನಗೆ ನಾನು ಬೇಕೆನ್ನುವ ಬುದ್ಧಿ ಮೊದಲೇ ಇರಬೇಕಿತ್ತು. ಈಗ ಬಹಳ ತಡವಾಗಿದೆ. ಇಂದೂ ನನಗೆ ನೀಡಿದ ಪ್ರೀತಿ. ಸಮಾಧಾನಗಳು

ಯಾರಿಂದಲೂ ಕೊಡಲು ಸಾಧ್ಯವಿಲ್ಲ. ಕಾತ್ಯಾ ನಿನಗೆ ಎಚ್ಚರಿಕೆ ನೀಡುತ್ತಿದ್ದೇನೆ. ಇಂದೂವಿನ ಕೂದಲು ಕೊಂಕಿದರೂ ನಾನು ಸುಮ್ಮನೆ ಬಿಡುವವನಲ್ಲ ರಾಜಾಧಿಕಾರದಿಂದ ಹೇಳುತ್ತಿದ್ದೇನೆ. ನಿನ್ನಿಂದ ಅನಾಹುತವಾದರೆ ಮರಣದಂಡನೆಯೊಂದೇ ದಾರಿ.

**ಇಂದು** : ಯುವರಾಜರೇ ನನ್ನ ಸೋದರಿ ತಪ್ಪಿತಸ್ಥಳಲ್ಲ ನಾನೇ ತಪ್ಪು ಮಾಡಿರುವುದು. ಅವಳ ಸ್ವಂತದ್ದನ್ನು ಕಸಿದುಕೊಂಡದ್ದು ನನ್ನದೇ ತಪ್ಪು. ನಾನು ನಿಮ್ಮ ಬಗ್ಗೆ ಕರುಣೆ, ತೋರಿದೆ. ಸಹಾನುಭೂತಿ ವ್ಯಕ್ತಪಡಿಸಿದೆ ಕೆಲವು ಕ್ಷಣಗಳಲ್ಲಿ ನಿಮಗೆ ಸುಖ ನೀಡಿರಬಹುದು. ಹಾಗೆಂದಮಾತ್ರಕ್ಕೆ ನಿಮ್ಮ ಮೇಲೆ ನನಗೇನಿದೆ ಅಧಿಕಾರ? ನನಗೆ ಶಿಕ್ಷೆ ಕೊಡಿ. ಗಡೀಪಾರು ಮಾಡಿಬಿಡಿ. ನಾನೆಲ್ಲಾದರೂ ಹೋಗಿ ಯಾರಿಗೂ ಕಾಣದಂತೆ ಬದುಕುತ್ತೇನೆ.

**ಕಾತ್ಯಾ** : (ಅಣಕಿಸುತ್ತಾ) ಆಹಾಹಾ! ನಂಗನಾಚಿ! ಮಾಡುವುದೆಲ್ಲ ಮಾಡಿದ ಮೇಲ ಎಲ್ಲಿಲ್ಲದ ವಿನಯ! ನಟನೆ.... ಬರೀ ನಟನೆ..... ನಿನ್ನ ನಟನೆಗೆ ನಾನು ಸೋಲುವವಳಲ್ಲ.... ತಿಳಿದುಕೋ.

**ದೇವ** : ಇಂದೂ ನಿನಗೆ ಶಿಕ್ಷೆ ಕೊಡುವುದೋ ಬಿಡುವುದೋ ಅದನ್ನು ನಾನು ನಿರ್ಧರಿಸುತ್ತೇನೆ.... ಆದರೆ ನೀನು ಮಾತ್ರ...... ಈ ರಾಕ್ಷಸಿಯ..... ಚಾಂಡಾಲಿಯ ನೆರಳಿನಿಂದಲೂ ದೂರವಿರು.... ಎಚ್ಚರಿಕೆ ಅಷ್ಟೆ!!

ೞೞ

# ದೃಶ್ಯ – ೮

**ಭಾಗವತ :** ಭೀತನಾದನು ರಾಜಕುಮಾರ
ಹಗೆಯ ಬಲೆಯಲಿ ಸಿಲುಕಿದ
ಪ್ರಾಣದೇವತೆ ಪ್ರಣಯ ವಲ್ಲರಿ
ಪ್ರಾಣರಕ್ಷಣೆಗೆಳಸಿದ
ಯಾರೂ ಅರಿಯದ ಯಾರೂ
ಕಾಣದ ಮಣಿದ್ವೀಪ
ಗೃಹದಲಿ ಇರಿಸಿದ
ಬಲ್ಲದೊಮ್ಮನವಿಲ್ಲದೇಯೆ
ಮಡದಿ ಮಂಚವನೇರಿದ

(ದೇವಸೇನನ ಪ್ರವೇಶವನ್ನು ಗಮನಿಸಿ)

ಅಯ್ಯಾ ಕುಮಾರ ಒಳ್ಳೆಯದನ್ನೇ ಮಾಡಿದೆ. ನಿನ್ನ ಬೆನ್ನ ಹಿಂದೆ ಭಯಂಕರ ಪಿತೂರಿ ನಡೆಯುತ್ತಿದೆ ಎಚ್ಚರದಿಂದಿರು.

**ದೇವಸೇನ :** ಅಬ್ಬ! ಅಂತೂ ಇಂದುಮತಿಯನ್ನು ಮಣಿದ್ವೀಪದ ಅರಮನೆಯಲ್ಲಿ ಇರಿಸಿ ಬಿಟ್ಟೆ, ನನ್ನ ಸುತ್ತಲೂ ಹಗೆಗಳು ಅವಕಾಶಕ್ಕಾಗಿ ಕಾಯುತ್ತಿದ್ದಾರೆ. ಜೊತೆಗೆ ನನ್ನಪ್ಪ ಮೇಲು ನೋಟಕ್ಕೆ ನನ್ನ ತಪ್ಪನ್ನು ಮನ್ನಿಸಿದಂತೆ ಕಾಣುತ್ತಿದ್ದರೂ ಅವರ ರಾಜಕೀಯ ಲೆಕ್ಕಾಚಾರಗಳು ಬೇರೆಯೇ ಇವೆ. ಭಾವನೆಂಟನ ಭಯವಿದ್ದೇ ಇದೆ. ಪ್ರದ್ಯೋತಪುರ ಸಾಳ್ವಪುರಗಳ ಸಂಬಂಧಗಳು ಇದರಿಂದ ಹಾಳಾಗಬಾರದಾದ್ದರಿಂದ ಪಿತೂರಿಯಲ್ಲಿ ಅಪ್ಪನ ಕೈವಾಡವೂ ಇದ್ದೇ ಇರುತ್ತದೆ.

**ಭಾಗವತ :** ಪಾಪ ಒಂಟಿ ಜೀವವು.
ತೊರೆದು ಎಲ್ಲರ ಹೇಗೆ

ಜೀವನ ಕಳೆವಳಲ್ಲಿ
ಎಲ್ಲೊ ಮೂಲೆಯ ದ್ವೀಪದಲ್ಲಿ

('ಬನ್ನಿ ನಾವೆಲ್ಲರೂ ಅಮರಸೇನ ಪ್ರಭುಗಳನ್ನು ಭೇಟಿ ಮಾಡೋಣ' ಎಂಬ ದನಿಗಳು ಕೇಳಿಸುತ್ತವೆ)

**ದೇವಸೇನ :** ಇನ್ನು ನಾನಿಲ್ಲಿ ಇರುವುದು ಅಪಾಯ. ಜನದಂಗೆ ಎದ್ದು ಇತ್ತಲೇ ಬರುತ್ತಿದ್ದಾರೆ. ಹೀಗೆ ಗುಳೇ ಕಟ್ಟಿ ಕೊಂಡೇಕೆ ಬರುತ್ತಿದ್ದಾರೆ? (ಹೋಗುವನು)

**ಭಾಗವತ :** ಅಮರಸೇನ ಪ್ರಭುವ
ಕರೆದರು ಕುವರ ನಡತೆಯ
ದೂರಿ ನಿಂತರು. ಶಿಕ್ಷೆಯಾಗಲಿ
ಕುಲಟೆಗೆಂದರು ಭ್ರಷ್ಟನಾಗಿಸಿ
ಕುವರನೆಂದರು.

(ಅಮರ ಸೇನರು ಪ್ರವೇಶಿಸುತ್ತಾರೆ)

**ಅಮರಸೇನ:** ಮಹಾಜನಗಳು ಸಮಾಧಾನಗೊಳ್ಳಬೇಕು. ಒಟ್ಟಿಗೆ ಹೀಗೇಕೆ ಬಂದಿರಿ?

**ಒಬ್ಬ :** ಪ್ರಭುಗಳೇ ಏನೂ ತಿಳಿಯದಂತೆ ಮಾತನಾಡದಿರಿ. ನಿಮ್ಮ ಮಗನ ನಡತೆಯ ಬಗ್ಗೆ ಎಂದಾದರೂ ಯೋಚಿಸಿದ್ದೀರಾ ಹೇಗೆ?

**ಮತ್ತೊಬ್ಬ :** ಬೀದಿ ಬೀದಿಯಲ್ಲಿ, ಜನ ಸೇರಿದ ಕಡೆಯಲ್ಲೆಲ್ಲ ಚಿಕ್ಕವರು ದೊಡ್ಡವರೂನ್ನೋ ಭೇದವೂ ಇಲ್ಲದೆ ನಿಮ್ಮ ಮಗ ಮತ್ತು ಇಂದುಮತಿಯವರ ಬಗ್ಗೆ ಎಷ್ಟು ಅಶ್ಲೀಲವಾಗಿ ಮಾತಾಡುಕೊಳ್ಳುತ್ತಿದ್ದಾರೆ ಗೊತ್ತೇನು?

**ಇನ್ನೊಬ್ಬ :** ಕೈ ಹಿಡಿದ ಧರ್ಮಪತ್ನಿಗೆ ದ್ರೋಹ ಮಾಡುವ ಕುಮಾರರು ಪ್ರಜೆಗಳ ದೃಷ್ಟಿಯಲ್ಲಿ ಎಷ್ಟು ಕೀಳಾಗಿದ್ದಾರೆ. ಇಷ್ಟಕ್ಕೆಲ್ಲಾ ಕಾರಣ ಆ ಇಂದುಮತಿ ಕುಲಟೆ, ಹಾದರಗಿತ್ತಿ. ರಾಜಕುಟುಂಬದ ವಿನಾಶವನ್ನು ಆಲೋಚಿಸಿಯೇ ಈ ಕೆಲಸಕ್ಕೆ ಇಳಿದಿದ್ದಾಳೆ.

**ಒಬ್ಬ :** ಅಷ್ಟೇ ಅಲ್ಲ ಮುಂದೆ ರಾಜವಂಶದ ರಾಜಸಿಂಹಾಸನದ ಉತ್ತರಾಧಿಕಾರಿಗೂ ಅಪಾಯ ತಪ್ಪಿದ್ದಲ್ಲ. ರಾಜ್ಯದ ಹಕ್ಕಿಗಾಗಿ ಅಡ್ಡಿ ಆತಂಕಗಳನ್ನು ತಂದು ಒಡ್ಡುವಳೆಂಬುದರಲ್ಲಿ ಸಂದೇಹವಿಲ್ಲ.

**ಅಮರಸೇನ:** ನೀವೆಲ್ಲ ಶಾಂತರಾಗಿರಿ. ನಾವು ಕುಮಾರರಿಗೆ ತಿಳಿಸಿ ಹೇಳಿದ್ದೇವೆ. ಈಗಾಗಲೇ ಅವಳನ್ನು ಗಡೀಪಾರು ಮಾಡಲಾಗಿದೆ. ಅವಳಿಂದ ಇನ್ಯಾವ ತೊಂದರೆಯೂ ಇಲ್ಲ. ಕುಮಾರರು ತಮ್ಮ ಧರ್ಮಪತ್ನಿಯೊಂದಿಗೆ

ಅನ್ಯೋನ್ಯವಾಗಿದ್ದಾರೆ. ಕುಮಾರರೂ ತಮ್ಮ ವಾರಸುದಾರನ ಬರವಿನ ನಿರೀಕ್ಷೆಯಲ್ಲಿ ಕಾತರರಾಗಿದ್ದಾರೆ.

**ಇನ್ನೊಬ್ಬ** : ಪ್ರಭು ನಾವೆಲ್ಲರೂ ನಿಮ್ಮ ಹಿತೈಷಿಗಳು. ನಿಮ್ಮ ಕ್ಷೇಮಕೋರಿ ನಿಮ್ಮ ಮಗನ ವಿಚಾರವಲ್ಲಿ ಹೇಳಬಾರದ್ದನ್ನು ಹೇಳಿದೆವು. ವಿಷಯದ ಗಂಭೀರತೆ ಮನದಟ್ಟು ಮಾಡಿಸಲು ಸ್ವಲ್ಪ ಕಟುವಾಗಿ ನಡೆದುಕೊಂಡೆವು.

**ಮತ್ತೊಬ್ಬ** : ಇದರಿಂದ ಜನರೂ ಕ್ಷುಬ್ಧಗೊಂಡು ಸಿಂಹಾಸನದ ವಿರುದ್ಧ ದಂಗೆಯೇಳಬಹುದು. ಅವಕಾಶಕ್ಕಾಗಿ ಕಾಯುತ್ತಿರುವ ನೆರೆಯ ರಾಜ್ಯಗಳೆಲ್ಲವೂ ಒಟ್ಟಾಗಿ ಇಲ್ಲಿನ ಪರಿಸ್ಥಿತಿಯ, ಮತ್ತು ಅರಮನೆಯ ಒಳಗಿನ ವಿರಸದ ಪ್ರಯೋಜನ ಪಡೆದು ದಂಡೆತ್ತಿ ಬರಲೂ ಬಹುದು. ಅದಕ್ಕೆಂದೇ ನಾವೆಲ್ಲ ನಿಮ್ಮನ್ನು ಕಾಣಬೇಕಾಯಿತು. ಪರಿಸ್ಥಿತಿಯನ್ನು ವಿವರಿಸಬೇಕಾಯಿತು. ಆದಷ್ಟು ಬೇಗ ಇದಕ್ಕೆಲ್ಲಾ ಪರಿಹಾರ ಯೋಚಿಸಿ ಪ್ರಭು.

**ಅಮರಸೇನ**: ನೀವು ಹೇಳಿದ್ದೆಲ್ಲ ಅರ್ಥವಾಯಿತು. ಆದರೆ ನಿಮ್ಮಲ್ಲೊಂದು ಕೋರಿಕೆ. ಸದ್ಯಕ್ಕೆ ನೀವೆಲ್ಲರೂ ಸುಮ್ಮನಿದ್ದುಬಿಡಿ. ಪರಿಸ್ಥಿತಿ ಹದಕ್ಕೆ ಬಂದು ಎಲ್ಲವೂ ಮೊದಲಿನಂತಾಗಲಿ. ನಾನೇ ನಿಮ್ಮೆಲ್ಲರಿಗೂ ಏನು ಮಾಡಬೇಕೆಂದು ತಿಳಿಸುತ್ತೇನೆ.

**ಎಲ್ಲರೂ** : ಅಪ್ಪಣೆ ಪ್ರಭು. ಆ ದುಷ್ಟೆಯ ಕಪಿಮುಷ್ಠಿಯಿಂದ ರಾಜಕುಮಾರರು, ರಾಜಸಿಂಹಾಸನ ಸುರಕ್ಷಿತವಾಗಿ ಹೊರಬರಬೇಕೆಂದೇ ನಮ್ಮಾಸೆ,....ಇನ್ನು ಬರುತ್ತೇವೆ. (ಹೋಗುವರು)

OO

## ದೃಶ್ಯ – ೯

ಭಾಗವತ : ಕುವರನಾಸತಿ ಗಂಡು
ಹಡೆದಳು ನಾಮವದಕೆ
ಪ್ರತಾಪನೆಂದಾಯಿತು
ಸತಿ ಗುಣವಂತೆಯಾಗಿ
ಬಾಳಲು ಬಯಸಿದಾ
ಯುವ ರಾಣಿಯು ಹಾಲುಗಲ್ಲದ
ಶಿಶುವು ತೊರೆದು
ಸ್ವರ್ಗಕೇರಿ ಸಂದಳು.

ಪಾಪ! ಕುಮಾರ, ಪೂರ್ತಿಯಾಗಿ ಒಂಟಿಯಾದ. ಆತನ ದುಃಖವನ್ನು ನೋಡಲಾಗುವುದಿಲ್ಲ. ಎಂಥ ಕ್ರೂರ ವಿಧಿ! ಹಸನಾಗುತ್ತಿದ್ದ ಬಾಳಿನ ನಂದನವನಕ್ಕೆ ಒಮ್ಮೆಲೇ ಕಾಳ್ಗಿಚ್ಚು ಹೊತ್ತಿಕೊಂಡಿತು. ಎಲ್ಲರ ಸಮಾಧಾನಕ್ಕಾಗಿ ಆತ್ಮವಂಚನೆ ಮಾಡಿಕೊಂಡೇ ಹೆಂಡತಿಯೊಂದಿಗೆ ಬಾಳ್ವೆ ನಡೆಸುತ್ತಿದ್ದಾಗಲೇ ಮಡದಿ ಸಾಯಬೇಕೇ?.... ಇಂತಹ ಕಷ್ಟದ ಸಮಯದಲ್ಲಿ ಸಮಾಧಾನ ಪಡಿಸುತ್ತಿದ್ದ ಆ ಜೀವ ಈಗ ಇಲ್ಲಿಲ್ಲ.

ದೇವಸೇನ: (ನೋಡಲು ಹುಚ್ಚನಂತಾಗಿದ್ದಾನೆ) ಇಲ್ಲ.... ಇಲ್ಲ... ನಾನಿನ್ನು ಬದುಕಲಾರೆ. ನನಗೆ ನನ್ನ ಪ್ರೇಮಜ್ಯೋತಿ ಬೇಕು. ನನ್ನ ಇಂದೂ ಬೇಕು. ಬಿಡಿ.... ಬಿಡಿ.... ನಾನು ಹೋಗಬೇಕು. (ಯಾರಿಂದಲೋ ಬಿಡಿಸಿಕೊಳ್ಳುವಂತೆ ಕೊಸರಾಡುತ್ತಾನೆ)

ಭಾಗವತ : ಕುಮಾರರೇ.... ಇದೇನು ಹೀಗೆ ವರ್ತಿಸುತ್ತಿದ್ದೀರಿ? ನಿಮ್ಮೆದೆಯ ನೋವು ನನಗರ್ಥವಾಗುತ್ತದೆ. ಹೀಗೆಲ್ಲ ಎಲ್ಲೆಂದರಲ್ಲಿ ಓಡಾಡಬಾರದು. ಬನ್ನಿ ನಾನು ನಿಮ್ಮನ್ನು ಅರಮನೆಗೆ ಕರೆದೊಯ್ಯುತ್ತೇನೆ. ನಿಮ್ಮ ಮಡದಿಯ ಸಾವಿನಿಂದ ನಿಮಗೆ ಅತೀವ ದುಃಖವಾಗಿದೆ.

**ದೇವಸೇನ :** (ಜೋರಾಗಿನಕ್ಕು) ಮಡದಿಯ ಸಾವಿನಿಂದ ದುಃಖವೇ? ಇಲ್ಲ... ಇಲ್ಲ.... ಬಹಳ ಸಂತೋಷವಾಗಿದೆ. ಒಂದು ಪೀಡೆ ಕಳೆದಂತಾಗಿದೆ.

(ಅಮರಸೇನನ ಪ್ರವೇಶ)

**ಅಮರಸೇನ:** ಅಪ್ಪಾ ಮಗು! ಕುಮಾರ! ದೇವಸೇನ.... ಎಲ್ಲಿದ್ದಿಯಪ್ಪ.... (ನೋಡಿ) ಓಹ್ ಇಲ್ಲೇ ಇದ್ದೀಯ... ನೀನೆಲ್ಲೂ ಕಾಣದೆ ಹೋದಾಗ ನಾನೂ ನಿನ್ನ ತಾಯಿಯೂ ಎಷ್ಟು ಗಾಭರಿಗೊಂಡಿದ್ದೆವು! ಗೊತ್ತಾ...... ಕುಮಾರ ಆದದ್ದೆಲ್ಲವನ್ನೂ ಕೆಟ್ಟ ಕನಸೆಂದು ಮರೆತು ಬಿಡು! ವಿಧಿ ನಮ್ಮೊಂದಿಗೆ ಕ್ರೂರವಾಗಿ ಆಟ ಆಡುತ್ತಿದೆ. ನೀನೂ ಕಾತ್ಯಾ ಸಂತೋಷವಾಗಿ ಬಾಳುವುದು ಇಷ್ಟವಿಲ್ಲಾಂತ ಕಾಣುತ್ತೆ.

**ದೇವಸೇನ :** ನನ್ನ ಪಾಡಿಗೆ ನನ್ನನ್ನು ಬಿಟ್ಟು ಬಿಡಿ ಅಪ್ಪ. ನನಗೆ ಜೀವದ ಮೇಲೆ ಆಸೆ ಇಲ್ಲ.

**ಅಮರಸೇನ:** ನನಗೆ ನಿನ್ನ ದುಃಖದ ಕಾರಣ ತಿಳಿದಿದೆ. ಇಂದುವಿನ ದ್ರೋಹ, ಕಾತ್ಯಾಳ ಸಾವು ನಿನ್ನನ್ನು ಅಲುಗಾಡಿಸಿ ಬಿಟ್ಟಿದೆ.

**ದೇವಸೇನ :** ಸ್ವಲ್ಪ ಸುಮ್ಮನಿರುತ್ತೀರಾ ಅಪ್ಪ (ಬೇಸರ) ಇಂದುವಿನ ತಲೆಗೆ ದ್ರೋಹದ ಪಟ್ಟಿಯನ್ನು ಕಟ್ಟಬೇಡಿ. ಅವಳೇ ನನ್ನ ಜೀವ ನನ್ನ ಪ್ರಾಣ, ಅವಳಿಲ್ಲದಿದ್ದರೇನಂತೆ ಅವಳ ನೆನಪುಗಳನ್ನೇ ಊರುಗೋಲಾಗಿಸಿಕೊಂಡು ಬದುಕುತ್ತೇನೆ, ಅವಳು ನನಗಾಗಿಯೇ ಬದುಕಿದಳು.

**ಅಮರಸೇನ:** ನಿನಗೆ ಅವಳ ವಿಚಾರ ಗೊತ್ತಿಲ್ಲ. ಅವಳು ನಿನ್ನನ್ನು ಬಲೆಗೆ ಕೆಡಪಿಕೊಂಡಳು; ಮೋಹದ ಸಂಕೋಲೆಯಿಂದ ಬಿಗಿದಳು. ನಿನ್ನನ್ನು ಅಷ್ಟೊಂದು ಹತ್ತಿರವಾಗಿಸಿಕೊಂಡದ್ದು ನಿನ್ನ ಮೇಲಿನ ಪ್ರೀತಿಗಲ್ಲ; ಪೂರ್ತಿಯಾಗಿ ಕಾತ್ಯಾಳಿಂದ ನಿನ್ನನ್ನು ದೂರ ಮಾಡುವುದು. ತನ್ನಿಂದ ಹುಟ್ಟುವ ಮಕ್ಕಳಿಗೆ ರಾಜ ಸಿಂಹಾಸನ, ಅಧಿಕಾರದ ಹಕ್ಕುಗಳನ್ನು ಕೊಡಿಸುವುದು. ಒಮ್ಮೆ ಅವಳ ಬಗೆಗಿನ ಮೋಹದ ಪೊರೆ ಕಳೆದು ಹೋಗಿ ನೋಡು. ಜನ ಅವಳ ಬಗ್ಗೆ ಏನು ಹೇಳುತ್ತಿದ್ದಾರೆ ಎಂಬುದು ನಿನಗೇ ತಿಳಿಯುವುದು.

**ದೇವಸೇನ :** (ವಿಕಟವಾಗಿ ನಕ್ಕು) ಏನು ರಾಜಸಿಂಹಾಸನ–ಅಧಿಕಾರಗಳನ್ನು ಅವಳು ಬಯಸಿದಳೇ...... ವಿಚಿತ್ರವಾಗಿದೆ...... ಆ ಸೌಂದರ್ಯದೇವತೆಯನ್ನು, ಕರುಣೆಯ ಅವಧೂತಳನ್ನು ಕೈ ಹಿಡಿಯಲು ರಾಜಕುಮಾರರನೇಕರು ಸಾಲುಗಟ್ಟಿ ನಿಲ್ಲುತ್ತಿದ್ದರು. ಸ್ವಂತ ಸೋದರರಿಗೆ ದ್ರೋಹ ಬಗೆದು ಅಧಿಕಾರ ಕಸಿದುಕೊಳ್ಳಬೇಕಾದ ಅಗತ್ಯ ಅವಳಿಗಿರಲಿಲ್ಲ.

**ಅಮರಸೇನ:** ಕುಮಾರ ನೀನೊಬ್ಬ ಹುಂಬ. ನಯವಂಚನೆಯ ರೀತಿಗಳು ನಿನಗೆ ತಿಳಿಯುವುದಿಲ್ಲ. ಜೇನು ಸವರಿದ ವಿಷದ ಕತ್ತಿ ಅವಳು. ಅವಳ ಮೋಹವನ್ನು, ಕನವರಿಕೆಯನ್ನು ಬಿಟ್ಟು ಬಿಡು. ಈ ರಾಜವಂಶಕ್ಕೆ ವಾರಸುದಾರನಾಗಿ ನಿನ್ನ ಮಡದಿ ನಿನಗೆ ಕೊಟ್ಟಿರುವ ಪ್ರತಾಪನನ್ನು ನಿನ್ನ ವಾತ್ಸಲ್ಯದಿಂದ ವಂಚಿತನನ್ನಾಗಿಸಬೇಡ. ಅವನ ಕಡೆ ಲಕ್ಷ್ಯಕೊಡು.

**ದೇವಸೇನ :** ಅವನು ನೀವು ಬಯಸುವ ವಾರಸುದಾರ. ಬೇಕಾಗಿರುವುದು. ನಿಮಗೆ, ನನ್ನನ್ನು ಯಾವುದೇ ರಾಜಕೀಯ ವ್ಯವಹಾರಗಳಿಗೆ ಎಳೆಯಬೇಡಿ.

**ಅಮರಸೇನ:** ನಿನ್ನ ಈ ಮುದಿ ತಂದೆತಾಯಿಗಳ ವಿಚಾರದಲ್ಲಿ ಇಷ್ಟೊಂದು ನಿಷ್ಠುರನಾಗಬೇಡ. ನಾನೆಷ್ಟು ಕಾಲ ತಾನೇ ಬದುಕುತ್ತೇನೆ. ದಯವಿಟ್ಟು ಈ ರಾಜ್ಯವನ್ನು ಹಾಳುಗೆಡವಬೇಡ..... ನಿನಗೆ ಇನ್ನೊಂದು ವಿಷಯ ಗೊತ್ತಿಲ್ಲ. ಹೇಳಿದರೆ ನೀನು ನಂಬುವುದೂ ಇಲ್ಲ. ಅದನ್ನು ಕೇಳಿದರೆ ಖಂಡಿತವಾಗಿ ಇಂದುವಿನ ಬಗ್ಗೆ ಕಟ್ಟಿಕೊಂಡ ಭ್ರಮೆಗಳೆಲ್ಲವೂ ಸಿಡಿದು ಹೋಗುತ್ತವೆ.

**ದೇವಸೇನ :** ಸುಮ್ಮನೆ ನನ್ನನ್ನು ಕಾಡಬೇಡಿ. ಹೇಳುವುದೇನಿದೆ ಪೀಠಿಕೆಗಳಿಲ್ಲದೆ ಹೇಳಿ ಬಿಡಿ.

**ಅಮರಸೇನ:** ಕಾತ್ಯಾ ಇದ್ದಕ್ಕಿದ್ದಂತೆ ಸತ್ತದ್ದು ಹೇಗೇಂತ ಗೊತ್ತಿದೆಯೇ? ಆತ್ಮಹತ್ಯೆ...... ಆತ್ಮಹತ್ಯೆ ಮಾಡಿಕೊಂಡಳು. ಹಸಿಗೂಸಿನ ಮಮತೆಯನ್ನೂ ಮರೆತು ಸಾಯಬೇಕೆಂದರೆ ಇಂದುಮತಿಯ ವಿಚಾರದಲ್ಲಿ ಎಷ್ಟೊಂದು ಉದ್ವಿಗ್ನಳಾಗಿದ್ದಳೆಂಬುದು ಸ್ಪಷ್ಟವಾಗುತ್ತದೆ. ಅವಳ ಪಂಜುಗಳಿಂದ ನೀನು ಹೊರಗೆ ಬರಲಾರೆ ಎಂದು ಅವಳಿಗೆ ಖಾತ್ರಿಯಾಗಿತ್ತಂತೆ! ಬದುಕೆ ಪ್ರಯೋಜನವಿಲ್ಲವೆಂದು ಸತ್ತಳಂತೆ!

**ದೇವಸೇನ :** ವಾಹ್! ವಾಹ್! ಈಗ ಕೊಲೆಯ ಆಪಾದನೆ! ಚೆನ್ನಾಗಿದೆ ನಿಮ್ಮ ಕತೆಗಳ ಸರಣಿ!! ನಿಮ್ಮ ಕತೆಗಳನ್ನು ಕೇಳುತ್ತಾ ಕೂರುವ ಮನಸ್ಸಿಲ್ಲ ಬರುತ್ತೇನೆ.....

**ಅಮರಸೇನ:** ಕುಮಾರ ನಿನ್ನ ಸ್ಥಿತಿ ನೋಡುತ್ತಿದ್ದಂತೆ ನನ್ನ ತಲ್ಲಣ ಹೆಚ್ಚಾಗುತ್ತಿದೆ. ನನ್ನ ಮಾತು ಕೇಳು. ಯಾವುದಾದರೂ ಒಳ್ಳೆಯ ರಾಜವಂಶದ ಕನ್ಯೆಯನ್ನು ವಿವಾಹವಾಗು. ಕಳೆದುಕೊಂಡ ಸಂತೋಷ ಮತ್ತೆ ಚಿಗುರುತ್ತದೆ.

**ದೇವಸೇನ :** ನಿಮ್ಮ ಸಲಹೆಗೆ ಕೃತಜ್ಞನಾಗಿದ್ದೇನೆ. ವಿವಾಹದ ಇಚ್ಛೆ ಕೂಡಿದ ಮೂಡಲೇ ನಿಮಗೆ ಹೇಳುತ್ತೇನೆ, ಅಪ್ಪಾ. ಅಲ್ಲೀವರೆಗೆ ನನ್ನನ್ನು ಸುಮ್ಮನೆ ಇರಲು

ಜಿಡಿ. (ಸರಸರನೆ ಹೊರಟು ಹೋಗುತ್ತಾನೆ) ನನ್ನ ಇಂದೂಪಿಗೆ ತೊಂದರೆಯೇನಾದರೂ ಆಯಿತೆಂದು ತಿಳಿದರೆ ಇಡೀ ರಾಜ್ಯವನ್ನೇ ಸುಟ್ಟು ಬಿಡುತ್ತೇನೆ. ನನ್ನಂತಹ ರಾಕ್ಷಸನನ್ನು ಊಹಿಸಲಾರದೆ ಹೋಗುತ್ತೀರಿ.

೦೦

# ದೃಶ್ಯ - ೧೦

**ಭಾಗವತ :** ಇಂದುಮತಿಯುಗುಟ್ಟು
ತಿಳಿಯಿತು ಪ್ರಭುವು
ಕರೆದನು ದ್ರೋಹಿಜನರ
ಮಗನ ಮೋಹವು
ಹರಿಯದಾಯಿತು
ಮುಗಿಸಿ ಬನ್ನಿರಿ ಅವಳನೆಂದನು॥

**ದೇವಸೇನ :** (ಪ್ರವೇಶ)

**ಭಾಗವತ :** ಕುವಾರ ಬಹಳ ಆತುರದಲ್ಲಿರುವಂತಿದೆ! ಯಾವುದಾದರೂ ರಾಜಕಾರ್ಯವುಂಟೆ?

**ದೇವಸೇನ :** ರಾಜಕಾರ್ಯವೇನೋ ಇದೆ. ಅದಕ್ಕೆ ಮುಂಚೆ ನಾನು ಇಂದುಮತಿಯನ್ನು, ಮಕ್ಕಳನ್ನು ಕಾಣ ಬಯಸುತ್ತೇನೆ. ಅವಳ ಏಕಾಂತವಾಸ, ಅಜ್ಞಾತವಾಸಗಳನ್ನು ನೆನೆಸಿಕೊಂಡರೆ ದುಃಖವಾಗುತ್ತದೆ. ಆದರೆ ನಾನಾದರೂ ಏನು ಮಾಡಲಿ ಭಾಗವತರೇ.

**ಭಾಗವತ :** ನಿಮ್ಮಿಬ್ಬರ ಬದುಕುಗಳು ಹೀಗಾಗುವುದಕ್ಕೆ ಯಾರು ಹೊಣೆಯೆಂದೇ ಅರ್ಥವಾಗುವುದಿಲ್ಲ. ಆ ನಿರ್ಜನ ದ್ವೀಪದಲ್ಲಿ, ಎತ್ತರದ ಬೆಟ್ಟವೊಂದರ ಮೇಲೆ ಏಕಾಕಿಯಾಗಿ ವಾಸಿಸುವುದೆಂದರೆ ಎಂಟೆದೆಯುವನೂ ಹೆದರಬೇಕು.

**ದೇವಸೇನ :** ಜೀವನ ಪರ್ಯಂತ ಅವಳ ಬದುಕು ಸಾಗಿಸುವುದಾದರೂ ಹೇಗೆ? ಊರಿಗೇ ಕರೆದುಕೊಂಡು ಹೋಗಿ ಯಾರಿಗೂ ಕಾಣದಂತೆ ಇರಿಸೋಣವೆಂದರೆ ಊರತುಂಬ ಗೂಢಚಾರರೇ ತುಂಬಿದ್ದಾರೆ. ನನ್ನನ್ನು ನಂಬಿದಂತೆ ತೋರಿಸಿಕೊಳ್ಳುತ್ತಿದ್ದರೂ ನಮ್ಮಿಬ್ಬರ ಮುಂದುವರೆದ ಸಂಬಂಧದ ಅರಿವಿದೆ ಎನ್ನುವ ಅನುಮಾನವೂ ನನಗಿದೆ.

**ಭಾಗವತ :** ನನಗೂ ಹಾಗೇ ಅನಿಸುತ್ತದೆ.

**ದೇವಸೇನ :** ಅವಳಿರುವ ಎಡೆ ಪತ್ತೆಯಾಗದಿದ್ದಲ್ಲಿ ಸಾಕು. ನನಗೆ ಅವಳ ಸುರಕ್ಷಿತತೆಯ ಬಗ್ಗೆಯೇ ಚಿಂತೆಯಾಗಿದೆ. ರಾಜಕಾರ್ಯದ ಮೇಲೆ ಹೋಗಲೇ ಬೇಕೆಂದು ಅಪ್ಪನ ಒತ್ತಾಯಕ್ಕೆ ಕಟ್ಟುಬಿದ್ದಿದ್ದೇನೆ. ಬರುವುದಕ್ಕೆ ಎಷ್ಟು ಕಾಲ ಹಿಡಿಯುವುದೋ ಏನೋ? ಅಲ್ಲೀವರೆಗೆ ಅವಳ ಪಾಡೇನು?..... ಅದಕ್ಕೆಂದೇ ಅವಳಿಗೆ ತಿಳಿಸಿ ಸಮಾಧಾನ ಹೇಳಬೇಕೆಂದು ಹೊರಟಿದ್ದೇನೆ.

**ಭಾಗವತ :** ಒಳ್ಳೆಯದಾಗಲಿ ಕುಮಾರ ದೇವರು ನಿಮಗೆ ಕ್ಷೇಮವನ್ನುಂಟು ಮಾಡಲಿ.

(ಹೊರಡುವನು)

**ಭಾಗವತ :** ಹೊರಟು ಸೇರಿದ
ಮೋಹದಿನಿಯಳ
ಹಾಲುಗೆನ್ನೆಯ ಮುದ್ದು
ಮಕ್ಕಳನಪ್ಪಿ ಕಂಬನಿ
ಹೊನಲ ಹರಿಸಿದ

(ದುಃಖಿತೆಯಾಗಿ ಮಕ್ಕಳನ್ನು ಎರಡೂ ಬದಿಗಳಲ್ಲಿ ಇರಿಸಿಕೊಂಡು ಕುಳಿತಿದ್ದಾಳೆ)

**ದೇವಸೇನ :** (ಪ್ರವೇಶಿಸಿ) (ಉದ್ವಿಗ್ನತೆಯೊಂದಿಗೆ) ಇಂದೂ ಇಂದೂ.... ನನ್ನ ಪ್ರೀತಿಯ ಇಂದೂ..... ಹೇಗಿದ್ದೀಯ? ಮಕ್ಕಳು ಹೇಗಿದ್ದಾರೆ? (ಮಕ್ಕಳತ್ತ ನೋಡಿ) ಬನ್ನಿ ಮಕ್ಕಳೇ ಗಟ್ಟಿಯಾಗಿ ನನ್ನನ್ನು ಅಪ್ಪಿಕೊಳ್ಳಿ.

(ಮಕ್ಕಳು ಅಂತೆಯೇ ಮಾಡುವರು)

**ಇಂದುಮತಿ:** (ಆಶ್ಚರ್ಯ ಚಕಿತಳಾಗಿ) ಇದೇನು ಯುವರಾಜರೇ ಇಷ್ಟು ಬೇಗನೆ ಮತ್ತೊಮ್ಮೆ ನನಗೆ ನಿಮ್ಮ ದರ್ಶನ ಭಾಗ್ಯ ನೀಡಿದ್ದೀರಿ? ಅರಮನೆಯಲ್ಲಿ ಎಲ್ಲರೂ ಕ್ಷೇಮವಷ್ಟೇ?

**ದೇವಸೇನ :** ಕ್ಷೇಮವೆಂದು ಹೇಗೆ ಹೇಳಲಿ?.... ನಿನ್ನ ಭಯಂಕರ ಶತ್ರು, ಸವತಿ, ಸೋದರಿ ತೀರಿಕೊಂಡಳು.

**ಇಂದುಮತಿ:** (ಹೌಹಾರಿ) ಏನೆಂದಿರಿ? ತೀರಿಕೊಂಡಳೇ? ದೇವರೇ ಇದೇನು ಮಾಡಿದೆ? ಅವಳ ಬದಲಿಗೆ ನಾನಾದರೂ ಸಾಯಬಾರದಿತ್ತೇ? ಇದರಿಂದ ಎಲ್ಲರ ಸಮಸ್ಯೆಗಳೂ ತೀರಿ ಹೋಗುತ್ತಿದ್ದವು.

**ದೇವಸೇನ :** ನೀನಿಲ್ಲಿ ಅವಳು ಸತ್ತಳೆಂದು ಅಳುತ್ತಿರು. ಅಲ್ಲಿ ಅವಳ ಸಾವಿಗೆ ನೀನೇ ಕಾರಣಳೆಂದು ಪುಕಾರು ಎಬ್ಬಿಸಿದ್ದಾರೆ. ನಿನ್ನ ಬಗ್ಗೆ ಜನ ಹುಚ್ಚರಾಗಿದ್ದಾರೆ. ರಕ್ತಪಿಶಾಚಿಗಳಾಗಿದ್ದಾರೆ!

**ಇಂದುಮತಿ:** (ಗಾಬರಿ ಮತ್ತು ವ್ಯಥೆಯಿಂದ) ನಾನು ಅವಳ ಸಾವಿಗೆ ಕಾರಣವೇ?

ಕನಸು ಮನಸಿನಲ್ಲಿಯೂ ಅವಳ ಕೇಡನ್ನು ಬಯಸಿದವಳಲ್ಲ. ಅವಳ ಮೇಲಿನ ಹುರುಡಿಗಾಗಿಯೂ ನಿಮ್ಮನ್ನು ಪ್ರೀತಿಸಲಿಲ್ಲ. ನಿಮ್ಮ ಸಂಸಾರವನ್ನು ಮುರಿವ ಆಸೆಯೂ ನನಗಿರಲಿಲ್ಲ. ನಿಮ್ಮ ಬಗ್ಗೆ ಸಹಾನುಭೂತಿ, ಮರುಕತೋರಲೆಂದು ನಿಮಗೆ ಹತ್ತಿರ ಬಂದೆ. ಆದರೆ..... ಆದರೆ..... ನಮ್ಮ ಸ್ವಭಾವಗಳಿಂದಲೇ ನಾವು ಹತ್ತಿರವಾದೆವು.... ಇದೆಂಥ ಅನ್ಯಾಯಮಾಡಿದೆ ದೇವರೇ!

**ದೇವಸೇನ :** ಇಂದೂ ನೀನೆಷ್ಟೇ ಪಶ್ಚಾತ್ತಾಪ ಪಟ್ಟರೂ ಪರಿತಪಿಸಿದರೂ ಏನೂ ಪ್ರಯೋಜನವಾಗುವುದಿಲ್ಲ..... ಈಗ ನನ್ನ ಭಯ ನಿನ್ನನ್ನು, ನಮ್ಮ ಮಕ್ಕಳನ್ನು ಕುರಿತು! ಚಂಡಾಲರು, ದ್ರೋಹಿಗಳು ಸೇಡಿಗಾಗಿ ರಕ್ತದಾಹಕ್ಕಾಗಿ ಹೊಂಚಿ ಕಾಯುತ್ತಿದ್ದಾರೆ. ನೀನಿಲ್ಲಿರುವುದು ತಿಳಿದಿದೆಯೋ ಇಲ್ಲವೋ ನನಗೆ ಗೊತ್ತಿಲ್ಲ..... ತುರ್ತುರಾಜಕಾರ್ಯದ ಮೇಲೆ ನಾನು ಹೊರ ರಾಜ್ಯಕ್ಕೆ ಹೋಗಲೇ ಬೇಕಾಗಿದೆ. ನಾನಿಲ್ಲದ ವೇಳೆಯಲ್ಲಿ ಯಾರಿಗೂ ಪ್ರವೇಶ ನೀಡಬಾರದೆಂದು ಪರಿವಾರದವರಿಗೆ ಹೇಳಿ ಹೋಗುತ್ತೇನೆ.... ನೀನು ಮಾತ್ರ ಬಹಳ ಎಚ್ಚರಿಕೆಯಿಂದಿರು.

**ಇಂದುಮತಿ:** ಹೋಗಲೇ ಬೇಕೆ?.... ನನಗೇಕೋ ಇಂದು ಎಂದೂ ಇಲ್ಲದ ರೀತಿಯಲ್ಲಿ ಭಯವಾಗುತ್ತಿದೆ. ಕೆಟ್ಟ ಕೆಟ್ಟ ಕನಸುಗಳಿಂದ ತಲ್ಲಣಿಸಿ ಹೋಗಿದ್ದೀನಿ. ಈ ಒಂದು ದಿನವಾದರೂ ಉಳಿದು ಬಿಡಿ. ಇಂದೇಕೊ ನಿಮ್ಮನ್ನು ಕಳಿಸಿಕೊಡಲು ಮನಸಾಗುತ್ತಿಲ್ಲ.

**ದೇವಸೇನ :** ಇಂದೂ ಇಲ್ಲದ ಶಂಕೆಗಳನ್ನರಿಸಿಕೊಂಡು ಗಾಭರಿಬೇಡ (ಪ್ರೀತಿಯಿಂದ) ನನ್ನ ಇಂದುವಿಗೆ ಏನೂ ಆಗುವುದಿಲ್ಲ. ದೇವರ ರಕ್ಷೆಯಿದೆ; ನನ್ನ ಪ್ರೀತಿಯ ರಕ್ಷೆಯಿದೆ. ಆದಷ್ಟು ಬೇಗನೆ ಬಂದು ಬಿಡುತ್ತೇನೆ. ಸ್ವಲ್ಪ ಧೈರ್ಯದಿಂದಿರು.... ಇಷ್ಟೂ ಕಾಲ ನೀನು ಅನುಭವಿಸಿದ ಕಷ್ಟಗಳಿಗೆ ಕೊನೆ ಕಾಣಿಸುವ ಸಮಯ ಬಂದಿದೆ. ನಿನ್ನ ಮೇಲಿನ ಆರೋಪಗಳೆಲ್ಲವೂ ಸುಳ್ಳು ಎಂದು ಸಾಬೀತು ಮಾಡಿ ನನ್ನ 'ಇಂದೂ' ದೇವತೆಯೆಂಬುದನ್ನು ಜಗತ್ತಿಗೆ ತೋರಿಸುತ್ತೇನೆ...... ನೀನು ಮಾತ್ರ ಧೈರ್ಯದಿಂದಿರು... ಬರಲೇ ನನ್ನ ಮುದ್ದಿನ ಗಿಳಿಯೇ (ಎಂದು ಗಲ್ಲಕ್ಕೆ ಮುತ್ತಿಟ್ಟು, ಮಕ್ಕಳಿಗೂ ಮುತ್ತುಗಳನ್ನು ಒತ್ತಿ ಹೊರಡುತ್ತಾನೆ).

**ದಾಸಿ :** ಅಮ್ಮ ಮಕ್ಕಳನ್ನು ಕರೆದುಕೊಂಡು ಹೋಗಲೇ?

**ಇಂದು :** ಬೇಡ. ಇನ್ನೂ ಸ್ವಲ್ಪ ಹೊತ್ತು ನನ್ನ ಬಳಿಯೇ ಇರಲಿ. ಯಾಕೋ ಇವರನ್ನೂ ನನ್ನಿಂದ ಬೇರೆ ಮಾಡಲು ಮನಸ್ಸಾಗುತ್ತಿಲ್ಲ.... ಬನ್ನಿ

ಮಕ್ಕಳೇ ನನ್ನನ್ನು ಬಿಗಿಯಾಗಿ ಅಪ್ಪಿಕೊಳ್ಳಿ..... (ಅಳುತ್ತಾ) ಮಕ್ಕಳೇ ನೀವೆಂತಹ ಅಭಾಗ್ಯರು. ಅರಸು ಮಕ್ಕಳಾಗಿಯೂ ಅನಾಥರಂತೆ ಕಾಣದ ಜಾಗದಲ್ಲಿ, ನಿರ್ಜನ ಪ್ರದೇಶದಲ್ಲಿ ಬಹಿಷ್ಕಾರಕ್ಕೆ ಒಳಗಾದ ಅಪರಾಧಿಗಳಂತೆ ಬಾಳಬೇಕಾಗಿ ಬಂದಿದೆ. ನನ್ನನ್ನು ಕ್ಷಮಿಸಿ ಮಕ್ಕಳೇ. ನಿಮಗೆ ಯಾವ ಸುಖವನ್ನೂ ಕೊಡದಾದೆ. ನಿಮಗೊಂದು ಹೆಸರು, ಗುರುತುಗಳನ್ನು ಕಲ್ಪಿಸಿಕೊಡಲೂ ಸಾಧ್ಯವಾಗಲಿಲ್ಲ... ಇನ್ನೆಷ್ಟು ದಿನವೋ ಈ ಅಜ್ಞಾತವಾಸದ ಬವಣೆ!!

(ಅಷ್ಟರಲ್ಲಿ ಕುದುರೆಗಳ ಖುರಪುಟ ಧ್ವನಿ ಕ್ಷೀಣವಾಗಿ ಕೇಳಿಸುತ್ತಾ ಹತ್ತಿರ ಹತ್ತಿರವಾಗುತ್ತಿದ್ದಂತೆ ಧ್ವನಿ ದೊಡ್ಡದಾಗುತ್ತದೆ)

**ಇಂದುಮತಿ:** (ಧ್ವನಿಗಳನ್ನು ಕೇಳಿಸಿಕೊಳ್ಳುತ್ತಾ) ಅರೆ ಇದೇನಿದು? ಈ ನಿರ್ಜನ ಪ್ರದೇಶದಲ್ಲಿ ಕುದುರೆಗಳ ಖುರಪುಟಧ್ವನಿ!!... ಯುವರಾಜರು ಈಗ ತಾನೇ ಹೋದವರು ಮರಳಿ ಬಂದಿರಲು ಸಾಧ್ಯವಿಲ್ಲ. ಅಲ್ಲದೆ..... ಒಂದಲ್ಲ..... ಎರಡು ಮೂರು ಕುದುರೆಗಳ ಸದ್ದು!! ಯಾರಿರಬಹುದು?.... ಅಯ್ಯೋ..... ಯಾರೋ ಕೊಲೆಗಡುಕರು..... ಝಳಪಿಸುವ ಆ ಬಿಚ್ಚುಕತ್ತಿಗಳನ್ನು ನೋಡಿದರೆ ಭಯವಾಗುತ್ತದೆ. ಚಿತ್ರಾ, ಡಂಭಕ ಎಲ್ಲಿದ್ದೀರಿ, ಬನ್ನಿರೆಲ್ಲ...... ಬೇಗನೆ ಬಾಗಿಲುಗಳನ್ನು ಭದ್ರಪಡಿಸಿ......... (ಎಂದು ಹೇಳುತ್ತಿರುವಷ್ಟರಲ್ಲಿಯೇ ಕೊಲೆಗಡುಕರು ಒಳನುಗ್ಗುತ್ತಾರೆ ಇಂದುಮತಿಯನ್ನು ಮತ್ತು ಮಕ್ಕಳನ್ನು ಹಿಡಿದುಕೊಳ್ಳುತ್ತಾರೆ)........ . ಅಯ್ಯೋ........ ಅಯ್ಯೋ ಬಿಟ್ಟು ಬಿಡಿ ನಮ್ಮನ್ನು. ನೀವು ಯಾರು? ನಿಮಗೇನಾಗಬೇಕು? (ಎಂದು ಚೀರುತ್ತಾಳೆ)

**ಒಬ್ಬ** : ಏನಾಗಬೇಕೇನು? ನೀನು ಸಾಯಬೇಕು. ರಾಜದ್ರೋಹಿ, ಘಾತುಕಿ, ರಾಜವಂಶವನ್ನೇ ಹಾಳುಮಾಡಲು ಬಂದಿರುವೆಯಾ ರಾಣಿಯಾಗುವ ಆಸೆಯೇನು?

**ಇಂದುಮತಿ:** ನಾನು ನಿರಪರಾಧಿ. ನನಗೆ ಯಾವ ಆಸೆಯೂ ಇಲ್ಲ. ನಮ್ಮ ಪಾಡಿಗೆ ನಮ್ಮನ್ನು ಬಿಟ್ಟು ಬಿಡಿ. ದೂರವೆಲ್ಲಾದರೂ ಹೊರಟುಹೋಗುತ್ತೇವೆ.

**ಇನ್ನೊಬ್ಬ** : ನೀನೆಷ್ಟೇ ಅತ್ತರೂ, ಬೇಡಿದರೂ ನಿನ್ನನ್ನು ಬಿಡುವುದಿಲ್ಲ. ನೀನು ಕೊಲೆಪಾತಕಿ ಪ್ರಾಣಕ್ಕೆ ಪ್ರಾಣವನ್ನು ಕೊಳ್ಳದೆ ಬಿಡುವುದಿಲ್ಲ.

**ಇಂದುಮತಿ:** ಬೇಡ ಅಣ್ಣಂದಿರೇ, ನನಗೆ ಪ್ರಾಣ ಭಿಕ್ಷೆ ನೀಡಿ ನಿಮಗೆ ನಾನೇನು ಅನ್ಯಾಯ ಮಾಡಿದ್ದೇನೆ.

**ಮೊದಲನೆಯವ:** ನೀನು ಮಾಡಿರುವ ಅನ್ಯಾಯ ಏನೆಂದು ಅರಸರನ್ನು ಕೇಳು.

**ಇಂದುಮತಿ:** (ಆಶ್ಚರ್ಯದಿಂದ) ಏನು ಅರಸರೂ ನಿಮ್ಮೊಂದಿಗೆ ಇದ್ದಾರೆಯೇ?

**ಅಮರಸೇನ:** ನಂಬಿಕೆಯಾಗುತ್ತಿಲ್ಲವೇನು? ಹಾಗಾದರೆ ನೋಡು (ವೇಷ ಕಳಚುತ್ತಾನೆ).

**ಇಂದು :** ಪ್ರಭು ನನಗೇಕೆ ಈ ಶಿಕ್ಷೆ? ಈ ಮುದ್ದು ಮಕ್ಕಳನ್ನು ನೋಡಿಯೂ ನಿಮ್ಮ ಮನಸ್ಸು ಕರಗುವುದಿಲ್ಲವೇ? ಏನೂ ಅರಿಯದ ಈ ಪಾಪದ ಮಕ್ಕಳ ಮೇಲೆ ದೌರ್ಜನ್ಯವೇ?

**ಅಮರಸೇನ:** ದೌರ್ಜನ್ಯ ಮಾಡದೆ ಗತ್ಯಂತರವಿಲ್ಲ. ಸುಖವಾಗಿದ್ದ ಸಂಸಾರವನ್ನು ಒಡೆದೆ. ಸಿಂಹಾಸನದ ಆಸೆಗಾಗಿ ಸೋದರಿಯನ್ನೇ ಕೊಲೆಮಾಡಿದೆ. ಆತ್ಮಹತ್ಯೆ ಎನ್ನುವಂತೆ ಸುದ್ದಿ ಸೃಷ್ಟಿಸಿದೆ. ಉಳಿದ ಅವಳ ಕರುಳಕುಡಿ, ಈ ರಾಜ್ಯದ ಉತ್ತರಾಧಿಕಾರಿಯ ಹಿತದ ದೃಷ್ಟಿಯಿಂದ ನಿಮ್ಮೆಲ್ಲರನ್ನೂ ಸಾಯಿಸದೆ ವಿಧಿಯಿಲ್ಲ.

**ಇಂದುಮತಿ:** ಬೇಡ ಬೇಡ ನಾನು ಈ ರಾಜ್ಯ ಬಿಟ್ಟೇ ಎಲ್ಲಿಗಾದರೂ ಹೊರಟುಹೋಗುತ್ತೇನೆ. ನಾನಾರಿಗೂ ಕೇಡು ಬಗೆದಿಲ್ಲ. ನನಗೆ ಸಿಂಹಾಸನದ ಆಕಾಂಕ್ಷೆಯೂ ಇಲ್ಲ. ಈ ಮಕ್ಕಳನ್ನು ನಿಮ್ಮ ಪಾದಗಳ ಮೇಲೆ ಕೆಡವುತ್ತೇನೆ. ಇವರನ್ನು ರಕ್ಷಿಸಿ. ನನ್ನ ಪ್ರಾಣವನ್ನು ಬೇಕಾದರೆ ತೆಗೆಯಿರಿ.

**ಅಮರಸೇನ:** ಈ ಮಕ್ಕಳಿಗೆ ಪ್ರಾಣದಾನವೇ? ಇವು ಹಾವಿನ ಮರಿಗಳು, ಸೇಡಿನ ದ್ರೋಹದ ಮೊಟ್ಟೆಗಳು. ಇವರು ಉಳಿದರೆ ಮರಿ ರಾಜಕುಮಾರನಿಗೆ ಅಪಾಯ ತಪ್ಪಿದ್ದಲ್ಲ. ನಿನಗಿಂತ ಮೊದಲು ಇವರನ್ನು ಕೊಲ್ಲಬೇಕು. (ಕೊಲ್ಲಲು ಮುಂದಾಗುತ್ತಾನೆ)

**ಇಂದುಮತಿ:** ಓ ಅದೃಶ್ಯದೇವತೆಗಳೇ, ಚರಾಚರ ಸತ್ವಗಳೇ ನೀವಾದರೂ ಈ ಅಸಹಾಯಕ ಹೆಣ್ಣಿನ ಸಹಾಯಕ್ಕೆ ಬರಬಾರದೇ (ಚೀತ್ಕಾರ)

**ಅಮರಸೇನ:** (ಸ್ವಲ್ಪ ಕರಗಿ) ಹಾಳಾಗಿ ಹೋಗಿ ಎಲ್ಲಿಯಾದರೂ ಬದುಕು. ಆದರೆ ಮತ್ತೊಮ್ಮೆ ನನ್ನ ಮಗನನ್ನು ನಿನ್ನ ಮೋಹಪಾಶದಿಂದ ಸೆಳೆದುಕೊಂಡೆಯೋ ಸುಮ್ಮನಿರುವವನಲ್ಲ. ನನ್ನ ಮಗನು ಹಿಂತಿರುಗಿ ಬರುವುದರೊಳಗೆ ಈ ಜಾಗ ಬಿಟ್ಟು ಹೊರಟುಹೋಗು. ಈ ಮಕ್ಕಳನ್ನೆಲ್ಲಾದರೂ ಬಾವಿಗೆ ತಳ್ಳು (ರಭಸದಿಂದ ಹಿಂತಿರುಗಿ ಕುದುರೆಯೇರಿ ಹೊರಟು ಹೋಗುತ್ತಾನೆ)

**ಗಜಪತಿ :** ನೋಡಿದಿರಾ ಗೆಳೆಯರೇ, ಅಮರಸೇನರು ಹೇಗೆ ಜಾರಿಕೊಂಡುಬಿಟ್ಟರು ಅವರು ಮುಗಿಸದೆ ಹೋದ ಕೆಲಸವನ್ನು ನಾವು ಮುಗಿಸಿ ಬಿಡೋಣ. ನೇರವಾಗಿ ಕುಮಾರರನ್ನು ಕೊಲ್ಲುವುದು ಬೇಕಿಲ್ಲ. ಯುವರಾಜರ ಪ್ರಾಣವಾಗಿರುವ ಈಕೆಯನ್ನು ಕೊಂದರೆ ಸಾಕು. ಅವರನ್ನೇ ಕೊಂದಂತೆ!

**ನಾಗದೇವ :** ಹೌದು ಗೆಳೆಯಾ ನೀ ಹೇಳುವುದೂ ಸರಿಯೆ. ನಾವು ಕೊಲ್ಲಲೇ ಬೇಕು. ಮಹಾರಾಜರೇ ಈ ಕೊಲೆಗೆ ಸಮ್ಮತಿಸಿದ್ದಾರೆ. ನಮ್ಮ ಮೇಲೆ

ಆಪಾದನೆಯೂ ಬರಲಾರದು. ಹಾಗೇನಾದರೂ ಬಂದರೆ ಅವರೇ ನಮ್ಮನ್ನು ರಕ್ಷಿಸುತ್ತಾರೆ.

**ಬೋಪದೇವ:** ಅಂತೂ ನಾವು ನಡೆಸಿದ ಕಾರಸ್ಥಾನ ನಮ್ಮ ನಿರೀಕ್ಷೆಯಂತೆಯೇ ಸಫಲವಾಗುತ್ತಿದೆ!

**ಗಜಪತಿ :** (ಇಂದೂ ತಪ್ಪಿಸಿಕೊಳ್ಳಲು ಪ್ರಯತ್ನಿಸುತ್ತಿರುವುದನ್ನು ನೋಡಿ) ನಾಗದೇವ, ಅಗೋ ತಪ್ಪಿಸಿಕೊಂಡು ಓಡಲು ಯತ್ನಿಸುತ್ತಿದ್ದಾಳೆ. ಅವಳನ್ನು ಹಿಡಿದುಕೋ ಆ ಕೂಸುಗಳನ್ನು ಇತ್ತ ಎಳೆದು ತಾ. (ನಾಗದೇವ ಮೂವರನ್ನೂ ಎಳೆದು ತರುತ್ತಾನೆ. ಬೋಪದೇವ ನಿರ್ದಾಕ್ಷಿಣ್ಯವಾಗಿ ಅವಳನ್ನು ಕೆಡವಿ ಅವಳೆದೆಗೆ ಚೂರಿ ಇರಿಯುತ್ತಾನೆ. ಅಳುತ್ತಿರುವ ಮಕ್ಕಳನ್ನು ದಾಸಿಯರ ಕಡೆಗೆ ದೂಡಿ, ಬಾಗಿಲಿನತ್ತ ನಡೆಯುತ್ತಾನೆ. ಉಳಿದವರೂ ಅವನನ್ನು ಹಿಂಬಾಲಿಸಿ ನಡೆಯುತ್ತಾರೆ.)

**ಇಂದುಮತಿ:** ಮಕ್ಕಳೇ.... ನನ್ನ ಮುದ್ದುಮಕ್ಕಳೇ..... ಬನ್ನಿ ಒಮ್ಮೆ ನನ್ನನ್ನು ಅಪ್ಪಿಕೊಳ್ಳಿ. ಚಿತ್ರಾ ಬಾ ನನ್ನ ಬಳಿಗೆ. ನನ್ನ ಪ್ರಾಣದೇವರು, ಯುವರಾಜರು ಬಂದರೆ ನನ್ನ ಕೊನೆಯ ಪ್ರೀತಿಯ ಮುತ್ತುಗಳನ್ನು ತಲುಪಿಸು. ಸಾಯುವಾಗ ಅವರನ್ನು ಅರಿಯಾಗಿ ನೆನೆಸಿಕೊಂಡೆನೆಂದು ಹೇಳು.... ನೀವಿಲ್ಲಿಂದ ತಪ್ಪಿಸಿಕೊಳ್ಳಿ ಹೋಗಿ. (ಮುಲುಗುತ್ತಾ ಸಾಯುತ್ತಾಳೆ)

೦೦

## ದೃಶ್ಯ - ೧೧

**ಭಾಗವತ :** ದ್ರೋಹಿ ಕಟುಕರು
ಇಂದು ಮತಿಯನು ಕೊಂದರು.
ಅರಸನೆಡೆಗೆ ಐದು ನುಡಿದರು
ಹೃದಯಾಘಾತದಿ ಸತ್ತಳೆಂದರು.

ಮರಳಿ ಬಂದನು ರಾಜಕುವರ
ವನದಿ ನೆಲೆಸಿದ ನಲ್ಲೆಯಲ್ಲಿಗೆ
ಹೋಗಲೆಳೆಸಲು ಅರಿತನು
ಘೋರಸಾವಿನ ದವಡೆಗಿಳಿದ
ಪ್ರೇಯಸಿಯ ನೆನೆನೆನೆದು
ಹುಚ್ಚನಾದನು ದ್ರೋಹ
ಗೂಢದ ನೆಲೆಯನರಿತನು

ಎಂಥ ದುರದೃಷ್ಟ! ಕುಮಾರರ ಕಷ್ಟಗಳಿಗೆ ಕೊನೆಯೇ ಇಲ್ಲವೇ? ಎಂಥ ನಿರ್ಮಲ ಪ್ರೀತಿ! ವಿಶುದ್ಧಮನಸ್ಸಿನ ಈ ಪ್ರಣಯ ಪಕ್ಷಿಗಳನ್ನೇಕೆ ವಿಧಿ ಹೀಗೆ ಬೇಟೆಯಾಡುತ್ತಿದೆ. ಅಮರಸೇನ ಪ್ರಭುಗಳೇ ಇಂಥ ಭಯಂಕರ ಕೃತ್ಯಕ್ಕೆ ಮನತೆತ್ತರೆಂದರೆ, ಸಾಮಾನ್ಯ ಪ್ರಜೆಗಳಿಗೆ ರಕ್ಷಣೆಯೆಲ್ಲಿ?

**ದೇವಸೇನ :** (ಪ್ರವೇಶ)

**ಭಾಗವತ :** ಇದೋ ಕುಮಾರರು ಬಂದರು. ಎಷ್ಟು ಉದ್ವಿಗ್ನರಾಗಿದ್ದಾರೆ! ಪಾಪ! ಚಳಿಗಾಳಿ ಮಳೆಗಳಿಗೂ ಲೆಕ್ಕಿಸದೆ ಬುದ್ಧಿ ಭ್ರಮಣೆಗೊಂಡು ಹೇಗೆ ಅಲೆಯುತ್ತಿದ್ದಾರೆ.

**ದೇವಸೇನ :** ಅಣ್ಣಾ! ನನ್ನ ಇಂದುವನ್ನು ಪಾಪಿಗಳು ಕೊಂದುಬಿಟ್ಟರು. ಅವರನ್ನು ಜೀವಸಹಿತ ಬಿಡಲಿಲ್ಲ. ಇಂದುವಿಲ್ಲದೆ ಒಂದು ಕ್ಷಣ ಬದುಕಲಾರೆ. ಇಂದುವನ್ನು ಕೊಂದರು! (ಅಳು)

**ಭಾಗವತ :** ಕುಮಾರ ದುಃಖವೆಂಬುದು ಯಾರಿಗೂ ತಪ್ಪಿದ್ದಲ್ಲ. ನೀವಿಷ್ಟು ಉದ್ವಿಗ್ನರಾಗಬಾರದು. ಮುಂದೆ ಈ ರಾಜ್ಯವನ್ನಾಳಬೇಕಾದವರು ನೀವು. ಕ್ಷೋಭೆಗೊಂಡ ಮನಸ್ಸಿಗೆ ನೆಮ್ಮದಿ ತಂದುಕೊಳ್ಳಿ. ವಿಧಿಯಾಟವನ್ನು ಮೀರುವವರಾರು? ಅಲ್ಲದೆ ಹೃದಯಾಘಾತದಿಂದ ಸಾವನಪ್ಪಿದಳೆಂದು ವದಂತಿಯಿದೆ.

**ದೇವಸೇನ :** (ರೋಷದಿಂದ) ಸುಳ್ಳು! ಸುಳ್ಳು! ದ್ರೋಹಿಗಳೆಲ್ಲರೂ ಸೇರಿ ಅಸಹಾಯಕಳಾಗಿದ್ದ ನನ್ನ ಇಂದುಮತಿಯನ್ನು ಪಾಪಿಗಳು ನಿರ್ದಾಕ್ಷಿಣ್ಯವಾಗಿ ಕೊಂದರು. ಅಂಗಲಾಚಿ ಬೇಡಿಕೊಂಡರೂ ದಯೆ ದಾಕ್ಷಿಣ್ಯಗಳಿಲ್ಲದಂತೆ ಕೊಂದ ಕ್ರೂರಿಗಳನ್ನು ಸುಮ್ಮನೆ ಬಿಡುವುದಿಲ್ಲ. ಅವರೆಲ್ಲರನ್ನು ಹುಡುಕಿ ತೆಗೆದು ಮರಣದಂಡನೆ ವಿಧಿಸುತ್ತೇನೆ. ರಕ್ತ ತರ್ಪಣ ನೀಡುತ್ತೇನೆ.

**ಅಮರಸೇನ:** (ಪ್ರವೇಶಿಸಿ) ಅಪ್ಪಾ ಭಾಗವತ, ನನ್ನ ಕುಮಾರನ ಸ್ಥಿತಿಯನ್ನು ನೋಡಿದೆಯಾ! ನೀನಾದರೂ ಬುದ್ಧಿಯನ್ನು ಹೇಳಬಾರದೇ?.... ಬಾ ಕುಮಾರ ನಿನ್ನ ಸ್ಥಿತಿಯಿಂದಾಗಿ ನಿನ್ನ ತಾಯಿ ದುಃಖಿಸಿ ದುಃಖಿಸಿ ಮಂಚ ಹಿಡಿದಿದ್ದಾಳೆ. ಅವಳನ್ನು ಸಂತೈಸು ಬಾ. ಇಂದುಮತಿಗೆ ಆದ ಅನ್ಯಾಯದಿಂದ ನನ್ನ ಮನಸ್ಸಿಗೂ ತುಂಬಾ ನೋವಾಗಿದೆ. ನಾನು ಅಂತಹ ದುರಂತವನ್ನು, ದಾರುಣತೆಯನ್ನು ನಿರೀಕ್ಷಿಸಿರಲಿಲ್ಲ.

**ದೇವಸೇನ :** (ಜಿಗುಪ್ಸೆಯಿಂದ) ಛಿ! ಛಿ! ನಿಮ್ಮ ಮಾತುಗಳನ್ನು ಕೇಳುವುದಕ್ಕೇ ಅಸಹ್ಯವೆನಿಸುತ್ತದೆ. ನೀವಾಡುವ ಒಂದೊಂದು ಅಕ್ಷರವೂ ಸುಳ್ಳೆಂಬುದು ನನಗೆ ಸ್ಪಷ್ಟವಾಗಿದೆ. ನಿಮ್ಮ ಸಹಾನುಭೂತಿ, ಸಂತಾಪಗಳೆಲ್ಲವೂ ಕೇವಲ ನಟನೆ! ನಿಮ್ಮ ಕೈವಾಡವಿಲ್ಲದೆ. ನಿಮ್ಮ ಬಲ, ಬೆಂಬಲವಿಲ್ಲದೆ ನನ್ನ ಇಂದುವನ್ನು ಹೀಗೆ ಕೊಲ್ಲುವುದು ಸಾಧ್ಯವೇ ಇಲ್ಲ. ಇದಕ್ಕೆಲ್ಲಾ ನೀವೇ ಹೊಣೆ. ಅವಳ ಸಾವಿನ ಪಾಪ ನಿಮಗೆ ಶಾಪವಾಗಿ ಕಾಡುತ್ತದೆ. ನನ್ನ ಪಾಲಿಗೆ ನೀವು ತಂದೆಯಲ್ಲ! ಇಂತಹ ಧೂರ್ತ ತಂದೆಗೆ ಮಗನೆನಿಸಿಕೊಳ್ಳುವುದಕ್ಕೆ ನಾಚಿಕೆಯೆನಿಸುತ್ತದೆ..... ಅಪ್ಪ! ನಿಮ್ಮನ್ನು ಸುಮ್ಮನೆ ಬಿಡುವುದಿಲ್ಲ. ನನ್ನ ಸೇಡಿನ ರೂಪ ನೀವು ಅನುಭವಿಸಿದಾಗ ನಿಮಗೇ ತಿಳಿಯುತ್ತದೆ.

**ಅಮರಸೇನ:** ಇಂತಹ ಸೇಡುಗಳಿಂದ ಪ್ರಯೋಜನವಿಲ್ಲ. ಆದದ್ದಾಯಿತು. ಆ ದ್ರೋಹಿಗಳನ್ನು ಬಿಟ್ಟು ಬಿಡು. ಅವರ ಬಗ್ಗೆ ತಲೆಕೆಡಿಸಿಕೊಳ್ಳಬೇಡ! ಕೈಗೆ ಸಿಕ್ಕಿದರೆ ನಾನೇ ಅವರನ್ನು ವಿಚಾರಿಸಿಕೊಳ್ಳುತ್ತೇನೆ.

**ದೇವಸೇನ :** ಇನ್ನೂ ನಿಮ್ಮ ನಯವಂಚನೆಯ ಮಾತುಗಳನ್ನು ನಂಬುವಷ್ಟು ಅಪ್ರಬುದ್ಧನಲ್ಲ; ಮೂರ್ಖನಲ್ಲ. ಇನ್ನು ನಿಮ್ಮ ದಾರಿಗೆ ನೀವು ಹೋಗಿ.

**ಅಮರಸೇನ:** ಕುವಾರ ಇಷ್ಟೊಂದು ನಿಷ್ಠುರನಾಗಬೇಡ. ನಿನ್ನ ತಾಯಿಯನ್ನು ಸಮಾಧಾನಪಡಿಸು ಬಾ. ಈ ತಂದೆಯ ಬಗ್ಗೆ ನೀನೆಷ್ಟೇ ಆಗ್ರಹ ತೋರಿದರೂ ನಾನು ತಪ್ಪು ತಿಳಿಯುವುದಿಲ್ಲ. ನಿನ್ನ ಸ್ಥಿತಿಯಲ್ಲಿ ನಾನಾದರೂ ಹೀಗೆಯೇ ವಿವೇಕ ತಪ್ಪಿ ಮಾತನಾಡುತ್ತಿದ್ದೆ. ನನ್ನನ್ನು ಮರೆತು ಬಿಡು. ನಿನ್ನ ತಾಯಿಯನ್ನು ಉಳಿಸಿಕೊಡು ಬಾ.

**ಭಾಗವತ :** ಕುಮಾರ ತಂದೆಯ ಮಾತನ್ನು ಕೇಳು. ರಾಜ್ಯದ ಕಡೆ ಗಮನಕೊಡು ಪ್ರಪಂಚದಲ್ಲಿ ತಾಯಿ ಎನ್ನುವ ವಸ್ತು ಅಮೂಲ್ಯವಾದ್ದು; ಅಪರೂಪವಾದ್ದು. ಆಕೆಯನ್ನು ಉಳಿಸಿಕೊಳ್ಳಬೇಕಾದ್ದು ನಿನ್ನ ಕರ್ತವ್ಯ. ಹೋಗು ಕುಮಾರ.

ತಂದೆ ಮಕ್ಕಳು ಜೊತೆಗೆ ಹೊರಟರು
ನಡೆವುದೇನೋ ಮುಂದೆ ಅರಿಯರು ॥

೦೦

# ದೃಶ್ಯ – ೧೨

(ಅರಮನೆ. ರಾಣಿ ಭುವನೇಶ್ವರಿಯ ಖಾಸಗಿ ಕೋಣೆ. ಪಲ್ಲಂಗದ ಮೇಲೆ ಅಸ್ವಸ್ಥಳಾಗಿ ಮಲಗಿದ್ದಾಳೆ. ಬಡಬಡಿಕೆ ಕನವರಿಕೆಗಳು ಅವಳ ಅನಾರೋಗ್ಯದ ತೀವ್ರತೆಯನ್ನು ಸೂಚಿಸುತ್ತದೆ.)

**ರಾಣಿ** : (ಬಡಬಡಿಸುತ್ತಾ) ಕುಮಾರ, ಕುಮಾರ, ಎಲ್ಲಿದ್ದೀ? ಬಾ ಕುಮಾರ. ಅಯ್ಯೋ ಅದೇಕೇ ಹಾಗೆ ಸಿಟ್ಟಿನಿಂದ ನೋಡುತ್ತಿದ್ದೀಯ? ನನ್ನನ್ನು ದ್ವೇಷಿಸಬೇಡ ಮಗು. ಅಮ್ಮಾ...... ಅಮ್ಮಾ...... (ಮುಲುಗುವಳು)

**ಕೇತಕಿ** : (ಸಮೀಪಿಸಿ) ಮಹಾರಾಣಿಯವರೇ ಸ್ವಲ್ಪ ಎದ್ದು ಈ ಔಷಧಿಯನ್ನು ಕುಡಿಯಿರಿ. ರಾಜವೈದ್ಯರು ಸಂಜೆ ಬಂದು ನೋಡುತ್ತಾರಂತೆ.

**ರಾಣಿ** : ಕೇತಕಿ, ನನಗೆ ಔಷಧಿ ಬೇಡ; ನನಗೆ ನನ್ನ ಮಗಬೇಕು. ಪಾಪ ಅವನೆಷ್ಟು ನೊಂದಿದ್ದಾನೆ. ಅವನನ್ನು ನಾನು ಕೂಡಲೇ ನೋಡಬೇಕು. ಎಂಥ ದ್ರೋಹಿಗಳು! ಅವನ ಸುಖವನ್ನೇ ಹಾಳು ಮಾಡಿದರು. ದೇವರು ಶಿಕ್ಷಿಸದೆ ಬಿಡಲಾರ.

**ಕೇತಕಿ** : ಅಮ್ಮ, ಪ್ರಭುಗಳೇ ಕರೆತರಲು ಹೋಗಿದ್ದಾರೆ. ಇಷ್ಟರಲ್ಲೇ ಬರಬಹುದು. ಪ್ರಭುಗಳು, ನೀವು ಔಷಧಿ ಕುಡಿಯದಿದ್ದರೆ ರೇಗಾಡುತ್ತಾರೆ.

**ರಾಣಿ** : ಪ್ರಭುಗಳು! ಪ್ರಭುಗಳು!....ಇಷ್ಟಕ್ಕೆಲ್ಲಾ ಈ ದುರಂತಗಳಿಗೆಲ್ಲ ಅವರೇ ಕಾರಣ. ಎಂದಾದರೂ ತಮ್ಮ ಮಕ್ಕಳ ಬಗ್ಗೆ ಯೋಚಿಸಿದ್ದಾರೆಯೇ? ಚದುರಂಗ, ಚೆಲುವೆಗಳ ಒಡನಾಟದಲ್ಲಿ ಸದಾ ರಾಜ್ಯದಾಹದ ಚಿಂತೆಯಲ್ಲಿ ಮೈ ಮರೆತವರು! ಅವರ ಬಗ್ಗೆ ಮಾತನಾಡಬೇಡ!

**ಕೇತಕಿ** : ಅದೆಲ್ಲ ಮರೆತುಬಿಡಿ ಅಮ್ಮ. ಸ್ವಲ್ಪ ದಿವಸ ಅಷ್ಟೆ! ಕ್ರಮೇಣ ಎಲ್ಲ ಸರಿಹೋಗುತ್ತದೆ.

**ರಾಣಿ** : ನನಗೇಕೋ ಭಯುವಾಗುತ್ತಿದೆ. ಬರುವ ದಿನಗಳು ಎಷ್ಟು ಭಯಂಕರವಾಗಬಹುದೋ!

**ಅಮರಸೇನ:** (ಪ್ರವೇಶಿಸಿ) ದೇವಿ.... ಹೇಗಿದ್ದೀ? ವೈದ್ಯರು ಹೇಳಿದಂತೆ ಔಷಧಿಯನ್ನು ತೆಗೆದುಕೊಳ್ಳುತ್ತಿದ್ದೀ ತಾನೇ?

**ರಾಣಿ** : ಸ್ವಾಮಿ ಔಷಧಿಯಿಂದ ಹೋಗುವ ಕಾಯಿಲೆಯಲ್ಲ. ನಮ್ಮ ಕುಮಾರನ ಚಿಂತೆಯಿಂದ ದಹಿಸಿಹೋಗುತ್ತಿದ್ದೇನೆ. ಅವನಾದರೂ ಹೇಗೆ ತಾನೇ ನೆಮ್ಮದಿಯಿಂದಿರಲು ಸಾಧ್ಯ. ಅವನನ್ನು ನೋಡಬೇಕು ಎಲ್ಲಿ? ಅವನು ಬಂದಿಲ್ಲವೇ?

**ಅಮರಸೇನ :** (ದೇವಸೇನನನನ್ನು ಉದ್ದೇಶಿಸಿ) ದೇವ ಕುಮಾರ ಅಲ್ಲೇ ಏಕೆ ನಿಂತೆ? ನಿನ್ನ ತಾಯಿ ನಿನಗಾಗಿ ಹಾತೊರೆಯುತ್ತಿದ್ದಾರೆ. ಬಾ ಕುಮಾರ.,

**ದೇವಸೇನ :** ಅಮ್ಮ ನನ್ನನ್ನು ಕ್ಷಮಿಸು. ನಿನ್ನ ಅನಾರೋಗ್ಯಕ್ಕೆ ನಾನೇ ಕಾರಣವೆಂದಾದರೆ, ನನ್ನಿಂದ ತಪ್ಪಾಯಿತು.

**ರಾಣಿ** : ಇಲ್ಲ ಕುಮಾರ, ನೀನು ತಾನೇ ಏನು ಮಾಡಬಲ್ಲೆ? ನಿನ್ನ ದುಃಖವೂ ಸಾಮಾನ್ಯವಾದುದಲ್ಲ. ದುಃಖದ ಆಳ ಏನೆಂದು ಬಲ್ಲೆ. ಆದರೆ.... ಆದರೆ..... ನನಗೆ ನೀನೊಂದು ಮಾತು ಕೊಡಬೇಕು.

**ದೇವಸೇನ :** (ವಿನಮ್ರನಾಗಿ) ಹೇಳಮ್ಮ. ಅದೇನೆಂದು ಹೇಳು ಮಾತುಕೊಡುವ ಮೊದಲು ಕೊಡುವ ಸಾಮರ್ಥ್ಯ ನನಗಿದೆಯೋ ಇಲ್ಲವೋ ತಿಳಿಯಬೇಡವೇ?

**ರಾಣಿ:** ನೋಡು, ಆದದ್ದು ಆಗಿ ಹೋಯಿತು. ಅದನ್ನೇ ಮನಸ್ಸಿನಲ್ಲಿರಿಸಿಕೊಂಡು ಪ್ರತೀಕಾರಕ್ಕೆ ಯೋಚಿಸಬೇಡ. ಪ್ರತೀಕಾರದಿಂದ ಯಾರಿಗೂ ಲಾಭವಿಲ್ಲ. ಆ ಧೂರ್ತರೂ ದ್ರೋಹಿಗಳು ಮಾಡಿದ ಕೃತ್ಯಕ್ಕೆ ದೇವರೇ ಶಿಕ್ಷಿಸುತ್ತಾನೆ.... ಒಂದೆರಡು ದಿನಗಳ ಮಟ್ಟಿಗೆ ನಿನ್ನ ಚಿಕ್ಕಮ್ಮ ತಾರಿಣಿಯ ಮನೆಗೆ ಹೋಗು. ಮನಸ್ಸಿಗೆ ಶಾಂತಿ ದೊರೆಯುತ್ತದೆ. ನನಗೂ ನನ್ನ ವಿಚಾರದಲ್ಲಿ ನಿಶ್ಚಿಂತೆಯಿಂದ ಇರಲು ಸಾಧ್ಯವಾಗುತ್ತದೆ.

**ಅಮರಸೇನ:** ಕುಮಾರ, ತಾಯಿ ಹೇಳಿದ್ದನ್ನು ಕೇಳು. ಕೊಲೆಗಡುಕರನ್ನು ಕ್ಷಮಿಸಿಬಿಡು.

**ದೇವಸೇನ :** ಈ ದೇಶದ ಪ್ರಭುಗಳು ನೀವು. ಕೊಲೆಗಡುಕರ ಕ್ಷಮೆ ಕೇಳುತ್ತಿದ್ದೀರಾ? ಹಾಗಾದರೆ ನ್ಯಾಯ ಪೀಠ ನ್ಯಾಯಾಧೀಶ ವಿಚಾರಣೆ ಇವೆಲ್ಲ ಯಾಕೆ? ನಿಮ್ಮ ಸ್ವಂತ ಮಗನ ಪ್ರಾಣವಾಗಿದ್ದವಳನ್ನು ದಾರುಣವಾಗಿ ಕೊಂದವರನ್ನು ಇಷ್ಟು ಸುಲಭವಾಗಿ ಕ್ಷಮಿಸ ಬಿಡೆಂದು ಹೇಳುವಿರಲ್ಲ. ಹಾಗಾದರೆ ಪ್ರಜೆಗಳಿಗೇ ಇಂತಹ ಸಮಸ್ಯೆ ಎದುರಾದರೆ ಅಪರಾಧಿಗಳನ್ನೆಲ್ಲಾ ವಿಚಾರಣೆಯಿಲ್ಲದೆಯೇ ಬಿಟ್ಟು ಬಿಡುವಿರೇನು?

**ಅಮರಸೇನ:** ಮಗು ತರ್ಕ, ವಾದಗಳಿಗೆ ಇದು ಸಮಯವಲ್ಲ ನಿನ್ನ ತಾಯಿಯ ಮನಃಶ್ಯಾಂತಿ ಆರೋಗ್ಯಗಳನ್ನು ದೃಷ್ಟಿಯಲ್ಲಿಟ್ಟುಕೊಂಡಾದರೂ ಎಲ್ಲವನ್ನೂ ಮರೆತು ಕ್ಷಮಿಸಬಾರದೇ?....... ನನಗೂ ವಯಸ್ಸಾಗುತ್ತಿದೆ. ಈ ರಾಜ್ಯಭಾರದ ಹೊಣೆ ನಿರ್ವಹಿಸುವಲ್ಲಿ ಆಸಕ್ತಿಯನ್ನು ತೋರು. ರಾಜಕಾರ್ಯಗಳಲ್ಲಿ ತೊಡಗಿಸಿಕೊಂಡರೆ ಸ್ವಲ್ಪವಾದರೂ ಮನಸ್ಸಿಗೆ ಶಾಂತಿ ದೊರೆಯುತ್ತದೆ, ಮತ್ತು ನಡೆದ ವಿಸಂಗತಿಗಳನ್ನು ಮರೆಯಬಹುದು.

**ದೇವಸೇನ :** ಆಗಲಿ ಅಪ್ಪ. ನೀವಿಬ್ಬರೂ ಇಷ್ಟೆಲ್ಲಾ ಹೇಳುತ್ತಿರುವುದರಿಂದ, ಯೋಚಿಸಿ, ಪ್ರಯತ್ನಿಸುತ್ತೇನೆ.

**ರಾಣಿ :** ಯೋಚಿಸುತ್ತೇನೆ; ಪ್ರಯತ್ನಿಸುತ್ತೇನೆ ಎನ್ನಬೇಡ ಕುಮಾರ. ಈ ಮುದಿ ತಂದೆ ತಾಯಿಗಳ ವಿಚಾರದಲ್ಲಿ ಕರುಣೆ ತೋರು. ನಿನ್ನಿಂದ ಏನನ್ನೂ ಬಯಸುವುದಿಲ್ಲ. ಪ್ರತಾಪನ ವಿಚಾರವಾಗಿ ಯೋಚಿಸು. ಅವನನ್ನು ಸರಿಯಾಗಿ ಬೆಳೆಸಿ ರಕ್ಷಿಸುವುದು ನಿನ್ನ ಹೊಣೆ!

OO

# ದೃಶ್ಯ – ೧೩

(ದೇವಸೇನ ಅಸ್ವಸ್ಥ ಮನಸ್ಸಿನಿಂದ ಶತಪಥ ಹಾಕುತ್ತಿದ್ದಾನೆ)

**ದೇವಸೇನ :** (ಸ್ವಗತ) ಇಲ್ಲ.... ಇಲ್ಲ.... ನನ್ನ ಮನಸ್ಸು ಮೃದುವಾಗಬಾರದು. ಕಾಳ್ಗಿಚ್ಚಿನಂತೆ ಸುಡುತ್ತಿರುವ ನನ್ನ ದುಃಖವನ್ನು ಯಾರೊಂದಿಗೆ ಹಂಚಿಕೊಳ್ಳಲಿ? ಹೇಗೆ ಅದನ್ನು ಸಹಿಸಿಕೊಳ್ಳಲಿ? ಮಕ್ಕಳ ಸುಖ-ಸಂತೋಷಗಳನ್ನು ಕೋರಬೇಕಾದ ತಂದೆ ತಾಯಿಗಳು ಮಕ್ಕಳ ಬದುಕಿಗೇ ಕಿಚ್ಚಿಟ್ಟರೆ ಹೇಗೆ ತಾಳಿಕೊಳ್ಳಲಿ.... ಪಿತೂರಿ ಮಾಡಿ ಕ್ರೂರವಾಗಿ ಕೊಲೆಗೈಸಿದ ಅಪ್ಪನನ್ನು ಅಪ್ಪ ಎಂದು ಕರೆಯಬಹುದೇ? ಸೇಡು..... ಸೇಡು..... ಸೇಡೊಂದೇ ನನ್ನ ಮನದ ಸಮಾಧಾನಕ್ಕೆ ದಾರಿ. ಇಲ್ಲ.... ಇಲ್ಲ..... ಅಮ್ಮನ ಕಣ್ಣೀರಿಗೂ ನಾನು ಸೋಲುವುದಿಲ್ಲ. ಅದು ನನ್ನ ಹೇಡಿತನವಾಗುತ್ತದೆ. ನನ್ನ ಜೀವಕ್ಕೆ ಜೀವವಾಗಿದ್ದ ನನ್ನಾಸೆ ಕನಸುಗಳ ಪ್ರತೀಕವಾಗಿದ್ದ, ನನ್ನ ಬದುಕಿಗೇ ಆಲಂಬನವಾಗಿದ್ದ ಹೂವಿನಂತಹ ಮನಸ್ಸಿನ ನನ್ನ ಇಂದುಮತಿಯನ್ನು ಕೊಂದವರನ್ನು, ಕೊಲ್ಲಿಸಿದವರನ್ನು ಬಿಡಲಾರೆ.

**ಧೀರನಾಯಕ:** (ಪ್ರವೇಶಿಸಿ) ಯುವ ಪ್ರಭುಗಳೆ..... ನಿಮ್ಮ ಆದೇಶದಂತೆ ಸೈನ್ಯವೆಲ್ಲ ಸಜ್ಜುಗೊಂಡಿದೆ. ಸೇನಾನಾಯಕರು ನಿಮ್ಮಾಜ್ಞೆಗಾಗಿ ಕಾಯುತ್ತಿದ್ದಾರೆ.

**ದೇವಸೇನ :** ಎಲ್ಲವೂ ಸಿದ್ಧವಾಗಿದ್ದರೆ ನಮ್ಮ ಯೋಜನೆಯಂತೆ, ಆ ದ್ರೋಹಿ ಕೊಲೆಗಡುಕರನ್ನು, ಎಲ್ಲಿದ್ದರೂ ಬಿಡದೆ ಹುಡುಕಿ ತೆಗೆದು ತುಂಡು ತುಂಡಾಗಿ ಕೊಚ್ಚಿ ಹಾಕಿ. ಅವರ ಮನೆಗಳ ಮೇಲೆ ಬಿದ್ದು ಕೊಳ್ಳೆ ಹೊಡೆದು ಬೆಂಕಿಯಿಟ್ಟು ಸುಡಿರಿ. ಅವರ ಮನೆ ಮಂದಿ ಬಂಧುಗಳನ್ನು ಬಿಡದೆ ಹುಡುಕಿ ತೆಗೆಯಿರಿ. ಅವರ ಆಸ್ತಿಪಾಸ್ತಿ ಮನೆಮಾರು ಯಾವುದನ್ನೂ ಬಿಡಬೇಡಿರಿ. ಎದುರಾದವರನ್ನು ಕತ್ತರಿಸಿ ಎಸೆಯಿರಿ. ಹೋಗು ನಾಯಕ. ಸೇನಾಪತಿಗೆ ಹೇಳು. ಎಷ್ಟು ರೀತಿಯಿಂದ ವಿಧ್ವಂಸಕ ಕೃತ್ಯಗಳನ್ನು

ಮಾಡಲು ಸಾಧ್ಯವೋ ಅಷ್ಟೆಲ್ಲವನ್ನೂ ಮಾಡಲಿ. ಜನ ತತ್ತರಿಸಿ ಎಸೆಯಿರಿ. ಹೋಗು ನಾಯಕ, ಸೇನಾಪತಿಗೆ ಹೇಳು. ಎಷ್ಟು ರೀತಿಯಿಂದ ವಿಧ್ವಂಸಕ ಕೃತ್ಯಗಳನ್ನು ಮಾಡಲು ಸಾಧ್ಯವೋ ಅಷ್ಟೆಲ್ಲವನ್ನು ಮಾಡಲಿ. ಜನ ತತ್ತರಿಸಿ ಹೋಗಬೇಕು. ಇದಕ್ಕೆ ಕಾರಣ ಏನೆಂದು ತಿಳಿಯಬೇಕು..... ಹೋಗಿ ಡಂಗುರ ಹೊಡೆದು ಸಾರಿ....ಇದು ಯುವರಾಜರ ಪ್ರತೀಕಾರವೆಂದು ಘೋಷಿಸಿ..... ದೇಶಕ್ಕೆ ದೇಶವೇ ನಡುಗಬೇಕು. ನನ್ನೊಳಗಿನ ಬೆಂಕಿ ಆರಬೇಕು.

**ಧೀರನಾಯಕ:** ಅಪ್ಪಣೆ ಯುವರಾಜರೇ. (ಹೋಗುವನು)

**ದೇವಸೇನ :** (ವಿಕಟವಾಗಿ ನಕ್ಕು) ಈ ವಿಕ್ಷುಬ್ಧ ಪ್ರೇಮಿಯ ಸೇಡಿನ ರುಚಿ ಹೇಗಿರುತ್ತದೆಂದು ಜನ ತಿಳಿಯಲಿ. ಮಗನನ್ನೇ ಮರೆತ ತಂದೆಗೆ ಪಾಠ ಕಲಿಸುತ್ತೇನೆ. ಸಿಂಹಾಸನವನ್ನು ಕಸಿದುಕೊಂಡು ಪದಚ್ಯುತನನ್ನಾಗಿ ಮಾಡದೆ ನಿದ್ರಿಸುವುದಿಲ್ಲ.... ಅವರಿಬ್ಬರ ಮುಂದೆ ಆಡಿದ ನಾಟಕವನ್ನು ನಿಜವೆಂದು ನಂಬಿದ ಹುಂಬ ತಂದೆ!..... ಪಾಪ! ಮುದಿ ವಯಸ್ಸಿನಲ್ಲಿ ಮಗನಿಂದಲೇ ಶಿಕ್ಷೆಗೆ ಒಳಗಾಗುವ ದುರಂತವ್ಯಂಗ್ಯ! ಕನಸಿನಲ್ಲಿಯೂ ಬಹುಶಃ ಇದನ್ನು ನಿರೀಕ್ಷಿಸಿರಲಾರ.

(ಹಿನ್ನಲೆಯಲ್ಲಿ ಗದ್ದಲ. ಭಯತ್ರಸ್ಥರಾಗಿ ಜನಗಳು ಅಸ್ತವ್ಯಸ್ತವಾಗಿ ಪ್ರಾಣ ರಕ್ಷಣೆಗಾಗಿ ಓಡಾಡುತ್ತಿರುವರು. ಕಾಪಾಡಿ! ಕಾಪಾಡಿ! ಪ್ರಭುಗಳೇ.... ಇದೇನಿದು..... ಇದ್ದಕ್ಕಿದ್ದಂತೆ ಪಿಡುಗಿನಂತೆ ಎರಗುತ್ತಿರುವ ಇವರು ಯಾರು..... ಅಯ್ಯೋ ಬೆಂಕಿ! ಬೆಂಕಿ...! ಓಡಿ..... ಓಡಿ ಬೇಡ! ಬೇಡ! ನಮ್ಮನ್ನು ಬಿಟ್ಟುಬಿಡಿ... ನೀವು ಕೇಳುತ್ತಿರುವ ಯಾರೂ ನಮಗೆ ಗೊತ್ತಿಲ್ಲ ಎಂಬ ಕೂಗುಗಳು ಕಿವಿಗಡಚಿಕ್ಕುತ್ತವೆ)

**ದೇವಸೇನ :** (ಮತ್ತಷ್ಟು ವಿಕಟವಾಗಿ) ಸಾಯಲಿ ಸಾಯಲಿ ಜನ! ರೊಚ್ಚಿಗೆದ್ದು ಮಹಾರಾಜರ ಮೇಲೆ ನುಗ್ಗಲಿ!..... ಇನ್ನಷ್ಟು ಹಿಂಸೆ! ಕೊಲೆಗಳಾಗಲಿ! ನನ್ನ..... ಸೇಡು ತಣಿಯುವುದಿಲ್ಲ...... ಇನ್ನಷ್ಟು....... ಇನ್ನಷ್ಟು.... ದಂಗೆಗಳಾಗಲಿ....... ನನ್ನ.... ನನ್ನ ....... ಮುದ್ದಿನ ಮನದನ್ನೆಯ ಆತ್ಮಕ್ಕೆ ತೃಪ್ತಿಯಾಗುವವರೆಗೂ ಬಿಡಲಾರೆ..... ಬಿಡಲಾರೆ....... ಈ ದೇಶಕೋಶಗಳೆಲ್ಲ ಸುಟ್ಟು ಸ್ಮಶಾನವಾಗಲೀ...... ಇಂದೂ..... ಇಂದೂ...... ನನ್ನ ಪ್ರಿಯೆ..... ನನ್ನ ಜೀವವೇ (ಬಿಕ್ಕಿ ಬಿಕ್ಕಿ ಅತ್ಯಂತ ಉದ್ವಿಗ್ನತೆಯಿಂದ ಅಳುವನು.)

**ರಾಣಿ :** (ಪ್ರವೇಶಿಸಿ) ಕಂದ.... ಕಂದ.... ಕುಮಾರ–ಇದೇನು ಹುಚ್ಚು ನಿನಗೆ..... ಎಂತಹ ದೆವ್ವವನ್ನು ಹೊಗಿಸಿಕೊಂಡಿದ್ದೀಯ (ಹತ್ತಿರ ಬಂದು ಅಲುಗಾಡಿಸುತ್ತಾಳೆ. ಅವನಿನ್ನೂ ಬಿಕ್ಕುತ್ತಲೇ ಇದ್ದಾನೆ....) ಮಗೂ.... ಮಗೂ...... ನೀನು ಮಾಡುತ್ತಿರುವುದು ಸರಿಯಲ್ಲ.... ಎಲ್ಲೆಲ್ಲೂ ಹಾಹಾಕಾರ ಎದ್ದಿದೆ.

ಹೆಂಗಸರು ಮಕ್ಕಳು ಮನೆಯೊಳಗೆ ಅವಿತು ಪ್ರಾಣ ರಕ್ಷಣೆಗಾಗಿ ದೇವರನ್ನು ಮೊರೆ ಇಡುತ್ತಿದ್ದಾರೆ..... ಹೋಗು.... ಹೋಗು ಕಂದ..... ನೀನೊಮ್ಮೆ ಆದೇಶಿಸಿದರೆ ಸೈನಿಕರು ಸುಮ್ಮನಾಗುತ್ತಾರೆ. ಸೇಡಿಗೆ ಸೇಡು ಪರಿಹಾರವಲ್ಲ. ನಿನಗೆ ಅದರಿಂದ ಖಂಡಿತ ಶಾಂತಿ ಸಿಗಲಾರದು. ಆ ನಿನ್ನ ತಂದೆ ಕಂಗಾಲಾಗಿ ಹೋಗಿದ್ದಾರೆ. ಎಷ್ಟು ಹೆದರಿದ್ದಾರೆಂದರೆ ಅವರ ಕಣ್ಣುಗಳಲ್ಲಿ ಸಾವಿನ ಭೂತ ಕುಣಿದಾಡಿದಂತಿದೆ. ನಿಲ್ಲಿಸು ನಿನ್ನ ರುದ್ರ ತಾಂಡವ. ಇಂತಹ ವಿನಾಶದಿಂದ ನಿನ್ನ ಇಂದೂ ನಿನಗೆ ಸಿಗುವಳೇನು?.... ಕುಮಾರ ಇದೋ ನಿನ್ನ ತಾಯಿಯ ಕಡೆಯ ಮಾತು. ಈ ಕೂಡಲೇ ಈ ವಿಧ್ವಂಸಕ ಕೃತ್ಯಗಳನ್ನು ನಿಲ್ಲಿಸದಿದ್ದಲ್ಲಿ ನಾನು ಪ್ರಾಣತ್ಯಾಗ ಮಾಡುತ್ತೇನೆ..... ನನ್ನ ಮೇಲಾಣೆ..... (ಅಳುವಳು)



# ದೃಶ್ಯ - ೧೪

**ಭಾಗವತ :** (ಪ್ರವೇಶಿಸಿ)

ಏನಿದೇನಿದು ಚಿತ್ರವೋ
ವಿಚಿತ್ರವೋ ರುದ್ರ
ತಾಂಡವ ವಿಲಯಗಾನದಿ
ಕ್ಷುಬ್ಧ ಕಡಲಿಗೆ ಶಾಂತಿಯೆಲ್ಲಿ
ತೋರಿತಾವರೂ ಶಾಂತನೀರವ
ಒಳಗೆ ಉರಿಯಿತು ಭಗ್ಗನೆ
ಬಡಬಾಗ್ನಿ ಜ್ವಾಲೆಯು ದಿಗ್ಗನೆ

(ಅಪ್ಪ ಅಮ್ಮನ ಒತ್ತಾಯಕ್ಕೆ ಯುವರಾಜಕುಮಾರ ಮೇಲುನೋಟಕ್ಕೆ ತಣ್ಣಗಾದಂತೆ ಕಂಡರೂ ಪ್ರತೀಕಾರವು ಪ್ರಜ್ವಲಿಸುತ್ತಲೇ ಇದೆ. ಭೀತಗೊಂಡ ಪ್ರಜಾನೀಕ ಸ್ಮಶಾನ ಮೌನದಲ್ಲಿ ಉಸಿರಾಡುತ್ತಿದ್ದಾರೆ. ಅಮರಸೇನ ಪ್ರಭುಗಳು ವಯಸ್ಸಿನ ಭಾರ, ಭಯಾಕುಲತೆಗಳಿಂದ ಮಂಚ ಹಿಡಿದಿದ್ದಾರೆ. ರಾಜ ವೈದ್ಯರೆಲ್ಲ ಆಸೆಬಿಟ್ಟು ಕೈ ಕಟ್ಟಿ ಕುಳಿತಿದ್ದಾರೆ. ಅವರ ಸ್ಥಿತಿ ಯಾವ ಕ್ಷಣವೋ ಏನೋ ಎನ್ನುವಂತಿದೆ......... ಏನಾದರಾಗಲೀ ಪ್ರಭುಗಳು ಮಗನ ಬದುಕಿಗೇ ಕಿಚ್ಚಿಟ್ಟು, ದ್ರೋಹಕ್ಕೆ ಎಳಸಬಾರದಿತ್ತು. ಗಜಪತಿ, ಭೂಪದೇವಾದಿಗಳನ್ನು ತಾನೇ ಎತ್ತಿಕಟ್ಟದ್ದೇ ಅಲ್ಲದೆ ಅವರ ರಕ್ಷಣೆಯ ಹೊಣೆಯನ್ನೂ ಹೊತ್ತು ಮಗಳ ಊರಿಗೆ ಕಳಿಸಿಬಿಟ್ಟದ್ದಾನೆ).

**ದಾರಿಹೋಕ:** (ಭಾಗವತನನ್ನು ನೋಡಿ) ಏನು ಭಾಗವತಪ್ಪ ಏನೋ ಬಹಳ ಆಲೋಚನೆಯಲ್ಲಿ ಇರುವಂತಿದೆ!

**ಭಾಗವತ :** ಅಣ್ಣ ಆಲೋಚನೆ ಅಲ್ಲದೆ ಬೇರೇನು ತಾನೇ ಇರಲು ಸಾಧ್ಯ? ಈ ರಾಜ್ಯದಲ್ಲಿ ಏನೇನಾಗುತ್ತಿದೆ ಎನ್ನುವುದೇ ಅರ್ಥವಾಗುತ್ತಿಲ್ಲ. ತಂದೆ ಮಕ್ಕಳೇ ಶತ್ರುಗಳಾಗಿ ಪರಸ್ಪರ ಕಣಕ್ಕಿಳಿದು ಸೆಣಸಾಡಿದರೆ ಬಡಪಾಯಿಗಳಾದ ನಮ್ಮಂಥವರ ಪಾಡೇನು? ವಿನಾಶದ ಚಟುವಟಿಕೆ ಕಡೆಗೆ ಎಲ್ಲಿಗೆ ಹೋಗಿ ನಿಲ್ಲುತ್ತೋ?

(ಒಂದು ನಾಲ್ಕೈದು ಜನ ಗುಂಪಾಗಿ ತರಾತುರಿಯಿಂದ ಹಾದು ಹೋಗುತ್ತಿದ್ದಾರೆ. ಭಾಗವತ ಅದನ್ನು ಗಮನಿಸಿ ಕಡೆದು ನಿಲ್ಲಿಸುತ್ತಾನೆ.)

**ಭಾಗವತ :** ಅಣ್ಣಂದಿರೇ ಸ್ವಲ್ಪ ನಿಲ್ಲಿ. ಅದೇನು ಅಷ್ಟು ಆತುರವಾಗಿ ಓಡುತ್ತಿದ್ದೀರಿ?

**ಒಬ್ಬ :** ಇದೇನು ಹೀಗೆ ಕೇಳುತ್ತಿದ್ದೀ ನಿಮಗೆ ವಿಷಯ ಗೊತ್ತಾಗಿಲ್ಲವೇನು ಅರಮನೆ ಮುಂದೆ ಸಾವಿರಾರು ಜನ ಸೇರಿದ್ದಾರೆ. ಪ್ರಭುಗಳು ತೀರಿಕೊಂಡರಂತೆ!!

**ಎರಡನೆಯ:** ತೀರಿಕೊಂಡನೋ ತೀರಿಸಿಕೊಂಡನೋ!!

**ಭಾಗವತ :** ಅದೇನಣ್ಣ ಹಾಗೆ ಹೇಳುತ್ತಿದೀ?

**ಎರಡನೆಯ:** ಮತ್ತ್ಹೇಗೆ ಹೇಳಲಿ?

**ಮೂರನೆಯ:** (ಏನೋ ರಹಸ್ಯ ತಿಳಿಸುವವನಂತೆ) ಅಯ್ಯಾ ಪ್ರಭುಗಳ ಸಾವಿನ ಬಗ್ಗೆ ಏನೇನೋ ವದಂತಿಗಳಿವೆ.... ಯುವರಾಜರೇ ಕೊಲೆ ಮಾಡಿರಬೇಕಂತಾರೆ! (ಗುಟ್ಟಾಗಿ ಹತ್ತಿರ ಬಂದು ಹೇಳುತ್ತಾನೆ)

**ನಾಲ್ಕನೆಯವ:** ನೀ ಸುಮ್ಮನಿರಣ್ಣ; ಅದು ನಿಜವೋ ಸುಳ್ಳೋ ಯಾರಿಗೆ ಗೊತ್ತು. ಜನ ಒಂದಿದ್ದರೆ ಹತ್ತು ಹೇಳ್ತಾರೆ. ಬಾಯಿತೀಟೆಗೆ ಏನೇನೋ ಹೇಳ್ತಾರೆ.

**ಒಬ್ಬ :** ಹೌದು ನೀನು ಹೇಳೋದು ಸರಿಯೆ. ಅಲ್ದೆ ಅಂಥ ಅನುಮಾನಗಳಿಗೆ ಆಸ್ಪದವೂ ಇಲ್ಲ. ಪ್ರಭುಗಳು ತೀರಾ ಅಸ್ವಸ್ಥರಾಗಿದ್ದದ್ದು ಗೊತ್ತೇ ಇದೆಯಲ್ಲ.... ಸಹಜವಾಗಿಯೇ ಸತ್ತಿರ್ತಾರೆ.

**ಎರಡನೆಯ:** ಅಯ್ಯೋ ನಿಮಗೆ ಗೊತ್ತಿಲ್ಲ. ಅಸ್ವಸ್ಥರಾಗಿದ್ದದ್ದರಿಂದಲೇ ಅನುಮಾನ ಬರೊಲ್ಲ ಅಂತ ಅವಕಾಶ ಉಪಯೋಗಿಸಿಕೊಂಡಿರಬಹುದಲ್ಲ?!

**ನಾಲ್ಕನೆಯ:** ಉಪಯೋಗಿಸಿಕೊಳ್ಳಬಹುದಾಗಿದ್ದರೂ ಯುವರಾಜರು ಹಾಗೆಲ್ಲ ಮಾಡಿರಲಾರರು. ಒಂದು ವೇಳೆ ಸಾಯಿಸಲೇ ಬೇಕಿದ್ದರೆ, ಇಷ್ಟು ದಿವಸ ಕಾಯಬೇಕಾದ ಅಗತ್ಯ ಇರಲಿಲ್ಲ.

**ಎರಡನೆಯವ:** ಅದೆಲ್ಲ ಸರಿ ಆದರೆ ಇತ್ತೀಚೆಗೆ ಯುವರಾಜರು ಮನೋರೋಗ, ಚಿತ್ತಭ್ರಮಣೆಗೆ ಒಳಗಾಗಿ ಯಾವ ಕ್ಷಣದಲ್ಲಿ ಏನು ಮಾಡ್ತಾರೋ ಗೊತ್ತಾಗೋದೇ ಇಲ್ಲ ಅಂತ ಅರಮನೇಲಿ ಕೆಲಸ ಮಾಡ್ತಿರೋ ನನ್ನ ಬಂಧುವೊಬ್ಬ ಹೇಳಿದ. ಯಾವಾಗಲೂ ಕಿರಿಕಿರಿ; ಪಟಪಟ ಅಂತ ಗಲಾಟೆ ನಡೀತಲೇ ಇರ್ತ್ತಂತೆ. ಇಂದುಮತಿ ದೇವಿಯವರ ಕೊಲೆಯಾದಂದಿನಿಂದ ಯುವರಾಜರು ಯಾವಾಗಲೂ ಉದ್ವಿಗ್ನರಾಗಿಯೇ ಇರುತ್ತಾರಂತೆ! ಯಾರ ಹತ್ತಿರವೂ ಸರಿಯಾಗಿ ಮಾತಿಲ್ಲ; ಕತೆಯಿಲ್ಲವಂತೆ!

**ಮೂರನೆಯವ:** ಜನವೆಲ್ಲ ಹೆದರಿಬಿಟ್ಟಿದ್ದಾರೆ. ನಾಳಿನ ದಿನಗಳಲ್ಲಿ ಏನಾಗುವುದೋ ಅನ್ನೋ ಚಿಂತೇಲಿ ಸುಸ್ತಾಗಿ ಹೋಗಿದ್ದಾರೆ. ಹಿಂದೆ ಆದ ಹಾಗೆ ಮತ್ತೊಂದು ಸಲ ಯುವರಾಜರು ಸಿಟ್ಟಿಗೆದ್ದು ಹುಚ್ಚುನಾಯಿಗಳನ್ನು ಮೇಲೆ ಬಿಟ್ಟಂತೆ ಸೈನ್ಯವನ್ನು ಜನರ ಮೇಲೆ ಏರಿಸಿದರೆ ಆಗ ನಮ್ಮ ಗತಿಯೇನು?

**ಭಾಗವತ :** ಅಣ್ಣಂದಿರಾ ಆಗದ್ದನ್ನು ಆಗುತ್ತೇಂತ ಕಲ್ಪಿಸಿಕೊಂಡು ಯಾಕೆ ಹೆದರ್ತೀರಿ?... ಯುವರಾಜರನ್ನು ನಾನು ಬಲ್ಲೆ. ಅವರು ಬಹಳ ನೊಂದಿದ್ದಾರೆ, ಅವ್ರರ ದ್ವೇಷ ಅವರ ತಂದೆ ಮೇಲೆ. ಕೊಲೆಗಡುಕರ ಮೇಲೆ! ಸಾಮಾನ್ಯ ಪ್ರಜೆಗಳನ್ನು ಏನೂ ಮಾಡುವುದಿಲ್ಲ... ಈಗ ಎಲ್ಲವೂ ಹದಕ್ಕೆ ಬಂದಿದೆ.... ತಂದೆ ತೀರಿಕೊಂಡರೆಂದರೆ ಅರ್ಧ ದ್ವೇಷವೇ ಕರಗಿಹೋಯಿತು. ರಾಜ್ಯಾಭಿಷೇಕವಾಯಿತೂಂದ್ರೆ ರಾಜ್ಯ, ಪ್ರಜೆಗಳ ಜವಾಬ್ದಾರಿ ತನಗೆ ತಾನೇ ಗೊತ್ತಾಗುತ್ತೆ.

**ದಾರಿಹೋಕ:** ಭಾಗವತಪ್ಪ ಹೇಳೋದನ್ನು ಕೇಳ್ರಯ್ಯ, ವಯಸ್ಸಿನಲ್ಲಿ ಹಿರಿಯೋರು. ಅಲ್ದೆ ಯುವರಾಜರ ಜೊತೆ ಸಲಿಗೆಯಿರೋವ್ರು. ಅವರಿಗೆ ಗೊತ್ತಿಲ್ವೆ ಯುವರಾಜರು ಎಂತಹವರೂಂತ!

**ಒಬ್ಬ :** ಅದಕ್ಕೇ, ಅರ್ಥ ಪರ್ಥ ಇಲ್ದೆ ಹರಟೆ ಹೊಡೆಯೋದು ನಿಲ್ಲಿಸಿ, ಅರಮನೆ ಕಡೆ ಹೋಗೋಣ, ಪ್ರಭುಗಳ ಅಂತಿಮ ದರ್ಶನ ಪಡೆಯೋ ಅವಕಾಶ ತಪ್ಪಿಸಿಕೊಳ್ಳೋದು ಬೇಡ, ನಡೀರಣ್ಣ.

**ಎರಡನೆಯವ:** ಏನು ಭಾಗವತಣ್ಣ.... ನೀನೂ ಬರುವವನಿದ್ದೀಯೋ ಹೇಗೆ?

**ಭಾಗವತ :** ನೀವು ಮುಂದೆ ಹೋಗಿರಿ, ನಾನೂ ಸ್ವಲ್ಪ ಹೊತ್ತಿಗೆ ಬರುತ್ತೇನೆ. (ಅವರೆಲ್ಲ ಹೋಗುವರು)

('ಹೂಂ'–ಎಂದು ನಿಟ್ಟುಸಿರಿಟ್ಟು)

ಇನ್ನಾಯಿತು ಕತೆ!
ಮುಗಿಯ ಬಹುದೇ ವ್ಯಥೆ!
ಯುವ ಪ್ರಭುವಿನ!
ಮನದಳಲದು ಮುಗಿದು
ತಣಿದುಕ್ಕಲಿ ಸಿರಿಗಂಧ
ಪ್ರೇಯಸಿ ಆತ್ಮಕೆ ದೊರೆಯಲಿ
ಶಾಂತಿ ನಲಿದಾಡಲಿ ಮುದದಿಂದ

ಈಗಲೇ ಹೋಗುತ್ತೇನೆ. ಯುವರಾಜರನ್ನು ಕಂಡು ಸಮಾಧಾನಪಡಿಸಿ ಮುಂದಿನ ಕತೆಯನ್ನು ತಿಳಿದು ಬರುತ್ತೇನೆ. ಪ್ರೇಕ್ಷಕರಿಗೆ ಅಲ್ಲೀವರೆಗೆ ತಾಳ್ಮೆಯಿರಲಿ. ಯುವರಾಜರ ರಾಜ್ಯಾಭಿಷೇಕವನ್ನು ಕಣ್ತಣಿಯೆ ನೋಡಬೇಕಲ್ಲ!

(ಹೋಗುವಳು)

೦೦

# ದೃಶ್ಯ – ೧೫

(ಡಂಗುರವವನ ಪ್ರವೇಶ)

ಕೇಳ್ರಪ್ಪೋ ಕೇಳ್ರಿ

ಸಣ್ಣೋರು ದೊಡ್ಡೋರು ಎಲ್ಲಾರೂ ಕೇಳ್ರಿ

ಊರ ಹಿರಿರೆಲ್ಲ ನಾಳೆ ಸಭೆಗೆ ಹತ್ತುಗಂಟೆಗೆ ಸರಿಯಾಗಿ ಬರಬೇಕಂತೆ!.... ಬಹಳ ಜರೂರಿನ ಮಾತೈತಂತೆ!! ಕೇಳ್ರಪ್ಪೋ.... ಕೇಳ್ರಿsss

(ಡಬ ಡಬ ಡಂಗುರ ಬಡಿಯುತ್ತಾನೆ. ಜನ ಗುಂಪುಗುಂಪಾಗಿ ಬಂದು ಸೇರುತ್ತಾರೆ.)

**ಒಬ್ಬ** : ಬರೇ......ಬರಬೇಕಂದ್ರೋ? ವಿಷಯಾನೂ ತಿಳಿಸೂ ಅಂದ್ರೋ?

**ಇನ್ನೊಬ್ಬ** : ಚೇಷ್ಟೆ ಮಾತು ಬಿಡಯ್ಯ! ವಿಷಯಾನ ತಿಳಿಸ್ಕೋಕೆ ಹೇಳಿದ್ರೆ........ ಡಂಗುರದವ ಪಾಪ! ಹೇಳ್ದೆ ಏನ್ಮಾಡ್ತಿದ್ದ?

**ಡಂಗುರದವ**: ಅಯ್ಯಾಗಳೇ.... ಮಹಾಜನರೇ..... ಯುವರಾಜರ ರಾಜ್ಯಾಭಿಷೇಕ ಆಗ್ಬೇಕಲ್ಲ.... ದೊಡ್ಡೋರ ಹಿರೇರ ಹತ್ತಿರ ಮಾತಾಡ್ಲಿಕ್ಕೆ ಕರೆಸಿರಬೋದು. ಅದೆಲ್ಲ ನನಗೆ ಹೇಳ್ತಾರ. ನನ್ನ ಕೆಲಸ ಎಷ್ಟೋ ಅಷ್ಟು ಮಾತ್ರ ಮಾಡ್ತಿದ್ದೀನಿ.

**ಒಬ್ಬ** : ಆಯ್ತು ಬಿಡಣ್ಣ...... ನಿನ್ನ ಕೆಲಸ ನೀನು ಮಾಡಿದ್ದಿ. ಬರಬೇಕಂದ್ರೆ ಬರ್ತಾರೆ.

**ಇನ್ನೊಬ್ಬ** : ಏನು ಕೇಡುಗಾಲವ್ರೋ......... ಎಲ್ಲಾ ಎಡವಟ್ಟು!! ಆಗಬಾರದ್ದು ಆಗ್ತಾ ಇದೆ; ನೋಡಬಾರದ್ದೆಲ್ಲ ನೋಡ್ತಾ ಇದ್ದೀವಿ..... ಏನ್ಮಾಡೋದು ಬಂದದ್ದನ್ನು ಅನುಭವಿಸೋದು, ಅಷ್ಟೇ.

**ಡಂಗುರದವ**: ಮತ್ತೊಮ್ಮೆ ಕೇಳಿಸ್ಕೊಳ್ರಪ್ಪೋ.... ಮನೆವಳಗೆಲ್ಲ ಹೇಳಿ ಹಿರೇರನ್ನ ಕಳಿಸಿಕೊಡಿ ಸಭೆಗೆ.

# ದೃಶ್ಯ - ೧೬

(ಸಭಾಮಂಟಪ. ಊರಿನ ಹಿರಿಯರು, ವರಿಷ್ಠರು ಕೆಳಗಡೆ ಆಸನಗಳಲ್ಲಿ ಕುಳಿತಿದ್ದಾರೆ. ರಾಣಿಯವರೂ ಎತ್ತರದ ಪೀಠದಲ್ಲಿ ಕುಳಿತಿದ್ದಾರೆ. ದೇವಸೇನ ವಿನೀತಿನಾಗಿ ಎದ್ದು ನಿಂತು ಸಭಾಸದರನ್ನು ಉದ್ದೇಶಿಸಿ ಮಾತನಾಡುತ್ತಿದ್ದಾನೆ.)

**ದೇವಸೇನ :** ಮಂತ್ರಿವರ್ಯರೇ, ಪೂಜ್ಯರೇ ಹಿರಿಯರೇ, ನಗರದ ಶ್ರೀಮಂತ ಶ್ರೇಷ್ಠರೇ, ನಾನು ಸಭೆ ಕರೆದುದು ನಿಮಗೆಲ್ಲರಿಗೂ ಅಚ್ಚರಿಯಾಗಿರಬಹುದು. ನನ್ನ ಪೂಜ್ಯ ತಂದೆಯವರು ತೀರಿಕೊಂಡಿರುವುದು ಎಲ್ಲರಿಗೂ ದುಃಖದ ವಿಷಯವೇ. ಆದರೂ ರಾಜ್ಯ ಅರಾಜಕವಾಗಿರಬಾರದು. ನಿಮಗೇ ಗೊತ್ತಿರಬಹುದು ಇತ್ತೀಚೆಗೆ ಏನೆಲ್ಲ ಆಗಬಾರದ್ದು ಆಗಿ ಹೋಯಿತು.

**ಮಂತ್ರಿ :** ಕುಮಾರರೇ ತಮ್ಮ ಕುಟುಂಬದಲ್ಲಿ ಘಟಿಸಿದ ಘಟನೆಗಳಿಂದ ಪ್ರಜಾನೀಕವು ಬಹಳವಾಗಿ ಸಂಕಟಪಟ್ಟಿದೆ. ಆದಷ್ಟು ಬೇಗ ತಮ್ಮ ರಾಜ್ಯಾಭಿಷೇಕ, ಸಿಂಹಾಸನಾರೋಹಣ ಕಾರ್ಯ ಮುಗಿಯಬೇಕಿದೆ.

**ದೇವಸೇನ :** ಮಂತ್ರಿಗಳೇ ನಾವೂ ಅದೇ ಆಲೋಚನೆಯಲ್ಲಿದ್ದೇವೆ. ಆದರೆ ಅದಕ್ಕೆ ಮೊದಲು ನಾನು ಕೆಲವು ವಿಷಯಗಳನ್ನು ನಿಮಗೆ ಸ್ಪಷ್ಟಪಡಿಸಬೇಕಾಗಿದೆ. ಊಹಾಪೋಹ, ವದಂತಿಗಳಿಂದಾಗಿ ಸತ್ಯ ಸಂಗತಿಗಳೇನೆಂಬುದು ಮರೆಯಾಗಿ ಹೋಗಿದೆ. ಜನರು ತಮತಮಗೆ ತೋಚಿದಂತೆ ಮಾತನಾಡಿಕೊಳ್ಳುತ್ತಾ ನಮ್ಮ ಬಗ್ಗೆ ಸುಳ್ಳು ಸುದ್ದಿಗಳನ್ನು ಹಬ್ಬಿಸುತ್ತಿದ್ದಾರೆ. ರಾಜ್ಯಾಭಿಷೇಕ ನಮ್ಮ ಪ್ರೀತಿಯ ಮಡದಿ ಇಂದುಮತಿಯವರೊಂದಿಗೆ ನಡೆಸಿಕೊಳ್ಳಬೇಕೆಂಬ ಆಸೆ ನಮ್ಮದಾಗಿತ್ತು.

**ಒಬ್ಬಹಿರಿಯ:** ಯುವರಾಜರು ಕ್ಷಮಿಸಬೇಕು. ನಿಮ್ಮ ಪತ್ನಿ ಕಾತ್ಯಾಯಿನಿ ದೇವಿಯವರಲ್ಲವೇ?

**ದೇವಸೇನ :** ನಿಜ ಕಾತ್ಯಾಯಿನಿಯವರೇ ನನ್ನ ಧರ್ಮಪತ್ನಿ. ಆದರೆ ಅವರ ಮರಣಾದ ನಂತರ ನಾನು ಇಂದುಮತಿ ದೇವಿಯವರನ್ನು

ಶಾಸ್ತ್ರೋಕ್ತವಾಗಿ ವಿವಾಹವಾದೆ. ನಮ್ಮ ರಾಜಪುರೋಹಿತರಾದ ನಾರಾಯಣ ಶಾಸ್ತ್ರಿಗಳೇ ಮುಂದೆ ನಿಂತು ಭಗವತೀ ಮಂದಿರದಲ್ಲಿ ನಮ್ಮಿಬ್ಬರ ವಿವಾಹವನ್ನು ಮಾಡಿಸಿದ್ದಾರೆ. ಬೇಕಾದರೆ ಅವರೇ ಈ ವಿಷಯವನ್ನು ಸ್ಪಷ್ಟ ಪಡಿಸುತ್ತಾರೆ..... (ಶಾಸ್ತ್ರಿಗಳ ಕಡೆ ತಿರುಗಿ) ಹೇಳಿ ಶಾಸ್ತ್ರಿಗಳೇ ನೀವೇ ನಿಮ್ಮ ಬಾಯಿಂದ ಈ ವಿಷಯವನ್ನು ತಿಳಿಸಿ.

**ಶಾಸ್ತ್ರಿಗಳು :** (ಎದ್ದುನಿಂತು) ಹೌದು ಯುವರಾಜರು ಹೇಳಿದ್ದು ಸತ್ಯ. ಏನೇನೋ ತಪ್ಪು ಕಲ್ಪನೆಗಳಿಂದ ಯುವರಾಜರು ಪ್ರೀತಿಸಿದ ಗೌರವಿಸಿದ ಇಂದುಮತಿದೇವಿಯ ಬಗ್ಗೆ ಅವಾಚ್ಯ ಶಬ್ದಗಳಿಂದ ಅಪಪ್ರಚಾರ ಮಾಡಲಾಯಿತು. ಅವರಿಬ್ಬರದೂ ನಿರ್ಮಲ ಪ್ರೀತಿ, ಕೈ ಹಿಡಿದ ಮಡದಿಗೆ ಅನ್ಯಾಯವಾಗಬಾರದೆಂದು ಒಬ್ಬರಿಂದೊಬ್ಬರು ದೂರವೇ ಇದ್ದರು. ಯುವರಾಣಿ ಕಾತ್ಯಾಯನಿದೇವಿಯವರ ದೇಹಾಂತವಾದ ಬಳಿಕ ನಾನೇ ಇವರಿಬ್ಬರ ವಿವಾಹವನ್ನು ಮಾಡಿಸಿದೆ. ಈಗ ಇಂದುಮತಿ ದೇವಿಯವರು ಅಧಿಕೃತವಾಗಿ, ನ್ಯಾಯಬದ್ಧವಾಗಿ ಈ ರಾಜವಂಶಕ್ಕೆ, ರಾಜಪರಿವಾರಕ್ಕೆ ಸೇರಿದ್ದರು. ಅವರಿಬ್ಬರ ಮಕ್ಕಳೂ ಈ ರಾಜ್ಯದ ವಾರಸುದಾರರೇ!

**ಇನ್ನೊಬ್ಬರು ಹಿರಿಯರು:** ಶಾಸ್ತ್ರಿಗಳೇ ಹಾಗಾದರೆ ಸಾರ್ವಜನಿಕವಾಗಿ ಇವರಿಬ್ಬರ ಸಂಬಂಧವನ್ನು ಘೋಷಿಸಬಹುದಲ್ಲ. ಪ್ರಜೆಗಳಿಗೂ ಸಂತೋಷವಾದೀತು, ನಂತರ ಈಗ ಪತ್ನೀ ಸಮೇತ ರಾಜ್ಯಾಭಿಷೇಕ ಮಾಡಿಕೊಳ್ಳಲು ಯಾರೂ ಅಭ್ಯಂತರ ಹೇಳಲಾರರು.

**ಮತ್ತೊಬ್ಬ ವರಿಷ್ಟರು :** ಈ ಹಿರಿಯರು ಹೇಳಿದ್ದು ಸಮ್ಮತವಾದ ಮಾತೇ ನಮಗೂ ಮಹಾರಾಣಿಯವರನ್ನು ನೋಡುವ ಕುತೂಹಲವಿದೆ.

**ದೇವಸೇನ :** ಸಂತೋಷ. ನನ್ನ ಮಾತುಗಳನ್ನು ವಿರೋಧವಿಲ್ಲದೆ ಸ್ವೀಕರಿಸಿ ಸಮ್ಮತಿಸಿದ್ದಕ್ಕೆ ಕೃತಜ್ಞತೆಗಳು. ಆದರೆ ನಿಮಗೊಂದು ದುಃಖದ ಸಂಗತಿಯನ್ನೂ ಜೊತೆಗೆ ಹೇಳಬೇಕಾಗಿದೆ.

**ಹಿರಿಯರು:** (ಗಾಬರಿಯಿಂದ) ಏನದು ಯುವರಾಜರೇ?

**ದೇವಸೇನ :** ನಮ್ಮಿಬ್ಬರ ಪ್ರೀತಿ, ತ್ಯಾಗಗಳು ಕೆಲವರು ದ್ರೋಹಿಗಳಿಗೆ, ಕುಹಕಿಗಳಿಗೆ ಹಿಡಿಸಲಿಲ್ಲ. ನನ್ನ ಪ್ರಾಣೇಶ್ವರಿಯನ್ನು ದ್ವೇಷ ಅಸೂಯೆ. ಕುತಂತ್ರಗಳಿಂದ ಕೊಲೆ ಮಾಡಿ ಎಸೆದಿದ್ದಾರೆ; ಎಲ್ಲಿಯೋ ಕಾಣದಂತೆ ಸಮಾಧಿಯೊಳಗೆ ಹುದುಗಿಸಿ ಇರಿಸಿದ್ದಾರೆ.

ಒಬ್ಬರು

**ಹಿರಿಯರು :** ಮತ್ತೆ ಹಾಗಾದರೆ ಪತ್ನೀ ಸಮೇತ ರಾಜ್ಯಾಭಿಷೇಕ ಹೇಗೆ ನಡೆಯುತ್ತದೆ?

**ದೇವಸೇನ :** ನಾನಿದ್ದಕ್ಕೆ ವ್ಯವಸ್ಥೆ ಮಾಡಿದ್ದೇನೆ. ಸಜೀವವಾಗಿ ಇಲ್ಲದಿದ್ದರೇನಂತೆ, ಆಕೆಯನ್ನು ಯಾವುದೇ ಸಮಾಧಿಯಲ್ಲಿ ಇರಿಸಿರಲಿ, ಹುಡುಕಿ ತೆಗೆದುಕೊಟ್ಟವರಿಗೆ ಹತ್ತು ಸಹಸ್ರ ವರಹಗಳ ಬಹುಮಾನವನ್ನು ಘೋಷಿಸಿದ್ದೇನೆ. ಆಕೆಯನ್ನು ಕೊಂದ ದ್ರೋಹಿಗಳನ್ನೂ ಹಿಡಿದುಕೊಂಡು ಅವರ ರಕ್ತತರ್ಪಣ ನೀಡಿದ ಮೇಲೆಯೇ ನಮ್ಮ ರಾಜ್ಯಾಭಿಷೇಕವೆಂದೂ ನಿರ್ಧರಿಸಿದ್ದೇವೆ. ನಮ್ಮ ಮಡದಿಯ ಶವವನ್ನು ಇಲ್ಲವಾದರೆ ಅಸ್ಥಿಪಂಜರವನ್ನೇ ಸಕಲ ಶೃಂಗಾರಗಳೊಂದಿಗೆ ಸಿಂಗರಿಸಿ ನಮ್ಮೊಟ್ಟಿಗೆ ಕಿರೀಟಧಾರಣೆ ಮಾಡಿಸುತ್ತೇವೆ. ರಾಜ್ಯಾದ್ಯಂತ ದ್ರೋಹಿಗಳ ಶೋಧಕ್ಕೆ. ಸಮಾಧಿಯ ಅನ್ವೇಷಣೆಗೆ ನೂರಾರು ಮಂದಿ ಗೂಢಚಾರರನ್ನು ನೇಮಿಸಿದ್ದೇನೆ.

**ಮಂತ್ರಿ :** (ಹೌಹಾರಿ) ಪ್ರಭುಗಳೇ ಇದೇನು ನಿಮ್ಮ ಆಲೋಚನೆ ಅಸ್ಥಿಪಂಜರಕ್ಕೆ ಕಿರೀಟಧಾರಣೆಯೇ?.... ಕೂಡದು ಕುಮಾರ ಪ್ರಭುಗಳೇ....... ನಿಮ್ಮ ಈ ವಿಚಿತ್ರ ತೀರ್ಮಾನದಿಂದ ಜನ ದಂಗೆಯೆದ್ದಾರು.

**ದೇವಸೇನ :** (ನಕ್ಕು) ಜನ.... ದಂಗೆ! ಅಹ್ಹಹಾ! ಅಹ್ಹಹಾ! ಈ ಜನಕ್ಕೇನು ಗೊತ್ತು ನಾನು ನುಂಗಿದ ಬೆಂಕಿ! ಅನುಭವಿಸಿದ ಹಿಂಸೆ. ನನ್ನವರಿಂದ, ಆಗದವರಿಂದ ನನ್ನ ಪ್ರಿಯತಮೆ ಅನುಭವಿಸಿದ ಯಾತನೆ, ಹಿಂಸೆ ಅವಮಾನ!... ಕಡೆಗೆ ನಿಷ್ಪಾಪಿಯೂ, ಮುಗ್ಧ ಸರಳ ಹೃದಯಿಯೂ, ಪ್ರೇಮದೇವತೆಯೂ ಆದವಳನ್ನು ಕ್ರೂರವಾಗಿ ಕೊಂದರಲ್ಲ! ಕುಲಟೆ! ದ್ರೋಹಿ! ವಂಚಕಳೆಂದು ಕೂಗಿ ಕೂಗಿ ಅವಮಾನದಿಂದ ತಲೆತಗ್ಗಿಸುವಂತೆ ಮಾಡಿದರಲ್ಲ!...... ಅದೆಲ್ಲವನ್ನು ನಾನು ಹೇಗೆ ಮರೆಯಲಿ? ಅವಳಿಗಾದ ಅನ್ಯಾಯವನ್ನು ಹೇಗೆ ಸರಿಪಡಿಸಲಿ?.... ಅದಕ್ಕಗಿಯೇ ಈ ನಿರ್ಣಯ! ಅವಳನ್ನು ಇನ್ನು ಮುಂದೆ ಗೌರವ ಮರ್ಯಾದೆಗಳಿಂದ ಸಂಬೋಧಿಸಬೇಕು.... ಇಲ್ಲವಾದಲ್ಲಿ ಯಾರನ್ನೂ ಬಿಡುವುದಿಲ್ಲ...ಇದು ನನ್ನ ಆಜ್ಞೆ... ಇದೇ ನನ್ನ ಶಾಸನ!!

**ಹಿರಿಯರು :** (ವಿನಯದಿಂದ) ಕುಮಾರ ಪ್ರಭುಗಳೇ ನಿಮ್ಮನ್ನು ವಿರೋಧಿಸುವ ಧೈರ್ಯವಿಲ್ಲ. ಆದರೂ ಮತ್ತೊಮ್ಮೆ ಯೋಚಿಸಿರೆಂದು ಬೇಡುತ್ತೇವೆ. ರಾಜಮಾತೆಯವರು ಏನು ಹೇಳುತ್ತಾರೆ?

**ರಾಜಮಾತೆ:** ಹಿರಿಯರೇ ನಾನು ಹೆಣ್ಣು ಹೆಂಗಸು. ನನಗೆ ಇದಾವುದೂ ತಿಳಿದಿಲ್ಲ. ನನ್ನ ಮಗನ ಸುಖವೇ ನನಗೆ ಮುಖ್ಯ. ಇನ್ನೂ ಅವನು ದಾರುಣ

ದುಃಖವನ್ನು ಅನುಭವಿಸುವುದನ್ನು ನಾನು ಸಹಿಸಲಾರೆ ಅವನು ಮಾಡುವ ಕೆಲಸಗಳಿಂದ, ತೀರ್ಮಾನಗಳಿಂದ ಅವನಿಗೆ ಸಂತೋಷ, ಸಂತೃಪ್ತಿಗಳು ಸಿಗುವುದಾದರೆ ನಾನೇಕೆ ಅಡ್ಡಿಬರಲಿ. ನನಗೂ ವಯಸ್ಸಾಯಿತು. ಜೀಳುವ ಮರ. ಚಿಗುರುವ ಮನಸ್ಸುಗಳು ತಣಿವಿನಿಂದ ಇರಲೆಂಬುದೇ ನನ್ನ ಹಾರೈಕೆ.

ದೇವಸೇನ : ಗೌರವನೀಯ ಸಭಾಸದರೇ, ನೀವೆಲ್ಲ ನನ್ನ ಕೋರಿಕೆ ಮನ್ನಿಸಿ ಬಂದಿದ್ದೀರಿ ಸಂತೋಷ. ನಿಮಗೆ ತಿಳಿದ ವಿಷಯಗಳನ್ನು ಪ್ರಜೆಗಳಿಗೂ ತಿಳಿಸಿ, ಆದರೆ ಒಂದು ಎಚ್ಚರಿಕೆ. ನನ್ನ ನಿರ್ಧಾರಗಳಲ್ಲಿ ಯಾವುದೇ ಬದಲಾವಣೆಗಳು ಇರುವುದಿಲ್ಲವೆಂಬುದು ನಿಮಗೆ ತಿಳಿದಿರಲಿ.

ಎಲ್ಲರೂ : (ಸಪ್ಪೆಮೋರೆಯಿಂದ) ಯುವಪ್ರಭುಗಳ ಚಿತ್ತವಿದ್ದಂತೆ!.... ನಮಗೆ ಹೋಗಲು ಅಪ್ಪಣೆಯೇ ಪ್ರಭುಗಳೇ?

ದೇವಸೇನ : ಒಳ್ಳೆಯದು ನಮ್ಮ ರಾಜ್ಯಾಭಿಷೇಕ, ಕಿರೀಟಧಾರಣೆ ಸಮಾರಂಭಗಳನ್ನು ಯಶಸ್ವಿಯಾಗಿ ನೀವೆಲ್ಲರೂ ಸೇರಿ ನಡೆಸಿಕೊಡಬೇಕೆಂಬುದೇ ನಮ್ಮ ಕೋರಿಕೆ.... (ಮಂತ್ರಿಗಳತ್ತ ತಿರುಗಿ) ಏನಂತೀರಿ ಮಂತ್ರಿಗಳೇ.

ಮಂತ್ರಿಗಳೇ: ಆಗಬಹುದು ಪ್ರಭುಗಳೇ,

(ಸಭೆ ಮುಗಿಯುವುದು)

OO

# ದೃಶ್ಯ – ೧೭

(ಜನಗಳು ಗುಂಪು ಗುಂಪಾಗಿ ಮಾತಾಡುತ್ತ ನಿಂತಿರುವರು)

೧ ನೇ ವ್ಯಕ್ತಿ: ಅಲ್ಲ ರುದ್ರನಾಯಕ ಈ ಯುವರಾಜರಿಗೆ ಅದೇನು ಹುಚ್ಚೋ ಅಥವಾ ದೆವ್ವ ಹೊಕ್ಕಿದೆಯೋ?

೨ ನೇ ವ್ಯಕ್ತಿ: ಅಪ್ಪ ಸ್ವಲ್ಪ ಬಾಯಿ ಮುಚ್ಚೀಯ, ಪ್ರಭುಗಳ ಕಿವಿಗೆ ಬಿದ್ದರೆ ನಮ್ಮ ಗತಿ ಗೋವಿಂದ!

೩ ನೇ ವ್ಯಕ್ತಿ: ಅಬ್ಬ! ಆ ದೃಶ್ಯ ಅಲ್ಲಿ ನಡೆದ ವಿಧಿಗಳು ನೆನೆಸಿಕೊಂಡರೆ ಮೈ ಜುಂ ಎನ್ನುತ್ತೆ, ಕೈಕಾಲಿನ ಸತ್ವಾನೇ ಉಡುಗಿ ಹೋಗುತ್ತೆ. ಇದೆಂಥ ವಿಚಿತ್ರ ಘಟನೆ! ಹಿಂದೆ ಮುಂದೆ ಎಂದೂ ಊಹಿಸಲಾಗದಂತಹ ಘಟನೆ!

೪ ನೇ ವ್ಯಕ್ತಿ: ಅಲ್ಲಯ್ಯ ಸತ್ತ ಹೆಣವಾದರೂ ನೋಡೋಕೆ ಮನುಷ್ಯನ ಥರಾನೇ ಇರೋದ್ರಿಂದ ಅಂಥ ಹೆದರಿಕೆ ಏನೂ ಆಗೋದಿಲ್ಲ. ಆದರೆ.... ಆದರೆ.... ಅಸ್ಥಿಪಂಜರವಾಗಿ ನೋಡಿದವರು ಹೆದರಿ ಪ್ರಾಣ ಬಿಡುವಂಥ ಹೆಣಾನಾ ರಾಣಿಯ ಹಾಗೆ ಶೃಂಗಾರ ಮಾಡಿ ಪಕ್ಕದಲ್ಲಿರಿಸಿಕೊಂಡು ಕಿರೀಟ ಧಾರಣೆ ಮಾಡೋದನ್ನ ನೋಡಿದ್ದೀಯ.

೧ ನೇ ವ್ಯಕ್ತಿ: ಪಂಜರಕ್ಕೆ ಉಡಿಸಿದ ಸೀರೆ ಹೇಗಿತ್ತೂಂತೀ! ಎಲುಬುಗಳಾಗಿದ್ದ ಆ ಬೆರಳುಗಳಿಗೆ, ಕೈಗಳಿಗೆ ವಜ್ರ ವೈಢೂರ್ಯದ ಬಳೆಗಳು! ಉಂಗುರಗಳು! ಕಾಲಿಗೆ ಚಿತ್ತಾರದ ಪಾದುಕೆಗಳು, ಕೊರಳಿಗೋ ಕಣ್ಣುಕುಕ್ಕುವ ರತ್ನಾಹಾರಗಳು! ಅಸಹ್ಯವಾಗಿ ಗುಳಿಬಿದ್ದಿದ್ದ ಕಣ್ಣುಗಳಿಗೆ ಬಣ್ಣ ಬಳಿದು ಕಣ್ಣಿನಾಕಾರ ಬರುವ ಹಾಗೆ ತಿದ್ದಿದ್ದರು. ಅದ್ಭುತವಾದ ರೀತಿಯಲ್ಲಿ ರಾಜ ಉಡಿಗೆ ತೊಡಿಗೆಗಳಿಂದ ಕೂಡಿದ್ದ ಆ ಶವದ ಅಲಂಕಾರ ಎಷ್ಟು ಚೆನ್ನಾಗಿತ್ತೋ ಅಷ್ಟೇ ನೋಡಲು ಭಯಾನಕವಾಗಿತ್ತು.

೧ ನೇ ವ್ಯಕ್ತಿ: ಅದಷ್ಟೇ ಅಲ್ಲ. ಅಷ್ಟೊಂದು ಸಂಖ್ಯೆಯಲ್ಲಿ ಜನ ನೆರೆದಿದ್ದರೂ ಭಯ, ಗಾಭರಿಗಳಿಂದ ಕೂಡಿದ ಕಣ್ಣುಗಳಿಂದ ನೋಡುತ್ತ ನೋಡುತ್ತ ನಿಂತೆಡೆಯಲ್ಲಿಯೇ ಮಂಜು ಗಟ್ಟಿ ಬಿಟ್ಟಿದ್ದರೂ ಮಂಗಳ ವಾದ್ಯಗಳ ಮೊಳಗೊಂದು ಬಿಟ್ಟರೆ ಸಂಭ್ರಮೋಲ್ಲೋಸದ ಕೇಕೆಗಳಿಲ್ಲ. ಜನರಲ್ಲಿ ಸಂಚಲನವೇ ಇಲ್ಲ.

೨ ನೇ ವ್ಯಕ್ತಿ: ಪಾಪ! ಆ ಪುರೋಹಿತರನ್ನು ನೋಡಿದರೆ ಕರುಳು ಕಿವುಚಿದಂತೆ ಆಗುತ್ತಿತ್ತು. ಭಯದಿಂದ ಮಂತ್ರಗಳು, ಆಶೀರ್ವಚನೆಗಳು ಎಡವುತ್ತಿದ್ದವು. ಶವಕ್ಕೆ ಕಿರೀಟಧಾರಣೆ ಮಾಡಿಸುವಾಗ ನೋಡಬೇಕಿತ್ತು. ಕೈಕಾಲುಗಳು ಎಷ್ಟು ಕಂಪಿಸಿದವೆಂದರೆ ಭಯದಿಂದ ಬಿದ್ದುಬಿಟ್ಟು ತಾನೇ ಶವವಾಗಿ ಬಿಡುವನೇನೋ ಎನಿಸುತ್ತಿತು.

೩ ನೇ ವ್ಯಕ್ತಿ: ಯಾಕೋ ಈ ಕಿರೀರಾಜನ ಹುಚ್ಚು ಅತಿಯಾಗಿರಬೇಕೆನಿಸಿತು. ಸ್ವಸ್ತಿವಾಚನ ಮುಗಿದ ಮೇಲೆ ಊರಿನ ಹಿರಿಯರು, ಪ್ರಮುಖರು, ಪ್ರತಿಷ್ಠಿತರು ಬಂದು ರಾಜ ರಾಣಿಯರಿಗೆ ಗೌರವ ಸಲ್ಲಿಸುವಾಗ, ರಾಜನಿಷ್ಠೆಯ ಬಗ್ಗೆ ಅಧಿಕಾರವರ್ಗ ಪ್ರಮಾಣ ವಚನ ಸ್ವೀಕರಿಸುವಾಗ ಗಂಡೆದೆಗಳೂ ನಡುಗುತ್ತಿದ್ದುದನ್ನು ನೋಡಿದರೆ ಅವರು ಎಷ್ಟು ಹೆದರಿದ್ದರು ಅನ್ನೋದು ಗೊತ್ತಾಗುತ್ತೆ.

೩. ನೇ ವ್ಯಕ್ತಿ: ರಾಜಸ್ತ್ರೀಯರಂತೂ ಹತ್ತಿರ ಬರುತ್ತಿದ್ದಂತೆ ಚೀರಿ ಮೂರ್ಛೆ ಹೋಗುತ್ತಿದ್ದರು.

೪ ನೇ ವ್ಯಕ್ತಿ: ಇಷ್ಟೆಲ್ಲಾ ಆಗುತಿದ್ದರೂ ದೇವಸೇನ ಕುಮಾರರ ತುಟಿ ಮೇಲೆ ಮಿಂಚುತ್ತಿದ್ದ ರುದ್ರನಗೆ, ಪಿಕಟಾಟ್ಟಹಾಸಗಳ ಸಂಭ್ರಮ ನೋಡ್ಬೇಕಿತ್ತು! ಏನೂ ಆಗದವರಂತೆ ಎಷ್ಟೊಂದು ಸಹಜವಾಗಿ ವರ್ತಿಸುತ್ತಿದ್ದರು! ನನಗೇ ಆಶ್ಚರ್ಯವಾಗುತ್ತಿತ್ತು.

೩. ನೇ ವ್ಯಕ್ತಿ: ಮೂರು ನಾಲ್ಕು ಗಂಟೆ!! ಈ ರುದ್ರ ಭಯಾನಕ ಕಾರ್ಯಕ್ರಮ ಮುಗಿಯುವಷ್ಟರಲ್ಲಿ ಸಾಕು ಸಾಕಾಗಿ ಹೋಯಿತು. ಶವದ ಶೃಂಗಾರ, ಸತ್ಕಾರ ಸಮ್ಮಾನಗಳನ್ನು ನೋಡ ನೋಡತ್ತ ಎಷ್ಟು ಜನ ಜೆವತು ಚಲಿಸುವ ಹೆಣಗಳಾಗಿದ್ದವೋ ಏನೋ!!

೨ ನೇ ವ್ಯಕ್ತಿ: ಸದ್ಯ ಕಾರ್ಯಕ್ರಮ ಮುಗಿದ ಮೇಲೆ ಶವವನ್ನು ಸಂಸ್ಕಾರಕ್ಕೆಂದು ಅದ್ದೂರಿಯಾಗಿ ಮೆರವಣಿಗೆಯಲ್ಲಿ ತೆಗೆದುಕೊಂಡು ಹೋದರಲ್ಲ! ಅದೇ ಕೊಂಚ ಸಮಾಧಾನ.

**೧ ನೇ ವ್ಯಕ್ತಿ:** ಈ ಹುಚ್ಚು ದೊರೆ ಬೇಕಾದರೆ ಗಾಜಿನ ಪೆಟ್ಟಿಗೆಯಲ್ಲಿಟ್ಟು ಅರಮನೆ ಬಾಗಿಲಲ್ಲಿ ಇರಿಸಿ ಪ್ರಜೆಗಳೆಲ್ಲ ದಿನಾ ಬಂದು ಈ ಶವಕ್ಕೆ ತಲೆಮುಟ್ಟಿ ನಮಸ್ಕಾರ ಮಾಡಬೇಕೂಂತ ಶಾಸನ ಮಾಡಲಿಲ್ಲವಲ್ಲ! ನಮ್ಮ ಪುಣ್ಯ!

**೫ ನೇ ವ್ಯಕ್ತಿ:** ಅದಿರಲಿ ಕಣ್ರಯ್ಯ ಅದ್ಯಾರೋ ದ್ರೋಹಿಗಳೀದೂಂತ ಒಂದು ಬಟ್ಟಲಲ್ಲಿ ರಕ್ತ ತಂದು ತಿಲಕಬೇರೆ ಇಟ್ಟರಲ್ಲ!!

**೬ ನೇ ವ್ಯಕ್ತಿ:** ಇದೆಲ್ಲ ನೋಡ್ತಾ ಇದ್ದರೆ ನಾವು ಮನುಷ್ಯರ ರಾಜ್ಯದಲ್ಲಿ ಇದ್ದೇವೋ ಇಲ್ಲ ದೆವ್ವಗಳ ರಾಜ್ಯದಲ್ಲಿ ಇದ್ದೇವೋ ಅಂತ ಅನುಮಾನ ಬರೋಕೆ ಶುರು ಆಗಿದೆ.

**೨ ನೇ ವ್ಯಕ್ತಿ:** ಬಿಡಯ್ಯ ನಿನ್ನ ಅನುಮಾನಕ್ಕೆ ಕೊನೇನೆ ಇಲ್ಲ. ಆಗಿರೋದರ ಬಗ್ಗೆ ಮಾತಾಡಿ ಪ್ರಯೋಜನವೇನು?..... ಇಂತಹ ರಾಜನ ಆಡಳಿತದಲ್ಲಿ ಮುಂದೇನೇನು ಆಗಬಹುದೋ ಅದನ್ನು ಯೋಚನೆ ಮಾಡು.

**೩ ನೇ ವ್ಯಕ್ತಿ:** ಅದೇನಯ್ಯ ನಮ್ಮೆಲ್ಲರ ಚಿಂತೆ, ಭಯ! ಐಲು ದೊರೆಯ ಅತಿರೇಕಗಳು ನಮ್ಮ ತಲೆಚಿಟ್ಟು ಹಿಡಿಯುವ ಹಾಗೆ ಮಾಡಿವೆ.

(ಭಾಗವತನ ಪ್ರವೇಶ)

**ಭಾಗವತ :** (ಎಲ್ಲರೂ ಗುಂಪುಗೂಡಿ ಹರಟೆ ಹೊಡೆಯುವುದನ್ನು ನೋಡಿ) ಏನ್ರಯ್ಯ ಎಲ್ಲ ಇಲ್ಲಿ ಸೇರಿಬಿಟ್ಟಿದ್ದೀರಿ?

**ಒಬ್ಬ :** ಏನಿಲ್ಲ ಭಾಗವತಪ್ಪ, ನೆನ್ನೆ ಸಮಾರಂಭದ ಬಗ್ಗೆ ಮಾತಾಡಿಕೊಳ್ತಾ ಇದ್ವಿ.

**ಭಾಗವತ :** ಅದೇನೋ ಐಲು ದೊರೆ, ಅತಿರೇಕ ಅಂತ ಏನೇನೋ ಮಾತಾಡಿಕೊಳ್ತಿದ್ದಿರಿ.

**೨ ನೇ ವ್ಯಕ್ತಿ:** (ಅನುಮಾನಿಸಿ) ಅದು.... ಅದು..... ಅದು

**ಭಾಗವತ :** ಗೊತ್ತು ಬಿಡಿ. ಕುಮಾರರು ಸಿಂಹಾಸನಾರೋಹಣ, ರಾಜ್ಯಾಭಿಷೇಕಗಳನ್ನು ನಡೆಸಿಕೊಂಡ ವಿಚಿತ್ರ ರೀತಿ ಬಗ್ಗೆ ಮಾತಾಡ್ತಿದ್ದೀರಿ..... ಆದರೆ ಅಣ್ಣಂದಿರಾ ಕಿರಿ ಪ್ರಭುಗಳ ರೀತಿ, ವರ್ತನೆ ನಿಮಗೆ ವಿಚಿತ್ರ ಅನಿಸಿದ್ದರೆ ಆಶ್ಚರ್ಯವಿಲ್ಲ. ಇದಕ್ಕೆಲ್ಲ ಕಾರಣ ಇದೆ. ಕುಮಾರ ಪ್ರಭುಗಳು ವಾತ್ಸಲ್ಯ ಹೃದಯಿಗಳು ಮುಗ್ಧರು. ಹಿಂಸೆ ಅನ್ನುವುದೇ ಅವರಿಗೆ ಗೊತ್ತಿರಲಿಲ್ಲ. ಕೈ ಹಿಡಿದ ಮಡದಿಯ ತಿರಸ್ಕಾರ, ಅವಹೇಳನ, ಕಟಕಿ, ಚುಚ್ಚು ಮಾತುಗಳು ಅವರೊಳಗಿನ ಪ್ರೀತಿಯ ಸೆಲೆಯನ್ನು ಬತ್ತಿಸಿದವು. ಅವರ ಬದುಕು ಬೆಂಗಾಡಾಯಿತು. ಪ್ರೀತಿಯ ಒರತೆಗಾಗಿ ಹಂಬಲಿಸಿದರು. ನೋವನ್ನು ಹಂಚಿಕೊಳ್ಳಲು ಆತ್ಮೀಯ ಹೃದಯವೊಂದಕ್ಕೆ ಎಳಸಿದರು. ಇಂದುಮತಿಯವರಿಂದ ಪ್ರೀತಿ, ಸ್ನೇಹ, ಸಮಾಧಾನಗಳು ಮತ್ತು ಹಂಬಲಿಸಿದ ಎಲ್ಲ ಕಾಮನೆಗಳಿಗೆ ತೃಪ್ತಿ ಸಿಕ್ಕಿತು. ತಂಪಿನ ಚಿಲುಮೆಯಾದಳು;

ನೆರಳಿನ ಕೊಡೆಯಾದಳು; ಆಸರೆಯ ತಾಣವಾದಳು. ನಿಷ್ಕಲ್ಮಶ ಪ್ರೀತಿಯನ್ನೇ ಧಾರೆ ಎರೆದಳು. ಅವನ ಸುಖಕ್ಕಾಗಿ ಅವಳು ಎಲ್ಲರ ನಿಂದೆಗಳನ್ನು, ತಿರಸ್ಕಾರ, ಅವಮಾನ, ಅನ್ಯಾಯಗಳನ್ನು ಸಹಿಸುತ್ತಲೇ ತನ್ನ ಪ್ರಿಯನ ಕ್ಷೇಮ ಕೋರಿ ಕೊನೆಗೆ ಕಟುಕರ ಕತ್ತಿಗೆ ಬಲಿಯಾದಳು. ಏನನ್ನೂ ಬಯಸದೆ ತನ್ನ ಪ್ರಾಣಾರ್ಪಣೆ ಮಾಡಿದ ಪ್ರೇಯಸಿಗಾಗಿ ಹೀಗೆ ಮಾಡಿದನೇ ಹೊರತು ಅವನು ಹುಚ್ಚನಲ್ಲ; ಕ್ರೂರಿಯಲ್ಲ, ಅವಳ ಪ್ರೀತಿಗೆ ಕೊಟ್ಟ ಕಾಣಿಕೆ, ಸಲ್ಲಿಸಿದ ಗೌರವಗಳು ಅಷ್ಟೆ!!

**ವ್ಯಕ್ತಿಗಳು :** ಇದೆಲ್ಲ ನಮಗೆ ಗೊತ್ತಿರಲಿಲ್ಲ ಭಾಗವತಯ್ಯ. ಏನೇನೋ ವದಂತಿಗಳು, ಕಟ್ಟು ಕತೆಗಳು! ಕೇಳಿ ಕೇಳಿ ನಾವು ತಪ್ಪಾಗಿ ತಿಳಿದಿದ್ದೆವು. ನಿಮ್ಮಿಂದ ಕತೆ ಕೇಳಿದ ಮೇಲೆ ಯುವರಾಜರ ಸ್ಥಿತಿಗೆ ಪಾಪ! ಎನಿಸುತ್ತದೆ.

**ಭಾಗವತ :** ಇಂತಹ ಸಂಗತಿಗಳು ಅಪರೂಪ. ಆದರೆ ಈ ನಿಷ್ಕಲ್ಮಶ, ಮುಗ್ಧ ಪ್ರಣಯಿಗಳ ನಿರ್ಮಲ ಪ್ರೀತಿ, ಗಾಢ ನಿಷ್ಠೆಗಳು ಇತಿಹಾಸದ ಪುಟಗಳಲ್ಲಿ ಸ್ವರ್ಣಾಕ್ಷರಗಳಲ್ಲಿ ಉಳಿಯುವುದೆಂಬುದರಲ್ಲಿ ಸಂದೇಹವಿಲ್ಲ. ಬನ್ನಿ ಯುವಪ್ರಭುಗಳ ಶ್ರೇಯಸ್ಸಿಗೆ ಪ್ರಾರ್ಥಿಸೋಣ.

**ಭಾಗವತ ಮತ್ತು**

**ವ್ಯಕ್ತಿಗಳು :** ಹಿಂದಿಲ್ಲದ ಮುಂದಿಲ್ಲದ
ಎಂದಿಲ್ಲದ ಈ ಕತೆಯು
ನವಿರೇಳಿಸಿ ಕಣ್ತುಂಬಿಸಿ
ಕಲಕಲು ಮನವ
ಮುದದೊಂದಿಗೆ ಹಾರೈಸುವ
ಈ ಜೀವದ ಸುಖಕೆ
ಉರಿದುರಿದೂ ಬರಡಾದ
ಅರಸನ ನೆಮ್ಮದಿಗೆ
ಮನದೇರುಗಳೆಲ್ಲವು
ಮರೆಯಾಗುತ ಚಿಗುರಲಿ
ಮತ್ತೊಮ್ಮೆ ಹಸಿರುಕ್ಕಿಸಿ
ಆ ದೇವನು ಮುದವೀಯಲಿ
ಮನಕೆ ಸಂತೃಪ್ತಿಯು
ಅವನಿಂದಲಿ ದೊರೆಯಲಿ ಜನಕೆ॥

೦೦

# ಪಾತ್ರವರ್ಗ

| | | |
|---|---|---|
| ಮಲ್ಲನಗೌಡ | – | ಊರಿನ ಶ್ರೀಮಂತ ಗೌಡ |
| ರುದ್ರವ್ವ | – | ಗೌಡನ ಹೆಂಡತಿ |
| ಮಾದೇವಿ | – | ರುದ್ರವ್ವ, ಗೌಡರ ಮಗಳು |
| ವಿಕ್ರಮರಾಯ | – | ರಾಜ |
| ರಾಜಮಾತೆ | – | ರಾಜನ ಹಿರಿಯ ರಾಣಿ |
| ರಾಜಶೇಖರ | – | ಯುವರಾಜ |
| ಪದ್ಮ | – | ಮಾದೇವಿಯ ದಾಸಿ |
| ಮಲ್ಲಿಕಾ | – | ರಾಜಮಾತೆಯ ದಾಸಿ |

**ಇತರ ಪಾತ್ರಗಳು:**

ಭಾಗವತ

ಜ್ಯೋತಿಷಿ

ಮಂತ್ರಿ

ಸೇನಾಪತಿ

ಊರಿನ ಹಿರಿಯ ಹೆಂಗಸರು

ಪ್ರಜೆಗಳು (ವ್ಯಕ್ತಿಗಳು)

# ದೃಶ್ಯ - ೧

(ರಂಗದ ಮೇಲೆ ಮಂದ ಬೆಳಕು. ಒಂದು ಕ್ಷಣ ರಂಗವು ನೀರವತೆಯಿಂದ ತುಂಬಿರುತ್ತದೆ. ನಿಧಾನವಾಗಿ ರಂಗದ ಒಂದು ಬದಿಯಿಂದ ಭಾಗವತ ಪ್ರವೇಶಿಸುತ್ತಾನೆ. ಮತ್ತೊಂದು ಕಡೆಯಿಂದ ವ್ಯಕ್ತಿಯೊಬ್ಬ ಪ್ರವೇಶಿಸುತ್ತಾನೆ)

**ಭಾಗವತ** : ಒಮ್ಮೆ ಪ್ರೇಕ್ಷಕರ ಕಡೆ ಕಣ್ಣು ಹಾಯಿಸುತ್ತಾನೆ. ಮತ್ತೊಮ್ಮೆ ಬಂದ ವ್ಯಕ್ತಿಯ ಕಡೆ ದೃಷ್ಟಿ ಹಾಯಿಸುತ್ತಾನೆ (ನಂತರ ಪ್ರೇಕ್ಷಕರನ್ನು ಕುರಿತು) ಪ್ರೇಕ್ಷಕ ಮಹಾಶಯರಿಗೆ ನಮಸ್ಕಾರ. ಇವತ್ತು ನಿಮ್ಮ ಮುಂದೆ ಹೊಸ ನಾಟಕವೊಂದನ್ನು ಪ್ರದರ್ಶಿಸಬೇಕೆಂದಿದ್ದೇವೆ. ದಯವಿಟ್ಟು ತಾವೆಲ್ಲರೂ ಸಾವಧಾನದಿಂದ ಕುಳಿತು ನಮ್ಮಾಟ ನೋಡಿ ಹೋಗಬೇಕೆಂದು ಪ್ರಾರ್ಥನೆ.

**ಪ್ರೇಕ್ಷಕ** : (ಎದ್ದು ನಿಂತು) ಸ್ವಾಮಿ ಅದೇನು ಹೊಸಾ ನಾಟಕ ಆಡ್ತೀರೀಂತ ಹೇಳಿ ಹೋಗಿ.

**ಭಾಗವತ** : (ಸಮಾಧಾನದಿಂದ) ಆತುರ ಬೇಡ ತಮ್ಮ. ಇನ್ನೇನು ಭಗವಂತನ ಪ್ರಾರ್ಥನೆ ಮಾಡಿ ಆಟ ಶುರುಮಾಡಲಿಕ್ಕೆ ಇದ್ದೇವೆ. (ವ್ಯಕ್ತಿಯ ಕಡೆ ನೋಡಿ) ಏನಯ್ಯಾ ಸುಮುಖ! ನಟರು ಎಲ್ಲ ಸಿದ್ಧವಾಗಿದ್ದಾರೋ ಹೇಗೆ?

**ಸುಮುಖ** : ಗುರುವೇ ಆ ಮಾತು ಹೇಳಲೆಂದೇ ಬಂದೆ. ನಿಮ್ಮ ಆದೇಶಕ್ಕಾಗಿ ಕಾಯ್ತಿದ್ದಾರೆ.

**ಭಾಗವತ** : ಹಾಗಾದರೆ ಹೋಗು. ನಾವು ಪ್ರಾರ್ಥನೆ ಮಾಡಿ ಬರುವವರಿದ್ದೇವೆ.

**ಸುಮುಖ** : ಅಪ್ಪಣೆ ಗುರುಗಳೇ. (ಹೋಗುವನು)

**ಭಾಗವತ** : ನೋಡಿದಿರಾ ಪ್ರೇಕ್ಷಕರೇ. ನಿಮ್ಮ ಸಹೃದಯ ಮನಸ್ಸುಗಳಿಗೆ ಸಂತೋಷ ನೀಡಲು ನಾವೆಷ್ಟು ಕಾತರರಾಗಿದ್ದೇವೆ!......ಬನ್ನಿ ನೀವೂ ನನ್ನೊಟ್ಟಿಗೆ ವಿನಾಯಕನ ಮತ್ತು ಶಂಭುಲಿಂಗನ ಸ್ಮರಣೆ ಮಾಡಿ. (ಎಂದು ಹಾಡಲು ಶುರುಮಾಡುತ್ತಾನೆ)

ಗಜಮುಖನೆ ಗೌರಿ ಪುತ್ರನೆ
ವಂದಿಪೆನು ನಿನಗಯ್ಯ
ನೀನೆಮ್ಮ ಸಲಹುತಲಿ
ಭಜಿಸುತಲಿ ನಲಿವವನೆ
ಬೇಡಿ ಭಜಿಸುವ ಜನಕೆ
ನೀಡುತಲಿ ನಲಿವವನೆ
ಮೊರಗಿವಿಯ ಮೋಹನನೆ
ಮೂಷಕದ ವಾಹನನೆ
ದಂತ ಭಗ್ನದಲೂ ಸುಂದರನೆ
ಹಾವನಡುವಿಗೆ ಬಿಗಿದವನೆ
ವಿಘ್ನಗಳೊರೆಸಿ ಮಂಗಳವಿರಿಸಿ
ಸಲಹು ನಮ್ಮನು ಪಾವನನೆ–

(ಎಂದು ಹಾಡುತ್ತಿರುವಷ್ಟರಲ್ಲಿ ನಾಲ್ಕು ಮಂದಿ ಭಜನೆ ಮೇಳದವರು ಶಂಭುಲಿಂಗನನ್ನು ಸ್ತುತಿಸುತ್ತ ಗೆಜ್ಜೆ ಹಜ್ಜೆಗಳ ಕುಣಿಸುತ್ತ ರಂಗ ಪ್ರವೇಶ ಮಾಡುವರು.)

**ಮೇಳ** : ಶರಣೆನ್ನಿರೋ ಶರಣೆನ್ನಿರೋ
ಶಂಭುಲಿಂಗ ಶಿವಗೆ ಶರಣೆನ್ನಿರೋ
ಕೈಲಾಸಗಿರಿ ಮ್ಯಾಲೆ
ಗೌರಿಗಂಗೆಯರಿರಿಸಿ
ಸಂತಸದಿಂದಲಿ ನಲಿವ ಶಿವಗೆ
ಗರಳ ಕೊರಳಲಿ ಇರಿಸಿ
ಸರ್ಪಭೂಷಣ ಧರಿಸಿ
ಲೋಕವ ಪಾಲಿಪ ಶಿವನಿಗೆ ಶರಣೆನ್ನಿ
ಬೇಡಿ ಬೇಡಿದ ವರವ
ನೀಡಿ ಸಲಹುವ ನಮ್ಮ
ಶಂಭೂಲಿಂಗನ ಪಾದಕ್ಕೆ ಶರಣೆನ್ನಿ

**ಭಾಗವತ** : (ಮೇಳದವರಿಗೆ) ಅಪ್ಪಾ ನಿಮ್ಮ ಭಜನೆ ಮುಗಿದಿದ್ದರೆ ನೀವಿನ್ನು ದಯಮಾಡಿ. (ಎಂದು ಹೇಳಿ ಪ್ರೇಕ್ಷಕರ ಕಡೆ ತಿರುಗಿ) ಇಂತಹ ಶಂಭುಲಿಂಗನ ಮಹಾಭಕ್ತನಾಗಿದ್ದ ಮಲ್ಲನಗೌಡ ಮತ್ತು ಅವನ ಮಡದಿ ರುದ್ರವ್ವನ ಮಗಳು ಮಾದೇವಿ ಕತೇನ ನಿಮಗೆ ಆಡಿ ತೋರಿಸಬೇಕೆಂದಿದ್ದೇವೆ. ಪ್ರೇಕ್ಷಕರು ಕೇಳುವಂತಾಗಬೇಕು.

**ಪ್ರೇಕ್ಷಕ** : ಅಣ್ಣಾ.....ನಿನ್ನ ಪ್ರಾರ್ಥನೆ ಪುರಾಣ ಸಾಕು ಮಾಡಿ ಆಟ ಆರಂಭ ಮಾಡು. ಆ ಮಾದೇವಿ ಯಾರೂಂತ ಮೊದಲು ಹೇಳಿ ಹೋಗು.

**ಭಾಗವತ** : (ಹೆಜ್ಜೆ ಗತ್ತುಗಳೊಂದಿಗೆ)

ಹೇಳತ್ತೀನಿ ಕೇಳೋ ತಮ್ಮ
ಮಾದೇವಿ ಕತೆ ನಿನಗೆ
ಹೇಳತೀನಿ ಕೇಳೋ ತಮ್ಮ
ಮಲ್ಲನಗೌಡನ ಮಡದಿ ರುದ್ರವ್ವ
'ಮಕ್ಕಳಿಲ್ಲದ ಮನೆಯು
ಸುಡುಗಾಡು ನನಗಾಯ್ತು
ಮಕ್ಕಳ ಕೊಡು ನನಗೆ
ಶಂಭು ಲಿಂಗನೆ ಶಿವನೆ,
ಎಂದೆಂದು ಬೇಡುತ್ತ
ವ್ರತವ ನೂರೆಂಟು ಮಾಡಿ
ದಣಿದಳು ಸಾವ ಕೋರಿದಳು.

(ಮಾತು) ಇಂತಹ ಅವಳ ಸ್ಥಿತಿಗೆ ಕರಗಿ ಮರುಗಿ ಶಂಭುಲಿಂಗ ಒಬ್ಬ ಪುತ್ರಿಯನ್ನು ಕರುಣಿಸಿದ. ಅರಮನೆಯಂತ ಅರಮನೇಲಿ ಸಂಭ್ರಮ ಸೊಕ್ಕಿ ಹರೀತು. ಸುಖ ದಳದಳ ಅರಳಿತು. ಮುದುಡಿ ಹೋಗಿದ್ದ ಗೌಡ ಗೌಡಿತಿಯ ಹೃದಯದ ತೋಟಗಳು ನಳನಳಿಸಿ ನಲಿಯಿತು. ಮಾದೇವನ ಕರುಣೆಯ ಪ್ರಸಾದವಾದವಳಿಗೆ ಮಾದೇವೀಂತ ಹೆಸರಿಟ್ಟರು. ಮಾದೇವಿ ಬೆಳೆದಳು ಬೆಳೆದಳೂ! ಮಲ್ಲಿಗೆಯ ಬಿಳುಪಾಗಿ, ರತಿಯ ರೂಪಾಗಿ, ಶಶಿಯ ಕಾಂತಿಯಾಗಿ, ಕೋಗಿಲೆಯ ಇಂಪಾಗಿ, ಗಾಳಿಯ ತಂಪಾಗಿ, ಚಿಕ್ಕೀಯ ಹೊಳಪಾಗಿ ಬೆಳೆದು ಪ್ರಾಯಕ್ಕೆ ಬಂದಳು. ಪ್ರಾಯದ ಮಗಳಿಗೆ ಮದುವೆ ಮಾಡುವ ಚಿಂತೆಯಲ್ಲಿದ್ದಾನೆ ಮಲ್ಲನಗೌಡ.

(ಅಷ್ಟರಲ್ಲಿ ಹಿನ್ನೆಲೆಯಿಂದ ಭಾಗವತಪ್ಪ ! ಭಾಗವತಪ್ಪ............ಎಲ್ಲಿದ್ದೀಯ.........ಸ್ವಲ್ಪ ಬೇಗ ಬಾ.......ಮಲ್ಲನಗೌಡ ಒಡೆಯರು ತುರ್ತಾಗಿ ಬರಬೇಕಂತ ಹೇಳ್ತಿದ್ದಾರೆ ಎಂದು ಹೇಳುತ್ತ ಗೌಡನ ಕಡೆಯ ವ್ಯಕ್ತಿ ಪ್ರವೇಶಿಸುತ್ತಾನೆ)

**ವ್ಯಕ್ತಿ** : ಭಾಗವತಪ್ಪ ನೀನು ಈ ಕೂಡಲೇ ಬರಬೇಕಂತ ಒಡೆಯರ ಅಪ್ಪಣೆ ಆಗಿದೆ. ನಿನ್ನೊಟ್ಟಿಗೆ ಏನೋ ಮಾತಾಡಬೇಕೆಂತ ಹಾದಿ ಕಾಯ್ತಿದ್ದಾರೆ. ಬೇಗ ಬಾ ಹೋಗೋಣ. (ಹೋಗುವರು.)

OO

# ದೃಶ್ಯ - ೨

(ಗೌಡನ ಮನೆ. ಸಾಕಷ್ಟು ಶ್ರೀಮಂತಿಕೆಯ ಲಕ್ಷಣಗಳು ಕಾಣಿತ್ತಿವೆ. ರುದ್ರವ್ವ ಸಕಲಾಭರಣ ಭೂಷಿತೆಯಾಗಿದ್ದಾಳೆ. ಗೌಡನೂ ಶ್ರೀಮಂತಿಕೆಗೆ ತಕ್ಕ ಹಾಗೆ ಜರತಾರಿ ಅಂಚಿನ ಪಂಚೆ, ಬೆರಳಲ್ಲಿ ಉಂಗುರಗಳು, ಕಿವಿಯಲ್ಲಿ ಒಂಟಿಗಳು, ಕೈಯಲ್ಲಿ ಚಿನ್ನದ ಕಡಗ. ಗೌಡರು ಪಡಸಾಲೆ ಮಧ್ಯದಲ್ಲಿನ ತೂಗುಯ್ಯಾಲೆಯಲ್ಲಿ ನಿಧಾನವಾಗಿ ಜೀಕುತ್ತ ಚಿಂತಾಮಗ್ನರಾಗಿದ್ದಾರೆ. ಅವರಿಗೆ ಸ್ವಲ್ಪ ದೂರದಲ್ಲಿ ರುದ್ರವ್ವ ಕಂಬಕ್ಕೆ ಒರಗಿ ಕುಳಿತಿದ್ದಾಳೆ.)

**ಗೌಡ** : (ಜೀಕುತ್ತಲೇ ವ್ಯಥೆಯ ದನಿಯಲ್ಲಿ) ರುದ್ರಾ..........ಈಗೇನು ಮಾಡುವುದು? ಸಂತಾನವಿಲ್ಲದ ಸೊರಗಿ ಸೋತಿದ್ದ ನಮಗೆ ವಂಶಾಭಿವೃದ್ಧಿಗೆ ಮಗನನ್ನು ಕರುಣಿಸೆಂದು ಬೇಡಿದ ನಮಗೆ ಮಗಳನ್ನಾದರೂ ಕರುಣಿಸಿದ್ದಾನಲ್ಲ ಅನ್ನೋ ಸಂತೋಷವಿತ್ತು.

**ರುದ್ರವ್ವ** : (ಧೈರ್ಯ ತುಂಬುವ ಧ್ವನಿಯಲ್ಲಿ) ಸಂತೋಷವಿತ್ತು ಅಂತ ಯಾಕಂತೀರಿ. ಈಗ ನಿಮಗೇನಾಗಿದೆ? ನಮ್ಮ ಮಗಳು ಮಾದೇವಿ ಈ ಲೋಕದ ಕೂಸಲ್ಲ. ಸಾಕ್ಷಾತ್ ಪಾರ್ವತಾ ತಾಯೀನೇ ಅಂತ ಆ ಸ್ವಾಮಿಗಳು ಹೇಳಲಿಲ್ಲವೇ? ಇವಳಿಂದ ನಮ್ಮ ವಂಶ ಉದ್ಧಾರ ಆಗುತ್ತೆ ಅಂತಲೂ ಹೇಳಲಿಲ್ಲವೇ?

**ಗೌಡ** : ಹೇಳಿದರು ರುದ್ರ. ಆದರೆ ಅದರ ಜೊತೇಗೆ ಸ್ವಾಮಿಗಳು ಇನ್ನೂ ಒಂದು ಮಾತು ಹೇಳಿದ್ದನ್ನು ಮರೆತು ಬಿಟ್ಟೆಯಾ? ಮಾದೇವಿಗೆ ಮದುವೆಯಾದ ಕೂಡಲೇ ಗಂಡಾಂತರ ಇದೆ ಅಂದರು. ಆ ಗಂಡಾಂತರ ಹೇಗೆ ಬರುತ್ತೋ! ನಮ್ಮ ಮಗಳು ಮಾದೇವಿ ಭವಿಷ್ಯದ ಬಗ್ಗೆ ನನಗೆ ಚಿಂತೆಯಾಗಿದೆ......ಅವಳಿಗೆ ಒಬ್ಬ ಅನುರೂಪವರನನ್ನು ಹುಡುಕಿ ಮದುವೆ ಮಾಡೋಣವೆಂದರೆ ಅವಳಿಗೆ ಯೋಗ್ಯನಾದ ವರ ಸಿಗಲಿಲ್ಲ ಅನ್ನೋ ಚಿಂತೆ ಒಂದಾದರೆ, ಸಿಕ್ಕಿ ಮದುವೆಯಾದರೆ

ಎಂಥ ಗಂಡಾಂತರ ಎದುರಾಗುವುದೋ ಅನ್ನೋ ಭಯ ಬೇರೆ.

(ಭಾಗವತನ ಪ್ರವೇಶ)

**ಭಾಗವತ** : ಅಡ್ಡಬಿದ್ದೆ ಒಡೇರ ಹೇಳಿ ಕಳಿಸಿದರಂತೆ. ಅಪ್ಪಣೆಯಾಗಬೇಕು.

**ಗೌಡ** : ಬುದ್ಧಿವಂತ. ನಮ್ಮ ಸಮಸ್ಯೆಗೆ ನಿನ್ನಿಂದಲೇ ಪರಿಹಾರ ದೊರೀಬೇಕು.

**ಭಾಗವತ** : ನಾ ಎಷ್ಟರವನು ಒಡೆಯ. ಆದರೂ ನಿಮ್ಮ ಸಮಸ್ಯೆ ಏನೂಂತ ಹೇಳಿ. ನಾ ನನ್ನ ಕೈಯ್ಯಾರ ಏನಾದರೂ ಸಹಾಯ ಮಾಡಲಿಕ್ಕೆ ಆದರೆ ಮಾಡ್ತೀನಿ.

**ಗೌಡ** : ಅದೇ ಭಾಗವತಪ್ಪ ನಮ್ಮ ಮಾದೇವಿಯ ವಿಚಾರ ನಮಗೊಂದು ಸಮಸ್ಯೆಯಾಗಿದೆ. ಮದುವೆ ಮಾಡಿದರೆ ಒಂದು ಸಮಸ್ಯೆ. ಮಾಡದಿದ್ದರೆ ಒಂದು ಸಮಸ್ಯೆ.

**ಭಾಗವತ** : ಗೌಡರೇ ಇದೇನು ಹೀಗೆ ಒಗಟಾಗಿ ಮಾತಾಡ್ತೀರಿ. ಬಿಡಿಸಿ ಹೇಳಿ.

**ಗೌಡ** : ಮಾದೇವಿಗೆ ಮದುವೆ ಮಾಡದೆ ಕನ್ಯೆಯಾಗಿಯೇ ಉಳಿಸಿಕೊಳ್ಳೋದು ನಮ್ಮ ದೊಡ್ಡ ಅಪರಾಧ. ಮದುವೆ ಮಾಡಿ ಕಳಿಸೋಣವೆಂದರೆ ಅವಳಿಗೊಂದು ಗಂಡಾಂತರ ಕಾದಿದೆ ಅಂತ ಸ್ವಾಮಿಗಳು ಅಪ್ಪಣೆ ಕೊಡಿಸಿದ್ದಾರೆ. ಇಂಥ ಸಮಯದಲ್ಲಿ ನಾವು ಏನು ಮಾಡಬೇಕೆನ್ನುವುದು ನಮಗೆ ತೋಚುತ್ತಿಲ್ಲ.

**ಭಾಗವತ** : ಅದಕ್ಕೆ ಒಂದು ಉಪಾಯವಿದೆ. ಸಿದ್ಧಲಿಂಗ ಮಠದ ಮಹಂತ ಸ್ವಾಮಿಗಳ ಪಾದಕ್ಕೆ ಅರಿಕೆ ಮಾಡಿಕೊಂಡರೆ ಅವರೇ ಏನಾದರೂ ದಾರಿ ತೋರಿಸಿಯಾರು. ಸ್ವಾಮಿಗಳ ಮೇಲೆ, ಶಂಬುಲಿಂಗನ ಮೇಲೆ ಭಾರ ಹಾಕಿ ಮಾಡಬೇಕಾದ್ದನ್ನು ಮಾಡಿ ಬಿಡಿ. ಆಗುವುದು, ಆಗಬೇಕಾದ್ದೆಲ್ಲ ಅವನಿಚ್ಛೆ.

**ಗೌಡ** : ಹಾಗಾದರೆ ನಾಳೆ ಹೊತ್ತಾರೆ ಸ್ವಾಮಿಗಳನ್ನು ಕಂಡು, ಅಪ್ಪನವರ ಆದೇಶ ಪಡೆದು ಬರೋಣ (ಗೌಡಪ್ಪನ ಕಡೆ ತಿರುಗಿ) ರುದ್ರ ನಾಳೆ ನಾವು ಹೊರಡುವುದಕ್ಕೆ ಎಲ್ಲ ಸಿದ್ಧತೆ ಮಾಡು. ಮಾದೇವಿ ನಮ್ಮೊಟ್ಟಿಗೆ ಬರಲಿ. ಸ್ವಾಮಿಗಳ ಹರಕೆಯಿಂದ ಮಾದೇವಿಯನ್ನು ಕಾಡುವ ಅನಿಷ್ಟಗಳು ದೂರವಾಗಲಿ. ಹಾಗೇ ಸ್ವಾಮಿಗಳೇ ಅವಳಿಗೆ ಯೋಗ್ಯನಾದ ವರನನ್ನು ಸೂಚಿಸಿಯಾರು.

**ರುದ್ರಪ್ಪ** : ಹಾಗೇ ಆಗಲಿ......ಸ್ವಾಮಿಗಳ ಹರಕೆ ಶಂಭುಲಿಂಗನ ಕರುಣೆ ನಮ್ಮ ಮೇಲೆ ಇದ್ದೇ ಇರುತ್ತೆ. ಬರುವಾಗ ಶಂಭುಲಿಂಗನ ದರ್ಶನವನ್ನೂ

ಮಾಡಿ ಬರೋಣ. ನಮ್ಮ ಆಸೆಗಳು ಕೈಗೂಡಿದರೆ ಶಂಭುಲಿಂಗನ ಗುಡೀಲಿ ಸಾವಿರದೊಂದು ಲಿಂಗಗಳನ್ನು ಪ್ರತಿಷ್ಠಾಪಿಸೋಣ.

**ಭಾಗವತ** : ಹಾಗಾದರೆ ನನಗೆ ಅಪ್ಪಣೆಯಾಗಲಿ. ಹೊತ್ತಾರೆ ಎದ್ದು ಬರುತ್ತೇನೆ.

**ಗೌಡ** : ಭಾಗವತಪ್ಪ ನಿಲ್ಲು. ಆಸರು ತೀರಿಸಿಕೊಂಡು, ಉಂಡು ಹೋಗಬಹುದಲ್ಲ.

**ಭಾಗವತ** : ಇಲ್ಲ ಗೌಡರೇ.........ನಾನೀಗ ಹೋಗಬೇಕಿದೆ. ನನಗೆ ಅಪ್ಪಣೆಯಾಗಲಿ.

(ಭಾಗವತ ಹೊರಡುತ್ತಾನೆ. ಗೌಡ, ರುದ್ರವ್ವ ಅವನು ಹೋದ ದಿಕ್ಕಿನತ್ತ ನೋಡುತ್ತಿರುತ್ತಾರೆ.)

೦೦

# ದೃಶ್ಯ – ೩

(ಗೌಡನ ಮನೆಯ ಹಿತ್ತಿಲಿಗೇ ಅಂಟಿಕೊಂಡಂತೆ ಇರುವ ಮಲ್ಲಿಗೆ ಬನ. ಮಾದೇವಿ ಸಪ್ಪೆ ಮೋರೆ ಹಾಕಿ ಕುಳಿತಿದ್ದಾಳೆ. ಪಕ್ಕದಲ್ಲಿ ಗೆಳತಿ ನೀಲ ಕೂತಿದ್ದಾಳೆ. ಇಬ್ಬರೂ ಸ್ವಲ್ಪ ಹೊತ್ತು ಒಬ್ಬರನ್ನೊಬ್ಬರು ನೋಡಿಕೊಳ್ಳುತ್ತಾರೆ. ನಂತರ ಮಾದೇವಿ ಮಾತಿಗೆ ತೊಡಗುತ್ತಾಳೆ.)

**ಮಾದೇವಿ :** (ನಿಟ್ಟುಸಿರಿಟ್ಟು) ನೀಲಾ ನನಗೆ ಅನ್ನಿಸುತ್ತೆ. ನಾನು ಹುಟ್ಟಬಾರದಿತ್ತು ಅಂತ!.......ಅಪ್ಪಯ್ಯ, ಅವ್ವ ಪಡೋ ಸಂಕಟ ನೋಡುವುದಕ್ಕೆ ಆಗುತ್ತಿಲ್ಲ. ಬಾಯಿ ಬಿಟ್ಟು ಅವರ ಚಿಂತೆ ಏನುಂತ ತಿಳೀತಿಲ್ಲ. ನನ್ನ ಮದುವೇನೆ ಅವರ ಚಿಂತೆಗೆ ಕಾರಣವಾಗುವುದಾದರೆ ನನಗೆ ಮದುವೇನ ಬ್ಯಾಡಾಂತೀನಿ. ಹೇಗೂ ಅಪ್ಪಯ್ಯಗ ಗಂಡು ಮಗ ಇಲ್ಲ. ನಾನೇ ಗಂಡು ಮಗ ಅಂತ ತಿಳಿದುಕೊಬಾರದೇಕೆ?

**ನೀಲ :** ಗೆಳತೀ ನೀನು ಸೂಚಿಸುವಷ್ಟು ಸುಲಭವಲ್ಲ ಪರಿಹಾರ. ನೀ ಹೀಗೆ ಮದುವೇನೇ ಆಗದೆ ಕೂತರೆ ಊರ ಮಂದಿ ಬಾಯಿಗಳು ಸುಮ್ಮನಿರಲಾರವು. ಈಗಲೇ ಮಂದಿ ನಾಲಗೆಗಳು ಹುಚ್ಚಾಪಟ್ಟೆ ಹೊರಳಾಡ್ತಿವೆ. ಲಂಗುಲಗಾಮು ಇಲ್ಲದೆ ಮಾತಿನ ಕುದುರೆಗಳು ಹೂರ ಬಿದ್ದಿವೆ.......ನೀನು ಯಾಕೆ ಚಿಂತೆ ಮಾಡ್ತಿ. ನಿನ್ನಂತ ಚೆಲುವೀಗೆ ಅರಸು ಕುಮಾರನೇ ಬರ್ತಾನೆ.

**ಮಾದೇವಿ :** ನನ್ನ ಪ್ರೀತಿಯ ಗೆಳತಿ. ನನ್ನ ವಿಚಾರವಾಗಿ ಎಷ್ಟು ಆಸೆ ತುಂಬಿ ಮಾತಾಡ್ತಿ.

**ನೀಲ :** ಬರೀ ಮಾತಲ್ಲ. ನನಗೆ ಭಾಗವತಪ್ಪ ಸಿಕ್ಕಿ ಎಲ್ಲ ಹೇಳಿದ. ಮೊನ್ನೆ ಸ್ವಾಮಿಗಳ ಹತ್ತಿರ ಹೋಗಿದ್ದರಲ್ಲ. ನಿನ್ನನ್ನು ಹರಸಿ, ನೀನು ಹೊರಗೆ ಹೋದ ಮೇಲೆ ಸ್ವಾಮಿಗಳು ಅಪ್ಪಣೆ ಕೊಡಿಸಿದರಂತೆ. ನಿನಗೆ ಅರಸು ಕುಮಾರನೇ ಗಂಡನಾಗ್ತಾನೇಂತ.

**ಮಾದೇವಿ :** ನೀಲ ನೀನು ಎಷ್ಟೇ ಹೇಳು ನನಗೆ ನನ್ನ ಭವಿಷ್ಯದ ಬಗ್ಗೆ ಹೆದರಿಕೆ ಆಗಿದೆ. ಅನಿಷ್ಟ ಕನಸುಗಳಿಂದ ತತ್ತರಿಸಿ ಹೋಗಿದ್ದೇನೆ.

**ನೀಲ :** ಅಷ್ಟೊಂದು ನೊಂದುಕೊಳ್ಳಬೇಕಾದ ಅಗತ್ಯವಿಲ್ಲ. ಅವೆಲ್ಲ ಬರೀ ಕನಸುಗಳು. ಕನಸುಗಳು ನಿಜವಾಗುವುದಿಲ್ಲ. ನಿನಗೆ ಒಳ್ಳೆಯದೇ ಆಗುತ್ತದೆ. ಆಡುವವರ ಬಾಯಿಗೆ ಬೀಗ ಬಿದ್ದು, ಅವರು ಬೆಚ್ಚಿ ಬೀಳುವಂತಹ ಅದೃಷ್ಟ ನಿನ್ನದಾಗುತ್ತದೆ.

(ಹಿನ್ನೆಲೆಯಲ್ಲಿ ಕೇಳ್ರಪೋ ಕೇಳ್ರಿ............ಇಂದ್ರಪುರದ ಅರಸರ ನಿರೂಪ ಏನೆಂದರೆ..........ಎಂದು ಕೇಳಿಸುತ್ತದೆ)

**ಮಾದೇವಿ :** (ಬೆಚ್ಚಿ) ನೀಲ...........ಅದೇನು ನೋಡು. ಡಂಗುರದವನು ಏನನ್ನೋ ಸಾರುತ್ತಿದ್ದಾನೆ. ಈ ಊರಿಗೂ ಇನ್ನೇನು ಬರಲಿದೆಯೋ...........ದೇವರೇ!

**ನೀಲ :** ಗೆಳತೀ ಇದೇನು ನಿನ್ನ ಆಲೋಚನೆ. ಯಾವಾಗಲೂ ಅನಿಷ್ಟದ ಆಲೋಚನೆ.............ಹತಾಶೆಯ ಭಾವನೆಗಳು! ಒಳ್ಳೆಯುದನ್ನು ಆಲೋಚಿಸುವುದಕ್ಕೇ ಆಗುವುದಿಲ್ಲವೇ ನಿನಗೆ? ಸ್ವಲ್ಪ ನೆಮ್ಮದಿಯಿಂದ ಸುಮ್ಮನಿರು. ನಾನು ಹೋಗಿ ವಿಚಾರಿಸಿಕೊಂಡು ಬರುತ್ತೇನೆ.

**ಮಾದೇವಿ :** ಸರಿ ನೀನು ಹೋಗು. ಹೋಗಿ ವಿಷಯ ಏನೆಂದು ಸರಿಯಾಗಿ ವಿಚಾರಿಸಿಕೊಂಡು ಬಾ. (ಹೋಗುತ್ತಾಳೆ) (ಮುಂದುವರೆಸುತ್ತಾ ತನ್ನೊಳಗೆ) ಓ ಶಿವನೇ ಈ ಕನಸುಗಳೇಕೆ ನನ್ನನ್ನು ಹೀಗೆ ಕಾಡುತ್ತಿವೆ.........ಅಬ್ಬ! ಎಂತಹ ಕನಸು! ನೀಲಿ ಕುದುರೆ ಮೇಲೆ ಬೆಳ್ದಿಂಗಳು ಸವಾರಿ ಮಾಡುತ್ತಾ ನನ್ನ ಕೋಣೆಗೆ ಬಂದ. ಜಿಗಿದ ಬಾಗಿಲುಗಳು ತಾವೇ ತೆರೆದುಕೊಂಡವು. ಬಂದವನೇ ಜಿಗಿದು ಒಳನುಗ್ಗಿ ನನ್ನನ್ನು ಎತ್ತಿಕೊಂಡು ಕುದುರೆಮೇಲೆ ಕೂರಿಸಿಕೊಂಡು ಓಡಿದ ಓಡಿದ...........ಓಡುತ್ತಲೇ ಇದ್ದ.........ಎಲ್ಲಿಗೆಂತ ತಿಳೀಲಿಲ್ಲ. ದಟ್ಟ ಕಾಡು. ನೇತಾಡುವ ಹಾವು. ರಾಕ್ಷಸ ಮರಗಳು ಭಯಂಕರ ಕೂಗುಗಳು...ಘೋರ ಪ್ರಪಾತಗಳು!...........ಗದಗುಡುತ್ತಿದ್ದೆ. ಗಟ್ಟಿಯಾಗಿ ಅವನನ್ನು ಅಪ್ಪಿದೆ...... ಅವನು ಮಾತ್ರ ಸಲೀಸಾಗಿ ಜಿಗಿಯುತ್ತಿದ್ದ......... ಎಲ್ಲಿಗೆಲ್ಲಿಗೋ ಹೋಗುತ್ತಿದ್ದ......... ನದೀ ಬೆಟ್ಟ ಗುಡ್ಡ....... ಇನ್ನೂ ದೂರ....... ದೂರ! ತೇಲುವ ಮೋಡಗಳಾಚೆ.....ಲಕ್ಷ ಲಕ್ಷ ನಕ್ಷತ್ರ ನಗರಿಗಳಾಚೆ..... ಓಹ್.......... ಹೋಗುತ್ತಲೆ ಇದ್ದ......... ಆಮೇಲೆ.......... ಆಮೇಲೆ............ ಯಾವುದೋ ದೈತ್ಯ ಮಿಂಚೊಂದು ಫಳಕ್ಕೆನಿಸಿ ಮರೆಯಾಯಿತು. ಚಿಟ್ಟನೆ ಚೀರಿದೆ.......... ಅವನಿಲ್ಲ. ಕುದುರೆಯಿಲ್ಲ...... ನಾನೊಂದು ಪ್ರಪಾತದೊಳಗೆ ಬಿದ್ದಿದ್ದೇನೆ. ನೂರೆಂಟು

ರಾಕ್ಷಸ ಬಾಯಿಗಳು......... ಗವ್ವೆನುವ ಕತ್ತಲು! ....... ಏನು...... ಏನು........ಇದೆಲ್ಲ ಏನಾಗುತ್ತಿದೆ.......... ಇದರ ಅರ್ಥವೇನು?......... ನನಗೇನಾಗುತ್ತಿದೆ? ನಾನೇಕೆ ಹೀಗೆ ಆಗಿದ್ದೇನೆ? (ಎಂದು) ಕುಸಿದು ಕುಳಿತುಕೊಳ್ಳುತ್ತಾಳೆ.

**ನೀಲ** : ಗೆಳತಿ.......ಗೆಳತಿ.........(ಗೆಲುವಿನಿಂದ) ಒಂದು ಸಂತೋಷದ ಸುದ್ದಿ. ಆ ಡಂಗುರದವ ಊರಿನ ಬೀದಿ ಬೀದಿಗಳಲ್ಲಿ........ಊರೂರುಗಳಲ್ಲಿ ಏನು ಸಾರುತ್ತಿದ್ದಾನೆ ಗೊತ್ತೆ?

**ಮಾದೇವಿ** : (ಉತ್ತರವಿಲ್ಲ)

**ನೀಲ** : (ಆಶ್ಚರ್ಯದಿಂದ) ಅರೆ ನಾನು ಮಾತಾಡಿಸುತ್ತಿದ್ದರೆ ನೀನು ಹೀಗೆ ಮೌನವಾಗಿ ಕುಳಿತರೆ ನಾನೇನು ಮಾಡಬೇಕು. ತಲೆಯ ಮೇಲೆ ಆಕಾಶ ಕಳಚಿ ಬಿದ್ದಂತೆ ಕೂತಿರುವೆಯಲ್ಲ........ಮಾತಾಡು..........ಹೋಗಲಿ ನಾನಾಡುವ ಮಾತನ್ನಾದರೂ ಕೇಳಿಸಿಕೋ.

**ಮಾದೇವಿ** : (ನಿರ್ಲಿಪ್ತತೆಯಿಂದ) ಹೂಂ ಹೇಳು.........ಅದೇನು ಹೇಳುತ್ತೀಯೋ ಕೇಳುತ್ತೇನೆ.

**ನೀಲ** : (ಉತ್ಸಾಹದಿಂದ) ಇಂದ್ರಪುರದರಸುಕುಮಾರರು ಮದುವೆಯಾಗಲಿದ್ದಾರಂತೆ. ಆದರೆ ಅವರು ಯಾವ ರಾಜಕುಮರಿಯನ್ನು ತೋರಿಸಿದರೂ ಕನಸಿನಲ್ಲಿ ಕಂಡ ಚೆಲುವಿಯನ್ನೇ ಮದುವೆಯಾಗಬೇಕೆಂದು ಹಟ ಹಿಡಿದಿದ್ದಾರಂತೆ. ಆ ಚೆಲುವೀನ ಪತ್ತೆ ಹಚ್ಚೋಕೋಸ್ಕರ, ವಯಸ್ಸಿಗೆ ಬಂದ..........ಹೆಣ್ಣು ಮಕ್ಕಳೆಲ್ಲರೂ ಅರಮನೆಗೆ ಬರಬೇಕೆಂದು ಆದೇಶವಾಗಿದೆಯಂತೆ. ತಂದೆತಾಯಿಗಳೊಂದಿಗೆ ಯಾರೊಬ್ಬರೂ ಬಿಡದೆ ನಾಳೆಯೇ ಅಲ್ಲಿಗೆ ಸೇರಬೇಕಂತೆ. ಯಾರೊಬ್ಬರು ತಪ್ಪಿದರೂ ತಲೆ ದಂಡವಂತೆ!!

**ಮಾದೇವಿ** : ಅಯ್ಯಯೋ...........ಹಾಗಾದರೆ ಈಗೇನು ಮಾಡುವುದು ನೀಲ. ಅಪ್ಪಯ್ಯ ಅವ್ವಗೆ ಮತ್ತೊಮ್ಮೆ ಸಂಕಟ ಗಂಟುಬಿತ್ತಲ್ಲೆ.

**ನೀಲ** : ಸಂಕಟವೇನು ಬಂತು! ನಿನ್ನ ಅದೃಷ್ಟ ಕೂಡಿ ಬಂತು ಅನ್ನು. ನಿನ್ನಂಥ ಚೆಲುವಿ ಈ ಲೋಕದಲ್ಲೇ ಇಲ್ಲ. ಅರಸುಕುಮಾರ ನಿನ್ನನ್ನು ವರಿಸದೆ ಇನ್ಯಾರನ್ನು ವರಿಸಿಯಾನು? ಸುಮ್ಮನೆ ಆಲೋಚನೆಗಳನ್ನು ಬಿಟ್ಟು ಅಪ್ಪಯ್ಯನ ಜೊತೆಗೆ ಹೊರಡುವುದನ್ನು ಯೋಚಿಸು.

**ಮಾದೇವಿ** : ನೀನೊಬ್ಬಳು ಸರಿಯಾಗಿ ಗಂಟು ಬಿದ್ದೆ. 'ಬೆಕ್ಕಿಗೆ ಚೆಲ್ಲಾಟ, ಇಲಿಗೆ ಪ್ರಾಣ ಸಂಕಟ' ಅಂದ ಹಾಗೆ ಆಯಿತು.

**ನೀಲ** : ಶುಭವಾಗುತ್ತೆ ಗೆಳತಿ.....ಅರಸುಕುಮಾರನ ಕೈ ಹಿಡಿಯುವ ಯೋಗ ನಿನಗಿದೆ.

**ಮಾದೇವಿ :** ನೀಲ, ನೀನು ಎಷ್ಟೇ ಹೇಳಿದರೂ ಇದರಿಂದಾಗುವ ಪರಿಣಾಮಗಳು ನೆಟ್ಟಗಾಗುವುದಿಲ್ಲವೆನಿಸುತ್ತಿದೆ......... ಒಂದು ವೇಳೆ ನನಗೇನಾದರೂ ಆದರೆ...... ನನ್ನ ಪ್ರೀತಿಯ ಗೆಳತಿ, ಮಲ್ಲಿಗೆ ಬನದ ಒಂದು ಮೂಲೆಯಲ್ಲಿ ಏಳು ಸುತ್ತಿನ ಮಲ್ಲಿಗೆಯ ಗಿಡವೊಂದನ್ನು ಬೆಳೆಸು. ಅದರೊಳಗೇ ಬಂದು ನಾನಿರುತ್ತೇನೆ.

**ನೀಲ :** (ಸಿಟ್ಟಿನಿಂದ) 'ಶುಭನುಡಿಯೆ ಶಕುನದ ಹಕ್ಕಿ' ಎಂದರೆ ಏನೆಲ್ಲ ಹೇಳುತ್ತೀ........ ಇನ್ನು ಮುಂದೆ ಹೀಗೆ ಮಾತಾಡಿದರೆ ನನ್ನ ಮೇಲಾಣೆ!

**ಮಾದೇವಿ :** ಅಬ್ಬ! ಎಷ್ಟು ಕೋಪವೇ ನೀಲ...... ಆಯಿತು ಇನ್ನು ಹೀಗೆ ಮಾತಾಡುವುದಿಲ್ಲ...... ನಡೆ ಬಹಳ ಹೊತ್ತಿನಿಂದ ಇಲ್ಲೇ ಇದ್ದೇವೆ. ಅವ್ವನಿಗೆ ಗಾಭರಿಯಾದೀತು. (ಹೊರಡುವರು)

OO

# ದೃಶ್ಯ – ೪

(ಗೌಡನ ಮನೆ ಅಲಂಕೃತವಾಗಿದೆ. ರುದ್ರವ್ವ, ಗೌಡ ಯಾರದೋ ನಿರೀಕ್ಷೆಯಲ್ಲಿದ್ದಾರೆ. ಪ್ರತಿಸಲವೂ ಬಾಗಿಲ ಕಡೆ ಕಣ್ಣು ಹಾಯಿಸುತ್ತಾರೆ)

**ರುದ್ರವ್ವ** : (ಗಂಡನ ಕಡೆ ತಿರುಗಿ) ಇವತ್ತು ಪ್ರಭುಗಳು ಬರುವುದು ಖಾತ್ರಿ ತಾನೇ!.........ಏನೂಂದ್ರೆ ನಮ್ಮ ಮಾದೇವಿ ಎಷ್ಟು ಅದೃಷ್ಟ ಮಾಡಿರಬೇಕಲ್ಲ. ಅರಸುಕುಮಾರರು ಮೆಚ್ಚಿ ತಾವಾಗಿ ನಮ್ಮ ಹುಡುಗೀನ ಕೇಳಿದರೂಂದ್ರೆ ಅದೇನು ಸಾಮಾನ್ಯವೇ?

**ಮಲ್ಲನ ಗೌಡ**: ನಿನಗೆ ಗೊತ್ತಿಲ್ಲ ಅರಸರ ಸಂಬಂಧ ಅಂದ್ರೆ ಅಪಾಯಾನ ಉಡೀಲಿ ಹಾಕಿಕೊಂಡಂತೆ! ನಾಳೆ ಏನಾದರೂ ಹೆಚ್ಚು ಕಡಿಮೆಯಾದರೆ ತಲೆ ಉರುಳಿ ಬೀಳುತ್ತೆ.

**ರುದ್ರವ್ವ** : ಆದರೆ ನಾವು ನಿರಾಕರಿಸುವಂತೆಯೂ ಇಲ್ಲ. ಮಕ್ಕಳನ್ನು ಕೋರಿ ಆತಂಕಗಳನ್ನು ಎದೆ ತುಂಬಿಕೊಂಡೆವು.

('ಮಲ್ಲನಗೌಡರ ಮನೆ ಇದೇ ಏನು?' ಎಂದು ಕೇಳುತ್ತಿರುವುದು ಕಿವಿಗೆ ಬೀಳುತ್ತದೆ.)

ಬಂದರು ಎಂದು ಕಾಣುತ್ತದೆ ಸ್ವಲ್ಪ ಎಚ್ಚರಿಕೆಯಿಂದ ಮಾತನಾಡಿ (ಎಂದು ಹೇಳುತ್ತಾ ಒಳಗೆ ಹೋಗುವಳು)

**ಭಟರು** : (ಪ್ರವೇಶಿಸಿ ತಮ್ಮ ಕೈಲಿದ್ದ ವಸ್ತ್ರಾಭರಣಗಳನ್ನು ಗೌಡನ ಮುಂದೆ ಇರಿಸಿ ನಮಸ್ಕರಿಸುತ್ತಾರೆ)

ಸ್ವಾಮಿ ನಮ್ಮ ಪ್ರಭುಗಳು ಇವನ್ನು ನಿಮಗೆ ಒಪ್ಪಿಸಿ ಈ ರಾಯಸವನ್ನು ಕಳಿಸಿಕೊಟ್ಟಿದ್ದಾರೆ. ಇದಕ್ಕೆ ಈ ಕೂಡಲೇ ತಮ್ಮೊಪ್ಪಿಗೆಯನ್ನೂ ಬರೆದು ಕೊಡಬೇಕಂತೆ.

**ಮಲ್ಲನಗೌಡ**: ನಿಮ್ಮ ಪ್ರಭುಗಳು ನಮಗೆ ತೋರಿಸುತ್ತಿರುವ ಗೌರವಕ್ಕೆ ನಾವು ಕೃತಾರ್ಥರಾದೆವೆಂದು ತಿಳಿಸಿ. ಒಂದೆರಡು ದಿವಸಗಳಲ್ಲಿ ನಾವು ಖುದ್ದಾಗಿ ಬಂದು ಪ್ರಭುಗಳನ್ನು ಕಾಣುತ್ತೇವೆಂದು ಹೇಳಿ.

**ಭಟ** : ಆಗಬಹುದು ಮಹಾಸ್ವಾಮಿ.

**ಮಲ್ಲನಗೌಡ:** ನಮ್ಮ ಆತಿಥ್ಯವನ್ನು ಸ್ವೀಕರಿಸಿ ಹೋಗಿ.

**ಭಟ** : ಕ್ಷಮಿಸಬೇಕು. ಸಂಜೆಯೊಳಗಾಗಿ ಹಿಂತಿರುಗಬೇಕೆಂಬ ಆದೇಶವಿದೆ. ಹೋಗಿ ಬರುತ್ತೇವೆ.

(ಹೋಗುವರು)

(ಭಟರು ಹೋಗುತ್ತಾರೆ. ಮಲ್ಲನ ಗೌಡ ಅವರು ಹೋದ ದಿಕ್ಕಿನಿಂದ ಹೊರಳಿ ಮಡದಿ ರುದ್ರವ್ವನನ್ನು ಕೂಗುತ್ತಾರೆ)

**ಮಲ್ಲನ ಗೌಡ:** ರುದ್ರ...............ರುದ್ರ......... (ರುದ್ರವ್ವ ಬರುತ್ತಾಳೆ)

**ರುದ್ರ** : ಕರೆದಿರೇನು?

**ಮಲ್ಲನ ಗೌಡ:** ಹೌದು ರುದ್ರ, ಪ್ರಭುಗಳ ಆದೇಶವನ್ನು ಕೇಳಿಸಿಕೊಂಡಿರಬೇಕಲ್ಲ..........ಈಗ ಅವರಿಗೆ ಏನುತ್ತರ ಕೊಡಬೇಕು. ಜಾತಿ ನಮ್ಮದಲ್ಲ ನೀತಿ ನಮ್ಮದಲ್ಲ. ಅರಸರ ಆಸೆಗಳಿಗೆ, ಆಟಗಳಿಗೆ ನಾವು ಕಾಯಿಗಳಾಗಬೇಕೆ? ಅಲ್ಲದೆ ಭವಿಷ್ಯವಾಣಿಯ ಪ್ರಕಾರವಾಗಿ ಮದುವೆ ಬಲವಂತವಾಗಿ ಆದರೂ ಅರಸುಕುವಾರರಿಗೆ ಏನಾದರೂ ಅನಿಷ್ಟ ಸಂಭವಿಸಿದಲ್ಲಿ ನಮ್ಮ ಮಾದೇವಿಯ ಕಾಲ್ಗುಣವೇ ಕಾರಣವೆಂದು ತೀರ್ಮಾನವಾಗದಿರದು. ನಮ್ಮನ್ನು ಆಗ ಸುಮ್ಮನೆ ಬಿಟ್ಟಾರೇನು?

**ರುದ್ರವ್ವ** : ಮತ್ತೆ ಹಾಗಾದರೆ ಇದಕ್ಕೆ ದಾರಿಯೇನು?

**ಮಲ್ಲನ ಗೌಡ:** ನನಗೇನೂ ಹೊಳೆಯುತ್ತಿಲ್ಲ. ಆ ಶಂಭುಲಿಂಗನೇ ದಾರಿ ತೋರಬೇಕು.

**ರುದ್ರವ್ವ** : ನಮ್ಮ ಮಾದೇವಿಯನ್ನೇ ಕರೆದುಕೇಳೋಣ. ಅವಳು ಜಾಣೆ. ಅವಳ ಮನಸು ಏನಿದೇಂತ ತಿಳಿಯಲಿಕ್ಕಾದರೂ ಆಗುತ್ತೆ. ನಾನೇ ಹೋಗಿ ಕರೆದು ತರುತ್ತೇನೆ. (ಹೋಗುವಳು)

**ಮಲ್ಲನಗೌಡ** : (ಸ್ವಗತ) ಶಂಭುಲಿಂಗನು ಹೀಗೇಕೆ ಪರೀಕ್ಷೆ ಮಾಡುತ್ತಿದ್ದಾನೆ. ಜಾತಿ ಸಮಸ್ಯೆಯನ್ನೂ ಮೀರಿ ಮಗಳನ್ನು ಅರಸರಿಗೆ ಒಪ್ಪಿಕೊಟ್ಟರೂ ಗಂಡಾಂತರದ ಭೀತಿಯಿಂದ ಬಿಡಿಸಿಕೊಳ್ಳಲಾಗದಿದ್ದೇನೆ. ಅರಸರಿಗೇನು ಒಬ್ಬರೇ ಇಬ್ಬರೇ ಹೆಂಡತಿಯರು! ಚೆಲುವಾಗಿ ಕಂಡವರೆಲ್ಲರನ್ನೂ ಎಳೆತಂದು ಕೂಡಿ ಹಾಕಿಕೊಳ್ಳುವ, ಪ್ರವೃತ್ತಿಯಿರುವಾಗ ಮಾದೇವಿಯ ಭವಿಷ್ಯವೂ ನನಗೆ ಭಯಾನಕವೆನಿಸುತ್ತಿದೆ......ಓ ದೇವರೇ ನನ್ನ ಮಾದೇವಿಯ ಬದುಕು ಹಾಳಾಗದಿರಲಿ.

(ರುದ್ರವ್ವ ಮಾದೇವಿಯೊಂದಿಗೆ ಪ್ರವೇಶಿಸುತ್ತಾಳೆ)

**ಮಾದೇವಿ :** (ವಿನಯದಿಂದ) ಅಪ್ಪಯ್ಯ ಕರೆದಿರಂತೆ. ಏನು ವಿಷಯ ಹೇಳಿ ಅಪ್ಪಯ್ಯ.

**ಮಲ್ಲನಗೌಡ:** ಮಗಳೆ ನಮ್ಮ ಮೇಲೊಂದು ದೊಡ್ಡ ಸಮಸ್ಯೆ ಎರಗಿದೆ. ನೀನು ಹೇಗೆ ಅದನ್ನು ಪರಿಹಾರ ಮಾಡ್ತೀಯೋ ನೋಡು.

**ಮಾದೇವಿ :** ನಮಗೇನು ಅಂತ ಸಮಸ್ಯೆ. ಅಪ್ಪಯ್ಯ........... ನಿಮಗಿಂತ ನಾನೇನು ದೊಡ್ಡವಳೇ? ಹಿರಿಯರಾದ ನಿಮಗೇ ಪರಿಹಾರ ಹೊಳೆಯದಿರುವಾಗ ನಾನೇನು ಮಾಡಬಲ್ಲೆ.

**ಮಲ್ಲನಗೌಡ:** ನಿನಗೇ ಗೊತ್ತಿದೆಯಲ್ಲ ಮಾದೇವಿ. ಅರಸುಕುಮಾರರು ನಿನ್ನ ಮೇಲೆ ಮೋಹಗೊಂಡಿದ್ದಾರೆ. ನಿನ್ನನ್ನೂ ಮದುವೆಯಾಗುವ ನಿರೂಪದೊಂದಿಗೆ ಈ ವಸ್ತ್ರಾಭರಣ ಕಾಣಿಕೆಯನ್ನೂ ಕಳಿಸಿದ್ದಾರೆ. ಮನಸ್ಸಿಲ್ಲದ ಮನಸ್ಸಿನಿಂದ, ಧಿಕ್ಕರಿಸಲಾರದ ಅಸಹಾಯಕತೆಯಿಂದ ತಿರಸ್ಕರಿಸಿದರೆ ಉದ್ಧಟತನವೆಂದು ಭಾವಿಸಿಯಾರೆಂಬ ಭೀತಿಯಿಂದ ಇರಿಸಿಕೊಂಡಿದ್ದೇನೆ. ಇನ್ನೆರಡು ದಿನಗಳಲ್ಲಿ ನಮ್ಮ ಒಪ್ಪಿಗೆಯನ್ನೂ ತಿಳಿಸಲೇಬೇಕು. ತಿರಸ್ಕರಿಸಿದ ಪಕ್ಷದಲ್ಲಿ ನಮಗೆ ಉಳಿಗಾಲವಿಲ್ಲ. ಹಾಗೆಂದು ಅರಸರ ಸಂಬಂಧಕ್ಕೆ ನನ್ನ ಒಲವೂ ಇಲ್ಲ.

**ಮಾದೇವಿ :** ಅಪ್ಪಯ್ಯ ಈ ದಿನಗಳಲ್ಲಿ ನಿಮ್ಮ ಸಂಕಟವನ್ನು ಗಮನಿಸುತ್ತಲೇ ಬಂದಿದ್ದೇವೆ. ನನ್ನ ವಿಚಾರವಾಗಿ ನನಗೇ ಹೇಳಲಾಗದ ಯಾವುದೋ ವಿಚಾರವೊಂದು ನಿಮ್ಮನ್ನು ಕಾಡುತ್ತಿದೆಯೆಂದು ನಾನು ಬಲ್ಲೆ......ನಾನು ಹುಟ್ಟಿ ನಿಮ್ಮ ನೆಮ್ಮದಿ, ಸುಖಗಳನ್ನೂ ಹಾಳು ಮಾಡಿದೆನೆಂಬ ನೋವು ನನ್ನನ್ನೂ ಹಿಂಸಿಸುತ್ತಿದೆ.....ಬಾಯಿಬಿಟ್ಟು ನಿಮ್ಮ ಮನಸ್ಸಿನೊಳಗಿನ ನಿಗೂಢ ನೋವು ಯಾವುದೆಂದು ತಿಳಿಸಿ. ನಾನು ನಿಮ್ಮ ಮಗಳಲ್ಲವೇ? ನಿ ಕಷ್ಟ ಸುಖಗಳಲ್ಲಿ ನನಗೂ ಸರಿಪಾಲಿರಬೇಕಲ್ಲವೇ........ (ಅವ್ವನ ಕ ತಿರುಗಿ) ಅವ್ವ.........ನೀನಾದರೂ ಹೇಳಿ. ನಿಮ್ಮನ್ನು ಕಾಡುತ್ತಿರುವ ಸಮಸ್ಯೆ ಏನೆಂದು ತಿಳಿದದ್ದೇ ಆದರೆ..........ಅದಕ್ಕೆ ಸಮಾಧಾನ ನನ್ನಿಂದ ಸಾಧ್ಯವಾದೀತು.

**ರುದ್ರವ್ವ :** ಅಂಥಾದ್ದೇನೂ ಇಲ್ಲ ಮಗಳೆ.......ಸದ್ಯಕ್ಕೆ ಅದೆಲ್ಲವನ್ನು ನಮ್ಮ ಉಡಿಯಲ್ಲೇ ಇರಲಿ ಬಿಡು. ಈಗ ನಿನ್ನ ಮದುವೆಯ ವಿಚಾರವಾಗಿ ನಿನ್ನ ಅಭಿಪ್ರಾಯವೇನು? ಅರಸು ಕುಮಾರರನ್ನು ವರಿಸಲು ನಿನಗೆ ಒಪ್ಪಿಗೆಯಿದೆಯೇ? ಮೊದಲು ಅದನ್ನು ಹೇಳು.

**ಮಾದೇವಿ :** ಅವ್ವ............ನನ್ನ ಮೇಲಾಣೆಯಾಗ್ಲೂ ಹೇಳು. ನಿಮ್ಮನ್ನೂ ಹಿಂಡುತ್ತಿರುವ ಸಮಸ್ಯೆ ಇದಲ್ಲ. ಬೇರೇನು ಇದೆ. ಅದನ್ನು ಹೇಳದ ಹೊರತು ಸುಮ್ಮನೆ ಇರಲಾರೆ.

ರುದ್ರವ್ವ : ನಾವು ಹೇಳುವುದನ್ನು ತಡೆದುಕೊಳ್ಳುವ ಶಕ್ತಿ ನಿನಗಿದೆಯೆಂದರೆ ಅಪ್ಪಯ್ಯ ನಿಮಗೆ ಹೇಳುತ್ತಾರೆ.

ಮಾದೇವಿ : ಆಯಿತು............ಎಂತಹದೇ ಆದರೂ ನಾನು ಸಹಿಸಿಕೊಳ್ಳಬಲ್ಲೆ.......... ಹೇಳಿ ಅಪ್ಪಯ್ಯ..............ಅದೇನು ಚಿಂತೆ ನಿಮ್ಮನ್ನು ಕಾಡಿದೆ? (ತಿರುಗುವಳು)

ಮಲ್ಲನಗೌಡ : ಮಾದೇವಿ......ನಮ್ಮ ಪ್ರೀತಿಯ ಮಗಳೆ.........ಎಷ್ಟು ತಪಸ್ಸು ಮಾಡಿ. ಹರಕೆ ಹೊತ್ತು ಮಕ್ಕಳನ್ನು ಕರುಣಿಸೆಂದು ಬೇಡಿ ಕಾಡಿ ಶಂಭುಲಿಂಗನ ಮೊರೆ ಹೊಕ್ಕಾಗ, ನಿನಗೆ ಮಗನ ಯೋಗವಿಲ್ಲ. ಮಗಳನ್ನು ಪ್ರಸಾದಿಸುತ್ತೇನೆಂದು ಆದೇಶವಾಯಿತು. ಆದರೂ ಮಗಳನ್ನೇ ಮಹಾಪ್ರಸಾದವೆಂದು ಬೆಂಗಾಡಿನ ಬದುಕಿನಲ್ಲಿ ಸಿಹಿಯೂಟಯೊಂದು ಸಿಡಿಯಿತೆಂದು ನಮ್ಮ ಭಾಗ್ಯವನ್ನು ಕೊಂಡಾಡಿ ಕೊಂಡೆವು.........ಈ ಸಂತೋಷ ತುಂಬಿ ಹರಿಯುವ ಮೊದಲೇ ಮತ್ತೊಂದು ಸಿಡಿಲಿನ ಸುದ್ದಿ ಸ್ವಾಮಿಗಳು ಅಪ್ಪಣೆ ಕೊಡಿಸಿದರು.

ಮಾದೇವಿ : ಎಂತಹ ಗಂಡಾಂತರ ಅಪ್ಪಯ್ಯ?

ಮಲ್ಲನಗೌಡ: ನಿರ್ದಿಷ್ಟವಾಗಿ ಇಂತಹುದೆಂದು ಹೇಳದಿದ್ದರೂ ಅನಿಷ್ಟಗಳ ಪರಂಪರೆ ಪ್ರಾರಂಭವಾಗುತ್ತೆ ಅಂದರು.

ಮಾದೇವಿ : (ನಕ್ಕು) ಓಹ್ ಇಷ್ಟೇ ತಾನೆ ಇಷ್ಟು ಸಣ್ಣ ಸಮಸ್ಯೆಗೆ ಹೀಗೆ ಅಧೀರರಾಗಬೇಕೇ? ಕ್ಷಣ ಮಾತ್ರದಲ್ಲಿನ ಪರಿಹಾರ ನಾನು ಹೇಳುತ್ತೇನೆ.

ರುದ್ರ+ಮಲ್ಲನ: (ಆಶ್ಚರ್ಯದಿಂದ) ಹಾಂ! ನೀನು ಪರಿಹಾರ ಹೇಳುತ್ತಿ?
ಗೌಡ

ಮಾದೇವಿ : ಹೌದು.............ನೀವು ನನಗೆ ಮದುವೆ ಮಾಡುವ ಯೋಚನೆಯನ್ನೇ ಬಿಡಿ. ಗಂಡಾಂತರದ ಪ್ರಶ್ನೆಯೇ ಬರುವುದಿಲ್ಲ.

ಮಲ್ಲನಗೌಡ: (ನಿರಾಶೆಯಿಂದ) ಅದು ಸಾಧ್ಯವಿಲ್ಲ ಮಗಳೆ. ಮದುವೆಯಾಗದೆ ಇರುವುದೂ ಸಾಧ್ಯವಿಲ್ಲ.

ಮಾದೇವಿ : (ಹತಾಶೆಯಿಂದ) ಅಪ್ಪಯ್ಯ ಹಾಗಾದರೆ ನನ್ನ ಪಾಡಿಗೆ ನನ್ನನ್ನು ಬಿಟ್ಟುಬಿಡಿ. ಬಂದದ್ದು ಬರಲಿ. ತಪ್ಪಿಸುವುದಕ್ಕೆ, ತಪ್ಪಿಸಿಕೊಳ್ಳಲಿಕ್ಕೆ ಸಾಧ್ಯವಿಲ್ಲದ ವಿಚಾರಗಳ ಬಗ್ಗೆ ಚಿಂತೆ ಮಾಡಿ ಬರುವುದೇನಿದೆ? ಅರಸು ಕುಮಾರನನ್ನು ಮದುವೆಯಾಗುತ್ತೇನೆ. ಅದರಿಂದ ಏನೇನು ಆಗುವುದೋ ಆಗಲಿ. ನಿರಾಕರಿಸಿ ಅರಸರ ಆಕ್ರೋಶಕ್ಕೆ ಗುರಿಯಾಗಿ ನಿಮ್ಮ ವಿನಾಶವನ್ನೂ ತಂದುಕೊಳ್ಳಬೇಡಿ.

ಮಲ್ಲನಗೌಡ: (ಅನುಮಾನಿಸುತ್ತ) ಆದರೆ........ಜಾತಿ........ಕುಲ........?

**ಮಾದೇವಿ :** (ತಿಳಿಸಿ ಹೇಳುವಂತೆ) ಅಪ್ಪಯ್ಯ ಮನುಷ್ಯ........ಮನುಷ್ಯನ ನಡುವೆ ಜಾತಿ, ಕುಲ ಯಾಕೆ ಅಪ್ಪಯ್ಯ......ಅರಸರೆಂದರೆ ನಮ್ಮನ್ನು ಆಳುವವರಲ್ಲವೇ? ಅವರನ್ನು ವಿರೋಧಿಸಿ ಬದುಕುವುದು ಸದಾ ಭಯದ ನೆರಳಿನಲ್ಲಿ ಉಸಿರಾಡಿದಂತೆ. ಅಲ್ಲದೆ ನಮ್ಮನ್ನು ಪೋಷಿಸುವವರಿಗೆ ನಮ್ಮ ಅಲ್ಪ ಬಲಿದಾನಗಳಾದರೂ ಬೇಡವೇ?......ನೀವು ಬೇಡವೆಂದು ಒಂದು ವೇಳೆ ನಿರಾಕರಿಸಿದರೂ ಅವರು ಬಿಡುವವರಲ್ಲ ಬಲವಂತದಿಂದಲಾದರೂ ಬಗ್ಗಿಸಿಕೊಳ್ಳುತ್ತಾರೆ. ಅದಕ್ಕಿಂತ ನಾವಾಗಿ ಶಾಂತಿಯಿಂದ ಸ್ವೀಕರಿಸುವುದು ಕ್ಷೇಮ.

**ಮಲ್ಲನಗೌಡ:** (ಹೆಮ್ಮೆಯಿಂದ ಅವಳ ಕಡೆ ನೋಡುತ್ತ ಮತ್ತೆ ಹೆಂಡತಿಯ ಕಡೆ ತಿರುಗಿ) ರುದ್ರ ನಮ್ಮ ಮಾದೇವಿಯ ಮಾತುಗಳನ್ನು ಕೇಳಿದೇಯಾ....ಎಷ್ಟೊಂದು ಬೆಳೆದಿದ್ದಾಳೆ. ನಮಗೆ ಹೊಳೆಯದ ವಿಚಾರಗಳನ್ನು ಎಷ್ಟು ಸುಲಭವಾಗಿ ಮಾತನಾಡುತ್ತಾಳೆ?

**ರುದ್ರವ್ವ :** (ಅವಳೂ ಗರ್ವ ಭಾವದಿಂದಲೇ) ನಾನು ಮೊದಲೇ ನಿಮಗೆ ತಿಳಿಸಲಿಲ್ಲವೇ. ನಮ್ಮ ಮಾದೇವಿ ಶಂಭುಲಿಂಗನ ಹರಕೆಯ ಕೂಸು..........ಅವನೇ ಅವಳಿಂದ ಇದೆಲ್ಲವನ್ನೂ ಮಾತನಾಡಿಸುತ್ತಾನೆ.

**ಮಲ್ಲನಗೌಡ:** ಅಬ್ಬ! ಈಗ ನನ್ನ ಮನಸ್ಸಿಗೆ ನಿರಾಳವೆನಿಸಿತು.........ನಾಳೆ ಬೆಳಗಾಗಿ ಎದ್ದು ಇಂದ್ರಪುರಕ್ಕೆ ಹೊರಡುತ್ತೇನೆ ಮುಂದಿನದು ಆ ಶಂಭುಲಿಂಗನ ಚಿತ್ತ.

**ರುದ್ರವ್ವ :** ಹೋಗುವುದು ಹೋಗ್ತೀರಿ. ಹಿರಿಯರು ಒಂದು ನಾಲ್ಕು ಮಂದೀನ ಜೊತೇಲಿ ಕರೆದೊಯ್ಯಿರಿ. ಸಾಧ್ಯವಾದರೆ ನಮ್ಮ ಭಾಗವತಯ್ಯನನ್ನೂ ಕೊಂಡಿಯ್ಯಿರಿ.

**ಮಲ್ಲನಗೌಡ:** ಹಾಗೇ ಮಾಡ್ತೀನಿ ರುದ್ರ....ಈಗಲೇ ಹೋಗಿ ಅವರೆಲ್ಲರಿಗೂ ಸಿದ್ಧವಾಗಿರಲು ಹೇಳಿ ಬರ್ತೀನಿ. ನಾ ಬರುವ ತನಕ ಮನೇ ಕಡೆ ಜೋಪಾನ. ನಮ್ಮ ಮಾದೇವೀನ ಎಚ್ಚರಿಕೆಯಿಂದ ನೋಡಿಕೋ.

**ರುದ್ರವ್ವ :** ಅದರ ಬಗ್ಗೆ ನಿಮಗೆ ಚಿಂತೆ ಬೇಡ. ಆಳು ಕುಳಿಶಿದ್ದಾರೆ. ನೆರೆ ಹೊರೆ ಇದ್ದಾರೆ. ನಿಶ್ಚಿಂತೆಯಿಂದ ಹೋಗಿ ಬರುವ ಯೋಚನೆ ಮಾಡಿ.

**ಮಲ್ಲನಗೌಡ:** ಸರಿ ಮತ್ತೆ......ಈಗ ಏಳು. ನಾನು ಮಾದೇವಿ ಒಟ್ಟಿಗೆ ಕೂತು ಇವತ್ತು ಊಟ ಮಾಡ್ತೀವಿ.

**ರುದ್ರವ್ವ :** ಹಾಗಾದರೆ ಏಳಿ ಬೇಗ......

(ಏಳುವರು. ಕತ್ತಲು ಕವಿಯುತ್ತದೆ.)

OO

# ದೃಶ್ಯ – ೫

(ರಾಜಬೀದಿ. ಜನರ ಓಡಾಟ. ಸದ್ದುಗಳಿಂದ ತುಂಬಿದೆ. ಭಾಗವತ ರಂಗದ ಮುಂದಕ್ಕೆ ಬಂದು ಹಾಡುತ್ತಾನೆ.)

**ಭಾಗವತ :** (ಹಾಡುವನು)

ಮಾದೇವಿ ಮಾ ಚೆಲುವೆ
ಸದ್ಗುಣ ಸಂಪನ್ನೆ ರೂಪಿನಲಿ
ನೋಡಿದರೆ ಹೊಳೆವ ಸುರಹೊನ್ನೆ
ಕೆಂದಾವರೆಯ ಕೆನ್ನೆ
ಮಿಸುನಿ ಕಾಂತಿಯ ಕನ್ನೆ
ನಕ್ಷತ್ರ ಬೆಳಕನ್ನು ಕಣ್ಣಲ್ಲಿ
ತುಂಬಿಕೊಂಡು
ಹವಳದಾ ಕುಡಿ ಬಣ್ಣ
ತುಟಿಯಲ್ಲಿ ತೀಡಿಕೊಂಡು
ತುಂಬಿ ಕರುಳಿನ ಸೊಗಸು
ಮದನಾನೆ ಮುಗ್ಗರಿಸಿ
ಮೂಲೋಕ ತತ್ತರಿಸಿ
ಮುಗಿ ಬೀಳುವಂತ ಚೆಲುವೆ.

ಅಂಥವಳು ಈಗ ಮದುವಳಿಗಿತ್ತಿಯಾಗಿ ಅರಸುಕುಮಾರ ರಾಜಶೇಖರನ ಕೈ ಹಿಡಿದಿದ್ದಾಳೆ......ಅಬ: ಅಬ! ಅಬ........ಏನು ಭರ್ಜರಿ ಮದುವೇಂತೀರಿ.....ಊರ ಮಂದಿಯಲ್ಲ ಸೊಕ್ಕಿ ಬರೋ ಹೊಳೆ ಹಾಗೆ ಬಂದದ್ದೇ ಬಂದದ್ದು; ಬಂದವರಿಗೆಲ್ಲ ಬೆಳ್ಳಿ ತಟ್ಟೆಗಳಲ್ಲಿ ಷಡ್ರಸೋಪೇತ ಭೋಜನ. ಚಿನ್ನದ ಬಟ್ಟಲಲ್ಲಿ ಪಂಚ ಪರಮಾನ್ನ. ಕೊಟ್ಟ ಉಡುಗೊರೆಗಳಿಗೇ

ಲೆಕ್ಕವಿಲ್ಲ (ಹಿಂತಿರುಗಿ ಗುಜುಗುಜು ಮಾತನಾಡುತ್ತ ಹೋಗುತ್ತಿರುವ ಜನವನ್ನು ನೋಡಿ ಪ್ರೇಕ್ಷಕರ ಕಡೆ ತಿರುಗಿ) ನೋಡಿದಿರಾ ಇವರೆಲ್ಲ ಅಲ್ಲಿಂದಲೇ ಬರುತ್ತಿರುವವರು. ಅವರ ಮುಖದಲ್ಲಿ ಎಷ್ಟು ಸಂತೃಪ್ತಿ ಇದೆ. ನೋಡಿ..... (ಒಬ್ಬನನ್ನು ತಡೆದು) ಅಯ್ಯಾ ಸ್ವಲ್ಪ ನಿಲ್ಲು......ಹೇಳು ಎಲ್ಲಿಂದ ಬರುತ್ತಿರುವಿ?

**ವ್ಯಕ್ತಿ** : (ಆಶ್ಚರ್ಯದಿಂದ) ಇದೇನಪ್ಪ ಹೀಗೆ ಕೇಳುತ್ತೀ? ನೀನು ಯಾವೂರಿಂದ ಬಂದಿರುವಿ..? ನಿನಗೆ ಗೊತ್ತಿಲ್ಲವೇನು, ಇವತ್ತು ನಮ್ಮ ಅರಸರ ಮಗನ ಮದುವೆ.....ನಮ್ಮ ಮುಖವನ್ನು ನೋಡಿದರೆ ಕಾಣುವುದಿಲ್ಲವೇ, ಊಟ ಗೀಟ ಮಾಡಿಕೊಂಡು ನೋಡು, ಈ ವಸ್ತ್ರಾಭರಣಗಳ ಉಡುಗೊರೇನ ಪಡಕೊಂಡು ಬಂದಿದ್ದೀವಿ. ನಿನಗೆ ಗೊತ್ತಿಲ್ಲವಾದರೆ ನೀನೂ ಕೂಡಾ ಅರಮನೇ ಕಡೆ ಹೋಗಿ ಆ ಮದುವೆ ಸಂಭ್ರಮಾನ ನೋಡಿಕೊಂಡು ಬಾ.

**ಭಾಗವತ** : ತಮ್ಮಾ ನಾನೂ ಆ ಕಡೆಯಿಂದಲೇ ಬಂದಿರೋದು. ಎಲ್ಲ ಕಂಡೆ ಬಂದಿದ್ದೀನಿ.

**ವ್ಯಕ್ತಿ** : ಎಂಥ ಮದುವೆ! ಏನು ವೈಭವ......ಇಂಥ ಮದುವೇನ ನಾ ನನ್ನ ಜನ್ಮದಲ್ಲಿ ನೋಡಿಲ್ಲ...... ಅದೂ ಆ ಮದುವಣಿಗ ಮದುವಣಗಿತ್ತಿ...... ಯಾವ ಲೋಕದಿಂದ ಬಂದರೋ ಅಂತ ಅನಿಸುವಷ್ಟು ಸುಂದರವಾಗಿದ್ದಾರೆ. ಅವರು ನಿಜವಾಗಲೂ ಮನುಷ್ಯರೇ ಅನ್ನೋ ಅನುಮಾನ ಬರುತ್ತೆ. ಅಂಥ ಕಣ್ಣು ಕುಕ್ಕುವ ಚೆಲುವು ಅವರದು.

**ಭಾಗವತ** : ಸರಿಯಾಗೇ ಹೇಳಿದೆ ತಮ್ಮ. ಅವರು ಸಾಧಾರಣವಲ್ಲ. ಶಿವ-ಪಾರ್ವತಿ, ರತಿ-ಮನ್ಮಥ, ಲಕ್ಷ್ಮಿ-ವಿಷ್ಣುವಿನಂತಹ ಜೋಡಿ. ನೋಡಿದಷ್ಟೂ ನೋಡಬೇಕೆನಿಸುವ ಚೆಲುವು.

**ಇನ್ನೊಬ್ಬ ವ್ಯಕ್ತಿ** : (ಇವರು ಮಾತನಾಡುವ ಜಾಗಕ್ಕೆ ಬಂದು, ವ್ಯಕ್ತಿಯ ಬೆನ್ನು ತಟ್ಟಿ) ಏನಯ್ಯ ಸೀನ. ಬೀದೀಲಿ ನಿಂತು ಏನೋ ಗಂಭೀರವಾಗಿ ಮಾತನಾಡುತ್ತಿರುವ ಹಾಗಿದೆಯಲ್ಲ..... ಮದುವೆಗೆ ನೀನು ಬಂದಿರಲಿಲ್ಲವೇ?

**ವ್ಯಕ್ತಿ** : (ತಿರುಗಿ ನೋಡಿ, ನಲಿವಿನಿಂದ) ಏಹ್ ನೀನಾ ರಂಗಯ್ಯ. (ಅವನನ್ನು ನೋಡಿ) ಹೂಂ! ಹೂಂ! ನೀನು ಅಲ್ಲಿಂದಲೇ ಬಂದಿರೋ ಹಾಗೆ ಕಾಣುತ್ತೆ. ಉಡಿ ತುಂಬ ಉಡುಗೊರೆ ತುಂಬಿಕೊಂಡಿದ್ದೀಯಾ! (ನಗುವನು)

**ರಂಗಯ್ಯ** : ಹೂಂ ನಪ್ಪ! ಕೊಡುಗೈ ದೇವರು ಕೈ ತುಂಬ ಕೊಟ್ಟರು. ನಿನಗೂ ಕಡಿಮೆ ಮಾಡಿಲ್ಲ ಅನಿಸುತ್ತೆ!........(ಭಾಗವತನ ಕಡೆ ನೋಡಿ)....... ಇವರು.........?

ಭಾಗವತ : ನಾನು......ನಾನು......ಭಾಗವತಪ್ಪ ಅಂತ. ನಾನೂ ಈ ಮದುವೆಗೇಂತಲೇ ಬಂದವನು. (ಸೀಸನ ಕಡೆ ತೋರಿಸಿ) ನಾನೇ ಇವರನ್ನು ಕರೆದು ಮಾತನಾಡಿಸಿದೆ.

ರಂಗಯ್ಯ : ಬಹಳ ಸಂತೋಷ ನಿಮ್ಮ ಭೇಟಿಯಾದದ್ದು......ನೀವು ಈ ಊರಿನವರೇ ಏನು?

ಭಾಗವತ : ಇಲ್ಲ ಸ್ವಾಮಿ......ನಾನು ಮದುವಳಗಿತ್ತಿ ಕಡೆಯವನು. ಆ ಊರಿಂದಲೇ ಬಂದಿದ್ದೀನಿ ಮದುವೆಗೇಂತ?

ರಂಗಯ್ಯ : ಬಾಳ ಸಂತೋಷ ಕಣಪ್ಪ.........ಆದರೆ ಒಂದು ಮಾತು.........ತಪ್ಪು ತಿಳ್ಕೋಬೇಡ. ವಧುವಿನ ಕಡೆಯವನು ಅಂತ ಹೇಳಿದ್ದಕ್ಕೆ ಕೇಳ್ತಿದ್ದೀನಿ....... ಈ ಮದುವೆ ವಿಚಾರವಾಗಿ ಜನ ಏನೇನೋ ಮಾತಾಡ್ಕೊಳ್ತಿದಾರೆ............ ಏನಪ್ಪ ಆ ವಿಚಾರ................? ಅದೆಲ್ಲ ನಿಜವಾ ಹೇಗೆ?

ಭಾಗವತ : ಹೇಳಣ್ಣ ಏನು ಮಾತಾಡಿಕೊಂಡರು?

ಸೀನಪ್ಪ : ಅದೇ ಆ ಹುಡುಗಿ ಗೌಡನೊಬ್ಬನ ಮಗಳು ಬಲವಂತದಿಂದಲೋ ಏನೋ ಅರಸರು ಮದುವೆ ಮಾಡೊಸ್ಕೋತಿದ್ದಾರೆ ಅಂತ...........ಅಲ್ದೆ ಎಲ್ಲೋ ಯಾವುದೋ ಮೂಲೇಲಿ ಇರೋ ಹಳ್ಳಿ ಒಳಗಿನ ಈ ಹುಡುಗಿ ನಮ್ಮ ಅರಸರ ಕಣ್ಣಿಗೆ ಬಿದ್ದದ್ದಾರೂ ಹೇಗೆ?

ಭಾಗವತ : ಅರಸರ ವಿಚಾರಗಳು ಹೇಳೋಕೆ ಆಗೊಲ್ಲಪ್ಪ. ಅರಸುಕುಮಾರರಿಗೆ ಕನಸು ಬಿತ್ತಂತೆ. ಕನಸಿನಲ್ಲಿ ಈ ಹುಡುಗಿ ಕಾಣಿಸಿಕೊಂಡಿದ್ದಾಳೆ. ಕನಸಿನೊಳಗೆ ಕಂಡ ಮುಖಾನ ಚಿತ್ರ ಬರೆದು, ಇಂಥದ್ದೇ ಹುಡುಗಿ ಬೇಕಂತ ಹಟ ಹಿಡಿದರಂತೆ. ಊರೂರು ಸುತ್ತಿದರೂ ಸಿಗಲಿಲ್ಲವಂತೆ.

ರಂಗಯ್ಯ : (ಮಧ್ಯದಲ್ಲಿಯೇ) ಅಯ್ಯೋ ಪಾಪ. ಮತ್ತೆ ಹೇಗೆ ಪತ್ತೆ ಹಚ್ಚಿದರು.

ಸೀನಪ್ಪ : ಓ ಅದಕ್ಕೇನ ಊರು ಊರಿಂದ ವಯಸ್ಸಿಗೆ ಬಂದ ಹೆಣ್ಣು ಮಕ್ಕಳೆಲ್ಲ ಅರಮನೇಲಿ ಸೇರಬೇಕಂತ ಡಂಗುರ ಸಾರಿದ್ದು?

ರಂಗಯ್ಯ : ಏನಯ್ಯ ನೀ ಹೇಳ್ತಿರೋದು?...........ವಿಚಿತ್ರವಾಗಿ ಇದೆಯಲ್ಲ. ಊರೋರು ............. ಹೆಣ್ಣು ಮಕ್ಕಳು ಅರಮನೇಲಿ ಸೇರಬೇಕಂದ್ರೆ?............ ಮತ್ತೆ ನನಗೆ ಗೊತ್ತೇ ಇಲ್ಲ.

ಸೀನ : ಗೊತ್ತಿಲ್ಲಾಂದ್ರೆ ಏನು ಮಾತು? ಊರು ಕೋಟೆಗಳು, ಮನೆ ಬಾಗಿಲುಗಳು, ಸೂರುಗಳು ತೂತು ಬೀಳುವ ಹಾಗೆ ತಮಟೆ ಹೊಡೆದು ಸಾರಿದ್ದು ಸಣ್ಣಪುಟ್ಟ ಪ್ರಾಣಿಗಳಿಗೆಲ್ಲಾ ಗೊತ್ತಿರುವಾಗ ನೀನು ಗೊತ್ತಿಲ್ಲಾ ಅನ್ನೋದು ವಿಚಿತ್ರವಾಗಿದೆ.

**ಭಾಗವತ** : ಈ ತಮ್ಮ ಹೇಳ್ತಿರೋದು ನಿಜ ಕಣಪ್ಪ. ಬಹುಶಃ ನೀನು ಊರಲ್ಲಿ ಇರಲಿಲ್ಲಾಂತ ಕಾಣುತ್ತೆ.

**ರಂಗಯ್ಯ** : ಹೌದಪ್ಪ. ನಾನು ನನ್ನ ಸಂಸಾರ ನಮ್ಮ ನೆಂಟರ ಮನೆ ಮದುವೆಗೆ ಸೋಮಪುರಕ್ಕೆ ಹೋಗಿದ್ವಿ.....ವಿಷಯ ಏನೂಂತ ತಿಳೀಲಿಲ್ಲ. ಇಲ್ಲಿಗೆ ಬಂದ ಮೇಲೆ ಅರಸರ ಮನೆ ಮದುವೆ ವಿಚಾರ ತಿಳೀತು. ಮದುವೆಗೆ ಕರೆ ಬಂತು. ಅರಸರ ಮನೆ ಮದುವೆ ಅವಕಾಶ ತಪ್ಪಿಸಿಕೊಳ್ಳೋಕೆ ಆಗುತ್ತಾ!.......ಬಂದೆ. ಮದುವೆ ಮುಗಿಸಿಕೊಂಡು ಬರುವಾಗ ನೀನೂ, ಈ ಅಣ್ಣ ಕಂಡದ್ದಕ್ಕೆ ಈ ಕಡೆ ಬಂದೆ. ಜನ ಮಾತಾಡಿಕೊಳ್ತಾ ಇದ್ದದ್ದು ಕಿವಿಗೆ ಬಿತ್ತು. ತಿಳಿದುಕೊಳ್ಳೋ ಕುತೂಹಲದಲ್ಲಿದ್ದೆ. ನೀನು ಕಾಣಿಸಿದ್ದಕ್ಕೆ ಕೇಳೋಣ ಅನ್ನಿಸಿತು.

**ಸೀನಪ್ಪ** : ಸರಿ ಈಗ ಗೊತ್ತಾಯ್ತಲ್ಲ?

**ರಂಗಪ್ಪ** : ಹೂಂ...........ಗೊತ್ತಾಯ್ತು ಬಿಡು. ಹಿಂದಿನ ಕಾಲದಲ್ಲಿ ಅಂದ್ರೆ.......ಅದೇ ನಮ್ಮ ರಾಮಾಯಣ ಮಹಾಭಾರತಗಳಲ್ಲಿ ರಾಜರು ತಮ್ಮ ಹೆಣ್ಣು ಮಕ್ಕಳಿಗೆ ಸ್ವಯಂವರ ಏರ್ಪಡಿಸಿದ್ದ ಹಾಗೆ, ನಮ್ಮ ಅರಸರು ತಮ್ಮ ಮಗನಿಗೆ ಹುಡುಗೀನ ಆರಿಸೋಕೆ ಈ ತಂತ್ರ ಹೂಡಿದ್ದಾರೆಂತ ಆಯ್ತು....... ಅರಸು ವಂಶದವರೇ ಬೇಕೂಂತ ಹಟ ಮಾಡದೆ ಗೌಡರ ಮಗಳನ್ನು ಮದುವೆ ಮಾಡ್ಕೋತಿರೋದು ನಮ್ಮ ಪ್ರಭುಗಳ ದೊಡ್ಡ ಗುಣವೇ!

**ಭಾಗವತ** : ಹೌದಪ್ಪ ನಿಮ್ಮ ಪ್ರಭುಗಳು ನಿಜವಾಗಿಯೂ ದೊಡ್ಡ ಮನಸ್ಸಿನವರು. ಸೀನಪ್ಪ

**ಸೀನಪ್ಪ** : ಭಾಗವತಪ್ಪ ನಿಮ್ಮ ಪರಿಚಯ ಆದದ್ದು ಸಂತೋಷ ಆಯ್ತು........ನಾವಿನ್ನು ಬರ್ತೀವಿ. ನಾಳೆ ಕೂಡಾ ಬೀಗರ ಔತಣಕ್ಕೆ ಊರ ಮಂದೀನೆಲ್ಲ ಕರೆದವ್ರೆ.....ನೀವೂ ಇದ್ದೇ ಇರ್ತೀರಲ್ಲ........

**ಭಾಗವತ** : ಖಂಡಿತ ಇರ್ತೀನಿ ಕಣಣ್ಣ............ಹೋಗಿ ಬನ್ನಿ ಅಣ್ಣಂದಿರೇ (ಪ್ರೇಕ್ಷಕರ ಕಡೆ ತಿರುಗಿ) ನೋಡಿದಿರಾ ಸ್ವಾಮಿ. ನಮ್ಮ ಮಾದೇವಿ ಮದುವೆ ಕತೇನ. ನೀವೂ ಬರಬಹುದಿತ್ತು. ಹೋಗಲಿ ನಾಳೇನಾದರೂ ಬನ್ನಿ.............. ಬೀಗರ ಔತಣವಿದೆ.............. ಬಂದು ನಮ್ಮ ಮಾದೇವಿ ದಂಪತಿಗಳನ್ನು ಹರಸಿ ಹೋಗಿ.............. ಬರ್ತೀನಿ ಹೊತ್ತಾಗುತ್ತೆ............ ಮಾಡಬೇಕಾದ ಕೆಲಸ ತುಂಬಾ ಇದೆ. ಗೌಡರು ಬೇರೆ ಎಲ್ಲಿ ಹೋದ್ನೋ ಅಂತ ಬೇಸರ ಮಾಡಿಕೊಂಡಾರು.

೦೦

## ದೃಶ್ಯ – ೬

(ಮಾದೇವಿಯ ಮದುವೆಯಾಗಿ ತಿಂಗಳಾಗಿಲ್ಲ. ಇಂದ್ರಪುರದ ಮೇಲೆ ಪಕ್ಕದ ರಾಜ್ಯದವರು ದಾಳಿ ನಡೆಸಿದ್ದಾರೆ. ಇಂದ್ರಪುರದ ಪ್ರಜೆಗಳು ಶತ್ರುಗಳ ಆಕ್ರಮಣದಿಂದ ತತ್ತರಿಸಿ ಹೋಗಿದ್ದಾರೆ. (ಹಿನ್ನಲೆಯಲ್ಲಿ) ಪ್ರಭು.........ಕಾಪಾಡಿ.........ಪ್ರಭುಗಳೇ ಕಾಪಾಡಿ............. ಅಯ್ಯೋ............. ಅಯ್ಯೋ........ ಅಯ್ಯೋ.......... ನಮ್ಮ ಮನೆಗೆ ಬೆಂಕಿ ಇಟ್ಟರು.........ನನ್ನ ಮಕ್ಕಳನ್ನು ಕೊಂದು ಬಿಸಾಡಿದರು.......... ನನ್ನ ಗಂಡನ ತಲೆ ಕತ್ತರಿಸಿದರು............. ಇತ್ಯಾದಿ ಇತ್ಯಾದಿ ಆರ್ತಧ್ವನಿಗಳು ಕೇಳಿ ಬರುತ್ತಿವೆ. ಮಾದೇವಿಯ ರಾಣಿವಾಸ (ಕೊಠಡಿ) ಮಾದೇವಿ ಚಿಂತಾಕ್ರಾಂತಳಾಗಿ ಕುಳಿತಿದ್ದಾಳೆ. ಪಕ್ಕದಲ್ಲಿಯೇ ಸಖಿ ಗಾಳಿ ಬೀಸುತ್ತಿದ್ದಾಳೆ.)

**ಮಾದೇವಿ :** (ವ್ಯಥೆಯಿಂದ) ಪದ್ಮ.............ಕೇಳಿಸುತ್ತಿದೆಯಾ ಆ ಚೀರು ಧ್ವನಿಗಳು.............. ನಾನೇ ಇದಕ್ಕೆ ಕಾರಣ ಪದ್ಮ. ನಾನು ಸಾಯಬೇಕು............. ಬದುಕಿದ್ದರೆ ಇನ್ನು ಏನೇನು ಅನಾಹುತಗಳಾಗುತ್ತವೆಯೋ.

**ಪದ್ಮ :** ಸುಮ್ಮನಿರಿ ತಾಯಿ. ನಿಮಗೂ ಇದಕ್ಕೂ ಏನು ಸಂಬಂಧ. ವಿನಾಕಾರಣ ನಿಮ್ಮನ್ನೇಕೆ ದೂರಿಕೊಳ್ಳುತ್ತೀರಿ.

**ಮಾದೇವಿ :** ನಿನಗೆ ಗೊತ್ತಿಲ್ಲ ಪದ್ಮ. ನಾನು ಮದುವೆಯಾಗಿ ಈ ಅರಮನೆಗೆ ಕಾಲಿಟ್ಟದ್ದೆ ಕಾರಣವೆಂದು ನನ್ನ ಮನಸ್ಸಿಗೆ ತೋಚುತ್ತಿದೆ. ಈ ಅನರ್ಥಕ್ಕೆ ನಾನೇ ಕಾರಣ......ನಾನೇ ಕಾರಣ.

**ಪದ್ಮ :** ರಾಜ್ಯ ರಾಜ್ಯಗಳ ನಡುವೆ ಈ ಬಗೆಯ ಯುದ್ಧಗಳು–ಹಗೆತನಗಳು ಸಾಧಾರಣವೇ ತಾಯಿ. ನಿಮ್ಮ ಮದುವೆ ಏನು ಮಾಡೀತು ಇದರಲ್ಲಿ?

**ಮಾದೇವಿ :** ನನ್ನ ಆತಂಕ ಯಾರಿಗೂ ಗೊತ್ತಾಗುವುದಿಲ್ಲ. ಗೊತ್ತಾಗಿಸುವುದೂ ಇಲ್ಲ. ಇದು ಇಷ್ಟಕ್ಕೆ ಮುಗಿಯುವುದಲ್ಲ ಕೂಡಾ. ಅರಸು ಕುಮಾರರು ಶತ್ರುಗಳನ್ನು ತಡೆಗಟ್ಟಲು ಹೋಗಿದ್ದಾರೆ. ಅವರು ಸುರಕ್ಷಿತವಾಗಿ

ಹಿಂತಿರುಗುವವರೆಗೆ ನನಗೆ ನೆಮ್ಮದಿಯಿಲ್ಲ. ಮಾವನವರು ನನ್ನ ವಿಚಾರದಲ್ಲಿ ಏನೇನು ಯೋಚಿಸುತ್ತಿರುವರೋ!.....ಪ್ರಜೆಗಳು ತತ್ತರಿಸಿ ಹೋಗಿದ್ದಾರೆ. ಒಳನುಗ್ಗುವ ಶತ್ರುಗಳನ್ನು ತಡೆಯಬಲ್ಲ ಶಕ್ತಿ ಯಾರಿಗಿದೆ? ಎಷ್ಟೆ ಪ್ರಯತ್ನ ಮಾಡಿದರೂ ವಯಸ್ಸಿನ ದೌರ್ಬಲ್ಯದಿಂದ ಖಡ್ಗದ ಶಕ್ತಿಯು ಸಾಲದಾಗುತ್ತಿದೆ. ನಾನು ಯುದ್ಧವನ್ನು ಬಲ್ಲವಳಲ್ಲ. ಅದೇ ರಾಜಕುಮಾರಿಯಾಗಿದ್ದರೆ ಅವಳ ಶಸ್ತ್ರವಿದ್ಯೆ ಈ ಸಮಯಕ್ಕಾದರೂ ಒದಗಿ ಬರುತ್ತಿತ್ತು.......ನಾನೇನು ಮಾಡಲಿ ಪದ್ಮಾ..........ನಾನೇನು ಮಾಡಲಿ ನನ್ನ ಗಂಡ ಸುರಕ್ಷಿತವಾಗಿ ಹಿಂತಿರುಗಿ ಬಂದರೆ, ನನಗಷ್ಟೇ ಸಾಕು.

**ಪದ್ಮ** : ಕಾರಣವಿಲ್ಲದೆ ಕಳವಳಗೊಳ್ಳುತ್ತಿದ್ದೀರಿ, ಚಿಕ್ಕ ಪ್ರಭುಗಳು ಕ್ಷೇಮವಾಗಿಯೆ ಇರುತ್ತಾರೆ. ಸತ್ಯವಾಗಿ ವಿಜಯವನ್ನು ಸಾಧಿಸಿಕೊಂಡು ಬರುತ್ತಾರೆ.

**ಮಾದೇವಿ** : ನೀನು ಏನೇ ಹೇಳು ನನಗಂತೂ ದುಃಸ್ವಪ್ನಗಳೇ ಬೆನ್ನು ಬಿದ್ದಿವೆ.

**ಪದ್ಮ** : ತಾಯಿ ನಾನೆಷ್ಟು ಹೇಳಿದರೂ ನಿಮಗೆ ಅರ್ಥವಾಗುತ್ತಿಲ್ಲ. ಈಗ ಪರಿಸ್ಥಿತಿ ಪ್ರತಿಕೂಲವೆನಿಸುತ್ತಿರುವಾಗ ಧೈರ್ಯವೊಂದೇ ನಮ್ಮ ರಕ್ಷಣೆಯ ಪ್ರಬಲವಾದ ಅಸ್ತ್ರವಾಗಬೇಕು. ಇದಕ್ಕಿಂತ ಭಯಂಕರವಾದ್ದು, ಕ್ರೂರವಾದ್ದು ಸಂಭವಿಸಿದರೂ ತಾಳ್ಮೆಯಿಂದಲೇ ಸಹಿಸಿಕೊಳ್ಳಬೇಕು.

**ಮಾದೇವಿ** : ಅಂದರೆ?......ನಿನ್ನ ಮಾತುಗಳಲ್ಲಿ ಇನ್ನೂ ಏನೋ ನಿಗೂಢ ಅರ್ಥವೊಂದು ಅಡಗಿ ಕುಳಿತಿದೆ ಎಂದು ಅನಿಸುತ್ತಿದೆ..........ಹೇಳು ಪದ್ಮ.........ನನ್ನ ಬೆನ್ನ ಹಿಂದೆ ನನ್ನ ಬಗ್ಗೆ ಏನಾದರೂ ಮಾತು ನಡೆದಿದೆಯೇನು?

**ಪದ್ಮ** : ಅಮ್ಮ ಹೆಂಗಸರು ಇರುವ ಕಡೆ ಮಾತುಗಳು ಹೊರಳಾಡುತ್ತವೆ. ಅದೆಲ್ಲಕ್ಕೂ ನಾವು ಗಮನ ಕೊಡಬಾರದು.

**ಮಾದೇವಿ** : ಅಂದರೆ ಇದರ ಅರ್ಥ! ನಾನು ಊಹಿಸಿದಂತೆ ನನ್ನ ವಿಚಾರವಾಗಿ ಏನೇನೋ ಮಾತುಗಳು ಕೇಳಿಬರುತ್ತಿದೆ. ಆದರೆ ಅವು ನನ್ನ ಕೋಣೆಯ ಗೋಡೆಗಳನ್ನು ದಾಟಿ ಒಳಬಂದಿಲ್ಲವೆಂದಾಯಿತು......ಹೇಳು ಪದ್ಮ ನೀನು ನನ್ನನ್ನು ನಿಜವಾಗಿಯೂ ಒಡತಿ ಎಂದು ನಂಬುವುದಾದರೆ ಅಲ್ಲಿ ನಡೆದದ್ದನ್ನು, ನಡೆಯುತ್ತಿರುವುದನ್ನು ಹೇಳು. ನನ್ನ ಕಿವಿಗಳಿಗೆ ಮಾತುಗಳು ಸೋಂಕದಿದ್ದರೂ ನನ್ನ ಹೃದಯಕ್ಕೆ ಮಾತಿನ ಅಂತರಾರ್ಥಗಳು ತಟ್ಟುತ್ತಿವೆ.

**ಪದ್ಮ** : (ಅನುಮಾನಿಸುತ್ತ) ಅದೆಲ್ಲವನ್ನೂ ಹೇಗೆ ಹೇಳಲಿ. ರಾಣಿವಾಸದಲ್ಲಿ ಮಹಾರಾಣಿಯವರು ತಮ್ಮ ಸವತಿಯರೊಂದಿಗೆ ಸಿಟ್ಟಿನಿಂದ ನಿಮ್ಮ ಹೆಸರನ್ನು ಪ್ರಸ್ತಾಪಿಸುವುದನ್ನು ಕೇಳಿದೆ.

**ಮಾದೇವಿ** : ಕೇವಲ ಪ್ರಸ್ತಾಪಿಸುವುದನ್ನು ಮಾತ್ರ ಕೇಳಿದೆಯಾ ಅಥವಾ ಇನ್ನೂ ಏನಾದರೂ ಹೇಳುತ್ತಿದ್ದರೆ?

**ಪದ್ಮ** : (ಸಂಕೋಚದಿಂದ) ನನ್ನ ಬಾಯಿಂದ ಅವನ್ನು ಹೇಳಲಾರೆ ತಾಯಿ. ಸದ್ಯಕ್ಕೆ ನೀವು ಸುಮ್ಮನಿರಿ. ಧೈರ್ಯದಿಂದ ಇರಿ..........ಇನ್ನೂ ಏನೇನು ಹೇಳುತ್ತಿದ್ದರೋ, ನಾನು ಕಾಣಿಸಿಕೊಂಡ ಕೂಡಲೇ ಸುಮ್ಮನಾದರು.

**ಮಾದೇವಿ** : (ನೋವಿನಿಂದ) ಪದ್ಮ ನನ್ನ ಅಪ್ಪಯ್ಯನ ಮಾತುಗಳು ನೆನಪಿಗೆ ಬರುತ್ತವೆ. ಮೊದಲಿನಿಂದಲೂ ಈ ಸಂಬಂಧದ ವಿಚಾರವಾಗಿ ಅಪ್ಪಯ್ಯ ಹೆದರಿಕೊಂಡೇ ಇದ್ದರು. ಅಂತಸ್ತುಗಳು, ರೀತಿಗಳೂ ಎಲ್ಲವೂ ಬೇರೆ ಬೇರೆ. ಅವರ ನಡವಳಿಕೆ ಅಂತಸ್ತಿನ ಗಾಂಭೀರ್ಯ ನನಗೆ ಹೇಗೆ ಬರಬೇಕು?.......... ಅಲ್ಲದೇ ನಾನೊಂದು ಸಾಧಾರಣ ಕುಟುಂಬದಿಂದ ಬಂದವಳು.

**ಪದ್ಮ** : ಬಹುಶಃ ಅದೇ ಈ ಸೇಡಿನ, ಹಗೆತನದ, ಅಸಮಾಧಾನದ ಸ್ಥಿತಿಗೆ ಕಾರಣವಾಗಿರಬಹುದು. ಮೊದಲಿನಿಂದಲೂ ಹಿರಿಯ ರಾಣಿ ಅವರಿಗೆ ಈ ಸಂಬಂಧದ ಬಗ್ಗೆ ವಿರೋಧವೇ. ಚಿಕ್ಕ ಪ್ರಭುಗಳ ಹಟಕ್ಕೆ ಸೋತು ಈ ಮದುವೆಯಾಯಿತು.

**ಮಾದೇವಿ** : ಹಾಗಾದರೆ ಅವರ ಮಕ್ಕಳ ಮನವೊಲಿಸಿ ಬೇರೆ ಮದುವೆಯನ್ನು ಮಾಡಬಹುದಿತ್ತಲ್ಲ. ಬೆದರಿಕೆಯ ಆಜ್ಞೆ ಹೊರಡಿಸಿ ನಮ್ಮನ್ನೇಕೆ ಈ ರಾಕ್ಷಸ ಗುಹೆಗೆ ಸೆಳೆದುಕೊಳ್ಳಬೇಕಿತ್ತು. ನನ್ನ ಮದುವೆ ಎಂದರೇನೆ ಹೌಹಾರುತ್ತಿದ್ದ ಅಪ್ಪಯ್ಯ ಈ ಬಲವಂತದ ಮದುವೆಯು ಮೇಲೆ ಬಿದ್ದಾಗ ಪೂರ್ತಿ ಕುಸಿದು ಹೋದರು. ಈಗ ನೋಡಿದರೆ ಅವರು ಊಹಿಸುತ್ತಿದ್ದ ಅನಿಷ್ಟಗಳೆಲ್ಲವೂ ಒಂದೊಂದಾಗಿ ನಿಜವೆನಿಸುತ್ತಿವೆ. ಅದರಿಂದ ನನಗೇನು ಕಾದಿದೆಯೋ! ದೈವವೇ ಕೈ ಬಿಟ್ಟರೆ ನಾನೇನು ಮಾಡಲಿ ಪದ್ಮ?......... (ನಿಟ್ಟುಸಿರು.........ಕ್ಷಣಕಾಲ ಬಿಟ್ಟು) ಹೋಗು. ಬೇಗ ಹೋಗಿ ಯುದ್ಧದ ವಿವರಗಳನ್ನು ತಿಳಿದು ಬಾ. ನನ್ನ ಭಯಗಳು ನಿಜವಾಗದಿರಲಿ..... ಅಷ್ಟೇ ನನ್ನ ಪ್ರಾರ್ಥನೆ. (ಹೋಗುವಳು)

ㅇㅇ

# ದೃಶ್ಯ – ೭

(ವಿಕ್ರಮ ರಾಯನ ಸಭೆ. ಮಂತ್ರಿಗಳು ಕುಳಿತಿದ್ದಾರೆ. ಸಭಾಸದರು, ಸೇನಾಪತಿಗಳು ತಮ್ಮ ತಮ್ಮ ಆಸನಗಳಲ್ಲಿ ಆಸೀನರಾಗಿದ್ದಾರೆ. ವಿಕ್ರಮರಾಯನ ಮುಖದಲ್ಲಿ ದುಗುಡವು ಕಾಣಿಸಿಕೊಂಡಿದೆ. ಒಮ್ಮೆ ಸಭಾಸದರ, ಮಂತ್ರಿ ಸೇನಾಪತಿಗಳನ್ನು ದೃಷ್ಟಿಸಿ ನೋಡಿ ಸೇನಾಪತಿ ವೀರಬಲನನ್ನು ವಿಚಾರಿಸುತ್ತಾರೆ)

**ವಿ. ರಾಯ:** ಸೇನಾಪತಿಗಳೇ ಮುಂದಿನ ಮಾರ್ಗವೇನು? ಇನ್ನು ಯುದ್ಧ ಮುಂದುವರೆಸುವುದು ಎಷ್ಟರ ಮಟ್ಟಿಗೆ ಸಾಧ್ಯವಿದೆ. ಪ್ರಜೆಗಳಲ್ಲಿ ಹಾಹಾಕಾರವೆದ್ದಿದೆ.

**ಸೇನಾಧಿಪತಿ:** (ವಿನಮ್ರತೆಯಿಂದ) ಪ್ರಭುಗಳೇ ಈ ಒಂದೆರಡು ದಿನ ಕದನ ವಿರಾಮವನ್ನು ಬೇಡಿದ್ದಾಗಿದೆ. ಯುದ್ಧದಿಂದ ಆಗಿರುವ ನಷ್ಟಗಳಿಗೆ ಎಣಿಕೆಯಿಲ್ಲ.

**ಮಂತ್ರಿ :** ಯುದ್ಧ ನಷ್ಟವಷ್ಟೇ ಅಲ್ಲ ಪ್ರಭು. ಪ್ರಕೃತಿಯೂ ನಮ್ಮ ಮೇಲೆ ಮುನಿದಂತಿದೆ. ಮೋಡ ಬೆಂಕಿಯಾಗಿದೆ. ಭೂಮಿ ಬತ್ತಿ ಹೋಗಿದೆ. ತಿನ್ನಲು ಅನ್ನ ಇಲ್ಲ. ಪ್ರಾಣಿ ಪಕ್ಷಿಗಳಿಗೆ ಕಾಳುಕಡ್ಡಿಗಳಿಲ್ಲ. ಹಸುರಿಲ್ಲ; ಉಸಿರಿಲ್ಲ. ಅನ್ನಾಹಾರ ಇಲ್ಲದೆ ಜೀವಿಗಳು ಸಾಯುತ್ತಿವೆ. ಎಲ್ಲಿ ನೋಡಿದರೂ ಹೆಣಗಳೇ..........ಹೆಣಗಳು.

**ವಿ. ರಾಯ:** ನಮಗೆ ಇಂತಹ ಪರಿಸ್ಥಿತಿಯಲ್ಲಿ ದಿಕ್ಕೇ ತೋಚುತ್ತಿಲ್ಲ. ಒಂದು ಕಡೆ ಶತ್ರು ಬಾಧೆ. ಇನ್ನೊಂದು ಕಡೆ ಕ್ಷಾಮದ ಭೀತಿ. ಸಾವು ನೋವುಗಳ ನೋಟಕ್ಕೆ ಅಧೀರರಾಗಿ ಹೋಗಿದ್ದೇವೆ. ಸೆರೆಯಾಗಿ .ಹೋಗಿರುವ ನಮ್ಮ ಯುವರಾಜರನ್ನು ಹೇಗಾದರೂ ಮಾಡಿ ಬಿಡಿಸಿಕೊಂಡು ಬರಬೇಕು. ಅವರು ಹಾಕುವ ಷರತ್ತುಗಳು ನಮ್ಮ ಸಾಮರ್ಥ್ಯಕ್ಕೆ ಮೀರಿದ್ದು. ಮತ್ತೊಂದು ವಿಚಾರವಂತೂ ಊಹಿಸಲೂ ಅಸಾಧ್ಯವಾದದ್ದು. ಹೇಳಿ ಮಂತ್ರಿಗಳೇ ಅವರು ಬೇಡುವ ಬೇಡಿಕೆಗಳು ಮನುಷ್ಯ ಸಹಜವಾದ್ದು

ಎನಿಸುವುದೇ? ನಮ್ಮ ಯಾವ ಪಾಪಕ್ಕಾಗಿ ಈ ಶಿಕ್ಷೆ? ಇದೆಲ್ಲವೂ ನಮ್ಮಿಂದಾದ ಪಾಪವೋ ಇಲ್ಲ ದುಷ್ಟ ದೈವದ ಶಾಪವೋ.

**ಮಂತ್ರಿ** : ಪ್ರಭು ನೀವು ಅಧೀರರಾಗಬೇಕಾದ ಅವಶ್ಯಕತೆಯಿಲ್ಲ. ಪ್ರತಿ ಸಮಸ್ಯೆಗೂ ಪರಿಹಾರದ ದಾರಿ ಇದ್ದೇ ಇರುತ್ತದೆ. ಗ್ರಹಬಲವನ್ನು ಪರೀಕ್ಷಿಸಿ ದೈವಶಾಂತಿಗೂ ಪ್ರಯತ್ನಿಸೋಣ. ನನಗೊಬ್ಬ ಭವಿಷ್ಯಕಾರನ, ಗ್ರಹಗತಿಗಳನ್ನು ಹೇಳುವ ವ್ಯಕ್ತಿಯ ಪರಿಚಯವಿದೆ. ಆತನನ್ನು ಮಾತನಾಡಿಸಿ ತಿಳಿಯೋಣ.

**ವಿ.ರಾಯ** : ಆತನೀಗ ಎಲ್ಲಿದ್ದಾನೆ. ಆದಷ್ಟು ಬೇಗ ಕರೆಸಿ ಮಂತ್ರಿಗಳೇ.

**ಮಂತ್ರಿ** : ಪ್ರಭು ಸಭೆಗೆ ಬರುವಾಗಲೇ ಆತ ಎದುರಾದ. ನಮ್ಮ ರಾಜ್ಯದಲ್ಲಿನ ಇಂತಹ ಕಂಟಕಗಳಿಗೆ, ಪರಿಸ್ಥಿತಿಗೆ ಕಾರಣವನ್ನು ಕೇಳಿ ತಿಳಿಯೋಣವೆಂದು ಆಲೋಚಿಸಿ ಅವನನ್ನು ಕೋಟೆಯ ಬಾಗಿಲಲ್ಲಿಯೇ ನಿಲ್ಲಿಸಿ ಬಂದಿದ್ದೇನೆ. ಪ್ರಭುಗಳ ಅಪ್ಪಣೆಯಾದಲ್ಲಿ ಕರೆಸೋಣವೆಂದಿದ್ದೆ.

**ವಿ.ರಾಯ** : ಮತ್ತೇಕೆ ತಡಮಾಡುತ್ತೀರಿ.....ಬರಹೇಳಿ......(ಚಪ್ಪಳೆ ತಟ್ಟಿ ಯಾರಲ್ಲಿ) (ಕೂಗುವನು).

**ಭಟ** : ಅಪ್ಪಣೆಯಾಗಲಿ ಪ್ರಭು.

**ವಿ.ರಾಯ** : ಹೋಗು..........ಮಂತ್ರಿಗಳು ಹೇಳುವ ವ್ಯಕ್ತಿಯನ್ನು ಕರೆದು ತಾ.......... (ಹೋಗುವನು) (ಸೇನಾಪತಿಯ ಕಡೆ ತಿರುಗಿ) ಸೇನಾಪತಿಗಳೇ ನಾಳೆಯೊಳಗಾಗಿ ನಮ್ಮಲ್ಲಿರುವ ಸೈನ್ಯದ ಬಲ ಎಷ್ಟೆಂದು ಹೇಳಿ. ನಮ್ಮ ಕಡೆ ಉಸಿರಿರುವ ವರೆಗೆ ಯುದ್ಧಮಾಡಿ ನಮ್ಮ ಮಕ್ಕಳನ್ನು ಬಿಡಿಸಿಕೊಂಡು ಬರೋಣ. ಆಗದಿದ್ದಲ್ಲಿ ಪ್ರಾಣವನ್ನಾದರೂ ಬಿಡೋಣ.

**ಸೇನಾಪತಿ** : ಹಾಗೇ ಆಗಲಿ ಪ್ರಭು.

**ವಿ.ರಾಯ** : ಅಲ್ಲಿಯವರೆಗೆ ನಮ್ಮ ಯುವರಾಜರು ಸುರಕ್ಷಿತವಾಗಿರಬಲ್ಲರು ತಾನೇ?

**ಸೇನಾಪತಿ** : ಖಂಡಿತವಾಗಿಯೂ, ನಮ್ಮಿಂದ ಉತ್ತರ ಬರುವವರೆಗೂ ಕಾಯುತ್ತಾರೆ. ಅವರಿಗೂ ಸಾಕಷ್ಟು ದಣಿವಾಗಿದೆ. ಸಾಕಷ್ಟು ಸೈನ್ಯವೂ ನಾಶವಾಗಿದೆ. ಈ ದೂತ ಹೇಳುತ್ತಿರುವ ಷರತ್ತುಗಳು ಎಲ್ಲವೂ ನಮ್ಮನ್ನು ಹೆದರಿಸಲು ಆಡುತ್ತಿರುವ ನಾಟಕವೆಂದೇ ನನ್ನ ಭಾವನೆ.

(ಭಟನೊಂದಿಗೆ ಭವಿಷ್ಯಕಾರ ಬರುತ್ತಾನೆ. ಭಟ ಅವನನ್ನು ಅರಸನ ಮುಂದೆ ನಿಲ್ಲಿಸಿ ಹಿಂತಿರುಗುತ್ತಾನೆ.)

ವಿ.ರಾಯ : ಸ್ವಾಗತ ನಿಮಗೆ ಜ್ಯೋತಿಷಿಗಳೇ. ಬನ್ನಿ ಈ ಆಸನವನ್ನು ಅಲಂಕರಿಸಿ.

ಭವಿಷ್ಯಕಾರ: ನಿಮಗೆ ಮಂಗಳವಾಗಲಿ ಪ್ರಭುಗಳೇ. ಅಪ್ಪಣೆ ಕೊಡಿಸಿ ನನ್ನಿಂದ ನಿಮಗೇನಾಗಬೇಕು.

ವಿ.ರಾಯ : ನಿಮಗೆ ತಿಳಿಯದ್ದೇನಿದೆ. ಜ್ಯೋತಿಷಿಗಳೇ. ನಮ್ಮ ರಾಜ್ಯದ ಪರಿಸ್ಥಿತಿಯನ್ನು ನೋಡುತ್ತಲೇ ಇದ್ದೀರಿ. ರಾಜ್ಯದ ಪರಿಸ್ಥಿತಿ ಹದಗೆಟ್ಟು ಹೋಗಿದೆ. ಶತ್ರು ಬಾಧೆ, ಕ್ಷಾಮ, ಬಡತನ ಒಂದೇ ಎರಡೇ!

ಭವಿಷ್ಯಕಾರ: (ಒಂದೆರಡು ಕ್ಷಣ ಕಣ್ಣು ಮುಚ್ಚಿ ಧ್ಯಾನಿಸಿದಂತೆ ಮಾಡಿ) ಪ್ರಭುಗಳೇ ಕ್ಷಮಿಸಬೇಕು. ನಾನು ಹೇಳುವ ವಿಷಯಗಳು ನಿಮಗೆ ಅರಗಿಸಿಕೊಳ್ಳಲು ಆಗದ ಕಟು ವಾಸ್ತವಗಳು. ನಾನು ಹೇಳಿದಾಗ ಆತ್ಮ ಸಂಬಂಧ ತಂತುಗಳನ್ನೇ ಕತ್ತರಿಸಿಕೊಳ್ಳಬೇಕಾಗಿ ಬರಬಹುದು. ಅತ್ಯಂತ ಕ್ರೂರ ಕೆಲಸಕ್ಕೂ ಅನಿವಾರ್ಯವಾಗಿ ಮುಂದಾಗಬೇಕಾಗಿ ಬರಬಹುದು.

ಮಂತ್ರಿ : ಜ್ಯೋತಿಷಿಗಳೇ ನಿರ್ಭಯವಾಗಿ ಹೇಳಿ– ರಾಷ್ಟ್ರಪ್ರೇಮಕ್ಕೆ ಬಲಿದಾನಗಳು ಬೇಕಾಗಿ ಬಂದಾಗ ಹಿಮ್ಮೆಟ್ಟುವುದು ನಮ್ಮ ಜಾಯಮಾನದಲ್ಲಿಲ್ಲ.

ಜ್ಯೋ/ಭವಿಷ್ಯ: ಹಾಗಾದರೆ ಕೇಳಿಸಿಕೊಳ್ಳಿ. ಈ ರಾಜ್ಯದಲ್ಲಿನ ಅನಿಷ್ಟಗಳಿಗೆ ಈ ಅರಮನೆಗೆ ಹೊಕ್ಕಿರುವ ದುಷ್ಟ ಗ್ರಹವೇ ಕಾರಣ. ಮೊನ್ನೆ ಮೊನ್ನೆ ಆಕಾಶದಲ್ಲಿನ ಅಧ್ಬುತಗಳನ್ನು ಗಮನಿಸಲಿಲ್ಲವೇ? ಧೂಮಕೇತುವೊಂದು ಕಾಣಿಸಿಕೊಂಡದ್ದು, ಅಪರ ರಾತ್ರಿಗಳಲ್ಲಿ ನರಿಗಳು ಊಳಿಟ್ಟಿದ್ದು ಉಲ್ಕೆಗಳು ಬಿದ್ದದ್ದು....ಇವೆಲ್ಲವೂ ನಿಮ್ಮ ಗಮನಕ್ಕೆ ಬರಲಿಲ್ಲವೇ ಪ್ರಭು. ಯುದ್ಧ, ಕ್ಷಾಮಗಳೂ ಅದರ ಪರಿಣಾಮವೇ! ಇದು ಇಲ್ಲಿಗೇ ನಿಲ್ಲುವುದಿಲ್ಲ. ಪ್ರಸಿದ್ಧ ಪುರುಷನೋ, ರಾಜ್ಯದ ಅಧಿಪತಿಯೋ ಯಾರಲ್ಲಾದರೂ ಒಬ್ಬರು ಸಾಯುತ್ತಾರೆ. ಇದೆಲ್ಲವೂ ದುಷ್ಟ ಗ್ರಹಗಳ ಉಗ್ರ ಕೋಪದಿಂದಲೇ.

ವಿ. ರಾಯ: ಪರಿಹಾರವಿಲ್ಲವೇನು ಜ್ಯೋತಿಷಿಗಳೇ?

ಜ್ಯೋ/ಭ : ಇದೆ. ಆದರೆ ಅದು ತೀರಾ ಅಮಾನುಷವೆನಿಸಬಹುದು.

ವಿ. ರಾಯ: ಅಮಾನುಷವೋ ಅತಿ ಮಾನುಷವೋ ನನ್ನ ರಾಜ್ಯದ ಪ್ರಜೆಗಳ ಸುಖ, ಶಾಂತಿ, ಕ್ಷೇಮಗಳು ನನಗೆ ಮುಖ್ಯ.

ಜ್ಯೋ/ಭ : ಈ ಊರಿನ ದಟ್ಟ ಕಾಡಿನ ಮಧ್ಯೆ ಪೂರ್ವಕ್ಕೆ ಒಂದು ಹೋಮಕುಂಡ ರಚಿಸಿ ಗ್ರಹ ಶಾಂತಿ ಯಜ್ಞ ಮಾಡಬೇಕು. ತದನಂತರ ಅಲ್ಲಿಯೇ ಪಕ್ಕದಲ್ಲಿರುವ ಭೈರವೇಶ್ವರಿ ದೇವಿಯನ್ನು ಅರ್ಚಿಸಿ ಇನ್ನೂ ಆರಂಭದ ಗರ್ಭಾವಸ್ಥೆಯಲ್ಲಿರುವ ಹೆಣ್ಣನ್ನು ಬಲಿಗೊಟ್ಟು ಆ ರಕ್ತ ಬಿಂದುಗಳನ್ನು ಹೋಮಕುಂಡದಲ್ಲಿ ಹಾಕಬೇಕು.

ವಿ.ರಾಯ : (ಚಿಂತಾಮಗ್ನನಾಗಿ) ಬೇರೆ ರೀತಿಯ ಪರಿಹಾರವಿಲ್ಲವೇ ಜ್ಯೋತಿಷಿಗಳೇ?

ಜ್ಯೋ/ಘ : ನಾನು ಮೊದಲೇ ಹೇಳಿದ್ದೇನೆ. ಇದು ಕೇಳುವುದಕ್ಕೆ ಭೀಕರವೆನಿಸುತ್ತದೆ. ಕ್ರೂರವೆನಿಸುತ್ತದೆ, ಎಂದು.

ಮಂತ್ರಿ : ಪ್ರಭು ಇದಕ್ಕೆ ಉಪಾಯವನ್ನೇನಾದರೂ ಹುಡುಕೋಣ. ಒಂದಷ್ಟು ಸುವರ್ಣನಾಣ್ಯಗಳ ಆಸೆ ತೋರಿಸಿ ಈ ತ್ಯಾಗಕ್ಕೆ ಯಾವ ಹೆಣ್ಣು ಮಗಳನ್ನಾದರೂ ಆಹ್ವಾನಿಸೋಣ. ಆಸ್ಥಾನದಲ್ಲಿ ಅಂತಹ ಹೆಣ್ಣಿನ ಪುರುಷನಿಗೆ ಒಳ್ಳೆಯ ಕೆಲಸ, ಕೈ ತುಂಬ ಸ್ವರ್ಣ ನಿಕ್ಷೇಪ ಚಿನ್ನ ಹಣ ತೋರಿಸಿದರೆ?! ಅದಕ್ಕೆ ಮೋಹಿತರಾಗದ ಮಂದಿ ಈ ಲೋಕದಲ್ಲಿ ಇಲ್ಲದಿರಲು ಸಾಧ್ಯವೇ?

ವಿ.ರಾಯ : ಮಂತ್ರಿಗಳೇ ನೀವು ತಪ್ಪು ಲೆಕ್ಕಾಚಾರ ಹಾಕುತ್ತಿದ್ದೀರಿ. ಯಾವ ಪುರುಷ ತಾನೇ ಕೈಹಿಡಿದ ಹೆಂಡತಿಯನ್ನು, ಕರುಳಿನ ಕುಡಿಯನ್ನು ಉದ್ಯೋಗದ ಆಮಿಷಕ್ಕೆ ಚಿನ್ನದ ಮೋಹಕ್ಕೆ ಬಲಿಗೊಡಲು ಇಚ್ಛಿಸುತ್ತಾನೆ?

ಜ್ಯೋ/ಘ : ನನಗೆ ಮೊದಲೇ ಗೊತ್ತಿತ್ತು. ಮಾನವೀಯವಾಗಿ ಯೋಚಿಸಲ್ಲ ಯಾರಿಗೂ ಈ ಹಿಂಸೆ ಸಾಧ್ಯವಾಗದು, ಎಂದು.

ಮಂತ್ರಿ : ಪ್ರಯತ್ನಿಸೋಣ. ತ್ಯಾಗ. ಬಲಿದಾನ, ಕೀರ್ತಿ ಎನ್ನುವುದು ಒಂದು ರೀತಿಯ ಅಮಲು. ಅದರ ಜೊತೆಗೆ ತಾನು ಪ್ರೀತಿಸುವವರಿಗೆ ತನ್ನ ಬಲಿದಾನದಿಂದ ಲಾಭವಾಗುವುದಾದರೆ ಅಮಲಿನ ಪ್ರಮಾಣ ಮತ್ತಷ್ಟು ಏರುತ್ತದೆ.

ವಿ.ರಾಯ : ಮಂತ್ರಿಗಳೇ ಅದೆಲ್ಲವೂ ನಿಮಗೆ ಬಿಟ್ಟದ್ದು. ಹೇಗೆ ನಿಭಾಯಿಸುತ್ತೀರೋ ನೀವೇ ನೋಡಿಕೊಳ್ಳಿ. ಈ ಜ್ಯೋತಿಷಿಗಳನ್ನು ಸಕಲ ರಾಜಮರ್ಯಾದೆಗಳಿಂದ ಸನ್ಮಾನಿಸಿರಿ (ಸಭಾಸದರ ಕಡೆ ತಿರುಗಿ) ಸಭಾಸದರೇ ಪ್ರಜೆಗಳೇ ಇಲ್ಲಿ ನಡೆದದ್ದೆಲ್ಲವನ್ನು ನೋಡಿದಿರಿ. ನಿಮ್ಮ ಕ್ಷೇಮವೇ ನಮ್ಮ ಆಶಯ. ಅದಕ್ಕಾಗಿ ಸಕಲ ಪ್ರಯತ್ನಗಳನ್ನು ಮಾಡುತ್ತೇವೆ. ಯುದ್ಧ ವಿರಾಮ ಮುಗಿದು ಮತ್ತೆ ಯುದ್ಧ ಪ್ರಾರಂಭವಾಗಬಹುದು. ಈ ರಾಜ್ಯ ನಿಮ್ಮದು. ನಿಮ್ಮ ಸಮಸ್ತ ಧೈರ್ಯ ಸಾಹಸಗಳನ್ನು ಇದಕ್ಕೊಡ್ಡಿ ಹೋರಾಡಬೇಕು. ಜೀವದ ಹಂಗು ತೊರೆದು ಕಣಕ್ಕೆ ಇಳಿದಾಗ ಖಂಡಿತ ಜಯವು ನಮ್ಮದಾಗುವುದು. ಇದಿಷ್ಟೇ ನನ್ನ ಪ್ರಾರ್ಥನೆ. ಕ್ಷಾಮ, ಬವಣೆಗಳ ನಿವಾರಣೆಗೆ ನಾವು ಸಕಲ ಪ್ರಯತ್ನಗಳನ್ನು ಮಾಡುತ್ತಿದ್ದೇವೆ...... ನಾವಿನ್ನು ಬರುತ್ತೇವೆ. (ಸಭೆ ಮುಗಿಯುತ್ತಿದ್ದಂತೆ ಸಭಾಸದರು ಎದ್ದು ನಿಲ್ಲುತ್ತಾರೆ. ಪ್ರಭುಗಳು ಸಿಂಹಾಸನದಿಂದ ಇಳಿಯುತ್ತಾರೆ).

ഠഠ

# ದೃಶ್ಯ – ೮

(ಮೂರು ಗಂಟೆಯ ಸಮಯ. ಮಾದೇವಿ ಮಂಚದ ಮೇಲೆ ಮಲಗಿದ್ದಾಳೆ. ಏನೇನೋ ಬಡಬಡಿಸುತ್ತಿದ್ದಾಳೆ.)

**ಮಾದೇವಿ :** ಯಾರದು ಬಿಡಿ..............: ಬಿಡಿ ನನ್ನನ್ನು. ನಾನೇನು ತಪ್ಪು ಮಾಡಿದೆ?......... ಅಯ್ಯೋ ಆ ರಾಕ್ಷಸ ಕೊಲ್ಲುತ್ತಿದ್ದಾನೆ.......... ಕಾಪಾಡಿ....... ಕಾಪಾಡಿ.......... ರಕ್ತ..... ರಕ್ತ............. ಕೆಂಪು ರಕ್ತ......... ಎಷ್ಟು ಭಯಂಕರವಾಗಿದೆ......... ರಕ್ತದ ನದಿಗಳು............ ಅಲ್ಲ ಅಲ್ಲ......ರಕ್ತದ ಸಮುದ್ರಗಳು ಎಲ್ಲವೂ ಕೆಂಪು........ ಯಾರು........ ಯಾರು...... ಬರಬೇಡಿ...... ಬರಬೇಡಿ...... ಬರಬೇಡಿ........ (ಎಂದು ಬಡಬಡಿಸುತ್ತಲೇ ಇದ್ದಾಳೆ) (ಪದ್ಮ ಗಾಭರಿಯಿಂದ ಪ್ರವೇಶಿಸುತ್ತಾಳೆ).

**ಪದ್ಮ :** ಒಡತಿ............ ಒಡತಿ (ಎಂದು ಜೋರಾಗಿ ಕೂಗುತ್ತಾಳೆ)

**ಮಾದೇವಿ :** (ಬಡಬಡಿಕೆ ಮುಂದುವರೆಸುತ್ತಾಳೆ)

**ಪದ್ಮ :** (ಹತ್ತಿರಬಂದು ಅವಳನ್ನು ಅಲುಗಾಡಿಸಿ) ಒಡತಿ......... ಒಡತಿ............... ಇದೇನು ಈ ಹೊತ್ತಿನಲ್ಲಿ ಮಲಗಿದ್ದೀರಿ? (ಎಂದು ಮತ್ತೊಮ್ಮೆ ಅಲುಗಾಡಿಸುತ್ತಾಳೆ.)

**ಮಾದೇವಿ :** (ಬೆಚ್ಚಿ ಏಳುತ್ತಾ) ಯಾರು.........? ಪದ್ಮ............... (ಎಂದು ಕಣ್ಣುಜ್ಜಿ ಕೊಳ್ಳುತ್ತಾಳೆ)

**ಪದ್ಮ :** ಏಕೆ ಒಡತಿ ಈ ಅಪರ ಹೊತ್ತಿನಲ್ಲಿಯೇ ಮಲಗಿಬಿಟ್ಟಿರಿ?

**ಮಾದೇವಿ :** ಹೌದು ಪದ್ಮ, ಏನೇನೋ ಯೋಚಿಸುತ್ತಿದ್ದೆ. ಹಾಗೇ ನಿದ್ದೆಯ ಜೊಂಪು ಹತ್ತಿತ್ತು............

**ಪದ್ಮ :** ಅದು ಸರಿ............ ನೀವು ಮಲಗಿದ್ದಾಗ ಅದೇನೇನೋ ಬಡಬಡಿಸುತ್ತಿದ್ದಿರಿ. ಅದೇನು ಒಡತಿ................ ರಕ್ತ............. ರಕ್ತ............ ಎಂದೆಲ್ಲಾ ಕೇಳಿಸಿತು.

ಮಾದೇವಿ : ಏನೇನೋ ಕೆಟ್ಟ ಕನಸು......... ಭಯಂಕರ ಕನಸುಗಳು...........ಕಣ್ಣು ಹಚ್ಚಿದರೆ ಸಾಕು......... ಭೂತ ಬೇತಾಳಗಳು ಕುಣಿಯುತ್ತವೆ. ಭೀತಿ ಅನ್ನೋ ಹುಳು ಒಳಹೊಕ್ಕು ಒಳಗೊಳಗೇ ನನ್ನನ್ನು ತಿಂದು ಟೊಳ್ಳು ಮಾಡುತ್ತಿದೆ. ನನಗಿನ್ನು ತಡೆದುಕೊಳ್ಳುವ ಶಕ್ತಿಯಿಲ್ಲ. ನನ್ನ ಸುತ್ತ ಶತ್ರುಗಳೇ ನಿಂತಂತೆ ನನಗೆ ಕಾಣಿಸುತ್ತಿದೆ. ಹತ್ತಾರು ಕೈಗಳಲ್ಲಿ ಕತ್ತಿಗಳು ಕಾಣಿಸುತ್ತವೆ. ಒಂದೊಂದೇ ನನ್ನ ಮೇಲ ಬೀಳುತ್ತದೆ!............ ಚೀರುತ್ತೇನೆ, ಚೀರುತ್ತೇನೆ.

ಪದ್ಮ : ನಿಮಗೆ ಭ್ರಮೆಗಳು ಬಹಳ ಒಡತಿ............

ಮಾದೇವಿ : ಅದು ಸರಿ. ನೀನೇಕೆ ಇಷ್ಟು ಆತುರವಾಗಿ ಬಂದು ನನ್ನ ನಿದ್ದೆಯನ್ನು ಹಾಳು ಮಾಡಿದೆ.

ಪದ್ಮ : ನೀವಿಲ್ಲಿ ನಿದ್ದೆ ಮಾಡುತ್ತ ಬಡಬಡಿಸುತ್ತಿರಿ. ಅಲ್ಲಿ ರಾಜ್ಯವೇ ಹತ್ತಿಕೊಂಡು ಉರಿಯುತ್ತಿದೆ.

ಮಾದೇವಿ : ಅದೇನು ಸ್ವಲ್ಪ ಬಿಡಿಸಿ ಹೇಳಬಾರದೆ? (ಅಸಹನೆ)

ಪದ್ಮ : ಒಡತಿ ಅನಾಹುತ ಆಗಿ ಹೋಯಿತು. ಈ ದೇಶದಲ್ಲಿ ಹೆಣ್ಣು ಮಕ್ಕಳು ಬಸುರಿ, ಬಾಣಂತಿಯರು ಯಾರೂ ಬದುಕುವ ಹಾಗಿಲ್ಲ.

ಮಾದೇವಿ : ಹಾಗಂದ್ರೇನು ಪದ್ಮ ಈಗೇನಾಗಿದೇಂತ ಸಿಡಿ ಮಿಡಿಯುತ್ತಿರುವಿ?

ಪದ್ಮ : ಒಡತಿ ಈ ದೇಶದಲ್ಲಿನ ಕ್ಷಾಮಕ್ಕೆ, ಯುದ್ಧ ಮತ್ತು ಶತ್ರು ಭೀತಿಯ ನಿವಾರಣೆಗೆ ಮಹಾರಾಜರು ಗ್ರಹಶಾಂತಿ ಮಾಡಿಸುತ್ತಿದ್ದಾರೆ. ಜೊತೆಗೆ ಚಂಡೀ ಹೋಮ, ಬಸುರಿ ಹೆಣ್ಣಿನ ಬಲಿ ಬೇರೆ ನಡೆಸುತ್ತಾರಂತೆ!!

ಮಾದೇವಿ : ಏನು ನೀನು ಹೇಳುತ್ತಿರುವುದು? ಹೆಂಗಸರೆಂದರೆ ಕಟುಕನಂಗಡಿಯ ಕುರಿಗಳೆಂದು ತಿಳಿದರೇನು?........ ಪದ್ಮ ಇದು ಆಗಬಾರದು. ಈ ದೇಶದ ಅರಮನೆಯಲ್ಲಿ ಹೃದಯಗಳು ಉಸಿರಾಡುವುದಿಲ್ಲವೇನೋ ಎನಿಸುತ್ತದೆ. ಇಲ್ಲಿನ ಕಂಬಗಳು, ಗೋಡೆಗಳು, ಕೊಠಡಿಗಳು ಒಂದೂ ನನಗೆ ಆತ್ಮೀಯವೆನಿಸುವುದಿಲ್ಲ. ಇವೇ ಏನು ಇಲ್ಲಿನ ವ್ಯಕ್ತಿಗಳೂ ನಿಗೂಢ ಯಂತ್ರಗಳಂತೆ ನನಗನ್ನಿಸುತ್ತವೆ! ಇಷ್ಟು ದಿವಸವಾದರೂ ನಾನು ಇಲ್ಲಿನ ಗಾಳಿಗೆ, ಮಣ್ಣಿಗೆ ಹೊಂದಿಕೊಂಡಂತೆ ಕಾಣುವುದಿಲ್ಲ. ಇಲ್ಲಿಂದ ಓಡಿ ಹೋಗಬೇಕೆನಿಸುತ್ತದೆ. ಇಲ್ಲಿನ ಯಾವುದೂ ಯಾರೂ ನನ್ನವರಲ್ಲ. ಅರಮನೆಯ ಪಂಜರದಲ್ಲಿ ಫಡಫಡಿಸುತ್ತ ಮುಚ್ಚಿದ ಬಾಗಿಲನ್ನು ಕಿತ್ತಸೆದು ಮುಗಿಲಿನ ವಿಶಾಲ ನೀಲಿಯಲ್ಲಿ ಸ್ವಚ್ಛಂದವಾಗಿ ವಿಹರಿಸುವ ಕ್ಷಣಗಳಿಗಾಗಿ ಕಾಯುತ್ತಿದ್ದೇನೆ. ಸದ್ಯಕ್ಕೆ ಯುದ್ಧದ ಪೀಡೆ

ಕಳೆಯಿತು. ಯುವರಾಜರು ಬಿಡುಗಡೆಯಾದದ್ದು ಸಂತೋಷವೇ ಆದರೂ ಅವರೊಟ್ಟಿಗೆ ನಾನೆಂದೂ ಜೀವಿಸಲಾರೆ. ಒತ್ತಾಯದ ಪ್ರೀತಿ ಪಂಜಿನ ಆಘಾತವೇ ಆಗುತ್ತದೆ. ನಾನು ಇಲ್ಲಿಂದ ಹೇಗಾದರೂ ತಪ್ಪಿಸಿಕೊಂಡು ಹೋಗಬೇಕು. ಉಪಾಯವನ್ನು ಯೋಚಿಸು ಪದ್ಮ.

**ಪದ್ಮ** : ಒಡತಿ ನೀವು ನಿಮ್ಮ ಚಿಂತೆಯನ್ನಷ್ಟೇ ಮಾಡುತ್ತಿದ್ದೀರಿ. ನಾನು ಹೇಳಿದ ವಿಚಾರವಗಿ ಏನು ಮಾಡುತ್ತೀರಿ.?

**ಮಾದೇವಿ** : ಕ್ಷಮಿಸು ಪದ್ಮ. ನನ್ನ ವೈಯಕ್ತಿಕ ನೋವಿನ ಚಿಂತೆಯಲ್ಲಿ ಆ ವಿಚಾರವನ್ನೇ ಮರೆತೆ. ನೋಡಿದೆಯಾ ಮನುಷ್ಯ ಎಷ್ಟು ಸ್ವಾರ್ಥ ಕೇಂದ್ರಿತನಾಗುತ್ತಾನೆ!

**ಪದ್ಮ** : ಒಡತಿ ನಾನು ಹೋಗಿ ಇನ್ನೂ ಒಂದಷ್ಟು ವಿವರಗಳನ್ನು ಸಂಗ್ರಹಿಸಿ ಬರುತ್ತೇನೆ. ನೀವು ಏನಾದರೂ ಉಪಾಯ ಮಾಡಿ ಹೆಣ್ಣಿನ ಬಲಿಯಾಗುವದನ್ನು ತಪ್ಪಿಸೋಣ.

**ಮಾದೇವಿ** : ಹಾಗೆಯೇ ಮಾಡು ಪದ್ಮ. ಡಂಗುರ ಏನು ಹೇಳುತ್ತದೆ; ಯಾರು ಯಾರು ಏನು ಪ್ರತಿಕ್ರಿಯೆ ತೋರಿಸುತ್ತಾರೆ; ಯಾವ ಹೆಣ್ಣಾದರೂ ಇಂತಹ ತ್ಯಾಗಕ್ಕೆ ಮುಂದೆ ಬಂದಿರುವಳೇ ಎಂಬುದೆಲ್ಲವನ್ನೂ ಸರಿಯಾಗಿ ತಿಳಿದು ಬಾ. ಅವನ್ನು ತಡೆಗಟ್ಟುವ ಉಪಾಯುವನ್ನು ನಾನು ಯೋಚಿಸುತ್ತೇನೆ.

**ಪದ್ಮ** : ಒಡತಿ ಈ ಕೆಲಸಕ್ಕೆಂದು ಊರಿನ ಹಿರಿಯ ಹೆಂಗಸರನ್ನು ನೇಮಿಸಿದ್ದಾರಂತೆ. ಹೆಂಗಸರು ಸುಳ್ಳು ಹೇಳಿ ತಪ್ಪಿಸಿಕೊಂಡಾರೆಂದು ರಾಜ ವೈದ್ಯರನ್ನೂ ಜೊತೆಯಲ್ಲಿ ಕಳಿಸಿದ್ದಾರಂತೆ.

**ಮಾದೇವಿ** : ಸಂಗತಿಗಳು ಹೀಗಿರುವಾಗ ನಾವು ಬಹಳ ಜಾಣ್ಮೆಯಿಂದ ನಮ್ಮ ಕೆಲಸ ನಿರ್ವಹಿಸಬೇಕು. ಬಸುರಿ ಹೆಂಗಸರನ್ನು ಪತ್ತೆ ಹಚ್ಚುವುದಕ್ಕಾಗಿ ನೇಮಿಸಿರುವ ಆ ಊರಿನ ಹೆಂಗಸರನ್ನು ಹೇಗಾದರೂ ಮಾಡಿ ಇಲ್ಲಿಗೆ ಕರೆದು ತಾ. ಅವರಿಗೆ ತಿಳಿಸಿ ಹೇಳುತ್ತೇನೆ. ಆಗುವ ಈ ಅನಾಹುತವನ್ನು ಹೇಗಾದರೂ ಮಾಡಿ ನಿಲ್ಲಿಸೋಣ. ಹೋಗು. ಆದಷ್ಟು ಬೇಗ ಈ ಕೆಲಸ ಮುಗಿಸು.

**ಪದ್ಮ** : ಇದೋ ಹೊರಟೆ ಒಡತಿ. ಆದರೆ ನೀವು ಜೋಪಾನವಾಗಿರಿ. ನಿಮ್ಮ ಬಗ್ಗೆ ಮಹಾರಾಣಿಯವರು ಮಸಣಸು ಅರೆಯುತ್ತಿದ್ದಾರೆ. ಶತ್ರು ಪಾಳೆಯದಲ್ಲಿದ್ದ ಮಗನನ್ನು ತಮ್ಮ (ಅಂತಃಪುರಕ್ಕೆ) ರಾಣೀವಾಸಕ್ಕೆ ಕರೆಸಿಕೊಂಡು ಅತಿಯಾದ ಶುಶ್ರೂಷೆ ಮಾಡಿ ನಿಮ್ಮ ವಿಚಾರದಲ್ಲಿ ವಿಷ ಬೀಜ ಬಿತ್ತುತ್ತಿದ್ದಾರೆ.

ಮಾದೇವಿ : ಇರಲಿ ಬಿಡು ಪದ್ಮ. ಹೇಗಿದ್ದರೂ ನನಗೇನೂ ಈ ಅರಮನೆಯ, ಅರಸೊತ್ತಿಗೆಯ ಮೋಹವಿಲ್ಲ. ನಾನಾಗಿ ಬಯಸುವ ಬಿಡುಗಡೆ ತಾನಾಗಿ ಬಂದಾಗ ಚಿಂತೆ ಮಾಡುವುದಕ್ಕಿಂತ ಸಂತಸಪಡುತ್ತೇನೆ ಪದ್ಮ.

ಪದ್ಮ : ನಿಮಗಿರುವಷ್ಟು ಧೈರ್ಯ ನನಗಿಲ್ಲವಲ್ಲ ಒಡತಿ. ನಿಮ್ಮ ಸುರಕ್ಷಿತತೆಯ ಜವಾಬ್ದಾರಿ ನನ್ನ ಮೇಲಿದೆ.

ಮಾದೇವಿ : ಪದ್ಮ ನಿನಗೂ ನನಗೂ ಯಾವ ಜನ್ಮದ ನಂಟೋ! ಇಲ್ಲಿಗೆ ಬಂದಾಗ ನನಗೆ ಭಯವಾಗಿತ್ತು. ಜನರ ಸ್ವಭಾವ ನಡವಳಿಕೆಗಳಿಗೆ ಹೆದರಿದ್ದೆ. ನನ್ನ ಆತ್ಮೀಯತೆಗೆ ಎಟಕುವ ಜೀವವೊಂದು ಸಿಗಬಹುದೇ ಎಂದು ಆಲೋಚಿಸುತ್ತಿರುವಾಗ ಅನಾಯಾಸವಾಗಿ ನೀನು ನನ್ನ ದೃಷ್ಟಿಗೆ ಬಿದ್ದೆ. ನೀನಾಗಿ ನನ್ನ ಬಳಿ ಬಂದೆ. ನಿನ್ನ ನೋಟ ಮಾಟಗಳೇ ನಿನ್ನ ನಿಷ್ಕಲ್ಮಷ ಮನಸ್ಸನ್ನು ಸಾರಿ ಹೇಳಿತು..... ಸ್ವಲ್ಪ ಮಟ್ಟಿಗಾದರೂ ನಿರಾಳವಾಗಿ ಉಸಿರಾಡಲು ಸಾಧ್ಯವಾಯಿತು.

ಪದ್ಮ : ಅದ್ಯಾಕೋ ಏನೋ ಒಡತಿ. ನಿಮ್ಮನ್ನು ಕಂಡಾಕ್ಷಣದಿಂದ ನನ್ನ ಮನಸ್ಸಿಗೆ ನನ್ನವರೇ ಎಂಬ ಆತ್ಮೀಯ ಭಾವನೆಯುಂಟಾಯಿತು. ನನಗೆ ನನ್ನ ತಂಗಿಯ ನೆನಪನ್ನೇ ತಂದು ಕೊಟ್ಟಿತು.

ಮಾದೇವಿ : ಯಾಕೇ? ಈಗ ನಿನ್ನ ತಂಗಿ ಎಲ್ಲಿದ್ದಾಳೆ?

ಪದ್ಮ : (ದುಃಖದಿಂದ) ಆ ವಿಚಾರ ಮಾತ್ರ ಕೇಳಬೇಡಿ ಒಡತಿ.

ಮಾದೇವಿ : ಹೇಳು ಪದ್ಮ ನಾನು ನಿನ್ನವಳೆಂದಾದ ಮೇಲೆ ನಿನ್ನ ನೋವು ನನ್ನದಲ್ಲವೇ? ನನ್ನ ಮನಸ್ಸಿನ ಅಂತರಾಳದ ಎಲ್ಲ ಗುಟ್ಟುಗಳನ್ನು ನಿನ್ನಲ್ಲಿ ಬಿಚ್ಚುವುದಿಲ್ಲವೇ?

ಪದ್ಮ : ಒಡತಿ, ಎಳೆತನದಲ್ಲಿಯೇ ನನ್ನ ತಂದೆ ತಾಯಿಯರಿಂದ ನಾನು ನನ್ನ ತಂಗಿ ದೂರವಾದೆವು. ಅಪ್ಪ ಪ್ರಭುಗಳ ಸೈನ್ಯದಲ್ಲಿ ಸೈನಿಕನಾಗಿದ್ದ. ಅಮ್ಮ ಕಿರಿಯ ರಾಣಿಯ ದಾಸಿಯಾಗಿದ್ದಳು. ದಿನ ದಿನ ಅಮ್ಮ ಅಪ್ಪನ ಜಗಳ, ಅಪ್ಪ ಅಮ್ಮನ್ನು ಕ್ರೂರವಾಗಿ ನಡೆಸಿಕೊಳ್ಳುತ್ತಿದ್ದ. ಸದಾ ಕುಡಿತದ ಅಮಲು. ಮನೆಗೆ ಬರುತ್ತಿದ್ದಂತೆ ಭೈರವನಾಗಿ ಕಾರಣವಿಲ್ಲದೆ ರೇಗಾಡುತ್ತ, ಚೀರಾಡುತ್ತ ದನಕ್ಕೆ ಬಡಿದಂತೆ ಬಡಿಯುತ್ತಿದ್ದ. ಅಮ್ಮನಿಗೆ ಸಹಿಸಿಕೊಳ್ಳಲು ಸಾಧ್ಯವಾಗುತ್ತಿರಲಿಲ್ಲ.

ಮಾದೇವಿ : ಯಾಕೆ ಪ್ರಭುಗಳಿಗೆ ಹೇಳಿ ಅಪ್ಪನಿಗೆ ಬುದ್ಧಿ ಕಲಿಸಬಹುದಿತ್ತಲ್ಲ?

ಪದ್ಮ : ಕಿರಿಯ ರಾಣಿಯರಿಗೆ ತಿಳಿದು, ಅವರೇ ಪ್ರಭುಗಳಿಗೆ ಹೇಳಿ ನೋಡಿದರು. ಪ್ರಯೋಜನವಾಗಲಿಲ್ಲ. ಇದರಿಂದಾಗಿ ಸಿಟ್ಟಾದ ಅಪ್ಪ ಅಮ್ಮನ ಮೇಲೆ

ಇನ್ನಷ್ಟು ಹೆಚ್ಚಾಗಿಯೇ ದೌರ್ಜನ್ಯವನ್ನು ನಡೆಸುತ್ತಿದ್ದ. ಒಮ್ಮೆ ಅಮ್ಮನನ್ನು ಅಪ್ಪ ಚಾಟಿಯಲ್ಲಿ ಹೊಡೆದದ್ದನ್ನು ನೆನೆಸಿಕೊಂಡರೆ ಈಗಲೂ ಮೈ ನಡುಗುತ್ತದೆ. ಏಟು ಬಿದ್ದ ಕಡೆಯಲ್ಲಿ ಚರ್ಮ ಕಿತ್ತು ಬಂದು ಅಮ್ಮ ಮೈಕೈ ಊದಿಸಿಕೊಂಡು ರಕ್ತದ ಬೊಂಬೆಯಂತೆ ಕಾಣಿಸುತ್ತಿದ್ದರು. ಅಷ್ಟಾದರೂ ಅಮ್ಮ ಅಳಲಿಲ್ಲ. ನನ್ನನ್ನು ಕರೆದು ನನ್ನ ತಂಗಿಯನ್ನು ನನ್ನ ಕೈಗೆ ಕೊಟ್ಟು ಹೇಳಿದರು. 'ಪದ್ಮ ಇವಳನ್ನು ನಿನ್ನ ಮಗುವಿನಂತೆ ಪ್ರೀತಿಸು. ಅಪ್ಪನ ಕಣ್ಣಿನಿಂದ ಇವಳನ್ನು ರಕ್ಷಿಸು' ಎಂದು ಹೇಳಿ ಕಣ್ಣು ಮುಚ್ಚಿದಳು. ಅಪ್ಪ ಅಮ್ಮನ ಸಾವಿನಿಂದ ನಡುಗಿ ಹೋದ. ಅಮ್ಮ ಸತ್ತದ್ದಕ್ಕಲ್ಲ; ಕೊಲೆಯ ಆರೋಪದಿಂದ ಉಂಟಾಗುವ ಮರಣ ದಂಡನೆಯ ಹೆದರಿಕೆಯಿಂದ. ಕಿರಿಯ ರಾಣಿಗೆ ವಿಷಯ ತಿಳಿದೇ ತಿಳಿಯುತ್ತದೆ. ಪ್ರಭುಗಳ ಕಿವಿಗೆ ಬಿದ್ದರೆ ಖಂಡಿತವಾಗಿಯೂ ಶಿಕ್ಷೆ ತಪ್ಪುವುದಿಲ್ಲವೆನಿಸಿ ರಾತ್ರೋ ರಾತ್ರಿ, ತನ್ನಿಬ್ಬರು ಹೆಣ್ಣುಮಕ್ಕಳ ಪಾಡಿನ ಚಿಂತೆಯೂ ಇಲ್ಲದೆ ಓಡಿ ಹೋದ. ಕಿರಿಯ ರಾಣಿ ನಮ್ಮಿಬ್ಬರ ಮೇಲೆ ಕರುಣೆಯಿಟ್ಟು, ನಮ್ಮಿಬ್ಬರನ್ನೂ ಅರಮನೆಯಲ್ಲಿಯೇ ಇರಿಸಿಕೊಂಡರು. ನಮ್ಮಿಬ್ಬರ ಮದುವೆ ಮಾಡುವ ಆಲೋಚನೆಯೂ ಅವರಿಗಿತ್ತು.

**ಮಾದೇವಿ :** ಮತ್ತೇಕೆ ಮಾಡಲಿಲ್ಲ?

**ಪದ್ಮ :** ಅವರ ಒಳ್ಳೆಯ ತನವೇ ಅವರ ಪಾಲಿಗೆ ಉರುಳಾಯಿತು. ದಾಸ ದಾಸಿಯರು, ಭಟರು, ಊರಿನ ಮಂದಿ ಎಲ್ಲರಿಗೂ ಕಿರಿಯ ರಾಣಿಯೆಂದರೆ ಅಚ್ಚು ಮೆಚ್ಚಾಯಿತು. ಯಾರೇ ಕಷ್ಟದಲ್ಲಿದ್ದರೂ ಕಿರಿಯ ರಾಣಿಯವರ ಕಡೆ ಆಸೆಯಿಂದ ನೋಡುತ್ತಿದ್ದರು. ಇದರಿಂದ ಹಿರಿಯ ರಾಣಿಯ ಅಸೂಯೆಯ ಬೆಂಕಿಗೆ ಇನ್ನಷ್ಟು ಗಾಳಿ ಹಾಕಿದಂತಾಯಿತು. ಅವಕಾಶಕ್ಕಾಗಿ ಕಾದು, ಅವರಿಗೆ ಆಗಾಗ ಬರುತ್ತಿದ್ದ ಹೊಟ್ಟೆ ನೋವಿಗೆ ಔಷಧಿ ಕೊಡಿಸುವ ನೆಪದಲ್ಲಿ ವಿಷ ಹಾಕಿ ಕೊಂದು ಬಿಟ್ಟರು.

**ಮಾದೇವಿ :** ಹಿರಿಯ ರಾಣಿಯವರು ಹೀಗೇಕೆ ವರ್ತಿಸಿದರು? ಒಬ್ಬರ ಒಳ್ಳೆಯತನದ ಮೆಚ್ಚುಗೆಯನ್ನೂ ಸಹಿಸಲಾರದ ಮನಸ್ಸು ಎಷ್ಟು ದುಷ್ಟವಾಗಿರಬೇಕು.

**ಪದ್ಮ :** ನಿಮ್ಮ ವಿಚಾರದಲ್ಲಿ ಭಯಕ್ಕೆ ಅದೇ ಕಾರಣ ಒಡತಿ. ಪ್ರೀತಿಯ ಮಾತುಗಳಿಂದ ಹತ್ತಿರ ಬಂದಾಗ ಮತ್ತಷ್ಟು ಜಾಗರೂಕತೆಯಿಂದ ಇರಿ. ಆ ಸಿಹಿ ಮಾತಿನ ಗುಳಿಗೆಯಲ್ಲಿ ಯಾವ ಜಾತಿಯ ಕಾಲಕೂಟ ವಿಷ ಇರುತ್ತದೆಯೋ ಯಾರು ಬಲ್ಲರು?..... ನನ್ನ ತಂಗಿ ಕಾವಲು ಭಟನೊಬ್ಬನ ಪ್ರೀತಿಗೆ ಬಿದ್ದಳು. ಆದರೆ ಅವನೊಂದಿಗೆ ಸರಿಯಾಗಿ

ಸಂಸಾರ ಮಾಡದೆ ಅವನಿಗೂ ಮೋಸಮಾಡಿ ಓಡಿ ಹೋದಳು.... ನನ್ನವರು ಎಂದುಕೊಳ್ಳಲು ಯಾರೂ ಇಲ್ಲವೆಂದು ಹಂಬಲಿಸುತ್ತಿರುವಾಗ ನೀವು ಬಂದಿರಿ. ಅದು ನನ್ನ ಅದೃಷ್ಟ.

**ಮಾದೇವಿ :** ಅದು ನನ್ನದೂ ಹೌದು ಪದ್ಮ....ಈ ಭಯಂಕರ ಜನಾರಣ್ಯದಲ್ಲಿ ನಮಗೆ ನಾವೇ ಪರಸ್ಪರ ಸಹಾಯಕರು. ಹೆಂಗಸರಾದ ನಾವು ಇಂತಹ ನೋವುಗಳಿಂದ ಬಿಡಿಸಿಕೊಳ್ಳಬೇಕು....ಇನ್ನೂ ಒಂದು ಪದ್ಮ. ನಿನಗೆ ನಾನು ಹೇಳಿರಲಿಲ್ಲ. ಒತ್ತಾಯದ ಆಕ್ರಮಣದಿಂದ ಈ ರಾಜಸತ್ತೆಯ ಅನಿಷ್ಟ ಪ್ರತಿನಿಧಿಯೊಂದನ್ನು ನನ್ನೊಳಗೆ ಬೆಳೆಸುತ್ತಿದ್ದೇನೆ....ಇದು ಬೆಳೆಯಬಾರದು. ಬೇರು ಆಳಕ್ಕೆ ಇಳಿಯುವ ಮೊದಲೇ ಅದನ್ನು ಕಿತ್ತು ಬೀಸಾಡಬೇಕು.

**ಪದ್ಮ :** ಬೇಡ ಒಡತಿ. ಅಂತಹ ಆಲೋಚನೆಗಳನ್ನು ಕೈ ಬಿಡಿ.

**ಮಾದೇವಿ :** ಇದಕ್ಕೆ ನನಗೊಂದು ಸುಲಭವಾದ ಉಪಾಯ ತೋರುತ್ತಿದೆ. ಹೇಗಿದ್ದರೂ ಬಸುರಿಯ ಬಲಿಯಾಗಬೇಕೆಂದಿರುವಾಗ ನಾನೇ ಏಕೆ ಬಲಿಯಾಗಿ ನಿರಪರಾಧಿ ಹೆಣ್ಣೊಬ್ಬಳನ್ನು ರಕ್ಷಿಸಬಹುದಲ್ಲ!

**ಪದ್ಮ :** (ಆಶ್ಚರ್ಯದಿಂದ) ಇದೇನು ನಿಮ್ಮ ವಿಚಾರ? ಈಗಲೇ ನಿಮ್ಮ ಆಲೋಚನೆಗಳು ಬದಲಾದವೇ? ನೀವು ಬಲಿಯಾಗಿ, ಬಲಿದಾನ ಮಾಡುವುದರಿಂದ ಆಗುವ ಪ್ರಯೋಜನವೇನು? ಮುಂದೆ ಇನ್ನೊಮ್ಮೆ ಎಂದಾದರೂ ಇಂತಹದೇ ಪ್ರಸಂಗ ಬರಬಹುದು. ಒಬ್ಬ ವ್ಯಕ್ತಿಯ ಬಲಿದಾನ ಒಮ್ಮೆ ಮಾತ್ರ ಸಾಧ್ಯ. ಪದೇ ಪದೇ ಅವನು ಬದುಕಿ ಬರುತ್ತಾನೇನು?

**ಮಾದೇವಿ :** ಸದ್ಯಕ್ಕೆ ಸಮಸ್ಯೆ ಪರಿಹಾರವಾಗುವುದಲ್ಲ!

**ಪದ್ಮ :** ಸದ್ಯದ ಬಗ್ಗೆ ನೀವು ಆಲೋಚಿಸಬಾರದು. ಎಂದೆಂದಿಗೂ ಇಂತಹ ಸನ್ನಿವೇಶಗಳು ಉಂಟಾಗಬಾರದು. ಹೆಂಗಸರನ್ನು ಬಲಿಕೊಡುವ ಈ ಕ್ರೂರ ಪದ್ಧತಿಯನ್ನು ನೀವು ವಿರೋಧಿಸಬೇಕು. ಇದು ಆಗದಂತೆ ತಡೆಗಟ್ಟಬೇಕು.

**ಮಾದೇವಿ :** ಅಬ್ಬ! ಪದ್ಮ! ನೀನೆಷ್ಟು ವಿಚಾರ ಮಾಡಬಲ್ಲೆ? (ಮೆಚ್ಚುಗೆ) ನೀನು ಹೇಳುವುದೇ ಸರಿ. ಹೋಗು. ನಿನ್ನ ಪ್ರಯತ್ನ ನೀನು ಮಾಡು. ನಾನೂ ನನ್ನ ಅಗ್ನಿ ಪರೀಕ್ಷೆಗಳಿಗೆ ಎದ್ದು ನಿಲ್ಲುತ್ತೇನೆ. (ಪದ್ಮ ಹೋಗುವಳು).

○○

# ದೃಶ್ಯ – ೯

(ರಂಗದ ಮೇಲೆ ಭಾಗವತ ಕಾಣಿಸಿಕೊಳ್ಳುತ್ತಾನೆ. ಒಂದೆರಡು ಕ್ಷಣಗಳ ನಂತರ ರಂಗದ ಮುಂಭಾಗಕ್ಕೆ ಬಂದು)

**ಭಾಗವತ :** ನೋಡಿದಿರಾ ಪ್ರೇಕ್ಷಕರೇ ಆಟದ ಕತೆ ಎಲ್ಲೆಲ್ಲಿಗೋ ಸುತ್ತು ಹಾಕುತ್ತಿದೆ. ನಮ್ಮ ಮಾದೇವಿ ಮನಸ್ಸು ಮಲ್ಲಿಗೆಯಂತೆ ಮೃದು. ಜೀವನದಲ್ಲಿ ಏನೇನೋ ಕನಸು ಕಾಣ್ತಾ ಕಾಣ್ತಾ ಅವಳಿಗೆ ಅನಿಸ್ತದೆ, ತನ್ನದಲ್ಲದ ಊರಿಗೆ ಬಂದಂಗೆ. ತನ್ನವನಲ್ಲದವನ ಜೊತೆ ಹಾದರ ಮಾಡಿದಂಗೆ, ಹುಲಿ ಚಿರತೆಗಳಿರೋ ಕಾಡು ಹೊಕ್ಕಂತೆ, ರಾಕ್ಷಸರಿರೋ ಗುಹೆ ಹೊಕ್ಕಂತೆ! ಅಂತ.

ವಿಕ್ರಮ ಪ್ರಭುಗಳು ಊರ ಕ್ಷೇಮಕ್ಕೆ ಪೂಜೆ ಮಾಡಿಸಲು, ರಕ್ತ ಹರಿಸಲು ಹೊರಟಿದ್ದರೆ, ಮಾದೇವಿ ಮುಗ್ಧ ಜೀವದ, ಅಸಹಾಯಕ ಹೆಣ್ಣಿನ ಜೀವ ಉಳಿಸೋಕೆ ಹೊರಟಿದ್ದಾಳೆ. ನೋಡಬೇಕು. ಮಾದೇವಿ ಮುಂದಾಗುವಳೋ. ಪ್ರಭುಗಳೇ ಮುಂದಾಗುವರೋ!! ಊರ ಹೆಂಗಸರ ಹಿರಿ ಪ್ರತಿನಿಧಿಗಳನ್ನು ಕರೆಸಲು ಹೊರಟಿದ್ದಾಳೆ. ಅವರೆಲ್ಲ ಬಂದರೆ ಮಾದೇವಿ ಮುಂದೆ ಹೇಗೆ ಮಾಡ್ತಾಳೋ, ಮಹಾರಾಣಿಯವರಿಗೆ ಮಾದೇವಿ ಮಾಡೋ ಕೆಲಸದ ವಾಸನೆ ಹತ್ತಿದ ಹಾಗೆ ಕಾಣಿಸುತ್ತೆ. ಮಾದೇವಿ ಪ್ರಾಣಕ್ಕೇ ಅಪಾಯ ಇದೆ. ಏನಾಗುವದೋ ಏನೋ ಅಂತ ನನಗೂ ಭಯ ಶುರುವಾಗಿದೆ. ಯುವರಾಜರಂತೂ ಅವರಮ್ಮನ ಮಗನೇ ಆಗಿಬಿಟ್ಟಿದ್ದಾನೆ. ಮಾದೇವೀನ ಮರೆತೇ ಬಿಟ್ಟವಾನೆ. ಸೂಳೇರ ಕೋಟೆ ಒಳಗೆ, ಸುರೆಯ ಸರೋವರದೊಳಗೆ ಸ್ವರ್ಗಸುಖ ಅನುಭವಿಸುವವನಿಗೆ ಮಾದೇವಿಯ ಎದೆಹಾಡು ಕೇಳುವುದಾದರೂ ಹೇಗೆ! ಕ್ಷಮಿಸಿ ಪ್ರೇಕ್ಷಕರೆ. ಈ ಭಾಗವತಯ್ಯನೇ ಆಟದ ಮಧ್ಯೆ ಬಂದು ತಲೆ ತಿನ್ನಲಿಕ್ಕೆ

ಶುರುಮಾಡಿದ್ದಾನೇಂತ ಅಂದುಕೊಳ್ಳಬೇಡಿ. ನಾನು ಹೊರಟೆ...... (ಹೊರಡುವನು ಮತ್ತೆ ಹಿಂತಿರುಗಿ ಬಂದು) ನೋಡಿ, ಊರ ಹಿರಿಯ ಹೆಂಗಸರು ಎಲ್ಲಾ ಸೇರಿ ಹೊರಟಿದ್ದಾರೆ. ಬಹುಶಃ ನಮ್ಮ ಮಾದೇವೀನ ಕಾಣಲಿಕ್ಕೇ ಇರಬೇಕು. ಮಾದೇವಿ ಮುಂದಾಳ್ತನದಲ್ಲಿ ಏನೇನು ನಡೆಯುವುದೋ ಶಿವನೇ ಬಲ್ಲ. ಬರ್ತೀನಿ. ನಿಮ್ಮ ಅವರ ಮಧ್ಯೆ ನಾನೇಕೆ ಇರಲಿ. (ಹೊರಡುತ್ತಾನೆ) (ಒಂದು ದಿಕ್ಕಿನಿಂದ ಹಿರಿಯ ಹೆಂಗಸರು ಪ್ರವೇಶಿಸುತ್ತಾರೆ. ಮತ್ತೊಂದು ದಿಕ್ಕಿನಿಂದ ಪದ್ಮಳ ಜೊತೆಯಲ್ಲಿ ಪೂರ್ತಿಯಾಗಿ ಮುಸುಕು ಮುಚ್ಚಿಕೊಂಡಿರುವ ಮಾದೇವಿ ಪ್ರವೇಶಿಸುತ್ತಾಳೆ. ತೀರಾ ಹತ್ತಿರಕ್ಕೆ ಬಂದ ಮೇಲೆ ಹಿರಿಯ ಹೆಂಗಸರು ಮಾದೇವಿಯನ್ನು ಕುತೂಹಲದ ಕಣ್ಣುಗಳಿಂದ ನೋಡುತ್ತಾರೆ).

**ಮಾದೇವಿ :** (ವಿಸ್ಮಯದಿಂದ) ತಾಯಂದಿರೇ ನಿಮ್ಮೆಲ್ಲರನ್ನು ಇಲ್ಲಿಗೆ ಕರೆಸಿಕೊಂಡು ತೊಂದರೆ ಕೊಟ್ಟೆ ಕ್ಷಮಿಸಿ. ನಾನು ನಿಮ್ಮೊಂದಿಗೆ ಕೆಲವು ವಿಚಾರಗಳನ್ನು ಹಂಚಿಕೊಳ್ಳಬೇಕೆಂದಿದ್ದೇನೆ. ಆಗಬಹುದೇ?

**ಒಬ್ಬಹೆಂಗಸು:** ಹೇಳು ಮಗಳೆ. ನಿನ್ನ ಮಾತುಗಳನ್ನು ಕೇಳಲೆಂದೇ ಅಲ್ಲವೇ ನಾವು ಬಂದಿರುವುದು.

**ಮಾದೇವಿ :** ಪ್ರಭುಗಳ ಆದೇಶವನ್ನು ನೀವೆಲ್ಲರೂ ಬಲ್ಲಿರಿ. ಬಸುರಿ ಹೆಂಗಸಿನ ಬಲಿ ಪ್ರಯತ್ನಗಳು ನಡೆಯುತ್ತಿರುವುದು ನಿಮಗೆ ತಿಳಿದಿರುವುದು ಸರಿಯಷ್ಟೆ!

**ಮತ್ತೊಬ್ಬಳು:** ಅದಕ್ಕೆಂದೇ ನಮ್ಮನ್ನು ನೇಮಿಸಲಾಗಿದೆ. ಬಸುರಿ ಹೆಣ್ಣು ಮಕ್ಕಳನ್ನು ಪತ್ತೆ ಹಚ್ಚಿ ಅವರೆಲ್ಲರನ್ನೂ ಸೇರಿಸಿ ಅವರಲ್ಲಿ ಯಾರನ್ನಾದರೂ ಒಬ್ಬರನ್ನು ಒಪ್ಪಿಸುತ್ತೇವೆ.

**ಮಾದೇವಿ :** ನೀವು ಏನು ಮಾಡಲು ಹೊರಟಿದ್ದೀರೆಂಬ ಕಲ್ಪನೆ ನಿಮಗೆ ಇದೆಯೇ ತಾಯಂದಿರೇ?

**ಮೊದಲನೆಯವಳು:** ಇದರಲ್ಲಿ ಕಲ್ಪನೆಯ ಪ್ರಶ್ನೆ ಏನು ಬಂತು ಮಗಳೇ. ಪ್ರಭುಗಳು ಮಾಡಲು ಹೊರಟಿರುವುದು ಪ್ರಜೆಗಳ ಸಂಕ್ಷೇಮ ಕಾರ್ಯ. ಅದಕ್ಕೆ ಸಹಾಯ ಮಾಡುವುದು ನಮ್ಮೆಲ್ಲರ ಕೆಲಸ. ನಾವು ನಮ್ಮ ಮಕ್ಕಳು ಸುಖವಾಗಿರಬೇಕಲ್ಲ! ಈ ಕ್ಷಾಮದಿಂದ ಅನ್ನಾಹಾರಗಳಿಲ್ಲದೆ ನಾವೆಷ್ಟು ದಣಿದು ಹೋಗಿದ್ದೇವೆ. ಇನ್ನೆಷ್ಟು ದಿನ ಈ ಬವಣೆ, ಬಡತನಗಳು.

**ಇನ್ನೊಬ್ಬಳು:** ದನಕರುಗಳು ಸಾಯ್ತಿವೆ; ಮಕ್ಕಳು ಸಾಯ್ತಿದ್ದಾರೆ. ಕುಡಿಯೋಕೂ ನೀರಿಲ್ಲದೆ ಬಾವಿ, ಕೆರೆಗಳು ಬತ್ತಿವೆ. ಗಿಡದಲ್ಲೊಂದು ಹೂವು ಮರದಲ್ಲೊಂದು ಹಣ್ಣು. ಎಲೆಯಿಲ್ಲ; ಭೂಮಿ. ಎದೆ ಮೇಲೆ ಹಸಿರಿನ ಹುಲ್ಲಿಲ್ಲ. ಕೂಗೋ ಹಕ್ಕಿ ಇಲ್ಲ. ಕುಣಿಯೋ ನವಿಲಿಲ್ಲ. ನಗೋ ಮನಸ್ಸಿಲ್ಲ ಉಳಿಯೋಕೆ ಉಸಿರಿಲ್ಲ.

**ಮಾದೇವಿ :** ನೀವು ಹೇಳುವುದೆಲ್ಲವೂ ಸರಿಯೇ. ನಿಮ್ಮ ಬವಣೆಗಳು, ನಿಮ್ಮ ನೋವು, ಸಾವುಗಳು, ನನಗೆ ಅರ್ಥವಾಗಿದೆ....ಆದರೆ....ಆದರೆ ಈ ಕ್ಷಾಮಕ್ಕೆ 'ಬಲಿ' ಅನಿವಾರ್ಯವೇ? ಇದೇ ಪರಿಹಾರವೇ?

**೩ನೇಯವಳು:** ಮೊದಲಿನಿಂದಲೂ ನಡೆಯುವ ಪದ್ಧತಿಯೇ ಇದು. ಅತಿವೃಷ್ಟಿ ಅನಾವೃಷ್ಟಿ ದೇವರ ಕೋಪವಲ್ಲದೆ ಮತ್ತೇನು ಮಗಳೇ?

**ಮಾದೇವಿ :** ಮನುಷ್ಯನ ಬಲಿಯನ್ನು ಬಯಸುವ ದೇವರು....ದೇವರು ಹೇಗಾಗುತ್ತಾನೆ ತಾಯಂದಿರೇ? ಅವನು ನಮ್ಮೆಲ್ಲರ ತಂದೆ ಎನ್ನುತ್ತೀರಿ; ತಾಯಿ ಎನ್ನುತ್ತೀರಿ; ಹೀಗಿರುವಾಗ ನಮ್ಮ ತಂದೆ ತಾಯಿಗಳೆ ಆದ ದೇವರು ನಮ್ಮ ಕೊಲೆಯನ್ನು ಬಯಸುತ್ತಾರೆಯೇ? ನೀವು ನಿಮ್ಮ ಮಕ್ಕಳನ್ನು. ಕಷ್ಟ ಬಂತೆಂದು ಕೊಲ್ಲುತ್ತೀರಾ?

**೩ನೇಯವಳು:** ಇಲ್ಲ. ನಮ್ಮ ಮಕ್ಕಳನ್ನು ನಾವೇಕೆ ಕೊಲ್ಲಬೇಕು?

**ಮಾದೇವಿ :** ಹಾಗಾದರೆ ದೇವರೇಕೆ ಬಲಿಯ ಹೆಸರಿನಲ್ಲಿ ನಮ್ಮನ್ನು ಕೊಲ್ಲಿಸುತ್ತಾನೆ?

**೨ನೇಯವಳು:** ಮಗಳೆ ನಿನ್ನ ತರ್ಕ, ವಾಗ್ವಾದಗಳು ನಮಗೆ ಅರ್ಥವಾಗುವುದಿಲ್ಲ. ಪ್ರಭುಗಳ ಆದೇಶದಂತೆ ನಡೆಯುವುದು ಮಾತ್ರ ಗೊತ್ತು.

**ಮಾದೇವಿ :** ನೀವು ವಿಚಾರಿಸಿದ ಹೆಣ್ಣು ಮಕ್ಕಳಲ್ಲಿ ಯಾರು ಮುಂದೆ ಬಂದಿದ್ದಾರೆ ಹೇಳಿ?

**೧ ನೇಯವಳು :** ಇಲ್ಲಿಯವರೆಗೂ ಯಾರು ಮುಂದೆ ಬಂದಿಲ್ಲ. ಯಾರಾದರೂ ತಾವಾಗಿಯೇ ಬಂದರೆ ಸರಿ. ಇಲ್ಲವಾದಲ್ಲಿ ಅವರೇ ಒಬ್ಬರನ್ನು ಆಯ್ಕೆ ಮಾಡಿ ತೀರ್ಮಾನಿಸುತ್ತಾರಂತೆ. ಕೈ ತುಂಬ ಹಣ, ಆ ಹೆಂಗಸಿನ ಗಂಡನಿಗೆ (ರಾಜ್ಯೋದ್ಯೋಗ) ಒಳ್ಳೆಯ ಕೆಲಸ ಕೊಡುತ್ತಾರೆ. ಅಲ್ಲದೆ ಬಲಿ ಹೋಗುವ ಹೆಣ್ಣಿನ ಬಲಿದಾನವನ್ನು ಹೊಗಳಿ ಶಾಸನ ಬರೆಸುತ್ತಾರಂತೆ.

**೩ ನೇಯವಳು:** ಹೆಸರು ಹಣ ಎರಡೂ ಬರುವುದಲ್ಲದೆ ದೇಶಕ್ಕೆ ಪ್ರಾಣಕೊಟ್ಟ ಸಂತೃಪ್ತಿ ಕೂಡಾ ಇರುವುದಲ್ಲ.

**ಮಾದೇವಿ :** ನಿಮ್ಮ ತರ್ಕಗಳು ಬಹಳ ಚೆನ್ನಾಗಿವೆ. ನೀವು ಹೇಳಿದ್ದೆ ಸರಿಯಾದರೆ ಇಲ್ಲಿ ಸೇರಿರುವ ನೀವು ಹಿರಿಯ ತಾಯಂದಿರು ನಿಮ್ಮಲ್ಲೇ ಇರುವ ನಿಮ್ಮ ಮಗಳನ್ನೋ ಸೊಸೆಯನ್ನೋ ಏಕೆ ಹುರಿದುಂಬಿಸಿ ಕಳಿಸಬಾರದು?

**೨ ನೇಯವಳು :** (ಹೌಹಾರಿ) ಹಾಂ! ನಮ್ಮ ಮಕ್ಕಳೇ! ನನಗಿರುವ ಒಬ್ಬಳೇ ಮಗಳು. ಅಪರೂಪಕ್ಕೆ ಬಸುರಿಯಾಗಿದ್ದಾಳೆ. ನಮ್ಮ ಹೆಸರು ಹೇಳುವುದಕ್ಕೆ ಅವಳನ್ನು ಬಿಟ್ಟರೆ ಬೇರೆ ಯಾರು ಇಲ್ಲ.

**೧ ನೇಯವಳು** : ನನ್ನ ಮಗ ತನ್ನ ಹೆಂಡತಿಯನ್ನು ಅತಿಯಾಗಿ ಪ್ರೀತಿಸುತ್ತಾನೆ. ಹೆಂಡತಿಯನ್ನು ಕಳೆದುಕೊಂಡು ಒಂದು ಕ್ಷಣವೂ ಜೀವಿಸಲಾರ.

**ಮಾದೇವಿ** : ನೋಡಿದಿರಾ ನಿಮ್ಮ ಮಗಳು, ನಿಮ್ಮ ಸೊಸೆ ನಿಮಗೆ ಬೇಕು. ಎಲ್ಲರಿಗೂ ಅವರವರ ರಕ್ತ ಸಂಬಂಧಗಳು ಸುರಕ್ಷಿತವಾಗಿ ಉಳಿಯಬೇಕು. ಅಸಹಾಯಕ, ಬಡಪಾಯಿ ಹೆಣ್ಣು ಯಾವುದಾದರೂ ಗಂಡನ ದುರಾಸೆ, ಸ್ವಾರ್ಥಗಳಿಗೆ ಸಿಕ್ಕು ಸಾಯಲೇಬೇಕಾಗಬಹುದು..... ಅಲ್ಲದೆ 'ಬಲಿ'ಯ ಹೆಸರಿನಲ್ಲಿ ನಡೆಯುವ ಕೊಲೆ ಒಂದು ಕೊಲೆಯಲ್ಲ ಎರಡು ಕೊಲೆ!

**೩ ನೇಯವಳು** : ಹಾಗಾದರೆ 'ಬಲಿ', 'ಬಲಿದಾನ' ಗಳು ಬೇಡವೇನು? ಈ ಕ್ಷಾಮದ ನಿವಾರಣೆಗೆ ಬೇರೆ ದಾರಿ ಇದೆಯೇನು?

**ಮಾದೇವಿ** : 'ಬಲಿ', 'ಬಲಿದಾನ' ಎನ್ನುವುದೆಲ್ಲ ಬರೀ ಭ್ರಮೆ. ಅದೊಂದು ಅಮಲು. ನಿಮ್ಮನ್ನು ಮೋಸ ಮಾಡಲು ಹುಟ್ಟಿಸಿದ ಸುಳ್ಳುಗಳು. ಹಾಗೆ ನಿಮಗೆ ದೇವರಲ್ಲಿ ನಂಬಿಕೆ ಇರುವುದಾದರೆ ಮೌನವಾಗಿ ಪ್ರಾರ್ಥಿಸಿ. ಆದರೆ ಈಗ ಆಗಲಿರುವ ಅನಾಹುತವನ್ನು ನಿಲ್ಲಿಸಿ. ನೀವೆಲ್ಲರೂ ಒಟ್ಟಾಗಿ, ಒಕ್ಕೊರಲಿನಿಂದ ಇದನ್ನು ವಿರೋಧಿಸಿ. ಆದ ಮೇಲಿನ ಅನಾಹುತಕ್ಕೆ ಪಶ್ಚಾತ್ತಾಪ ಪಡುವುದಕ್ಕಿಂತ ಆಗುವ ಮೊದಲೆ ಎಚ್ಚೆತ್ತುಕೊಳ್ಳಿ. ನೀವು ಯಾರೂ ಕೆಲಸಕ್ಕೆ ಸಹಕರಿಸಬೇಡಿ. ಅರಸರು ನಿಮ್ಮನ್ನು ಕರೆಸಿದಾಗ, ಕರೆಸಿ ಬೆದರಿಸಿದಾಗ ಪ್ರತಿಭಟಿಸಿ.

**೧ ನೇಯವಳು** : ಮಂತ್ರಿ, ಜೋತಿಷಿಯ ಒತ್ತಾಯ ಬಹಳವಿದೆ.

**ಮಾದೇವಿ** : ಇರಲಿ. ಅದಕ್ಕೆ ಹೆದರಬೇಕಿಲ್ಲ. ಹಾಗೇನಾದರೂ ಪರಿಸ್ಥಿತಿ ಪ್ರಕೋಪಕ್ಕೆ ಹೋದರೆ, ನಾನೇ ನಿಮ್ಮೆಲ್ಲರ ಒಳಿತಿಗಾಗಿ ಬಲಿ ಹೋಗುತ್ತೇನೆ. ನಿಮ್ಮೆಲ್ಲರ ಭದ್ರತೆಗಿಂತ ನನ್ನ ಜೀವವೇನೂ ದೊಡ್ಡದಲ್ಲ.

**೧ ನೇ ಹೆಂಗಸು**: ಮಗಳೇ! (ಚೀರಿ) ರಾಜವಂಶದ ಬೀಜವನ್ನು ಧರಿಸಿದವಳು ನೀನು. ರಾಜ್ಯದ ಉತ್ತರಾಧಿಕಾರಿಯನ್ನು ಹೊತ್ತ ಗರ್ಭಕೋಶ! ನೀನು ಬಲಿಯಾಗುವುದೇ?..... ಸಾಧ್ಯವಿಲ್ಲ..... ಖಂಡಿತ ಸಾಧ್ಯವಿಲ್ಲ. ಅದಕ್ಕೆ ನಾವು ಅವಕಾಶ ಕೊಡುವುದಿಲ್ಲ.

**ಮಾದೇವಿ** : ಹಾಗಾದರೆ ನಾನು ಹೇಳಿದಂತೆ ಮಾಡಿ. ಇಷ್ಟೆಲ್ಲವನ್ನೂ ನಾನು ಗುಟ್ಟಾಗಿ ಮಾಡುತ್ತಿರುವೆನಾದರೂ ಮಹಾರಾಣಿ ರಾಜಮಾತೆಯ ಗೂಢಚಾರಿಕೆಯ ಕಿವಿಗಳಿಗೆ, ಕಣ್ಣುಗಳಿಗೆ ಬೀಳದೆ ಉಳಿಯುವುದಿಲ್ಲ. ಯಾವ ಕ್ಷಣದಲ್ಲಿಯಾದರೂ ನನ್ನ ಮೇಲೆ ಆಕ್ರಮಣವಾಗಬಹುದು. ನನ್ನನ್ನು ಕೊಲ್ಲಿಸಲೂಬಹುದು. ಸೆರೆಯಲ್ಲಿಡಲೂಬಹುದು. ಮಹಾರಾಜರಿಗಿಂತ ಮಹಾರಾಣಿಯವರ ಅಧಿಕಾರದ ಮೇಲುಗೈಯಲ್ಲಿ ಅವರಿಗೇ ತಿಳಿಯದಂತಹ ಸಂಗತಿಗಳು ನಡೆಯಬಹುದು. ಬಹುಶಃ ಇದೇ ನನ್ನ ಕೊನೆಯ ಕ್ಷಣವಾದರೂ

ಆಗಬಹುದು. ನನ್ನ ಆತ್ಮೀಯ ಸಖಿ, ಸೇವಕಿ, ಹಿತೈಷಿ ಎಲ್ಲವೂ ಆಗಿರುವ ಪದ್ಮಳಿಂದ ವಿಷಯಗಳನ್ನು ತಿಳಿದುಕೊಳ್ಳುತ್ತೀರಿ. ನಾಳೆಯೇ ನಿಮ್ಮ ವಿದ್ರೋಹ ಶುರುವಾಗಲಿ.

**ಎಲ್ಲರೂ** : ಮಗಳೇ ನಮ್ಮ ಹೆಂಗಸರ ಕುಲದ ಬಗ್ಗೆ ನೀನೆಷ್ಟು ಕಾಳಜಿ ವಹಿಸಿರುವಿ. ನಮಗೆ ನಿನ್ನ ಮಾತುಗಳಲ್ಲಿನ ಮನಸ್ಸು ಅರ್ಥವಾಗಿದೆ. ರಾಜವಂಶದ ಹೆಣ್ಣಾಗಿ ಸೇರಿದ ನೀನು, ರಾಜಮಾತೆಯಾಗಲಿರುವ ನೀನು ನಮಗಾಗಿ ಇಷ್ಟು ದೊಡ್ಡ ಸಂಕಟವನ್ನು ಮೇಲೆಳೆದುಕೊಳ್ಳುತ್ತಿರುವಿ. ನೀನು ಮಾನವಳಲ್ಲ. ನಮ್ಮ ಉದ್ಧಾರಕ್ಕಾಗಿಯೇ ಈ ರಾಜ್ಯಕ್ಕೆ ಬಂದ ದೇವತೆ ಮಗಳೆ.

**ಮಾದೇವಿ** : ಬೇಡಿ ತಾಯಂದಿರೇ ಇರುವ ದೇವತೆಗಳ ತೊಡಕಿನಿಂದಲೇ ನಡೆಯುತ್ತಿರುವ ಸಮಸ್ಯೆಯ ಗಾಲಿಗಳ ಕೆಳಗೆ ಸಿಕ್ಕಿ ನುಚ್ಚುನೂರಾಗುತ್ತಿರುವ ನಮಗೆ ಇನ್ನೊಬ್ಬ ದೇವತೆಯು ಬೇಕಾಗಿಲ್ಲ. ನನಗೆ ದೇವತೆಯಾಗುವ ಬಯಕೆ ಇಲ್ಲ. ನಮ್ಮಂತಹ ಹೆಣ್ಣು ಮಕ್ಕಳೂ ಮನುಷ್ಯರಂತೆ ಬಾಳುವುದಕ್ಕೆ ನಂಬಿಕೆ, ಸಂಪ್ರದಾಯಗಳ ಹೆಸರಿನಲ್ಲಿ ಹಿಂಸೆ, ಕ್ರೌರ್ಯಗಳಿಗೆ ಒಳಗಾಗದಂತೆ ಆದರಷ್ಟೇ ಸಾಕು. ನಾನಿನ್ನು ಬರುತ್ತೇನೆ. ಎಚ್ಚರಿಕೆಯಿಂದ ಮುಂದುವರೆಯಿರಿ.

**ಎಲ್ಲರೂ** : ನಿನ್ನ ಮಾತಿನ ಬೆಳಕಲ್ಲಿ ನಡೆಯುತ್ತೇವೆ ಮಗಳೆ. ರಕ್ತ ಚೆಲ್ಲುವುದರಿಂದ ಮಳೆ, ಬೆಳೆಯು ಭರವಸೆ ಇಲ್ಲವೆಂದ ಮೇಲೆ ನಾವೇಕೆ ಹಟ ಮಾಡಬೇಕು?

**ಮಾದೇವಿ** : (ಭಯದಿಂದ) ಬೇಗ ಹೊರಡಿ. ಈಗಾಗಲೇ ಸುದ್ದಿ ಅರಮನೆಯ ಒಳಕೋಣೆಗಳನ್ನು ಪ್ರವೇಶಿಸಿರುತ್ತದೆ. ಹೋಗಿ ಬನ್ನಿ. ನಿಮ್ಮ ಕ್ರಾಂತಿಗೆ ಫಲ ಸಿಗಲಿ.....(ಹೋಗುತ್ತಾರೆ) (ಪದ್ಮಳ ಕಡೆ ನೋಡಿ) ನಡೆ ಪದ್ಮ. ಸಾಕಷ್ಟು ಹೊತ್ತಾಯಿತು. ಅರಮನೆಯಿಂದ ನಾವು ಹೊರಟದ್ದು ಯಾರಿಗೂ ತಿಳಿಯಲಿಲ್ಲ ತಾನೇ?

**ಪದ್ಮ** : ಇಲ್ಲ ಒಡತಿ. ನಾವು ಬಂದಿರುವ ದಾರಿಯ ರಹಸ್ಯ ಯಾರಿಗೂ ತಿಳಿದಿಲ್ಲ.

**ಮಾದೇವಿ** : ಹೇಳುವುದಕ್ಕಾಗುವುದಿಲ್ಲ. ನಾವು ಬುದ್ಧಿವಂತರೆಂದು ಕೊಂಡರೆ ಶತ್ರುಗಳು ನಮಗಿಂತಲೂ ಬುದ್ಧಿವಂತರಾಗಿರುತ್ತಾರೆಂಬ ಸತ್ಯವನ್ನು ನಾವೆಂದೂ ಮರೆಯಬಾರದು. ಆದ್ದರಿಂದ ನಮ್ಮ ತಂತ್ರಕ್ಕೆ ಹಾಕಬಹುದಾದ ಪ್ರತಿತಂತ್ರವನ್ನು ನಾವೇ ಮೊದಲು ಯೋಚಿಸಿರಬೇಕು. ತಿಳಿಯಿತೇ ಪದ್ಮ?..... ಸರಿ ಬೇಗ ನಡೆ.

೦೦

# ದೃಶ್ಯ - ೧೦

(ರಾಜಮಾತೆಯ ಕೋಣೆ. ನ್ಯಾಯವಾದಿಯಂತೆ ಬಹಳ ಗಂಭೀರವಾಗಿ, ಗಂಟು ಮುಖ ಹಾಕಿಕೊಂಡು ಕುಳಿತಿದ್ದಾರೆ. ಅವರಿಗೆ ಪಕ್ಕದಲ್ಲಿಯೇ ಅಸ್ವಸ್ಥನಂತೆ ಕಾಣುತ್ತಿರುವ ಯುವರಾಜ ಕುಳಿತಿದ್ದಾನೆ. ಯಾರದೋ ನಿರೀಕ್ಷೆಯಲ್ಲಿದ್ದಂತೆ ಆಗಾಗ ಬಾಗಿಲಿನತ್ತ ನೋಡುತ್ತಾರೆ. ಅವರ ಬಲಗಡೆ ದಾಸಿಯೊಬ್ಬಳು ಗಾಳಿ ಹಾಕುತ್ತ ನಿಂತಿದ್ದಾಳೆ.)

**ರಾಜಮಾತೆ:** (ದಾಸಿಯನ್ನು ಉದ್ದೇಶಿಸಿ) ಮಲ್ಲಿಕಾ ಹೋಗು. ನಮ್ಮ ಸೊಸೆಗೆ ಹೇಳಿ ಕಳಿಸಿ ಎಷ್ಟು ಹೊತ್ತಾಯಿತು. ಇನ್ನೂ ಬರಲಿಲ್ಲ. ಹೇಳಿ ಕಳಿಸಿದ ಕೂಡಲೇ ಬರಬೇಕೆಂಬ ಪ್ರಜ್ಞೆಯೂ ಬೇಡವೇ. ಪ್ರತಿಷ್ಠೆ! ಉದ್ಧಟತನಗಳು ಅತಿಯಾಗುತ್ತಿವೆ. ಹೋಗು..... ಬೇಗ ಬರಬೇಕೆಂದು ನಮ್ಮ ಆಜ್ಞೆಯನ್ನು ತಿಳಿಸು.

**ದಾಸಿ :** ಅಪ್ಪಣೆ ತಾಯಿ (ಹೊರಡುವಳು).

**ರಾಜಮಾತೆ:** (ಸ್ವಗತ) ಎಂತಹ ಅಹಂಕಾರ! ಅವಳು ಹೀಗೆ ಮಿತಿಮೀರಿ ಬೆಳೆಯಲು ಪ್ರಭುಗಳು ಮತ್ತು ಯುವರಾಜರ ದೌರ್ಬಲ್ಯವೇ ಕಾರಣ. ವಂಶಮರ್ಯಾದೆ, ಕುಲ ಮರ್ಯಾದೆಗಳ ಅರಿವಾದರೂ ಬೇಡವೇ? ದರಿದ್ರ ಹೆಣ್ಣು! ದುಷ್ಟ ಹೆಣ್ಣು! ಮಾರಿಯಂತೆ ಮನೆ ಹೊಕ್ಕಾಯಿತು. ಇವಳು ಹೆಜ್ಜೆ ಇಟ್ಟಿದ್ದೇ ಈ ಅನರ್ಥ ಪರಂಪರೆಯು ಆರಂಭವಾಯಿತು. ನಾನು ಯುವರಾಜರಿಗೆ ಸಾಪಿರ ರೀತಿ ಬುದ್ಧಿ ಹೇಳಿದೆ. ಎಲ್ಲಿ ಕೇಳುತ್ತಾರೆ?.... ಕನಸಿನಲ್ಲಿ ಕಂಡ ದೇವಕನ್ಯೆಯೆಂದು ಭ್ರಮೆ ಬಿದ್ದು ಈ ಪಿಶಾಚಿಯನ್ನು ಕೊರಳಿಗೆ ಕಟ್ಟಿಕೊಂಡ. ನನಗ ಅಂದೇ ಅನಿಸಿತ್ತು.... ಈ ಚೆಲುವಿನ ಕೆಂಡ ಜ್ವಾಲೆಯಾಗಿ ಹತ್ತಿಕೊಂಡು ರಾಜ್ಯವನ್ನೇ ಸುಟ್ಟು ಹಾಕುತ್ತದೆ, ಎಂದು!.....ಬೇಡವೆಂದು ಬಾಯಿ ಬಡಿದುಕೊಂಡೆ..... ಆದರೆ..... ಆದರೆ.... ಪ್ರಾರ್ಥನೆಗಳು ಮರಳಿನಲ್ಲಿ ಚೆಲ್ಲಿದ ಅರಳಿನಂತಾಯಿತು!

ದಾಸಿ : (ಪ್ರವೇಶಿಸಿ) ತಾಯಿ ಇದೋ ಬಂದರು. ನಾನು ಹೊರಟ ದಾರಿಯಲ್ಲಿಯೇ ಸಿಕ್ಕರು.

(ಮಾದೇವಿ ಪದ್ಮಳೊಂದಿಗೆ ಪ್ರವೇಶಿಸುತ್ತಾಳೆ)

ರಾಜಮಾತೆ: (ವ್ಯಂಗ್ಯವಾಗಿ) ಓಹೋ.....ಬನ್ನಿ.....ಬನ್ನಿ.....ಯುವರಾಣಿ ಯವರಿಗೆ ಸ್ವಾಗತ.

ಮಾದೇವಿ : ಅಮ್ಮ ನನ್ನ ನಮಸ್ಕಾರಗಳನ್ನು ಸ್ವೀಕರಿಸಿ (ಎಂದು ವಿನಯದಿಂದ ಕೈ ಮುಗಿಯುತ್ತಾಳೆ.)

ರಾಜಮಾತೆ: (ಸಿಡಿ ಸಿಡಿಮು) ಸಾಕು ಮಾಡು ನಿನ್ನ ಬೂಟಾಟಿಕೆಯ ವಿನಯವನ್ನು. ಈ ಮನೆಯ ಸೊಸೆಯಾಗಿ, ರಾಜಮಾತೆಯಾದ ನಿನ್ನ ಅತ್ತೆಯವರಾದ ನಮ್ಮನ್ನು ಕಾಣಬೇಕೆಂಬ ಸೌಜನ್ಯವಾಗಲೀ ಆಗಾಗ ನಮ್ಮನ್ನು ಸಂದರ್ಶಿಸಿ, ವಿಚಾರಿಸಿ ಮಾತನಾಡಬೇಕೆಂಬ ಮನಸ್ಸಾಗಲೀ ಬರಲಿಲ್ಲ ಅಲ್ಲವೇ?..... (ವ್ಯಂಗ್ಯ) ಹೌದೌದು ನೀನೇಕೆ ಬರುತ್ತೀ. ಹೆಸರಿಗಷ್ಟೇ ನಾವು ಮಹಾರಾಣಿ.... ನಿಮ್ಮದೇ ಉಳಿದ ದರ್ಬಾರಲ್ಲವೇ?

ಮಾದೇವಿ : ಅಮ್ಮ ನೀವು ದೊಡ್ಡವರು. ನಿಮ್ಮ ಮುಂದೆ ನಾನೆಷ್ಟರವಳು? ವಿನಾಕಾರಣ ಸಿಟ್ಟಾಗುತ್ತಿದ್ದೀರಿ... (ಪದ್ಮಳ ಕಡೆ ತಿರುಗಿ) ಪದ್ಮ ನೀನು ಹೋಗು. ಆಂತರ್ಯದಲ್ಲಿ ಅತ್ತೆಯವರೊಡನೆ ಮಾತಾಡಬೇಕಿದೆ. (ಪದ್ಮ ಹೋಗಲು ತೊಡಗುವಳು)

ರಾಜಮಾತೆ: (ಮಲ್ಲಿಕಾಳನ್ನು ನೋಡಿ) ಮಲ್ಲಿಕಾ ನೀನೂ ಹೋಗು ಅರಮನೆಯ ಅಂತಃಕಲಹಗಳು ಹಾದಿ ಬೀದಿಗೆ ಬೀಳುವುದು ಬೇಡ. (ಮಲ್ಲಿಕಾಳು ಹೋಗುತ್ತಾಳೆ)

ಮಾದೇವಿ : (ಮಾತು ಮುಂದುವರೆಸುತ್ತ) ಅಮ್ಮ ದಾಸಿಯರ ಮುಂದೆ ಹೀಗೆ ನೀವು ನನ್ನನ್ನು ಅವಮಾನಿಸುವುದು ಮರ್ಯಾದೆ ಎನಿಸಲಾರದು.

ರಾಜಮಾತೆ: (ಸಿಟ್ಟಿನಿಂದ) ಮರ್ಯಾದೆಯ ಪಾಠವನ್ನು ನೀನು ನನಗೆ ಕಲಿಸಬೇಕಿಲ್ಲ. ನಾಡಾಡಿ ಗೌಡನೊಬ್ಬನ ಮಗಳಿಗೆ ರಾಜವಂಶದ ಮರ್ಯಾದೆಗಳು ಏನು ತಿಳಿಯುತ್ತದೆ ಪಾಪ! ನಿನ್ನನ್ನು ಮದುವೆಯಾದ ಪಾಪಕ್ಕೆ ನಮ್ಮ ಯುವರಾಜರು ಪಡುತ್ತಿರುವ ಪಾಡನ್ನು ಗಮನಿಸುವುದಕ್ಕಾಗಿಯಾದರೂ ನಿನಗೆ ವ್ಯವಧಾನವಿಲ್ಲವೇ?.....ಅವನ ಕಡೆ ಬೆರಳು ಮಾಡಿ ತೋರಿಸುತ್ತ ನೋಡು.... ಸ್ವಲ್ಪ ಸರಿಯಾಗಿ ನೋಡು ಜೀವಂತ ಶವವಾಗಿ ಹೇಗೆ ನರಳುತ್ತಿದ್ದಾನೆಂಬುದನ್ನು ಕಣ್ಣಾರೆ ಕಂಡು ಸಂತೋಷಿಸು.

ಮಾದೇವಿ : ನಮಗೆ ಅವೆಲ್ಲ ತಿಳಿಯುವುದಾದರೂ ಹೇಗೆ ಅಮ್ಮ? ಯುವರಾಜರು ನನ್ನನ್ನು ವರಿಸಿ ತಾಳಿ ಕಟ್ಟಿದರೇ ಹೊರತಾಗಿ ಒಂದೆರಡು ದಿನಗಳ

ದಾಂಪತ್ಯದ ಹೊರತು ಎಂದೂ ನನ್ನ ಪತಿಯಾಗಿ ಉಳಿಯಲಿಲ್ಲ. ಯಾರ ದುರ್ಬೋಧೆಗಳೋ ಅವರಿಗೆ, ಮನಸ್ಸನ್ನು ಕೆಡಿಸಿ ಕಪಿ ಮುಷ್ಟಿಯಲ್ಲಿರಿಸಿಕೊಂಡು ಜೀವ ತೆಗೆಯುತ್ತಿದ್ದಾರೆ. ತನಗೊಬ್ಬಳು ಹೆಂಡತಿ ಇದ್ದಾಳೆಂಬ ಪ್ರಜ್ಞೆಯೂ ಇಲ್ಲದಂತೆ ಸುರೆಯ ಸೆರೆಯಾಗಿದ್ದಾರೆ.

**ರಾಜಮಾತೆ:** ಅಂದರೆ? (ಸಿಟ್ಟು) ನಾವೇ ಅವರನ್ನು ಹಾಳು ಮಾಡುತ್ತಿದ್ದೇವೆಂದು ನಿನ್ನ ಆರೋಪವೇ?

**ಮಾದೇವಿ :** ಹಾಗೆಂದು ನಾನೆಲ್ಲಿ ಹೇಳಿದೆ? ನಿಮಗೆ ನನ್ನ ಒಂಟಿತನದ ಭಯಂಕರತೆಯ ಅನುಭವವಿದೆಯೇ? ಎಷ್ಟೊಂದು ಸುಂದರ ರಾತ್ರಿಗಳು ನನ್ನ ಪಾಲಿಗೆ ಕರಾಳರಾತ್ರಿಗಳಾಗಿವೆ. ನನ್ನ ಉಸಿರಿನ ಬಿಸಿಗೆ ನಾನೇ ದಹಿಸಿ ಹೋಗಿದ್ದೇನೆ. ಮಾಡುವುದಕ್ಕೆ ಕೆಲಸವಿಲ್ಲದೆ, ಮಾತನಾಡುವುದಕ್ಕೊಂದು ಸ್ನೇಹ ಜೀವಿಯಿಲ್ಲದೆ ನನ್ನ ಕೋಣೆಯ ಕತ್ತಲಿನಲ್ಲಿ ಕುಳಿತು ಚೀರುಚೂರಿಗಳ ಇರಿತಕ್ಕೆ ಒಳಗಾಗಿದ್ದೇನೆ. ನನ್ನ ನಿಟ್ಟುಸಿರು ಕಂಬನಿಗಳು ಲೆಕ್ಕಕ್ಕೆ ಸಿಗಲಾರದೆ ಹೋದದ್ದು ನಿಮಗೆ ಗೊತ್ತಿದೆಯೇನು?

**ರಾಜಮಾತೆ:** ಹೂಂ! ಬಹಳ ಸುಂದರವಾಗಿ ಮಾತನಾಡುವುದನ್ನು ಕಲಿತಿದ್ದೀಯ. ನನಗೆ ಗೊತ್ತು. ನಮ್ಮ ಯುವರಾಜರು ನಿಮ್ಮ ಮಾತುಗಳ ಮೋಹದ ಬಲೆಗೆ ಸಿಗಲಿಲ್ಲವೆಂಬುದೇ ನಿನ್ನ ಹಾರಾಟದ ಉದ್ದೇಶ.

**ಮಾದೇವಿ :** ಕ್ಷಮಿಸಿ ಅಮ್ಮ. ಅವರನ್ನು ನನ್ನ ಮೋಹದಲ್ಲಿ ಕೆಡವಿಕೊಂಡು, ಅದರಿಂದ ನನಗೇನೂ ಗಳಿಸಬೇಕಾದ್ದಿಲ್ಲ.

**ರಾಜಮಾತೆ:** ಅದರಿಂದ ಆಗಬೇಕಾದ್ದೇನು ಇಲ್ಲವೆಂದ ಮೇಲೆ ವಿದ್ರೋಹದ ಹೂಟವೇಕೆ? ಅರಿಯದ, ಮುಗ್ಧ ಪ್ರಜೆಗಳನ್ನು ಎತ್ತಿ ಕಟ್ಟಿ ರಾಜದ್ರೋಹ, ದೇಶದ್ರೋಹಗಳಿಗೆ ಪ್ರಚೋದಿಸಿ ನಮ್ಮೆಲ್ಲರನ್ನೂ ಕೊಂದು ನೀನೇ ಈ ರಾಜ್ಯವನ್ನು, ಗದ್ದುಗೆಯನ್ನು ಕಬಳಿಸಬೇಕೆಂದಲ್ಲವೇ ಸಂಚು ಮಾಡುತ್ತಿರುವುದು?

**ಮಾದೇವಿ :** ಸಂಚು!.....ಎಂತಹ ಸಂಚು......? ಇದನ್ನು ನನ್ನ ಮನೆ ನನ್ನ ರಾಜ್ಯ, ನನ್ನ ದೇಶ, ನನ್ನವರು ಎಂದು ಬಲವಾಗಿ ನಂಬಿರುವಾಗ ನಾನೇಕೆ ಸಂಚು ಮಾಡಬೇಕು. ಅಲ್ಲದೆ ಯಾರಿಗಾಗಿ ಈ ರಾಜ್ಯವನ್ನು ಕಬಳಿಸಬೇಕು?

**ರಾಜಮಾತೆ:** ಅದೇ ಇದ್ದಾನಲ್ಲ.....ನಿನ್ನ ದರಿದ್ರ ಅಪ್ಪ!

**ಮಾದೇವಿ :** ಅಮ್ಮ ಮಾತು ಮೀರುತ್ತಿದೆ. ನೀವು ಹೀಗೆಲ್ಲ ಮಾತನಾಡುವುದು ನಿಮಗೆ ಗೌರವವಲ್ಲ.

**ರಾಜಮಾತೆ:** (ಯುವರಾಜನ ಕಡೆ ತಿರುಗಿ) ನೋಡಿದಿರಾ ಯುವರಾಜರೇ ಈ ನಿಮ್ಮ ಹೆಂಡತಿ ದೊಡ್ಡವರು ಚಿಕ್ಕವರು ಎನ್ನುವ ಪ್ರಜ್ಞೆಯಿಲ್ಲದೆ ಹೇಗೆ ವಾದ ಪ್ರತಿವಾದಗಳನ್ನು ಮಾಡುತ್ತಿದ್ದಾಳೆ!...... ನಾನು ನಿಮಗೆ ಮೊದಲೇ ಹೇಳಿದೆ. ಈ ಸಂಬಂಧ ಬೇಡವೇ ಬೇಡವೆಂದು ಯಾವ ಯಕ್ಷ ಮೋಡಿಯ ಸೆಳೆತಕ್ಕೆ ಸಿಕ್ಕರೋ ಇವಳನ್ನೇ ಕಾಡಿ ಬೇಡಿ ತಂದಿರಿ. ನಿಮ್ಮ ಹಟವೊಂದಿಲ್ಲದಿದ್ದರೆ, ಆತ್ಮಹತ್ಯೆಯ ಬೆದರಿಕೆ ಇಲ್ಲದಿದ್ದರೆ,........ ಅನರ್ಥಪರಂಪರೆಯ ಈ ಪ್ರವಾದಿಯನ್ನು ಇಲ್ಲಿಗೆ ತರುತ್ತಲೇ ಇರಲಿಲ್ಲ. (ರಾಜಮಾತೆ ಮಾತನಾಡುತ್ತಿರುವಾಗ ಯುವರಾಜರು ಏನೂ ಅರ್ಥವಾಗದಂತೆ ತಾಯಿಯ ಮುಖದತ್ತ ಪಿಳಿ ಪಿಳಿ ನೋಡುತ್ತಾರೆ. ಅರೆಗಣ್ಣು, ತೇಲುಗಣ್ಣು ಹಾಕುತ್ತ ಏನನ್ನೋ ಧ್ಯಾನಿಸುತ್ತ ನಿಶ್ಚಲರಾಗುತ್ತಾರೆ.)

**ಮಾದೇವಿ :** ಅವರನ್ನೇಕೆ ಮಾತನಾಡಿಸುತ್ತೀರಿ ಅಮ್ಮ. ಈಗಾಗಲೇ ಅವರು ಅರ್ಧ ಸತ್ತಿದ್ದಾರೆ. ಮತ್ತೂ ಏಕೆ ಕೊಲ್ಲ ಬಯಸುತ್ತೀರಿ.

**ರಾಜಮಾತೆ:** ಮಾದೇವಿ ನಾಲಿಗೆ ಬಿಗಿ ಹಿಡಿದು ಮಾತನಾಡು. ನನ್ನ ಮಗನನ್ನು ನಾನೇ ಕೊಲ್ಲುವೆನೇನು?

**ಮಾದೇವಿ :** ನಾನು ಹೇಳುವುದೇನು? ನಿಮಗೆ ಅಂತರಾತ್ಮವೊಂದಿದ್ದರೆ, ಅಂತರ್‌ಸ್ಸಾಕ್ಷಿ ಇದೆ ಎನ್ನುವುದಾದರೆ ನಿಮಗೇ ಅದು ತಿಳಿದಿತು. ಬೇರೆಯವರು ಆಡಿ ತೋರಿಸಬೇಕಿಲ್ಲ.

**ರಾಜಮಾತೆ:** ಹದ್ದು ಮೀರಿ ಮಾತನಾಡುವುದನ್ನು ಸದ್ಯಕ್ಕೆ ಸಾಕುಮಾಡಿ ಮುಖ್ಯವಿಷಯಕ್ಕೆ ಬರುತ್ತೇನೆ.....ನೀನು ವಿದ್ರೋಹದ ಬೀಜವನ್ನೇಕೆ ಬಿತ್ತುತ್ತಿರುವಿ? ಮೊದಲು ನನಗೆ ಸಮಾಧಾನ ಹೇಳು.

**ಮಾದೇವಿ:** ಇದು ಖಂಡಿತ ವಿದ್ರೋಹವಲ್ಲ. ಅರ್ಥವಾಗದ ಆಚಾರ ನಂಬಿಕೆಗಳ ಹೆಸರಿನಲ್ಲಿ ನೀವು ನಡೆಸುವುದಕ್ಕೆ ಹೊರಟಿರುವ ಸ್ತ್ರೀ ಬಲಿಯನ್ನು, ಭ್ರೂಣ ಹತ್ಯೆಯನ್ನು ತಡೆಯುವುದಕ್ಕೆ ಮತ್ತು ಈ ರಾಜ್ಯದಲ್ಲಿ ನಡೆಯುವ ಕ್ರೂರ ಹಿಂಸೆಯನ್ನು ನಿವಾರಿಸುವುದಕ್ಕೆ ಪ್ರಯತ್ನಿಸುತ್ತಿದ್ದೇನೆ.

**ರಾಜಮಾತೆ:** ಇದು ಹಿಂಸೆಯೇನು ಬಂತು? ಹಿಂದಿನಿಂದ ನಡೆದು ಬಂದ ನಂಬಿಕೆ. ಆಚಾರಗಳನ್ನು ಉಳಿಸುತ್ತಿದ್ದೇವೆ. ಅನ್ನ, ನೀರುಗಳಿಲ್ಲದೆ ಹಾಹಾಕಾರದಿಂದ ತತ್ತರಿಸಿ ಸಾಯುತ್ತಿರುವ ಜನಕ್ಕೆ ಒಳ್ಳೆಯದಾಗಬೇಕೆಂದು, ಮಳೆ ಬೆಳೆಗಳಿಂದ ಸುಭಿಕ್ಷವಾಗಬೇಕೆಂದು ಮಾಡುತ್ತಿರುವೆವೇ ಹೊರತು ಮಾರಣ ಹೋಮದಿಂದ ಮನಸ್ಸಂತೋಷ ಪಡಿಸಿಕೊಳ್ಳುತ್ತಿಲ್ಲ.

**ಮಾದೇವಿ :** ಜ್ಯೋತಿಷಿಗಳ ಭವಿಷ್ಯವಾಣಿ, ಅವರು ತೋರುವ ಮಾರ್ಗದಿಂದ ನಮ್ಮ ಸಮಸ್ಯೆಗೆ ಪರಿಹಾರ ಸಿಗಲಾರದು. ಮಳೆ ಬೆಳೆಗಳು ಪೂಜೆ,

ಶಾಂತಿ, ಬಲಿಗಳಿಂದಲೇ ಸಾಧ್ಯವಾಗುವುದಾದರೆ ನಾವೆಲ್ಲವನ್ನು ಬಿಟ್ಟು ಕೈ ಕಟ್ಟಿ ಕೂತು ಇವುಗಳನ್ನೇ ಮಾಡುತ್ತಿರಬಹುದಲ್ಲ?

ರಾಜಮಾತೆ: ನಿನ್ನ ತರ್ಕ ನಮಗೆ ಬೇಕಿಲ್ಲ. ಆ ಹೆಂಗಸರಲ್ಲಿ ಯಾರಾದರೊಬ್ಬರು ದೇಶಕ್ಕಾಗಿ ತ್ಯಾಗ ಮಾಡಲೇಬೇಕು. ಇದರ ಹೊರತು ಪರಿಹಾರವೇ ಇಲ್ಲವೆಂದು ಜ್ಯೋತಿಷಿಗಳು ಅಪ್ಪಣೆ ಕೊಡಿಸಿದ್ದಾರೆ.....ಈ ರಾಜಕೀಯ ವಿಷಯಗಳಲ್ಲಿ ನಂಜಿಕೆ, ಧರ್ಮಗಳ ವಿಚಾರದಲ್ಲಿ ನೀನು ತಲೆ ಹಾಕಬೇಡ. ನೀನು ಸಾಮಾನ್ಯಳಲ್ಲ. ಕುರುವಂಶದ ನಾಶಕ್ಕೆ ಹುಟ್ಟಿಕೊಂಡ ಪಾಂಚಾಲಿ ನೀನು. .

ಮಾದೇವಿ : ನೀವು ಏನು ಬೇಕಾದರೂ ಹೇಳಿ. ನಾನು ಮಾತ್ರ ಈ ಕಗ್ಗೊಲೆ ಆಗುವುದಕ್ಕೆ ಬಿಡುವುದಿಲ್ಲ.

ರಾಜಮಾತೆ: ಎಂತಹ ಉದ್ದಟತನ ನಿನ್ನದು! ನಿನಗೆ ಸರಿಯಾಗಿ ಪಾಠ ಕಲಿಸಲೇ ಬೇಕು. (ಆ ಕಡೆ ಈ ಕಡೆ ನೋಡುತ್ತ) ಯಾರಲ್ಲಿ? (ಎಂದ ಕೂಡಲೇ ದಾಸಿ ಒಳಕ್ಕೆ ಬರುತ್ತಾಳೆ) ನೋಡು ಮಲ್ಲಿಕಾ..... ಹೋಗು ಈ ಕೂಡಲೇ ಭಟರನ್ನು ಬರಹೇಳಿ ಈ ರಾಜದ್ರೋಹಿಯನ್ನು, ಪಿಶಾಚಿಯನ್ನು ಸೆರೆಮನೆಗೆ ಎಳೆದುಕೊಂಡು ಹೋಗಲು ಹೇಳು.... ಸಿದ್ಧವಾಗಿರು ಮಾದೇವಿ.....(ಎಂದು ವ್ಯಂಗ್ಯನಗೆಯಿಂದ ನೋಡುತ್ತಾಳೆ)

ಮಾದೇವಿ : ನೀವು ನನ್ನನ್ನು ನಿಷ್ಕ್ರಿಯಳನ್ನಾಗಿ ಮಾಡಿದರೂ ನಾನು ಹೊತ್ತಿಸಿ ಬಂದ ಕಿಡಿ ತನ್ನ ಕೆಲಸವನ್ನು ಮಾಡುತ್ತದೆ. ಒಂದೊಂದೇ ಒಂದೊಂದೇ ಕಿಡಿ ಜ್ವಾಲೆಯಾಗುತ್ತ ಆಗುತ್ತ ಕಾಳ್ಗಿಚ್ಚಾಗಿ ಭಯಂಕರವಾಗಿ ನಾಲಿಗೆಗಳನ್ನು ಚಾಚಿ ಸುಡ್ತಾ ಸುಡ್ತಾ ಒಳಕ್ಕೆ ಒಳಕ್ಕೆ ಈ ಅರಮನೆಗೆ ಬಗಿಲು ದಾಟಿ ನಿಮ್ಮವರೆಗೂ ಬಮದು ನಿಮ್ಮನ್ನೂ ಕಬಳಿಸುತ್ತೆ. ಯಾರನ್ನೂ ಬಿಡುವುದಿಲ್ಲ. ಈಗಿನ ಕ್ಷಾಮಕ್ಕಿಂತ ಭಯಾನಕವಾದ ಕ್ಷಾಮವನ್ನು ಬೂದಿ ಬೆಟ್ಟಗಳನ್ನು ಮರಳು ಕಾಡುಗಳನ್ನು ಬೆಂಕಿ ಶಿಲೆಗಳನ್ನು ಕಾಣುತ್ತೀರಿ.

ರಾಜಮಾತೆ: ಅಲ್ಲಿಯವರೆಗೆ ನಿನ್ನ ಪಾಡೇನಾಗುವುದೆಂದು ಯೋಚಿಸಿರುವಿಯಾ? ನಿನ್ನನ್ನು ಕೊಚ್ಚಿ ಕೊಚ್ಚಿ ನಾಯಿ, ನರಿ, ಹದ್ದುಗಳಿಗೆ ಹಾಕಿಸುತ್ತೇನೆ.

ಮಾದೇವಿ : ಆಗಬಹುದು. ಸಾವು ನನಗೆ ಹೇಗೆ ಬಂದರೂ ಸಮಾಧಾನವೇ!.....ನೀವು ಮಾವನವರ ಬೆನ್ನ ಹಿಂದೆ ಮಾಡುತ್ತಿರುವ ಅನ್ಯಾಯಗಳು ಅವರಿಗೆ ತಿಳಿಸುತ್ತೇನೆ.

ರಾಜಮಾತೆ: ಓಹ್ ನಿನ್ನ ಮಾವನವರೇ? ಅವರೇನಿ ಮಾಡಬಲ್ಲರು? ನನ್ನ ಮಾತುಗಳು ಅವರಿಗೆ ಲಕ್ಷ್ಮಣ ರೇಖೆಗಳು! ಅವರನ್ನು ಆಡಿಸುವವಳೇ ನಾನು.

ನನ್ನ ಮಾತಿಗೆ ಪ್ರತಿಯಿಲ್ಲ. ಅವರಿಗೆ ಅವರದೇ ಆದ ಧೈರ್ಯ ಸಾಹಸಗಳಿದ್ದಿದ್ದರೆ ಈ ರಾಜ್ಯದ ಹಣೆಬರಹವೇ ಬದಲಾಗಿ ಬಿಡುತ್ತಿತ್ತು. ಸ್ವಂತವಾಗಿ, ಸ್ವತಂತ್ರವಾಗಿ ಆಲೋಚಿಸುವ ಶಕ್ತಿ ಎಲ್ಲಿದೆ ಅವರಿಗೆ? ಅವರಿಗೆ ಕೇಳಿಸಲಾಗದ ಎಷ್ಟೋ ಪಿಸುಮಾತುಗಳಿವೆ; ನಿಗೂಢ ತಂತ್ರಗಳಿವೆ ನನ್ನ ಬಳಿ. ನನ್ನ ಆದೇಶವೇ ಆದೇಶ.

**ಮಾದೇವಿ :** ನೀವೊಂದು ಗುಳ್ಳೆ ನರಿ. ಕೈ ಹಿಡಿದ ಗಂಡನಿಗೇ ಪ್ರಾಮಾಣಿಕರಲ್ಲದಿರುವಾಗ ನಿಮ್ಮ ಮುಂದೆ ನೀತಿಯ ಪಾಠಗಳು ನಿಷ್ಪ್ರಯೋಜಕ.

(ಅಷ್ಟರಲ್ಲಿ ಭಟರು ಪ್ರವೇಶಿಸುತ್ತಾರೆ)

**ಭಟರು :** ಏನಪ್ಪಣೆ ಮಹಾರಾಣಿ.

**ರಾಜಮಾತೆ:** (ಆಜ್ಞಾಪಿಸುವ ಧಾಟಿಯಲ್ಲಿ) ಕೊಂಡೊಯ್ಯಿರಿ ಈ ದೇಶದ್ರೋಹಿಯನ್ನು! ವಿಪ್ಲವದ ಕಿಡಿಯನ್ನು! ಸೇನಾಪತಿಗಳಿಗೆ ಹೇಳಿ ಇವಳಿಗೆ ಕ್ರೂರವಾದ ರೀತಿಯಲ್ಲಿ ಶಿಕ್ಷಿಸಲು ನಮ್ಮ ಆಜ್ಞೆಯಾಗಿದೆಯೆಂದು ತಿಳಿಸಿ.

(ಭಟರು ಮಾದೇವಿಯನ್ನು ಕರೆದೊಯ್ಯುತ್ತಾರೆ. ಭಟರ ಹಿಂದೆ ಮಾದೇವಿ ಹೋಗುತ್ತಾಳೆ.)

೦೦

# ದೃಶ್ಯ – ೧೧

(ಅರಮನೆಯ ಮುಂಬಾಗಿಲು, ಜನವೋ ಜನ. ಹೆಂಗಸರು, ಗಂಡಸರು, ಮುದುಕರು, ಹುಡುಗರು ಎಲ್ಲ ವಯಸ್ಸಿನ ಜನಸ್ತೋಮ. ಕೈಗಳಲ್ಲಿ ಬಡಿಗೆಗಳಿವೆ. ಜನರ ಮುಖದಲ್ಲಿ ರೋಷ, ಸಿಟ್ಟುಗಳು ಕಾಣಿಸುತ್ತಿವೆ. 'ಪ್ರಭುಗಳಿಗೆ ಧಿಕ್ಕಾರ! ಪ್ರಭುಗಳಿಗೆ ಧಿಕ್ಕಾರ!' ಎಂಬ ಕೂಗುಗಳು ಬರಬರುತ್ತಾ ಹೆಚ್ಚುತ್ತದೆ. ಭಾಗವತಪ್ಪ ಜನಸ್ತೋಮದ ಒಳಗಿನಿಂದ ಬಂದು ಸ್ವಲ್ಪ ಪ್ರೇಕ್ಷಕರ ಕಡೆಗೆ ನಡೆದು ಬರುತ್ತಾನೆ)

**ಭಾಗವತ** : ಇನ್ನು ಈ ಮಂದಿ ಬಿಡೋದಿಲ್ಲ. ಇವರೆಲ್ಲ ಎಚ್ಚೆತ್ತಿದ್ದಾರೆ. ಮಾದೇವಿಯ ಮಾತಿನ ಮಂತ್ರದ ಪ್ರಭಾವ ಇದು. ಬಸಿರಿ, ಬಾಣಂತೀರನ್ನು ಕೊಲ್ಲುವ ಈ ಅರಸೊತ್ತಿಗೆಯ ಕುತ್ತಿಗೆಗೇ ಕುತ್ತು ಬಂದಿದೆ. ಅವರ ಕೂಗು ಪ್ರಭುಗಳಿಗೆ ಕೇಳಿಸಲೇ ಬೇಕು. ರಾಜಮಾತೆಯ ನಿರಂಕುಶ ಅಧಿಕಾರದ ವಾಸನೆ ಹತ್ತಿದೆ. ಮಾದೇವಿ ಸೆರೆಮನೇಲಿ ಶಿಕ್ಷೆ ಅನುಭವಿಸುತ್ತಾಳೆ. ಹೇಗಾದರೂ ಅವಳನ್ನು ಹೊರಗೆ ಕರೆತರಬೇಕು.

('ಅನ್ಯಾಯ! ಅನ್ಯಾಯ! ಮಾದೇವಿಯವರನ್ನು ಸೆರೆಯಿಂದ ಬಿಡಿ. ನಾವು ಸುಮ್ಮನಿರುವುದಿಲ್ಲ. ಅರಮನೆ ಬಾಗಿಲು ಮುರಿತೀವಿ. ಕೋಟೇನ ಕೋವಿಯಿಂದ ಸಿಡಿಸ್ತೀವಿ'–ಎಂದು ಮತ್ತಷ್ಟು ಘೋಷಣೆಗಳು ಕೇಳಿಸುತ್ತವೆ)

ನೋಡಿ ಪ್ರೇಕ್ಷಕರೇ. ಮಾದೇವಿ ಜನರನ್ನು ಎಷ್ಟು ಪ್ರಚೋದಿಸಿದ್ದಾಳೆ. ಅವಳನ್ನು ಪ್ರೀತಿಸಲು ಆರಂಭಿಸಿದ್ದಾರೆ. ಅವಳಲ್ಲಿ ಮಾನವತೆ ಇದೆ. ಅನ್ಯಾಯವನ್ನು ವಿರೋಧಿಸುವ ಶಕ್ತಿ ಇದೆ. ಈ ದೇಶದ ಜನರ ಉದ್ಧಾರಕ್ಕೆ ಹುಟ್ಟಿದ್ದಾಳೆ ಅನ್ನಿಸುತ್ತೆ. ಹೊಳೆಗಳಾಗಿ ಹರಿದು ಬಂದ ಜನ ಈಗ ಪ್ರಳಯವಾಗಿ ನುಗ್ಗುತ್ತಿದ್ದಾರೆ. ಮಾದೇವಿಯನ್ನು ತಂದು ತೋರಿಸದ ಹೊರತು ಇಲ್ಲಿಂದ ಕದಲುವುದಿಲ್ಲ. ಭಟರು ನುಗ್ಗಿ ಬರ್ತಿದ್ದಾರೆ. ಜನವನ್ನು ಚದುರಿಸುತ್ತಿದ್ದಾರೆ. ಆದರೂ ಜನ..... ಅದೋ ಅದೋ.........

ಒಳನುಗ್ಗಿಯೇ ನುಗ್ಗುತ್ತಿದ್ದಾರೆ....... ('ಅಯ್ಯೋ ಅಯ್ಯೋ.....ಅಯ್ಯಪ್ಪಾ' ಎಂದು ನರಳುವ ಚೀರುವ ಸದ್ದು.)

(ಮಾದೇವಿ ಕೋಟೆಯ ಮೇಲೆ ಕಾಣಿಸಿಕೊಳ್ಳುತ್ತಾಳೆ. ಅವಳ ಎರಡೂ ಕಡೆ ಇಬ್ಬರು ಭಟರು ಮೈಗಾವಲಾಗಿ ನಿಂತಿದ್ದಾರೆ. ಮೆಲ್ಲನೆ ಮಾದೇವಿ ಜನಸ್ತೋಮದ ಕಡೆಗೆ ನೋಡಿ ಮಾತಾಡಲು ತೊಡಗುತ್ತಾಳೆ.)

**ಭಾಗವತ :** ನೋಡಿದಿರಾ ಮಾದೇವಿ ಬಂದೇ ಬಂದಳು. ಅವಳು ಏನು ಮಾತಾಡುತ್ತಾಳೋ ಕೇಳಿ ಬರುತ್ತೇನೆ ಪ್ರೇಕ್ಷಕರೇ. (ಎಂದು ಹಿಂದಕ್ಕೆ ನಡೆದು ಜನದೊಂದಿಗೆ ಸೇರಿ ಹೋಗುತ್ತಾನೆ)

**ಮಾದೇವಿ :** ಪ್ರೀತಿಯ ಬಂಧುಗಳೇ ಸ್ವಲ್ಪ ಶಾಂತಿಯಿಂದ ಇರಿ. ನನ್ನ ಬಗ್ಗೆ ನಿಮಗೆ ಭಯಬೇಡ. ಇದು ನನ್ನ ಮನೆ. ಇವರು ನನಗೇನೂ ಮಾಡಲಾರರು. ನಿಮಗೆ ನನ್ನ ಮೇಲಿರುವ ಅಭಿಮಾನಕ್ಕೆ ನನ್ನ ಕೃತಜ್ಞತೆಗಳು. ನನ್ನ ರಕ್ಷಣೆಯನ್ನು ನಾನು ಮಾಡಿಕೊಳ್ಳಬಲ್ಲೆ. ಸೆರೆಮನೆ, ಶಿಕ್ಷೆ ಇದು ಸುಳ್ಳು ವದಂತಿ. ನಾಳೆ ನಡೆಯಲಿರುವ ಗ್ರಹಶಾಂತಿಯಜ್ಞದಲ್ಲಿ ಜೀವಹಿಂಸೆಯಾಗುವುದಕ್ಕೆ ಅವಕಾಶ ಕೊಡಬೇಡಿ. ನಿಮ್ಮ ಪ್ರವೇಶಕ್ಕೆ ಹೆಚ್ಚಿನ ನಿರ್ಬಂಧಗಳಿರುತ್ತವೆ ಎಂದು ಮಾತನಾಡುತ್ತಿದ್ದ ಮಾದೇವಿಯನ್ನು ಮಧ್ಯದಲ್ಲಿಯೇ ಎಳೆದುಕೊಂಡು ಹೋಗುತ್ತಾರೆ.

(ಜನ ಓ ಎಂದು ಕೂಗುತ್ತ ಒಳ ನುಗ್ಗುತ್ತಾರೆ. ಎತ್ತೆತ್ತಲೋ ಚದುರಿ ಹೋಗುತ್ತಾರೆ)

**ಭಾಗವತ :** ಅಯ್ಯೋ ಅಯ್ಯೋ.....ಇದೇನು ಜನವಪ್ಪ! ನನ್ನ ಮೇಲೆಯೇ ಹರಿದು ಬರುತ್ತಾರೆ. ನಾನು ಪಕ್ಕಕ್ಕೆ ಸರಿಯುತ್ತೇನೆ......ಯಾಕಂದ್ರೆ, ಇವತ್ತು ಬದುಕಿ ಉಳಿದರೇನೇ ನಾಳೆ ಈ ಕತೆಯ ಕೊನೇ ದೃಶ್ಯ ನೋಡುವುದಕ್ಕೆ ಸಿಗುವುದು. ಬಸುರಿಯೊಬ್ಬರೂ ಪತ್ತೆಯಾಗದಂತೆ ತಲೆ ಮರೆಸಿಕೊಂಡಿದ್ದಾರೆ. ಯಾರೊಬ್ಬರೂ ಮುಂದೆ ಬಂದಿಲ್ಲ. ಮಂತ್ರಿ ಮತ್ತು ಜ್ಯೋತಿಷಿ ಬಹಳಷ್ಟು ಮಸಲತ್ತು ಮಾಡುತ್ತಿದ್ದಾರೆ. ಜ್ಯೋತಿಷಪ್ಪ ಹೇಳಿದ ಹಾಗೆ 'ಬಲಿ' ಆಗದಿದ್ದರೆ ಕ್ಷಾಮದೂರವಾಗದೆ ರಾಜ್ಯವೇ ನಾಶವಾಗಿ ನರಪಿಳ್ಳೆಯೂ ಉಳಿಯದಂತೆ ಆಗುತ್ತೇಂತ ಹೆದರಿದ್ದಾರೆ. ನೋಡಬೇಕು ಮುಂದೆ ಏನು ಪವಾಡ ಆಗಲಿದೆಯೋ?!..... ನಾಳೆ ನಾಳೆಯಾಗಿ ಉಳಿದರೆ ಮಾತ್ರ ನಾನುಂಟು ನೀನುಂಟು. ಇಲ್ಲವಾದರೆ ಯಾರೂ ಇಲ್ಲ. .... ಬರ್ತೀನಿ..... ಮಾದೇವಿ ಮುಂದೆ ಏನಾಗ್ತಾಳೋ ಏನ್ಮಾಡ್ತಾಳೋ!!

○○

# ದೃಶ್ಯ - ೧೨

(ರಾಜಮಾತೆ, ಮಂತ್ರಿ, ಜ್ಯೋತಿಷಿ, ವಿಕ್ರಮರಾಯ ಮಂತ್ರಾಲೋಚನಾ ಗೃಹದಲ್ಲಿ ಕುಳಿತಿದ್ದಾರೆ. ಎಲ್ಲರ ಮುಖದಲ್ಲೂ ದುಗುಡ ಅಸಹಾಯಕತೆಗಳು ಕಾಣಿಸಿಕೊಂಡಿವೆ)

**ರಾಜಮಾತೆ:** ಪ್ರಭು ಈಗೇನು ಮಾಡುವುದು. ಜ್ಯೋತಿಷಿಗಳು ಹೇಳುವ ಭಯಂಕರ ಭವಿಷ್ಯವನ್ನು ನಿವಾರಿಸಲು ನಮಗಿದ್ದ ಒಂದೇ ಒಂದು ದಾರಿಯೂ ನಿಮ್ಮ ಸೊಸೆ ಮಾದೇವಿಯ ಮೋಸ, ದ್ರೋಹಗಳಿಂದ ಮುಚ್ಚಿ ಹೋಗಿದೆ.

**ವಿ.ರಾಯ :** (ಆಲೋಚಿಸುತ್ತಾ) ಜ್ಯೋತಿಷಿಗಳೇ ಮಾದೇವಿ ಹೇಳುವುದರಲ್ಲಿಯೂ ಅರ್ಥವಿದೆಯಲ್ಲವೇ?.......ನಿಜವಾಗಿಯೂ ನಾವು 'ನರಬಲಿ' ಯನ್ನು ನೀಡಬೇಕೆ?

**ಜ್ಯೋತಿಷಿ :** ಪ್ರಭು ನನಗೆ ಮಾತ್ರ ಇದರಲ್ಲಿ ಸಂತೋಷವಿದೆಯೆಂದು ಭಾವಿಸಿದಿರಾ? ಎಲ್ಲ ಶಾಸ್ತ್ರ ಗ್ರಂಥಗಳನ್ನೂ ಓದಿ, ನಿವಾರಣೋಪಾಯಗಳನ್ನೂ ಚಿಂತಿಸಿ, ಕಡೆಗೆ ಇದೊಂದೇ ದಾರಿಯೆಂದು ತೀರ್ಮಾನಿಸಿದ್ದೇನೆ.

**ವಿ.ರಾಯ :** ಹಾಗಾದರೆ ನಾಳಿನ ಸಮಸ್ಯೆಗೆ ಪರಿಹಾರ ಹೇಗೆ? ಯಾರೊಬ್ಬರೂ ಮುಂದಾಗುತ್ತಿಲ್ಲ.

**ಮಂತ್ರಿ :** ಜ್ಯೋತಿಷಿಗಳೇ ನನಗೆ ಸೂಚಿಸಿದ ಸಲಹೆಯನ್ನು ಪ್ರಭುಗಳ ಮುಂದೆ ಹೇಳಿ. ಸಂಕೋಚಪಡಬೇಡಿ.

**ವಿ.ರಾಯ :** (ಕಾತುರತೆಯಿಂದ) ಅದೇನು ಜ್ಯೋತಿಷಿಗಳೇ? ಮಂತ್ರಿಗಳಿಗೆ ಹೇಳಬಹುದಾದ ನಮಗೆ ಹೇಳಲು ಸಂಕೋಚವಾಗುವ ವಿಷಯವಾದರೂ ಏನು?

**ಜ್ಯೋತಿಷಿ :** (ಸಂಕೋಚದಿಂದ) ಪ್ರಭು ನಾನು ಹೇಳುವ ವಿಷಯವನ್ನು ಕೇಳಿದರೆ ನಿಮಗೆ ಮಹಾರಾಣಿಯವರಿಗೆ ದಿಗ್ಭ್ರಮೆಯಾಗಬಹುದು.....ಆದರೆ

ಇವರಲ್ಲಿ ನನ್ನ ದುರುದ್ದೇಶವೇನೂ ಇಲ್ಲವೆಂಬುದನ್ನು ಮೊದಲು ಸ್ಪಷ್ಟಪಡಿಸುತ್ತೇನೆ. ಅದು.....ಅದು.....ನಿಮ್ಮ ಸೊಸೆ ಮಾದೇವಿಗೆ ಸಂಬಂಧಿಸಿದ್ದು.

**ವಿ.ರಾಯ :** ಹಾಂ! ನಮ್ಮ ಸೊಸೆ ಮಾದೇವಿಗೆ ಸಂಬಂಧಿಸಿದ್ದೇ!? (ಆಶ್ಚರ್ಯ ಸೂಚಿಸುವನು)

**ಜ್ಯೋತಿಷಿ :** ಹೌದು ಪ್ರಭು. ನಾನು ಸಭೆಯಲ್ಲಿ ನಿಮಗೊಂದು ಮಾತು ಹೇಳಿದೆ. ಈ ಮನೆಗೆ ಧೂಮಕೇತುವಿನ ಪ್ರವೇಶವಿದೆ ಅಂತ!.....ಆದರೆ ಆ ಧೂಮಕೇತು ಯಾವುದೆಂದು ನಾನು ನಿಮಗೆ ಆಗ ತಿಳಿಸಲಿಲ್ಲ.

**ವಿ.ರಾಯ :** (ದೂಷಿಸುವವನಂತೆ) ಏಕೆ ತಿಳಿಸಲಿಲ್ಲ ಜ್ಯೋತಿಷಿಗಳೇ. ಆಗಲೇ ಯಾರೆಂದು ಹೇಳಿದ್ದರೆ. ಇಷ್ಟೊಂದು ರಾದ್ಧಾಂತವಾಗಲು ದಾರಿಯೇ ಇರಲಿಲ್ಲ. ಈಗಲೂ ಕಾಲ ಮಿಂಚಿಲ್ಲ. ನಾಳೆಯವರೆವಿಗೂ ಸಮಯವಿದೆ.

**ರಾಜಮಾತೆ:** (ಅನುಮಾನಿಸುತ್ತ) ಪ್ರಭು ಜ್ಯೋತಿಷಿಗಳು ನನಗೆ ಹೇಳಿದ್ದರು. ಆದರೆ ನಿಮ್ಮ ಮನಸ್ಸಿಗೆ ನೋವಾಗುವುದೆಂದು ನಾನೂ ಹೇಳಲಿಲ್ಲ.

**ವಿ.ರಾಯ :** ಸುತ್ತು ಬಳಸುಗಳನ್ನು ಬಿಟ್ಟು ನೇರವಾಗಿ ವಿಷಯವೇನೆಂದು ಹೇಳಿ.

**ಜ್ಯೋತಿಷಿ :** ನಿಮ್ಮ ಸೊಸೆಯ ಬಸಿರಿನಲ್ಲಿಯೇ ವಿನಾಶದ ಬೀಜವಿದೆ. ಅದನ್ನೇ ನಾನು ಧೂಮಕೇತುವೆಂದು ಹೇಳಿದ್ದು. ಅದು ಬೆಳೆದು ಭೂಮಿಗೆ ಬಿದ್ದರೆ ವಿನಾಶವಂತೂ ಕಟ್ಟಿಟ್ಟದ್ದು.

**ವಿ.ರಾಯ :** ಜ್ಯೋತಿಷಿಗಳೇ! (ಚೀರುತ್ತಾನೆ)

**ರಾಜಮಾತೆ:** ನೋಡಿದಿರಾ ಪ್ರಭು. ಸೊಸೆಯ ಪ್ರಸ್ತಾಪ ಬಂದ ಕೂಡಲೇ ಹೇಗೆ ಸ್ಫೋಟಗೊಂಡಿರಿ.... ನನಗೆ ಮಾತ್ರ ನನ್ನ ಸೊಸೆಯ ಮೇಲೆ ಪ್ರೀತಿ ಇಲ್ಲವೇ. ಈ ವಂಶದ ಬೆಳಕನ್ನು ಬಸಿರಲ್ಲಿ ಧರಿಸಿದ್ದಾಳೆಂದು ತಿಳಿದಾಗ ಎಷ್ಟು ಸಂತೋಷಪಟ್ಟೆ! ನಿಮಗೆ ಗೊತ್ತೇನು?.... ಆದರೆ ಈ ಜ್ಯೋತಿಷಿಗಳಿಂದ ನಿಜಸಂಗತಿ ತಿಳಿದಾಗ..... ಭವಿಷ್ಯದ ಬಗ್ಗೆ ಅರಿತಾಗ, ನೆಮ್ಮದಿಯ ಕ್ಷಣಗಳೇ ನನಗಿಲ್ಲವಾದವು.

**ವಿ.ರಾಯ :** ಅಯ್ಯೋ ದೇವರೇ ಎಂತಹ ವಿಷಮ ಪರೀಕ್ಷೆ! ನನ್ನ ಸೊಸೆಯನ್ನೇ ಬಲಿಗೊಡಬೇಕೇ?

**ಜ್ಯೋತಿಷಿ :** ನಿಮ್ಮ ರಾಜ್ಯ, ಪ್ರಜೆಗಳು ನಿಮಗೆ ಬದುಕಿ ಉಳಿಯಬೇಕಾದರೆ, ದೇಶದ ಕ್ಷಾಮದೂರವಾಗಬೇಕಾದರೆ ಇದೆಲ್ಲ ಆಗಲೇಬೇಕು. ನಾನಂದೇ ನಿಮಗೆ ಹೇಳಿದ್ದೆ. ಆತ್ಮ ಸಂಬಂಧಗಳನ್ನೂ ನಿಷ್ಠುರವಾಗಿ ಮರೆಯಬೇಕೆಂದೆ.

**ರಾಜಮಾತೆ:** ಪ್ರಭು ನಮ್ಮಂತಹ ಅರಸುವಂಶದವರಿಗೆ ಇಂತಹ ಬಲಿದಾನಗಳು ಸಾಮಾನ್ಯವೇ ಅಲ್ಲವೆ? ಅಣ್ಣ–ಅಕ್ಕ, ಅಕ್ಕ–ತಂಗಿ, ತಂದೆ–ಮಕ್ಕಳು ಯಾವುದೂ ಸಂಬಂಧಗಳಾಗಿ ಉಳಿಯುವುದಿಲ್ಲ. ರಾಜಕಾರಣದ ರಂಗ ಮಂದಿರದಲ್ಲಿ ನಾವೆಷ್ಟೊಂದು ಪಾತ್ರಗಳನ್ನು ನಿರ್ವಹಿಸಬೇಕಲ್ಲವೇ? ಪ್ರೀತಿ, ವಾತ್ಸಲ್ಯ, ಮಮಕಾರಗಳು ಮೇಣದಂತೆ ನಮ್ಮನ್ನು ಕರಗಿಸಿ ದೌರ್ಬಲ್ಯದತ್ತ ದೂಡುತ್ತವೆ.... ನಮಗೆ ನಮ್ಮ ಮಕ್ಕಳು, ನಮ್ಮ ಬಂಧುಗಳು, ನಮ್ಮವರು ಎನ್ನುವುದಕ್ಕಿಂತ ಈ ಪ್ರಜಾಕೋಟಿಯೇ ಮುಖ್ಯವಲ್ಲವೇ?

**ಮಂತ್ರಿ :** ಹೌದು ಪ್ರಭುಗಳೇ ರಾಜಮಾತೆಯವರ ಮಾತು ಸತ್ಯ. ಅವರ ಪ್ರಜಾಚಿಂತನೆ ರಾಜಕೀಯ ಜವಾಬ್ದಾರಿಯ ಆಲೋಚನೆಗಳು ಅರ್ಥಪೂರ್ಣವಾದವುಗಳು!

**ವಿ.ರಾಯ :** ನೀವು ಹೇಳುವುದೆಲ್ಲವೂ ಸರಿ. ನಾವು ಹೇಗೆ ಅವಳನ್ನು ಒಪ್ಪಿಸುವುದು? ಯುವರಾಜರಿಗೆ ಏನೆಂದು ಸಮಾಧಾನ ಹೇಳುವುದು?

**ರಾಜಮಾತೆ:** (ತಿಳಿಸಿ ಹೇಳುವಂತೆ) ಆ ಚಿಂತೆ ನಿಮಗೆ ಬೇಡ. ನನ್ನ ಸೊಸೆಗೆ ನಮ್ಮ ಯುವರಾಜರಿಗೆ ತಿಳಿಸಿ ಹೇಳುವ ಹೊಣೆಗಾರಿಕೆ ನನ್ನದಿರಲಿ. ನಮ್ಮ ಯುವರಾಜರು ನಿಮ್ಮ ಮಕ್ಕಳಲ್ಲವೇ? ಒಬ್ಬಳು (ರಾಣಿ) ಹೆಂಡತಿ ಹೋದರೆ ಇನ್ನೊಬ್ಬಳನ್ನು ತರಬಹುದಲ್ಲದೆ ಕ್ಷಾಮ ಡಾಮರುಗಳಿಂದ ಸಾಯುತ್ತಿರುವ ಪ್ರಜೆಗಳನ್ನು ಬದುಕಿಸಬಲ್ಲೆವೆ? ನನ್ನ ಸೊಸೆಗೂ ಬಹಳ ಉದಾತ್ತವಾದ ವಿಚಾರಗಳಿವೆ. ಪ್ರಜಾಕ್ಷೇಮಕ್ಕಾಗಿ ಏನನ್ನಾದರೂ ನೀಡಬಲ್ಲಳು ಯಾವ ತ್ಯಾಗವನ್ನಾದರೂ ಮಾಡಬಲ್ಲಳು.

**ವಿ.ರಾಯ :** ನನಗೇನೋ ಚಿಂತೆಯಾಗಿದೆ. ಪರಿಸ್ಥಿತಿಯ ಬಗ್ಗೆ ಭೀತಗೊಂಡಿದ್ದೇನೆ. ನಮ್ಮ ಕಾರ್ಯವು ಬೇರೆ ರೀತಿಯ ಅನಾಹುತಗಳಿಗೆ ದಾರಿ ಮಾಡಬಾರದು.

**ಮಂತ್ರಿ :** ನೀವು ನಿಶ್ಚಿಂತೆಯಿಂದ ಇರಿ. ರಾಜಮಾತೆಯವರು ಎಲ್ಲವನ್ನು ಸಮರ್ಥವಾಗಿ ನಿರ್ವಹಿಸುತ್ತಾರೆ.

**ರಾಜಮಾತೆ:** (ಕಳಕಳಿಯನ್ನು ನಟಿಸುತ್ತ) ಪ್ರಭು ಇತ್ತೀಚೆಗೆ ನಿಮ್ಮ ಆರೋಗ್ಯವೇ ಹದಗೆಟ್ಟಿದೆ. ಬಹಳ ಬಳಲಿದ್ದೀರಿ. ನಿಮ್ಮ ಆರೋಗ್ಯ ನಿಮ್ಮ ಕ್ಷೇಮ ನಮಗೆ ಮುಖ್ಯ. ಹೆಚ್ಚು ಆಯಾಸವಾಗುವುದು ಬೇಡ. ನೀವು ಹೋಗಿ ವಿಶ್ರಾಂತಿ ಪಡೆಯಿರಿ. ಸಮರ್ಥರಾದ ಮಂತ್ರಿಗಳು, ಹಿತೈಷಿಗಳಾದ ಜ್ಯೋತಿಷಿಗಳು ಇರುವಾಗ ನೀವು ಕಳವಳಗೊಳ್ಳುವುದು ಬೇಡ. ನಾವಿದ್ದೇವೆ. ನಮ್ಮ ಮೇಲೆ ಭರವಸೆ ಇರಲಿ.... ನೀವು ಹೊರಡಿ ಪ್ರಭು. ಮೊದಲು ವಿಶ್ರಾಂತಿ ತೆಗೆದುಕೊಳ್ಳಿ.

**ವಿ.ರಾಯ :** ಆಯಿತು ಮಂತ್ರಿಗಳೆ. ನೀವೆಲ್ಲರೂ ನಮ್ಮ ಆತ್ಮೀಯರು. ದೇಶದ ಹಿತ ಚಿಂತಕರು ಎಂಬ ಭರವಸೆಯಿರುವುದಂತೂ ನೂರಕ್ಕೆ ನೂರು ಪಾಲು ಸತ್ಯ.... ಒಂದು ಮಾತು. ಎಂದಿಗೂ ಪ್ರಜೆಗಳನ್ನು ಎದುರು ಹಾಕಿಕೊಳ್ಳಬೇಡಿ. ಎಚ್ಚರಿಕೆಯಿಂದಲೇ ಕಾರ್ಯ ನಡೆಯಬೇಕು.... ನೆನಪಿರಲಿ. ಬರುತ್ತೇನೆ. (ಸ್ವಲ್ಪ ಆಯಾಸಗೊಂಡಂತೆ ಕಾಣಿಸುತ್ತ ಎದ್ದು ಒಮ್ಮೆ ಕೆಮ್ಮಿ ಬಾಗಿಲ ಕಡೆಗೆ ನಡೆಯುತ್ತಾನೆ)

**ರಾಜಮಾತೆ:** (ಪ್ರಭುಗಳು ಹೋದದ್ದನ್ನು ಖಚಿತಪಡಿಸಿಕೊಂಡು, ಮುಗುಳು ನಗುತ್ತ, ಜ್ಯೋತಿಷಿ ಮತ್ತು ಮಂತ್ರಿಯ ಕಡೆ ನೋಡುತ್ತಾಳೆ)... ಮಂತ್ರಿಗಳೇ ನಮ್ಮ ಲೆಕ್ಕಾಚಾರದಂತೆಯೇ ಎಲ್ಲವೂ ನಡೆಯುತ್ತಿದೆ. ನಮ್ಮ ಷಡ್ಯಂತ್ರಕ್ಕೆ ಸರಿಯಾಗಿ ಕ್ಷಾಮವೂ ಯುದ್ಧವೂ ಸಹಕರಿಸಿತು. ಪ್ರಭುಗಳಿಗೆ ಅನುಮಾನವೇ ಬರಲಿಲ್ಲ. ಕೊನೆಯ ದೃಶ್ಯದ ಪರಿಣಾಮ ನಮ್ಮ ಯೋಜನೆಯಂತೆಯೇ ಜರುಗಬೇಕು. ಯಾರಿಗೂ ಸುಳಿವು ಸಿಗಬಾರದು.

**ಜ್ಯೋತಿಷಿ :** ನಿಮ್ಮ ಸೊಸೆಯನ್ನು ಈ ಬಲಿದಾನಕ್ಕೆ ಹೇಗೆ ಒಪ್ಪಿಸುತ್ತೀರಿ. ಅವಳು ಬಹಳ ಜಾಣೆ. ನಮ್ಮ ಪಿತೂರಿಗಳ ವಾಸನೆ ಹತ್ತಿದೆ ಅವಳಿಗೆ.

**ರಾಜಮಾತೆ:** (ಭರವಸೆಯಿಂದ) ಅವಳೇನೂ ಮಾಡಲಾರಳು. ಅವಳಿಗೆ ಒಂದು ಎಳ್ಳು ಕಾಳಿನಷ್ಟೂ ಅನುಮಾನ ಬಾರದಂತೆ ನಾನು ಹೇಗೆ ನಾಟಕವಾಡುತ್ತೇನೆ ನೋಡುತ್ತೀರಿ.

**ಮಂತ್ರಿ :** ತಾಯಿ ಹೆಜ್ಜೆ ಹಾಕುವಾಗ ಎಚ್ಚರಿಕೆಯಿಂದಿರಿ. ಓಡುವ ಉತ್ಸಾಹದಲ್ಲಿ ಕಾಲಡಿಯ ಖೆಡ್ಡಾಗಳನ್ನು ಮರೆತು ಬಿಟ್ಟೀರಿ.

**ರಾಜಮಾತೆ:** ನಾಳಿನ ಸಿದ್ಧತೆಗಳನ್ನು ಮಾಡಿಕೊಳ್ಳಿ. ಜನಕ್ಕೆ ನಾವು ಮಾಡುತ್ತಿರುವ ಕೆಲಸ ತಿಳಿಯಬಾರದು. ಇಲ್ಲವಾದಲ್ಲಿ ಮೊನ್ನೆಯ ಕತೆಯೇ ಮರುಕಳಿಸುತ್ತದೆ.

**ಜ್ಯೋತಿಷಿ :** ಆಯಿತು ತಾಯಿ. ನಾವಿನ್ನು ಬರುತ್ತೇವೆ. ನಾಳೆ ಮುಂಜಾನೆಯೊಳಗಾಗಿ ಎಲ್ಲವೂ ಸಿದ್ಧವಾಗಬೇಕು. ನಿಮ್ಮ ಸೊಸೆಯನ್ನು ಶುದ್ಧ ಸ್ನಾತೆಯನ್ನಾಗಿ ಮಾಡಿ ಅರಿಶಿನದ ಚೀನಾಂಬರಗಳನ್ನು ಉಡಿಸಿ ಸಕಲಾಲಂಕಾರ ಭೂಷಿತಳನ್ನಾಗಿ ಮಾಡಿ ಕರೆತನ್ನಿ.

**ರಾಜಮಾತೆ:** ಆಗಬಹುದು. ನೀವು ಹೇಳಿದ ವೇಳೆಗೆ ನಾವು ಅಲ್ಲಿರುತ್ತೇವೆ...ಈಗ ನಾವು ನಮ್ಮ ಸೊಸೆಯನ್ನು ಕಂಡು ಬರುತ್ತೇವೆ. ಹೋಗಿ ಬನ್ನಿ... (ಎಂದು ನಮಸ್ಕರಿಸುತ್ತಾಳೆ)

(ಮಂತ್ರಿ, ಜ್ಯೋತಿಷಿಗಳು ನಿರ್ಗಮಿಸುತ್ತಾರೆ)

೦೦

# ದೃಶ್ಯ – ೧೩

(ರಾಜ ಮಾತೆ ದಾಸಿಯರೊಡಗೂಡಿ ಮಾದೇವಿಯ ಕೋಣೆಯನ್ನು ಪ್ರವೇಶಿಸುತ್ತಾರೆ. ಒಳಗೆ ಯಾರೂ ಕಾಣದಾಗಲೂ ಮಾದೇವಿ...ಮಾದೇವಿ.....ಎಂದು ಕರೆಯುತ್ತಾರೆ.)

**ಪದ್ಮ** : (ಪ್ರವೇಶಿಸಿ. ರಾಜಮಾತೆಯವರನ್ನು ನೋಡಿ ಆಶ್ಚರ್ಯಚಕಿತಳಾಗಿ) ಓ! ರಾಜಮಾತೆಯವರು!......ಬನ್ನಿ ಮಹಾರಾಣಿಯವರೇ.....ಬನ್ನಿ.....ಹೀಗೆ ದಯಮಾಡಿಸಿ. (ಎಂದು ಒಂದು ಪೀಠವನ್ನು ತೋರಿಸುತ್ತಾಳೆ. ರಾಜಮಾತೆ ಕುಳಿತುಕೊಳ್ಳುತ್ತಾ. ತನ್ನ ದಾಸಿಯರನ್ನು ಹೋಗಲು ಸನ್ನೆ ಮಾಡುತ್ತಾಳೆ. ದಾಸಿಯರು ನಿಷ್ಕ್ರಮಿಸುತ್ತಾರೆ)

**ರಾಜಮಾತೆ:** (ಪದ್ಮಳ ಕಡೆ ನೋಡಿ) ಪದ್ಮ ಎಲ್ಲಿ ನಿನ್ನ ಒಡತಿ?.....ಹೋಗಿ ಹೇಳು– ರಾಜಮಾತೆಯವರು ನಿನ್ನನ್ನು ಕಾಣ ಬಂದಿರುವರು ಎಂದು.

**ಪದ್ಮ** : ಆಗಲಿ ಮಹಾರಾಣಿಯವರೇ

(ಪದ್ಮ ಒಡತಿಯನ್ನು ಕರೆದು ತರಲು ಒಳಗೆ ಹೋಗುತ್ತಾಳೆ. ರಾಜಮಾತೆ ಕೋಣೆಯ ಸುತ್ತಲೂ ಒಮ್ಮೆ ಪತ್ತೆದಾರಿಯಂತೆ ಕಣ್ಣಾಡಿಸುತ್ತಾಳೆ) (ಅಷ್ಟರಲ್ಲಿ ಮಾದೇವಿ ಪದ್ಮಳೊಂದಿಗೆ ಪ್ರವೇಶಿಸಿ ರಾಜಮಾತೆಯವರನ್ನು ನೋಡಿ)

**ಮಾದೇವಿ :** ಅಮ್ಮ ನೀವೇಕೆ ಬರುವ ಕಷ್ಟ ತೆಗೆದುಕೊಂಡಿರಿ? ಹೇಳಿ ಕಳಿಸಿದ್ದರೆ ನಾನೇ ಬರುತ್ತಿದ್ದೆನಲ್ಲ....ಹೇಳಿ ಅಮ್ಮ ನನ್ನಿಂದ ಏನಾಗಬೇಕು?

**ರಾಜಮಾತೆ:** (ನೊಂದ ದನಿಯಲ್ಲಿ) ಮಾದೇವಿ ನಿನ್ನನ್ನು ಅರ್ಥ ಮಾಡಿಕೊಳ್ಳದೆ ಬಹಳ ತಪ್ಪು ಮಾಡಿದೆ ಮಗಳೆ. ಇಬ್ಬರೂ ದುಡುಕಿದೆವೇನೋ ಎನಿಸುತ್ತದೆ. ನಮ್ಮ ನಮ್ಮ ವೈರವನ್ನು ಮರೆತು ಇಂದಿನಿಂದ ತಾಯಿ ಮಕ್ಕಳಂತೆ ಇರೋಣ. ನೀನು ಹೋದ ಮೇಲೆ ನಾನು ಆಲೋಚಿಸಿದೆ. ನಾನೆಷ್ಟು ಮೂರ್ಖಳೆಂದೆನಿಸಿತು. ಪ್ರಜೆಗಳ ಬಗ್ಗೆ ನಿನಗಿರುವಷ್ಟು ಪ್ರೀತಿಯೂ ನನಗಿಲ್ಲವಲ್ಲ! ಎನಿಸಿತು. ಹಿಂಸೆಯ ಪರಿಣಾಮದ ಪಾಪಗಳ ಅರಿವು

ನನಗಾಯಿತು..... ನನ್ನನ್ನು ಕ್ಷಮಿಸು ಮಗಳೆ. ನನಗಿಂತ ನೀನು ಚಿಕ್ಕವಳಾದರೂ ನೀನು ಮಹಾನ್ ವ್ಯಕ್ತಿ....ತಗೋ ಇವೆಲ್ಲವೂ ನನ್ನ ಆಭರಣಗಳು. ನಾನು ಅತಿಯಾಗಿ ಪ್ರೀತಿಸಿದವರಿಗೆ ಮಾತ್ರವೇ ಇವನ್ನು ಕೊಡುತ್ತೇನೆ. ನಾಳೆ ಮುಂಜಾನೆಯೇ ನಾವು ನಮ್ಮ ಕುಲದೇವತೆ ಭೈರವೇಶ್ವರಿಯ ಗುಡಿಗೆ ಹೋಗಿ ಹಣ್ಣುಕಾಯಿ ಮಾಡಿಸಿಕೊಂಡು ಬರೋಣ. ತಾಯಿ ಒಲಿದರೆ ನಮ್ಮ ಕಷ್ಟಗಳು ಪರಿಹಾರವಾದವು. ಮದುವೆಯಾದಂದಿನಿಂದ ಒಮ್ಮೆಯಾದರೂ ಪ್ರೀತಿಯಿಂದ ಒಟ್ಟಿಗೆ ಕುಳಿತು ಊಟ ಮಾಡಲಿಲ್ಲ. ಅಮ್ಮನ ಗುಡಿಗೆ ಹೋಗಿ ಬರಲಿಲ್ಲ. ಮೊದಲ ಸಲದ ಆತ್ಮೀಯತೆಯ ಗುರುತಾಗಿ ಹೋಗಿಬರೋಣ. ಇಂದಿನಿಂದ ನೀನು ನನ್ನ ಅಂತಃಪುರದಲ್ಲಿಯೇ ಇರಬೇಕು. ಪ್ರೀತಿಯಿಂದ ನಾನೇ ನಿನಗೆ ಯುವರಾಜರಿಗೂ ಊಟ ಮಾಡಿಸುತ್ತೇನೆ.... ಬೆಳಗಾಗಿ ನಾನೇ ನಿನ್ನನ್ನು ಅಲಂಕರಿಸುತ್ತೇನೆ. ತಿಳಿಯಿತೇ ಮಗಳೆ.

**ಮಾದೇವಿ :** ನಿಮ್ಮ ಪ್ರೀತಿಗೆ ನನ್ನ ಹೃದಯ ತುಂಬಿ ಬಂದಿದೆ. ಖಂಡಿತವಾಗಿಯೂ ಬರುತ್ತೇನೆ..... ಪದ್ಮಾ... ರಾಜಮಾತೆಯವರಿಗೆ ಹಣ್ಣು ಹಾಲು ತಂದುಕೊಡು.

**ರಾಜಮಾತೆ:** ಬೇಡ ಮಗಳೆ. ಮೊದಲು ನೀನು ನನ್ನ ಆತಿಥ್ಯವನ್ನು ಸ್ವೀಕರಿಸಬೇಕು. ನಂತರವೇ ನಾನು ಇಲ್ಲಿ ಆಹಾರ ತೆಗೆದುಕೊಳ್ಳುತ್ತೇನೆ. ಬೇರೆಯಾಗಿ ಭಾವಿಸಬೇಡ. ನಾನಿನ್ನು ಬರುತ್ತೇನೆ.... (ಏನೋ ನೆನಪಿಸಿಕೊಂಡಂತೆ) ಆಂ! ಅಮ್ಮನ ಗುಡಿಗೆ ಹೋಗಿ ಹಣ್ಣು ಕಾಯಿ ಮಾಡಿಸಿಕೊಂಡು ಬರುವ ಆಚಾರಕ್ಕೆ ನಿನ್ನ ಅಭ್ಯಂತರವಿಲ್ಲ ತಾನೇ? (ನಗುವಳು)

**ಮಾದೇವಿ :** ನೀವು ನನ್ನನ್ನು ತಪ್ಪಾಗಿ ತಿಳಿದಿದ್ದೀರಿ. ನಾನೆಂದಾದರೂ ಪೂಜೆ ಮಾಡಬಾರದೆಂದು, ಗುಡಿಗೆ ಹೋಗಬಾರದೆಂದು ಹೇಳಿದೆನೆ? ಹಿಂಸೆಯನ್ನು ಪೂಜೆಯ ಭಾಗವಾಗಿಸುವುದನ್ನು ಮಾತ್ರವೇ ವಿರೋಧಿಸುತ್ತೇನೆ.

**ರಾಜಮಾತೆ:** ಏನೋ ಮಗಳೆ. ನಾನು ಅಲ್ಪಮತಿ. ನಿನ್ನ ದೊಡ್ಡ ದೊಡ್ಡ ಸಿದ್ಧಾಂತಗಳು ನನಗೆ ಅರ್ಥವಾಗುವುದಿಲ್ಲ. ಅದಕ್ಕೆ ಅಂದು ಹಾಗೆಲ್ಲ ಮಾತನಾಡಿದೆ. ತಪ್ಪು ತಿಳಿಯಬೇಡ ಮಗಳೆ. ನನ್ನ ವಂಶೋದ್ಧಾರಕನನ್ನು ಹೊತ್ತಿದ್ದೀ ಎಂದ ಮೇಲೆ ನಾನು ಕರಗಿ ಹೋದೆ. ಆ ಕೂಡಲೇ ನಿನ್ನನ್ನು ಅಪ್ಪಿ ಮುದ್ದಾಡಬೇಕೆನಿಸಿತ್ತು. ಆದರೆ ನಮ್ಮಿಬ್ಬರ ನಡುವಿನ ಬೆಂಕಿ ಇನ್ನೂ ಹೊಗೆಯಾಡುತ್ತಲೇ ಇದ್ದುದರಿಂದ ನಿನ್ನನ್ನು ಮಾತಾಡಿಸಲು ಹೆದರಿದೆ.

**ಮಾದೇವಿ :** ಹೋಗಲಿ ಬಿಡಿ ಅಮ್ಮ. ಆದದ್ದನ್ನು ಊಹಿಸಿಕೊಂಡು ಮತ್ತೆ ಮನಸ್ಸು ಕಹಿ ಆಗುವುದು ಬೇಡ. ಸ್ವಲ್ಪ ಹಣ್ಣು ತಿಂದು ಹೋಗಬಹುದಿತ್ತು.

**ರಾಜಮಾತೆ:** (ಹುಸಿ ಮುನಿಸಿನಿಂದ) ಹೇಳಿದರೂ ಕೇಳುವುದಿಲ್ಲ ಹುಚ್ಚು ಹುಡುಗಿ.... (ನಗುತ್ತ) ಕೊಡು..... ನಿನ್ನ ಕೈಯಾರೆ ಕೊಟ್ಟ ಹಣ್ಣು ತಿನ್ನುತ್ತೇನೆ. ನಿನಗೆ ಸಂತೋಷ ಆಗುವುದಾದರೆ!

(ಮಾದೇವಿ ಪಕ್ಕದ ಮೇಜಿನ ಮೇಲಿದ್ದ ಹಣ್ಣಿನ ತಟ್ಟೆಯಿಂದ ಹಣ್ಣೊಂದನ್ನು ತೆಗೆದು ಹೆಚ್ಚಿ ಕೊಡುತ್ತಾಳೆ. ರಾಜಮಾತೆ ಪ್ರೀತಿಯಿಂದ ಒಂದೆರಡು ಹೋಳನ್ನು ತಿನ್ನುತ್ತಾರೆ).... ಸಂತೋಷವಾಯಿತೇ?...... ಹಾಗಾದರೆ ನಾನಿನ್ನು ಬರಲೇ?

**ಮಾದೇವಿ :** ಪದ್ಮ...... ಅತ್ತೆಯವರನ್ನು ಅವರ ವಾಸಕ್ಕೆ ಬಿಟ್ಟು ಬಾ.

**ರಾಜಮಾತೆ:** ಬೇಡ ಮಾದೇವಿ. ನಾನೇ ಹೋಗುತ್ತೇನೆ.

(ರಾಜಮಾತೆಯನ್ನು ಪದ್ಮ ಬಾಗಿಲವರೆಗೂ ಕಳಿಸಿಕೊಟ್ಟು ಹಿಂತಿರುಗುತ್ತಾಳೆ)

**ಪದ್ಮ :** (ನಿಟ್ಟುಸಿರಿಟ್ಟು) ಒಡತಿ ನನಗೆ ನಂಬುವುದಕ್ಕೆ ಆಗುತ್ತಿಲ್ಲ. ಭುಗಿಲೆದ್ದ ಬೆಂಕಿ ಒಮ್ಮೆಲೇ ತಣ್ಣಗಾದರೆ ಒಳಗಿನ ಕಿಡಿಗಳ ಬಗ್ಗೆ ಜಾಗರೂಕತೆಯಿಂದ ಇರಬೇಕು.

**ಮಾದೇವಿ :** ನಿನಗೆ ಯಾವಾಗಲೂ ಸಂಶಯವೇ ಪದ್ಮ. ಬಿರುಗಾಳಿಯಾಗಿ ಬೀಸಿದ್ದು ಗಂಧಗಾಳಿಯಾಗಿ ಹಿತ ಕೊಟ್ಟಾಗಲೂ ನಿನ್ನ ಸಂದೇಹಗಳು ಸಂಶಯಗಳು ನಿಲ್ಲುವುದಿಲ್ಲ.... ಇನ್ನು ಇಲ್ಲಸಲ್ಲದ್ದರ ಬಗ್ಗೆ ತಲೆ ಕೆಡಿಸಿಕೊಳ್ಳದೆ ಸುಮ್ಮನೆ ಹೋಗು. ಒಂದು ದಿನವಾದರೂ ಅತ್ತೆಯವರ ಜೊತೆ ಒಟ್ಟಾಗಿ ಕಳೆಯೋಣ.

–ಪರದೆ–

೦೦

# ದೃಶ್ಯ – ೧೪

(ಭಾಗವತನ ಪ್ರವೇಶ: ಪ್ರವೇಶವಾಗುತ್ತಿದ್ದಂತೆ ಗುಡುಗು, ಸಿಡಿಲು, ಮಿಂಚು, ಸುಮಾರು ಹೊತ್ತು ರಂಗವನ್ನು ತುಂಬಿರುತ್ತದೆ. ಭಾಗವತ ಬೆಚ್ಚಿ ಬೀಳುತ್ತಾನೆ. ರಂಗದ ಹಿನ್ನೆಲೆಯಿಂದ ಜನರ ಗದ್ದಲ ಕೇಳಿಸುತ್ತದೆ. 'ಘಾತವಾಯಿತು, ಮೋಸವಾಯಿತು. ಶಿವನೆ! ಚಿಕ್ಕರಾಣಿ ಮಾದೇವಿನ ಕೊಂದೇ ಬಿಟ್ರಲ್ಲಪ್ಪೋ! ಕೊಂದೇ ಬಿಟ್ರಲ್ಲ' ಅಂತ ಕೇಳಿಸುತ್ತದೆ. ಜನ ಅತ್ತಿಂದಿತ್ತ ಇತ್ತಿಂದತ್ತ ಓಡುತ್ತಿರುತ್ತಾರೆ. ಓಡುತ್ತಿರುವ ಒಂದಿಬ್ಬರನ್ನು ಭಾಗವತ ನಿಲ್ಲಿಸಿ ಕೇಳುತ್ತಾನೆ)

**ಭಾಗವತ** : ಅಣ್ಣಾ ಯಾಕೆ ಹೀಗೆ ಗಾಭರಿಯಿಂದ ಓಡುತ್ತಿದ್ದೀರಿ ಏನಾಯಿತು?

**ಒಬ್ಬ** : ಏನು ಅದ್ಭುತ! ಏನದ್ಭುತ!.....ನೋಡಿದರೆ ಒಂದು ಕಡೆ ಆಶ್ಚರ್ಯ ಇನ್ನೊಂದು ಕಡೆ ಭಯವಾಗ್ತಿದೆ. ಮಾದೇವಿಯವರನ್ನು ಕೊಂದೇ ಬಿಟ್ರಂತಪ್ಪೋ!

**ಇನ್ನೊಬ್ಬ** : ಕೊಂದ್ರೆ ಏನಾತು ತಮ್ಮ! ಕತ್ತಿ ಎತ್ತಿ ಹೊಡೆದದ್ದೇ ಮಾದೇವಿ ಮಾಯವಾದಳಂತೆ. ರಕ್ತ ಮಾತ್ರ ಬುಗ್ಗೆಯಂತೆ ಚಿಲ್ ಅಂತ ಚಿಮ್ಮಿ ಆಕಾಶವೆಲ್ಲ ಕೆಂಪಾಯ್ತಂತೆ! ಕೆಂಪು ಆಕಾಶದಿಂದ ದೊಡ್ಡ ಸಿಡಿಲೊಂದು ರಾಜ ಪರಿವಾರದ ಮೇಲೆ ಬಿದ್ದು ರಾಜ ರಾಣಿ ಮಂತ್ರಿ ಪುರೋಹಿತರ ಹೆಣಗಳು ಬಿದ್ದವಂತೆ!

**ಮತ್ತೊಬ್ಬ** : ಭಯಾನಕವಾದ ದೃಶ್ಯ. ಹೋಮ ಕುಂಡದ ಬೆಂಕಿಗೆ ಮೇಲಿಂದ ಕೆಂಪು ಮಳೆ ಸುರಿಯಿತಂತೆ!

**ಒಬ್ಬ** : ದೇವರೇ! ದೇವರೇ! ಇದೆಲ್ಲ ಏನು ಆಗಲು ಹೊರಟಿದೆ. ಜನವೆಲ್ಲ ಆ ಅಮ್ಮನಗುಡಿ ಹತ್ತಿರಕ್ಕೆ ಹೋಗ್ತಾ ಇದ್ದಾರೆ. ಮಾದೇವಿ ಮಾಯವಾಗಿ ಎಲ್ಲಿ ಹೋದಳು! ಯಾರೋ ಅಂದ್ರು ಯಾವುದೋ ದೇವತೆ ಬಂದು ಎತ್ತಿಕೊಂಡು ಹೋದಳಂತೆ.

**ಭಾಗವತ** : ಬನ್ನಿ ಅಣ್ಣಂದಿರೆ ನಾವೂ ಹೋಗಿ ನೋಡೋಣ. ಅಲ್ಲಿ ಏನಾಗಿದೇಂತ ಕಣ್ಣಾರೆ ಕಂಡು ಬರೋಣ. (ಎಂದು ಹೇಳುತ್ತಿರುವಷ್ಟರಲ್ಲಿ ಮತ್ತೊಮ್ಮೆ ಗುಡುಗು ಮಿಂಚು ಕಾಣಿಸಿಕೊಂಡು ಭೋ ಎಂದು ಮಳೆ ಸುರಿಯಲು ಆರಂಭವಾಗುತ್ತದೆ) ನೋಡಿದಿರಾ ಅಣ್ಣ! ಕ್ಷಾಮದ ದೇಶಕ್ಕೆ ಕೆಂಡವಾಗಿ ಬಾಯಿಬಿಟ್ಟ ನೆಲಕ್ಕೆ ನಮ್ಮ ಮಾದೇವಿ ತಂಪು ತಂದಿದ್ದಾಳೆ. ಮಳೆಯಾಗಿ ಬಂದವಳು ಹೊಳೆಯಾಗಿ ಹರೀತಾಳೆ.

(ನಾಲ್ಕು ದಿಕ್ಕುಗಳಿಂದ ಪ್ರಜೆಗಳು ಕುಣಿಯುತ್ತ ಹೆಜ್ಜೆ ಹಾಕುತ್ತ, ಹಾಡುತ್ತ ಪ್ರವೇಶಿಸುತ್ತಾರೆ)

**ಮಾತಾಯಿ ಬಂದಳು ಮಳೆಯನು ತಂದಳು.**
**ಮಾದೇವಿ ಮಹಿಮಾನ ಏನಂತ ಹೊಗಳಾಲಿ**
**ಮಳೆಯಾಗಿ ಹೊಳೆಯಾಗಿ**
**ಮಂದಿ ಮಕ್ಕಳ ಪೊರೆವ ತಾಯಾಗಿ ನಿಂದಳು**
**ಹಸಿವೀನ ಅಳಲಿಗೆ ಬಾಡೀದ ಒಡಲೀಗೆ**
**ಬತ್ತೀದ ಕಣ್ಣಿಗೆ ಬಿರಿದೊಡೆದಾ ಭೂಮಿಗೆ**
**ಮುದವಾಗಿ ಮಧುವಾಗಿ ತಂಪಾಗಿ ಸೊಂಪಾಗಿ**
**ಹಸಿರಾಗಿ ಉಸಿರಾಗಿ ಸ್ವರ್ಗದಲ್ಲಿ ಕನಸಾಗಿ**
**ಸುರಿದು ತಂದಾಳು ಜಗವನ್ನೇ ತಣಿಸಾಳು**
**ಮಾತಾಯಿ ಮಾದೇವಿ ಮಳೆಯಾಗಿ ಬಂದ ವಳೆ**
**ತಾಯಾಗಿ ನಿಂದವಳೆ ಹರಸೆಮ್ಮ ಬಾಳನ್ನು**
**ಒಲಿದೊಲಿದು ಕರುಣೇಸಿ ಮರೆಸೆಮ್ಮಗೋಳನ್ನು!!**

(ಕುಣಿತ ಹೆಚ್ಚುತ್ತಾ ಹೆಚ್ಚುತ್ತಾ ಕರಗುತ್ತಾ ಕರಗುತ್ತಾ ಹೋದಂತೆ ಬೆಳಕು ಕಡಿಮೆಯಾಗುತ್ತದೆ. ನೆರಳಾಗಿ ಪರದೆಯ ಮೇಲೆ ದೇವಿಯೊಬ್ಬಳ ಚಿತ್ರ ಮೂಡುತ್ತದೆ.)

OO

# ಪಾತ್ರವರ್ಗ

ಮಾಲತಿ

ನಾಯಕಿ (ನಾಗಮಣಿ)

ಶಿವಮಲ್ಲು

ಬ್ರಹ್ಮಣ್ಣ

ನಲಗಾಮ

ವೀರವಿದ್ಯಾದೇವಿ

ಪೇರಮ್ಮ

ನರಸಿಂಹ

ಕನ್ನಮ್ಮ

ಭಟ್ಟಾಚಾರ್ಯ

ಬಲಣ್ಣ

ಲಂಕಣ್ಣ

ಬಾಲಚಂದ್ರ

ಕೊಮ್ಮರಾಜು

ಗೋಪಣ್ಣ

ಭಟರು, ಪ್ರಜೆಗಳು, ಕಂಚುಕಿ, ಸೇವಕರು

–ಮೊದಲಾದವರು.

## ಅಂಕ – ೧

# ದೃಶ್ಯ – ೧

(ಅರಮನೆಯಲ್ಲಿ ನಾಯಕಿ ನಾಗಮಣಿಯ ಖಾಸಗಿ ಕೋಣೆ. ನಾಯಕಿಯ ಮುಖದಲ್ಲಿ ಉದ್ವಿಗ್ನತೆ ಇದೆ. ಅಸಹಾಯಕತೆಯಿಂದ ಕೈಕಟ್ಟಿಕೊಂಡು ಶತಪಥ ಹಾಕುತ್ತಿದ್ದಾಳೆ. ಮಲಗುವ ಹಾಸಿಗೆಯ ಪಕ್ಕದಲ್ಲಿ ಆನೆದಂತಗಳ ನಡುವಿನಿಂದ ತೂಗುಹಾಕಿದ ಕಂಚಿನ ಜಾಗಟೆಯ ಮೇಲೆ ಒಮ್ಮೆಲೇ ಸುತ್ತಿಗೆಯಿಂದ ಜೋರಾಗಿ ಹೊಡೆಯುತ್ತಿದ್ದಾಳೆ. ಆ ಸದ್ದಿಗೆ ಅವಳ ಅಂತರಂಗದಾಸಿ ಮಾಲತಿ ಓಡಿ ಬರುತ್ತಾಳೆ).

**ಮಾಲತಿ** : ಅಮ್ಮ ಒಡತಿ ಕರೆದಿರೇನು?

**ನಾಯಕಿ** : ಹೂಂ!........ಮಾಲತಿ ಅಂತಃಪುರದಲ್ಲಿ ಏನು ನಡೆಯುತ್ತಿದೆ?

**ಮಾಲತಿ** : ಒಡತಿ ನಾನೆಷ್ಟೇ ಪ್ರಯತ್ನಿಸಿದರೂ ಗುಟ್ಟು ಹೊರಬರುತ್ತಿಲ್ಲ. ಆದರೆ ಒಡತಿ (ಅನುಮಾನಿಸುತ್ತ) ಈ ಕೆಲವು ದಿನಗಳಿಂದ ಏನೋ ಪಿತೂರಿ ನಡೆಯುತ್ತಿರುವ ಹಾಗೆ ಕಾಣುತ್ತಿದೆ. ಬ್ರಹ್ಮಣ್ಣವರು ವೀರ ವಿದ್ಯಾದೇವಿಯರ ಅರಮನೆಗೆ ಪದೆ ಪದೇ ಹೋಗಿ ಬರುತ್ತಿರುವ ವಿಷಯ ನನ್ನ ಗೆಳತಿಯಿಂದ ತಿಳಿಯಿತು.

**ನಾಯಕಿ** : (ಬುಸುಗುಡುತ್ತ) ಬ್ರಹ್ಮಣ.. ಬ್ರಹ್ಮಣ್ಣ..........ಕಿವಿ ಆಲಿಸಿದರೆ ಈ ದರಿದ್ರ ಹೆಸರೇ ಕೇಳಿ ಬರುತ್ತಿದೆ. ಇದೊಂದು ಪೆಡಂಭೂತ. ಈ ಪಲನಾಡ ಸೀಮೆಯಿಂದ ಈ ಭೂತದ ಉಚ್ಚಾಟನೆ ಆಗದಿದ್ದಲ್ಲಿ ನೆಮ್ಮದಿಯೇ ಇರುವುದಿಲ್ಲ.

**ಮಾಲತಿ** : (ವಿನಯದಿಂದ) ಅಮ್ಮ ನೀವು ದೊಡ್ಡವರು. ನಾನು ಅಲ್ಪಳು. ನಾನೇನಾದರೂ ಒಂದು ಮಾತು ಹೇಳಿದರೆ ನಿಮಗೆ ಕೋಪ ಬರಬಹುದು........ ಆದರೆ ವಸ್ತು ಸ್ಥಿತಿಯ ಸತ್ಯವನ್ನು ಯಾರೂ ಅಲ್ಲಗಳೆಯುವುದು ಸಾಧ್ಯವಿಲ್ಲ.

**ನಾಯಕಿ** : (ಕೋಪದಿಂದ) ನಾಜೂಕಿನ ಮಾತುಗಳನ್ನು ನಿಲ್ಲಿಸಿ ಹೇಳಬೇಕಾದ್ದನ್ನು ನೇರವಾಗಿ, ಸ್ಪಷ್ಟವಾಗಿ ಹೇಳು. ಈ ಕೊಂಕಣಸುತ್ತುವ ಕೆಲಸಬೇಕಿಲ್ಲ.

**ಮಾಲತಿ** : ನಿಮ್ಮನ್ನೊಂದು ಮಾತು ಕೇಳಲೇ ಅಮ್ಮ?

**ನಾಯಕಿ** : ಕೇಳು.

**ಮಾಲತಿ** : ನಿಮಗೆ ಬ್ರಹ್ಮಣ್ಣನನ್ನು ಕಂಡರೆ ಏಕಷ್ಟು ಕೋಪ?

**ನಾಯಕಿ** : (ಸಂದೇಹಿಸುತ್ತ) ಮಾಲತಿ, ನೀನು ನಿಜವಾಗಿಯೂ ತಿಳಿಯಬೇಕೆಂಬ ಕುತೂಹಲದಿಂದ ಕೇಳುತ್ತಿರುವೆಯಾ? ಇಲ್ಲ ಬ್ರಹ್ಮಣ್ಣನ ಗೂಢಚಾರಿಯಾಗಿ ಕೆಲಸ ಮಾಡುತ್ತಿರುವಿಯಾ?

**ಮಾಲತಿ** : (ನೊಂದುಕೊಳ್ಳುತ್ತ) ಇಷ್ಟು ಕಾಲ ನಿಮ್ಮ ಪರಿಚಾರಿಕೆಯಲ್ಲಿದ್ದವಳನ್ನೂ ಇನ್ನೂ ಅರ್ಥ ಮಾಡಿಕೊಂಡಿಲ್ಲವೇ? ಎಂದಾದರೂ ನಾನು ನಿಮ್ಮ ನಂಬಿಕೆಗೆ ದ್ರೋಹ ಬಗೆದಿರುವ ಪ್ರಸಂಗವಿದೆಯೇ?........ ನಿಮ್ಮ ಕ್ಷಣ ಕ್ಷಣದ ನೋವು, ವಿಕ್ಷುಬ್ಧತೆ, ಒಮ್ಮೊಮ್ಮೆ ಕಾಣುವ ಭೀತಿ ಅಸಹಾಯಕತೆಗಳನ್ನು ಕಂಡು ಎಷ್ಟು ಸಂಕಟಪಟ್ಟಿದ್ದೇನೆ. ರೂಪ, ಯೌವ್ವನ, ಸಂಪತ್ತು, ಅಧಿಕಾರ, ಎಲ್ಲ ಇದ್ದು ಹಗಲಿರುಳೂ ನೀವು ಪಡುವ ಪಾಡುನೋಡಿ ನನ್ನ ಕರುಳು ಕಿತ್ತು ಬಂದಂತಾಗುತ್ತದೆ. ಯಾವ ರಾಜಕಾರಣದ ಮರೀಚಿಕೆಯ ಬೆನ್ನು ಬಿದ್ದು ಹೀಗೆ ಓಡುತ್ತಿದ್ದೀರಿ?......... ಚಡಪಡಿಸುತ್ತಿದ್ದೀರಿ? ......... ಬ್ರಹ್ಮಣ್ಣನ ಹೆಸರು ಎತ್ತಿದರೆ ಜ್ವಾಲಾಮುಖಿಯಾಗುತ್ತೀರಿ?

**ನಾಯಕಿ** : ಮಾಲತಿ, ನನ್ನ ಬಗೆಗಿನ ಕಳಕಳಿಯಿಂದ ನೀನು ಹೀಗೆ ಮಾತನಾಡುತ್ತಿರುವಿ. ನಿನ್ನ ಮಾತುಗಳನ್ನು ಕೇಳಿ ನನಗೆ ಹೃದಯ ತುಂಬಿ ಬಂದಂತಾಗಿದೆ. ಆದರೆ ರಾಜಕಾರಣ ನಿನ್ನಂತಹವರಿಗೆ ಅರ್ಥವಾಗುವುದಿಲ್ಲ. ಪ್ರೀತಿಗೆ ದ್ವೇಷಕ್ಕೆ ಸೇಡಿಗೆ ಖಚಿತವಾದ ಕಾರಣಗಳು ಇದ್ದೇ ಇರಬೇಕೆಂಬ ನಿಯಮವಿಲ್ಲ. ಆದರೂ ಒಂದು ಮಾತು ನಿಜ! ಸ್ವಾರ್ಥ ಸ್ವಪ್ರತಿಷ್ಠೆಗಳೇ ಪ್ರಧಾನ ತತ್ವಗಳು. ಮಿಕ್ಕೆಲ್ಲವು ಅವುಗಳ ಅಡಿಯಾಳುಗಳು. ಇಂತಹ ಕಡೆಯಲ್ಲಿ ಪ್ರೀತಿ, ಪ್ರೇಮ, ತ್ಯಾಗ, ನ್ಯಾಯ ಮೊದಲಾದವು ಮೌಲ್ಯಗಳೇ ಅಲ್ಲ. ನಮಗ್ಯಾರಿಗೂ ಅವು ಮುಖ್ಯವಲ್ಲ......ರಾಜಕೀಯ ರಂಗಮಂದಿರದಲ್ಲಿ ನಾವೆಲ್ಲರೂ ಮುಖವಾಡದ ಪಾತ್ರಗಳು. ನಿಮಗೆ ನಾವು ಕಾಣುವುದಿಲ್ಲ. ಮುಖವಾಡದ ಮರೆಯಲ್ಲಿನ ನಮ್ಮ ಅಸಲಿತನ ನಿಮಗೆ ಏನು.....ಆ ಬ್ರಹ್ಮದೇವನಿಗೇ ಪತ್ತೆ ಹಚ್ಚಲು ಆಗುವುದಿಲ್ಲ.....ಅದಕ್ಕೆ ಹೇಳುತ್ತಿದ್ದೇನೆ. ನಿನಗೆ ಈ ದೊಡ್ಡ ದೊಡ್ಡ ವಿಷಯಗಳು, ಸಮಸ್ಯೆಗಳು ಬೇಡ. ನಾ ಹೇಳಿದಷ್ಟು ಮಾಡಿಕೊಂಡು ಹಾಯಾಗಿರುವುದನ್ನು ಕಲಿ.

**ಮಾಲತಿ** : ಅಮ್ಮ ನೀವು ದೊಡ್ಡವರು. ದೊಡ್ಡ ದೊಡ್ಡ ಮಾತುಗಳು ನಮಗೆ ಅರ್ಥವಾಗುವುದಿಲ್ಲ ನಿಜ. ನಮಗೆ ಗೊತ್ತಿರುವುದು ಮನುಷ್ಯ ಸಂಬಂಧಗಳು ಅಷ್ಟೇ!..... ಆಳುವವರಿಗೆ ಆಳುವ, ನೋಯುವವರಿಗೆ

ಮರುಕ ತೋರುವ. ಪ್ರೀತಿಸುವವರನ್ನು ಎದೆಗಪ್ಪಿಕೊಳ್ಳುವ ಕೆಲಸವಷ್ಟೆ ನಮಗೆ ಅರ್ಥವಾಗುವಂತಹುದು. ಅದಕ್ಕೆ ಮೀರಿದ ಪ್ರಯೋಜನಗಳು ಇಂತಹ ಮೊದ್ದು ತಲೆಗಳಿಗೆ ಹೇಗೆ ಹೊಳೆದೀತು?..... ಬ್ರಹ್ಮಣ್ಣನೆಂದರೆ ಪಲನಾಡಿಗೆ ನಾಡೇ ಗೌರವಿಸುತ್ತದೆ. ಸಾಕ್ಷಾತ್ ದೇವರೆಂದು, ವಿಷ್ಣುವಿನ ಅವತಾರವೆಂದು, ದೀನ ದಲಿತೋದ್ಧಾರಕನೆಂದು ಕೊಂಡಾಡುತ್ತವೆ. ಈ ರಾಜವಂಶದ ವೃಕ್ಷಕ್ಕೆ ನೀರೆರೆದು ಬೆಳೆಸಿ ಮಡಲಿರಿವಂತೆ ಮಾಡಿದ ಮಹಾನುಭಾವನೆಂದು ಲೋಕದ ಕಣ್ಣಲ್ಲಿ ಉದಾತ್ತ ಚೇತನನಾಗಿದ್ದಾನೆ. ಅಂತಹವರನ್ನು ದ್ವೇಷಿಸುವ ನಿಮ್ಮನ್ನು ನೋಡಿ ಒಮ್ಮೆಲೇ ಮನಸ್ಸಿಗೆ ನೋವೂ ಮರುಕವೂ ಉಂಟಾಗುತ್ತದೆ.

**ನಾಯಕಿ** : ಮಾಲತಿ ನೀನು ಇತ್ತೀಚೆಗೆ ಭಾರಿ ಭಾರಿ ಮಾತಾಡುವುದನ್ನು ಕಲಿತ ಪಂಡಿತಳಾಗಿ ಬಿಟ್ಟಿದ್ದೀ. ನನ್ನನ್ನು ದೊಡ್ಡವಳೆಂದು ಕೊಂಡಾಡುತ್ತಲೇ ಕತ್ತಿಯಲಗಿನಂತೆ ನನ್ನದೆಯ ಅರಿಯದ ಮೂಲೆಗಳನ್ನು ತಿವಿಯುತ್ತೀ, ನಿನಗೆ ಮಾತಾಡಲು ಅವಕಾಶ ಕೊಟ್ಟಿದ್ದೇ ತಪ್ಪು. ಈಗ ತೆಪ್ಪಗೆ ಹೋಗಿ ಮಿಕ್ಕ ಕೆಲಸ ಕಾರ್ಯಗಳನ್ನು ನೋಡಿಕೋ. ಆಂ...... ಹಾಗೆಯೇ ಆ ಜಂಗಮ ಶಿವಮಲ್ಲನನ್ನು ಒಳಗೆ ಕಳಿಸು..... ತಿಳಿಯಿತೇ?..... ಹೋಗು..... ಇಲ್ಲದ್ದನ್ನೆಲ್ಲ ಆಲೋಚಿಸಿ ಆರೋಗ್ಯ ಕೆಡಿಸಿಕೊಳ್ಳಬೇಡ.

**ಮಾಲತಿ** : (ಅವಮಾನಿತಳಾದಂತೆ) ನನ್ನ ಉದ್ಧಟತನಕ್ಕಾಗಿ ಕ್ಷಮಿಸಿ ಒಡತಿ. ಇನ್ನೊಮ್ಮೆ ನಾನು ತಲೆ ಹಾಕುವುದಿಲ್ಲ.

**ನಾಯಕಿ** : ಸರಿ...... ಸರಿ ಬೇಗ ನಡೆ...... ನನಗೆ ಬೇಕಾದಷ್ಟು ರಾಜಕಾರ್ಯಗಳಿವೆ. ನಿನ್ನೊಡನೆ ಹರಟುವುದಕ್ಕೆ ಸಮಯವಿಲ್ಲ.

**ಮಾಲತಿ** : ಇದೋ ಈಗಲೇ ಹೊರಟೆ..... (ಎಂದು ಭಾರವಾದ ಹೆಜ್ಜೆ ಹಾಕುತ್ತ ಹೋಗುವಳು)

(ನಾಗಮ್ಮ ಮತ್ತೆ ಶತಪಥಗುಟ್ಟುತ್ತಾ ಕಾತರದಿಂದ ಬಾಗಿಲಿನೆಡೆಗೆ ನೋಡುತ್ತಾಳೆ)

(ಜಂಗಮ ವೇಷದಲ್ಲಿನ ಶಿವಮಲ್ಲು ಪ್ರವೇಶಿಸುತ್ತಾನೆ)

**ಶಿವಮಲ್ಲು** : ತಾಯಿ.......ನಿಮಗೆ ನನ್ನ ಆದರ ಪೂರ್ವಕ ನಮನಗಳು.......... ನಿಮ್ಮ ಆದೇಶದಂತೆ, ನಮ್ಮ ಯೋಜನೆಯಂತೆ ಎಲ್ಲವೂ ಸಕ್ರಮವಾಗಿ ನಡೆಯುತ್ತದೆ.

**ನಾಯಕಿ** : ನಡೆಯುವುದು ಒತ್ತಟ್ಟಿಗೆ ಇರಲಿ. ಮುಂದೆ ನಡೆಯಬೇಕಾದ್ದನ್ನು ತುರ್ತಾಗಿ ಆಲೋಚಿಸಬೇಕು. ಹೂಂ! ಹೇಳು ಬ್ರಹ್ಮಣ್ಣನ ಸುದ್ದಿ ಏನಾಯಿತು? ಸರಿಯಾಗಿ ಮಂಗಳಾರತಿ ಮಾಡಿಸಿಕೊಂಡವನು ಸುಮ್ಮನೆ ಕುಳಿತುಕೊಳ್ಳಲಾರ. ಏಟಿಗೆ ಪ್ರತಿ ಏಟನ್ನು ಆಲೋಚಿಸಿಯೇ ಇರುತ್ತಾನೆ......

ಇಷ್ಟೂ ವರುಷಗಳು ಅವನಿಗೆ ಪ್ರತಿ ಹೇಳುವವರು ಇರಲಿಲ್ಲ. ಆಡಿದ್ದೇ ಆಟ; ನುಡಿದದ್ದೆ ವೇದವಾಗಿತ್ತು..... ಈಗ ಅವನ ಮಾತುಗಳು.....ಅಷ್ಟಾಗಿ ಏನು ಬಂತು?....... ನಡೆಯುವುದೇ ಇಲ್ಲವಾಯಿತು.... ಬ್ರಹ್ಮಣ್ಣನ ಕೊಬ್ಬು ಮುರಿದು ಕೇವಲ ಬುಸುಗುಡುವ ಬಸವನಾಗಿದ್ದಾನೆ.

**ಶಿವಮಲ್ಲು :** ತಾಯಿ ನೀವು ಊಹಿಸಿದ್ದು ಸರಿಯಾಗಿಯೇ ಇದೆ. ದೇವಾಲಯ ನಿರ್ಮಾಣದ ವಿಷಯದಲ್ಲಿ ಆದ ಅವಮಾನ ಬ್ರಹ್ಮಣ್ಣನ ಆಕ್ರೋಶಕ್ಕೆ ದಾರಿ ಮಾಡಿದೆ. ಬ್ರಹ್ಮಣ್ಣನ ಮಾತನ್ನು ತಿರಸ್ಕರಿಸಿ ನಿಮ್ಮ ಆಲೋಚನೆಗೆ 'ಅಸ್ತು' ಎಂದದ್ದು ಬ್ರಹ್ಮಣ್ಣನ ಜೀವನದಲ್ಲಿ ಬಹುದೊಡ್ಡ ಆಘಾತ. ವೈಷ್ಣವ ದೇವಾಲಯವನ್ನು ನಿರ್ಮಿಸಿ, ವಿಷ್ಣುಭಕ್ತರನ್ನು ಮೆಚ್ಚಿಸಿ ಪ್ರಜಾಕೋಟಿಯಿಂದ ಸೈ ಎನಿಸಿಕೊಳ್ಳಬೇಕೆಂದಿದ್ದ ಅವರ ಯೋಜನೆ ತಲೆ ಕೆಳಗಾದದ್ದು ಸಹಿಸಲಸಾಧ್ಯವಾದ ಅವಮಾನವೆನಿಸಿದೆ. ಸಭಾ ಮರ್ಯಾದೆಯನ್ನು ಕಾಯುವ ಉದ್ದೇಶದಿಂದ ಮತ್ತು ಪ್ರಭುಗಳು ಅಪಾರ್ಥ ಮಾಡಿಕೊಂಡಾರೆಂಬ ಭಾವನೆಯಿಂದ ಹೇಗೋ ಸಂಭಾಳಿಸಿಕೊಂಡು, ಮೌನದಿಂದ ಇದ್ದು ಎದ್ದು ಹೋದರು. ಎದ್ದು ಹೋದವರು ಸುಮ್ಮನೆ ಕೂರಲಿಲ್ಲ. ತಮ್ಮ ಆಪ್ತರೆಲ್ಲರನ್ನು ಕರೆದು ಇಲ್ಲಿ ನಡೆದದ್ದನ್ನು ಕುರಿತು ಚರ್ಚೆ ನಡೆಸಿದರಂತೆ.

**ನಾಯಕಿ :** (ನಗುತ್ತ) ಇದು ಆಗುವುದೆಂದು ನನಗೆ ಮೊದಲೇ ಗೊತ್ತು. ಆ ಸಭೆಯಲ್ಲಿ ಯಾರ್‍ಯಾರು ಇದ್ದರಂತೆ?

**ಶಿವಮಲ್ಲು :** ಕನ್ನಮ್ದಾಸ, ಬಾದನ್ನ, ಮಾಲಕನ್ನಮದಾಸ, ಕೊಮ್ಮರಾಜ ಮೊದಲಾದ ಆಪ್ತರಿದ್ದರಂತೆ.

**ನಾಯಕಿ :** ಬ್ರಹ್ಮಣ್ಣನು ಪ್ರತೀಕಾರದ ಆಲೋಚನೆ ಮಾಡಿರಬೇಕಲ್ಲ?

**ಶಿವಮಲ್ಲು :** ಹೌದು ತಾಯಿ. ವಿರೂಪಾಕ್ಷ ಮಾರುವೇಷದಿಂದ ಹೇಗೋ ಒಳ ಪ್ರವೇಶ ಮಾಡಿ ಗುಟ್ಟಾಗಿ ಎಲ್ಲವನ್ನು ಕೇಳಿಸಿಕೊಂಡು ಬಂದು ನನಗೆ ಹೇಳಿದ. ಸಭೆಯಲ್ಲಿ ತನಗಾದ ಅವಮಾನಕ್ಕಾಗಿ ಕುದಿಯುತ್ತ, ನೀವು ಮತ್ತು ಅವರು ಒಂದೆಡೆಯಲ್ಲಿ ಇರುವುದು ಸಾಧ್ಯ ಇಲ್ಲವೆಂದೂ ಅದಕ್ಕೆ ತಾನೇ ದೇಶತ್ಯಾಗ ಮಾಡಿ ಹೋಗುವುದಾಗಿಯೂ ಘೋಷಿಸಿದನಂತೆ.

**ನಾಯಕಿ :** ಅವನ ಬಾಲಬಡಕರು ಖಂಡಿತವಾಗಿಯೂ ಇದಕ್ಕೆ ಒಪ್ಪಿರಲಾರರು..... ಹೌದು ಅವನು ಆಲೋಚಿಸಿದಂತೆ, ಈ ನಾಡಿನಲ್ಲಿ ನಾನಿರಬೇಕು ಇಲ್ಲವೇ ಅವನಿರಬೇಕು. ಇಬ್ಬರೂ ಆ ಜನ್ಮ ಶತ್ರುಗಳಾಗಿ ಒಂದೆಡೆಯಲ್ಲಿ ಇರುವುದು ಸಾಧ್ಯವೇ ಇಲ್ಲ. ಪ್ರಜೆಗಳ ಎದುರಿನಲ್ಲಿ ಹಾವು

ಮುಂಗಸಿಗಳಂತೆ ಕಚ್ಚಾಡುತ್ತ ಸಣ್ಣವರಾಗಿ ನಿಲ್ಲುವವಂತಾಗಬಾರದು. ಅವನು ದೇಶಾಂತರ ಹೋದರೇನೇ ರಾಜ್ಯದಲ್ಲಿ ಶಾಂತಿ, ನೆಮ್ಮದಿಗಳು!...... ಅವನು ಹೋಗದಿದ್ದರೇನಂತೆ..... ನಾನೇ ಅವನನ್ನು ಹೋಗುವಂತೆ ಮಾಡುತ್ತೇನೆ.

**ಶಿವಮಲ್ಲು :** ಅಮ್ಮ ದೇಶಾಂತರಕ್ಕೆ ಹೋಗುವುದು ಬ್ರಹ್ಮಣ್ಣನ ಇಚ್ಛೆ ಮಾತ್ರ, ಅವನ ಆಪ್ತಾಲೋಚಕರು, ಹಿತೈಷಿಗಳು ಯಾರೂ ಇದನ್ನು ಅನುಮೋದಿಸಲಿಲ್ಲ..... ಬ್ರಹ್ಮಣ್ಣ ದೇಶಾಂತರ ಹೋದರೆ ನಿಮಗೆ ಇನ್ನೂ ಅನುಕೂಲ ಮಾಡಿಕೊಟ್ಟಂತೆಯೂ ನಿಮ್ಮ ಸ್ವೇಚ್ಛೆಗೆ ತಾವಾಗಿ ದಾರಿ ಮಾಡಿಕೊಟ್ಟಂತೆಯೂ ಆಗುವುದೆಂದು ತಿಳಿಸಿದರಲ್ಲದೆ, ಬ್ರಹ್ಮಣ್ಣನ ಅನುಪಸ್ಥಿತಿಯಲ್ಲಿ ಈಗಾಗಲೇ ನಿಮ್ಮ ಷಡ್ಯಂತರಗಳಿಂದ ತತ್ತರಿಸಿ ಹೋಗಿರುವ ಕಿರಿಯ ರಾಣಿಯ ಮಕ್ಕಳಾದ ಮಲಿದೇವಗಳು ಸುರಕ್ಷಿತವಾಗಿ ಬಾಳಲಾರರೆಂದೂ..... ಎಂದೋ ಒಂದು ದಿನ ಅವರನ್ನು ಕೊಲೆ ಮಾಡಿಸಿ...... ಮಾಡಿಸಿ......... ಮುಂದೆ (ಶಿವಮಲ್ಲು ಅನುಮಾನಿಸುತ್ತಾನೆ)

**ನಾಯಕಿ :** (ಸಂದೇಹ, ಕೋಪಗಳಿಂದ) ಏನದು ಶಿವಮಲ್ಲು ಯಾಕೆ ಮಧ್ಯದಲ್ಲಿಯೇ ನಿಲ್ಲಿಸಿದೆ?........ ಮಾಡಿಸಿ..... ಮಾಡಿಸಿ ಮುಂದೆ.......?

**ಶಿವಮಲ್ಲು :** ಅಮ್ಮ ಕ್ಷಮಿಸಬೇಕು......ನಲಗಾಮ ಪ್ರಭುಗಳನ್ನೂ ಕೊಲ್ಲಿಸಿ ನರಸಿಂಹನಿಗೇ ಸಮಸ್ತ ರಾಜ್ಯವನ್ನು ಕೊಡಿಸುವಿರಂತೆ!..... ಅಲ್ಲದೆ ನೀವು ಆತನನ್ನು ಪ್ರೀತಿಸುತ್ತಿರುವುದರಿಂದ ಆತನ ಯೋಗಕ್ಷೇಮಕ್ಕಾಗಿ ಏನನ್ನಾದರೂ ಮಾಡಲು ಹಿಂಜರಿಯುವುದಿಲ್ಲವಂತೆ!!..... ಇವರೊಂದಿಗೆ ನಿಮ್ಮ ಅಕ್ರಮ ಸಂಬಂಧದ ಬಗ್ಗೆ ಪ್ರಜೆಗಳಲ್ಲಿ ಗುಲ್ಲೆದ್ದು ನಿಮ್ಮ ಬಗ್ಗೆ ಪ್ರಜೆಗಳಲ್ಲಿ ಅಪಪ್ರಚಾರ ಈಗಾಗಲೇ ಪ್ರಾರಂಭವಾಗಿದೆ.

**ನಾಯಕಿ :** ಶಿವಮಲ್ಲು. ಸರಿಯಾಗಿ ತಿಳಿದು ಬಂದು ಮಾತನಾಡುತ್ತಿರುವಿ ತಾನೇ? ನೀನು ಕೇಳಿದ್ದೆಲ್ಲವೂ ಸುಳ್ಳಾದ ಪಕ್ಷದಲ್ಲಿ ನಿನ್ನ ತಲೆ ಹಾರಿ ಹೋದೀತು. ಜೋಕೆ!

(ಸ್ವಗತ) ಬ್ರಹ್ಮಣ್ಣ....... ಬ್ರಹ್ಮಣ್ಣ (ಸಿಟ್ಟಿನಿಂದ ಹಲ್ಲು ಕಡಿಯುತ್ತ) ನನ್ನ ಬಗೆಗಿನ ದ್ವೇಷ ಅಸೂಯೆಗಳಿಂದಾಗಿ ನಿನ್ನ ನಾಲಗೆಯಿಂದ ಇಂತಹ ಹೊಲಸು ಮಾತುಗಳೇ!..... ವಿನಾಶ ಕಾಲೇ ವಿಪರೀತ ಬುದ್ಧಿ ಅಂತ ನಿನಗೆ ತಿಳಿದಿರಲಿಕ್ಕಿಲ್ಲ! ಇಲ್ಲವಾದಲ್ಲಿ ನನ್ನ ವಿಚಾರದಲ್ಲಿ ಹೀಗೆಲ್ಲ ಮಾತನಾಡುತ್ತಿರಲಿಲ್ಲ.... ಇರಲಿ.... ಈ ನಾಯಕಿ ನಾಗಮಣಿಯ ಕಾರ್ಯ ವೈಖರಿ ಕ್ರಮೇಣ ನಿನಗೆ ಅರ್ಥವಾದೀತು.

**ಶಿವಮಲ್ಲು :** (ಎಚ್ಚರಿಸುತ್ತ) ತಾಯಿ...... ತಾಯಿ ನನಗೆ ಹೋಗಿ ಬರಲು ಅಪ್ಪಣೆಯೇ?

**ನಾಯಕಿ :** (ಎಲ್ಲಿಯೋ ದೃಷ್ಟಿಸುತ್ತ) ಹುಂ...... ಹೋಗು ನಿನ್ನ ಈ ಜಂಗಮ ರಹಸ್ಯ ಯಾರಿಗೂ ತಿಳಿಯದಂತೆ ಎಚ್ಚರ ವಹಿಸಿ ವಿಷಯಗಳನ್ನು ಸಂಗ್ರಹಿಸಿ ಆಗಾಗ ನಮಗೆ ತಿಳಿಸುತ್ತಿರು.

**ಶಿವಮಲ್ಲು :** (ವಿನಯದಿಂದ) ಅಪ್ಪಣೆ ತಾಯಿ! (ಎಂದು ನಮಸ್ಕರಿಸಿ ಬೀಳ್ಕೊಳ್ಳುತ್ತಾನೆ).

**ನಾಯಕಿ :** (ಸ್ವಗತ) ಸಹನೆಗೂ ಒಂದು ಮಿತಿ ಇದೆ. ಪಲನಾಡ ಸೀಮೆಯನ್ನೇ ನನ್ನ ಮುಷ್ಟಿಯೊಳಗೆ ಇರಿಸಿಕೊಳ್ಳದೆ ಬಿಡಲಾರೆ. ರಾಜಕೀಯ ತಂತ್ರಗಳಲ್ಲಿ ಅವನಿಗಿಂತಲೂ ನನ್ನದೊಂದು ಕೈ ಹೆಚ್ಚೆಂದು ಅವನೇನು ಬಲ್ಲ!...... ಹೆಣ್ಣು ಅಬಲೆಯಲ್ಲ ಹೆಮ್ಮಾರಿ! ಮನಸ್ಸು ಮಾಡಿದರೆ ಮಹಾ ಸಾಮ್ರಾಜ್ಯಗಳನ್ನೇ ಮುಳುಗಿಸಬಲ್ಲಳೆಂಬುವನ್ನು ಅಷ್ಟೊಂದು ನುರಿತ ಚಾಣಾಕ್ಷ ರಾಜಕಾರಣಿಗೆ ತಿಳಿಯಲಿಲ್ಲವೇಕೋ!..... ತೋರಿಸುತ್ತೇನೆ...... ಆ ಪೆದ್ದು ನಲಗಾಮನು ಬ್ರಹ್ಮಣ್ಣನ ತಂತ್ರಗಳಿಗೆ. ಬೋಧನೆಗಳಿಗೆ ಬಲಿಯಾಗುವುದಕ್ಕೆ ಮೊದಲೇ ಅವನನ್ನು ನನ್ನೆಡೆಗೆ ಸೆಳೆದುಕೊಳ್ಳುತ್ತೇನೆ. ಸ್ವಂತ ಆಲೋಚನೆ ಮಾಡುವ ಸಾಮರ್ಥ್ಯವಿಲ್ಲದ ಇಂತಹ ಅರಸುಗಳನ್ನು ಆಡಿಸಿ ಕುಣಿಸುವುದರಲ್ಲೇ ಖುಷಿ ಇದೆ. ಅವರ ಆ ದೌರ್ಬಲ್ಯವನ್ನು ಜಾಣರಾದ ನಾವು ನಮ್ಮ ಸ್ವಾರ್ಥಕ್ಕೆ. ಪ್ರತಿಷ್ಠೆಗೆ ಬಳಸಿಕೊಳ್ಳಲೇಬೇಕು.... ವಂಶ ಪಾರಂಪರ್ಯವಾಗಿ ಅರಸುವಂಶದ ಸೇವೆಯಲ್ಲೇ ಸವೆದ ಬ್ರಹ್ಮಣ್ಣ ಮತ್ತು ಅವನ ಅನುಚರರು ಪ್ರಭುಗಳ ಅನುಗ್ರಹದಿಂದ ವಂಚಿತರಾಗಬೇಕು. ಗೌರವ. ವಿಶ್ವಾಸಗಳನ್ನು ಕಳೆದುಕೊಳ್ಳಬೇಕು..... ಇದಕ್ಕೆ ಬೇಕಾದ ಏರ್ಪಾಟು ಸಿದ್ಧತೆಗಳನ್ನು ನಾನು ಮಾಡುತ್ತೇನೆ. ಬ್ರಹ್ಮಣ್ಣನನ್ನು ನಂಬಿಕೆ ದ್ರೋಹಿಯನ್ನಾಗಿ ಮಾಡಿ ನಿಲ್ಲಿಸುತ್ತೇನೆ. ಮುಖವಾಡದ ಮನುಷ್ಯನೆಂದು ಅವನನ್ನು ನಗ್ನಗೊಳಿಸಿ ತೋರುತ್ತೇನೆ..... ಅಹ್ಹಹ್ಹಾ! ಅಹ್ಹಹ್ಹ! (ವಿಕಟವಾಗಿ ನಕ್ಕು) ಬ್ರಹ್ಮಣ್ಣ........ಸಿದ್ಧವಾಗಿರು.....ಇನ್ನು ಮುಂದೆ ನಾವಿಬ್ಬರೂ ಮುಖಾಮುಖಿಯಾಗಿ ಕಣಕ್ಕೆ ಇಳಿಯೋಣ.....ನಿನ್ನನ್ನು ಬಿಡಲಾರೆ.... ಹೇಗಾದರೂ ಗುರುಜಾಲದಿಂದ ನೀನು ಉಚ್ಚಾಟನೆಯಾಗಲೇ ಬೇಕು...... ಇಲ್ಲ ನೀನು ಸಾಯಲೇ ಬೇಕು..... ಸಾಯಲೇಬೇಕು.

(ರಂಗದ ಮೇಲೆ ಕತ್ತಲು ಕವಿಯುತ್ತದೆ)

○○

# ದೃಶ್ಯ - ೨

(ಅರಮನೆಯ ದೃಶ್ಯ-ಬಾಗಿಲ ಬಳಿ ಇಬ್ಬರು ಭಟರು ಪಹರೆ ನೀಡುತ್ತಿದ್ದಾರೆ. ಜನರ ಗುಂಪೊಂದು ಗದ್ದಲ ಮಾಡುತ್ತಾ 'ನಲಗಾಮ ಪ್ರಭುಗಳಿಗೆ ಧಿಕ್ಕಾರ!...........ನಲಗಾಮ ಪ್ರಭುಗಳಿಗೆ ಧಿಕ್ಕಾರ ಎಂದು ಘೋಷಣೆಗಳನ್ನು ಕೂಗುತ್ತ ಒಳಗೆ ನುಗ್ಗಲು ಪ್ರಯತ್ನಿಸುವರು. ಭಟರು ನುಗ್ಗುತ್ತಿರುವ ಜನರನ್ನು ತಡೆಯಲು ಪ್ರಯತ್ನಿಸುವರು. ಗುಂಪಿನಲ್ಲಿ ಒಬ್ಬ ಮುಂದೆ ಬಂದು ಭಟರನ್ನು ಉದ್ದೇಶಿಸಿ ಮಾತನಾಡುತ್ತಾನೆ)

**ವ್ಯಕ್ತಿ** : ಬಿಡ್ರಣ್ಣ ಒಳಕ್ಕೆ, ನಾವು ಪ್ರಭುಗಳನ್ನು ಈಗಿಂದ ಈಗಲೇ ಕಾಣಬೇಕು.

**ಭಟ** : ಹಾಗೆಲ್ಲ ಅರಮನೆ ಒಳಗೆ ಬಿಡೋದಿಲ್ಲ. ನಿಮಗೇನು ಬೇಕು. ನೀವ್ಯಾಕೆ ಹೀಗೆ ಬೊಬ್ಬೆ ಹಾಕುತ್ತ ಮುತ್ತಿಗೆ ಹಾಕಲು ಬಂದಿದ್ದೀರಿ?

**ವ್ಯಕ್ತಿ** : ನಾವು ಯಾಕೆ ಬಂದಿದ್ದೀವಿ. ಏನು ಹೇಳಬೇಕು. ಏನು ಕೇಳಬೇಕು..... ಎಲ್ಲ ಪ್ರಭುಗಳ ಮುಂದೆ ಗೊತ್ತಾಗುತ್ತೆ. ನೀನು ನಮ್ಮನ್ನು ತಡೀಬೇಡ. ನಾವೇನೂ ಅರಮನೆಗೆ ಲಗ್ಗೆ ಇಟ್ಟು ಬೆಂಕಿ ಹಚ್ಚೋಕೆ ಬಂದಿಲ್ಲ. ನಮಗೆ ನ್ಯಾಯಬೇಕು.

**ಭಟ** : ಪ್ರಭುಗಳಿಂದ ನ್ಯಾಯ ಸಿಗುತ್ತೆ. ಖಂಡಿತ ಸಿಗುತ್ತೆ. ಆದರೆ ಹೀಗೆಲ್ಲ ಕೂಗಾಡಬೇಡಿ. ನೀವೆಲ್ಲ ಒಂದು ಪಕ್ಕಕ್ಕೆ ಸುಮ್ಮನೆ ನಿಂತುಕೊಳ್ಳಿ. ನಾನು ಹೋಗಿ ಕೇಳಿಕೊಂಡು ಬರ್ತೀನಿ.

**೨ ನೇ ವ್ಯಕ್ತಿ:** ಕೇಳಿಕೊಂಡು ಬಂದು ಬಿಡ್ತಾನಂತೆ! ಸುಮ್ಮನೆ ಇರ್ರಪೊ...... ಹೋಗಣ್ಣ......ಬೇಗ ಹೋಗಿ ಕೇಳಿಕೊಂಡು ಬಂದು ಹೇಳು (ಭಟನಿಗೆ ಹೇಳುವನು)

**೧ ನೇ ಭಟ:** (ಇನ್ನೊಬ್ಬ ಭಟನಿಗೆ) ಲೋ ಸಾಯಣ್ಣ. ಇವರನ್ನು ಇಲ್ಲೇ ನೋಡ್ಕೊಂಡು ಇರು. ಈಗಲೇ ನಾನು ಹೋಗಿ ಪ್ರಭುಗಳಿಗೆ ವಿಷಯ ತಿಳಿಸಿ ಬರ್ತೀನಿ (ಹೋಗುವನು)

(ಗುಂಪಿನಲ್ಲಿ ಗುಜುಗುಜು ಪ್ರಾರಂಭವಾಗುತ್ತದೆ. ಅವರವರಲ್ಲೆ ಮಾತುಗಳು.......! ಓೀಗಾಗಬಾರದಿತ್ತು'........ಇನ್ನು ಮುಂದೆ ನಮ್ಮಗತಿ ಏನು?.........ಎಷ್ಟು ಧೈರ್ಯ? ಯಾರು ಮಾಡಿರಬೆಕು?.......ಛೇ.......ಛೇ........ಅವರು ಇದನ್ನು ಮಾಡಿರಲು ಸಾಧ್ಯವಿಲ್ಲ'–ಎಂಬ ಮಾತುಗಳು ಅಸ್ಪಷ್ಟವಾಗಿ ಕೇಳಿ ಬರುತ್ತದೆ........ಒಂದೆರಡು ನಿಮಿಷಗಳ ತರುವಾಯ 'ಸದ್ದು'......ಸದ್ದು! ಪ್ರಭುಗಳು ಆಗಮಿಸುತ್ತಿದ್ದಾರೆ. ಜೊತೆಗೆ ನಾಯಕಿ ನಾಗಮ್ಮನವರು......ಬ್ರಹ್ಮಣ್ಣಮಂತ್ರಿಗಳೂ ಬರುತ್ತಿದ್ದಾರೆ.........ಎಂದು ಹೇಳುವುದು ಕೇಳಿಸುತ್ತದೆ. ಕೂಡಲೇ ಸದ್ದು ಅಡಗುತ್ತದೆ. ಗುಂಪು ಪಕ್ಕಕ್ಕೆ ಸರಿದು ಶಿಸ್ತಿನಿಂದ ಸಾಲಾಗಿ ನಿಂತು ಬರುತ್ತಿರುವ ಪ್ರಭುಗಳಿಗೆ ಬ್ರಹ್ಮಣ್ಣನಿಗೆ, ನಾಯಕಿಗೆ ಕ್ರಮವಾಗಿ ವಿನಯದಿಂದ ತಲೆಬಾಗಿ ಗೌರವ ಸೂಚಿಸುತ್ತಾರೆ)

**ನಲಗಾಮ :** (ಗುಂಪಿನ ಜನರನ್ನು ಉದ್ದೇಶಿಸಿ) ನನ್ನ ಪ್ರೀತಿಯ ಪ್ರಜೆಗಳೇ ಇಷ್ಟೂ ದಿನ ಶಾಂತಿಯಿಂದ ಇದ್ದ ಈ ನಮ್ಮ ನಾಡಿನಲ್ಲಿ ಇಂತಹ ಗದ್ದಲ, ಅಶಾಂತಿಗೆ ಕಾರಣವೇನು. ನಮ್ಮ ಮೇಲೆ ಆಕ್ರೋಶಗೊಂಡು ಧಿಕ್ಕಾರ ಕೂಗುತ್ತ ಬರುವ ಸಾಹಸ ಇದ್ದಕ್ಕಿದ್ದಂತೆ ನಿಮಗೆ ಹೇಗೆ ಬಂತು?...... ಇಷ್ಟು ಉದ್ಧಟರಾಗಿ ನಡೆದುಕೊಳ್ಳಬೇಕಾದ ಅನಿವಾರ್ಯತೆಯಾದರೂ ಏನು?....... ಹೇಳಿ ನಿಮಗೆ ಈಗ ಬಂದಿರುವ ಸಂಕಟವಾದರೂ ಏನು? ನಿಸ್ಸಂಕೋಚವಾಗಿ, ಧೈರ್ಯವಾಗಿ ಹೇಳಿ. ಅದನ್ನು ನಿವಾರಿಸಲು ನಾವು ಸರ್ವವಿಧದಿಂದಲೂ ಪ್ರಯತ್ನಿಸುತ್ತೇವೆ.

**ನಾಯಕಿ :** ಬಂಧುಗಳೇ........ ಪ್ರಜೆಗಳ ಸಂಕಟವನ್ನು ನಿವಾರಿಸುವುದು ರಾಜನ ಪ್ರಥಮ ಕರ್ತವ್ಯ.....ನೀವು ನಿರ್ಭೀತರಾಗಿ ನಿಸ್ಸಂಕೋಚರಾಗಿ....... ಅಪರಾಧ ಯಾರಿಂದಲೇ ಆಗಿರಲಿ, ಹೆದರಿಕೊಳ್ಳದೆ ಹೇಳಿ. ನಿಮಗೆ ಒದಗಿದ ವಿಪತ್ತಾದರೂ ಏನು?

(ಗುಂಪಿನಲ್ಲಿ ಒಬ್ಬರೊಬ್ಬರು ಮುಖ ನೋಡಿಕೊಳ್ಳುತ್ತಾರೆ. ಹೇಳುವುದಕ್ಕೆ ಸಂಕೋಚ ಪಡುತ್ತಿರುವಂತೆ ತೋರುತ್ತಾರೆ. ಮಂತ್ರಿ ಬ್ರಹ್ಮಣ್ಣ ಅವರಿಗೆ ಧೈರ್ಯ ನೀಡಲು ಮುಂದೆ ಬರುತ್ತಾನೆ)

**ಬ್ರಹ್ಮಣ್ಣ :** ಪ್ರಜೆಗಳೇ ಸುಮ್ಮನೆ ಕಾಲಹರಣ ಮಾಡಬೇಡಿ. ನಿಮಗೆ ಏನೂ ತೊಂದರೆಯಾಗದಂತೆ ನಾನು ಭರವಸೆ ಕೊಡುತ್ತೇನೆ. ಅಪರಾಧಿಗಳು ಯಾರೇ ಆದರೂ ಅವರಿಗೆ ಶಿಕ್ಷೆಯಾಗಿಯೇ ಆಗುತ್ತದೆ.

**ವ್ಯಕ್ತಿ :** (ಸಂದೇಹಿಸುತ್ತ) ಪ್ರಭುಗಳೇ ಎಷ್ಟೋ ಕಾಲದಿಂದ ಈ ನಾಡಿನಲ್ಲಿ ನಿಶ್ಚಿಂತೆಯಿಂದ ನಿರಾತಂಕದಿಂದ ಬಾಳಿದೆವು. ಶಾಂತಿ, ಸುಭಿಕ್ಷತೆ, ಭದ್ರತೆಗಳಿದ್ದ ಈ ನಾಡಿನಲ್ಲಿ ನಮಗೆ ಯಾವುದೇ ಚಿಂತೆಯಾಗಲೀ ಕೊರತೆಯಾಗಲೀ ಬಂದಿರಲಿಲ್ಲ. ಅಪರ ವೇಳೆಯಲ್ಲಿಯೂ ಮುಕ್ತವಾಗಿ ಓಡಾಡುವ ಅವಕಾಶಗಳಿದ್ದವು.

**ನಲಗಾಮ :** ಅಂದರೇ?....... ಈಗ ಅದೆಲ್ಲವೂ ಇಲ್ಲವೆಂದಲ್ಲವೇ ನಿಮ್ಮ ಅಭಿಪ್ರಾಯ?

**ವ್ಯಕ್ತಿ :** ಹೌದು ಪ್ರಭು. ರಾತ್ರಿಗಳೆನ್ನುವುದು ಕಾಡುವ ಭೂತಗಳಂತಾಗಿದೆ. ನಮ್ಮ ಆಸ್ತಿಪಾಸ್ತಿ ಹೆಣ್ಣುಮಕ್ಕಳಿಗೆ ರಕ್ಷಣೆಯೇ ಇಲ್ಲದಂತಾಗಿದೆ. ಮನೆಗಳು ಲೂಟಿಯಾಗುತ್ತಿವೆ. ಹೆಣ್ಣುಮಕ್ಕಳ ಮೇಲೆ ದುರಾಕ್ರಮಣವಾಗುತ್ತಿದೆ. ಹಾಡೆಹಗಲೇ ರಸ್ತೇಲಿ ಓಡಾಡುವ ಹೆಣ್ಣು ಮಕ್ಕಳು ದುಷ್ಟಗಂಡಸರ ಕಾಮುಕ ದೃಷ್ಟಿಗೆ ಬಲಿಯಾಗಿ ಶೀಲವಂಚಿತರಾಗುತ್ತಿದ್ದಾರೆ.

**ಮತ್ತೊಬ್ಬ :** ಹೌದು ಪ್ರಭು........... ಇಷ್ಟೇ ಸಾಲದೆಂಬಂತೆ ಮೊನ್ನೆ ಜಂಗಮನೊಬ್ಬನ ಕೊಲೆಯಾಗಿದೆ. ಶಿವಾಲಯದ ಹುಂಡಿಯಲ್ಲಿನ ಹಣ, ಬೆಳ್ಳಿಯ ಪೂಜಾವಸ್ತುಗಳು ಕಳುವಾಗಿವೆ. ಜಾತಿ ಕುಲ ಇಲ್ಲದ ಜನ ಕುಲೀನರ ಮನೆಗಳಿಗೆ ನುಗ್ಗಿ ಕೊಲ್ಲುವುದಾಗಿ ಬೆದರಿಕೆ ಹಾಕುತ್ತಿದ್ದಾರೆ. ನಮ್ಮ ಬಾವಿಗಳಲ್ಲಿ ಮದ್ಯ ಮಾಂಸವನ್ನೆಲ್ಲ ಎಸೆದು ಹೋಗುತ್ತಿದ್ದಾರೆ. ನಾವು ಇಂತಹ ಈ ಪರಿಸ್ಥಿತಿಯಲ್ಲಿ ನಿರ್ಭಯವಾಗಿ ನೆಮ್ಮದಿಯಾಗಿ ಬಾಳುವುದಾದರೂ ಹೇಗೆ ಪ್ರಭು?..... ನೀವೇ ಯೋಚಿಸಿ.

**೨ ನೇ ವ್ಯಕ್ತಿ:** ನಮಗೆ ಯಾವ ರೀತಿ ಭದ್ರತೆಯನ್ನು ಕಲ್ಪಿಸುವಿರಿ? ಇದೆಲ್ಲವೂ ಹೇಗಾಗುತ್ತದೆಯೆಂಬುದು ನಮ್ಮ ಚಿಂತೆಯೊಂದು ಕಡೆ ಆದರೆ, ನಿಮ್ಮ ಗಮನಕ್ಕೆ ಇಲ್ಲೀವರೆಗೆ ಬಾರದೆ ಹೋದದ್ದು ಮತ್ತೊಂದು ಕಡೆ ಆಶ್ಚರ್ಯವೆನಿಸುತ್ತದೆ.

**ನಲಗಾಮ :** (ಯೋಚನಾಮಗ್ನನಾಗಿ) ಬ್ರಹ್ಮಣ್ಣ ಮಂತ್ರಿಗಳೇ ನಿಮಗೂ ಇದು ತಿಳಿಯಲಿಲ್ಲವೇ? ನೀವಿರುವುದು ನಮಗೆ ನೂರು ಆನೆ ಬಲವಿದ್ದ ಹಾಗೆ. ರಾಜ್ಯದ ಶಾಂತಿ ಕ್ಷೇಮಗಳನ್ನು ನೀವು ಕಾಪಾಡಿಕೊಳ್ಳುತ್ತೀರಿ' ಎಂದು ಭಾವಿಸಿದ್ದೆವು. ಆದರೆ ಇದೇನಾಗುತ್ತಿದೆ? ಈ ರಾಜ್ಯಕ್ಕೆ ಒಬ್ಬರಲ್ಲ ಇಬ್ಬರಿಬ್ಬರು ಮಂತ್ರಿಗಳಿದ್ದೀರಿ..... ಆದರೆ ಪ್ರಯೋಜನವೇನು?.... ಇವರಿಗೆ ನಾನೇನು ಸಮಾಧಾನ ನೀಡಲಿ?

**ನಾಯಕಿ :** ಪ್ರಭು..... ಮೇಲು ನೋಟಕ್ಕೆ ಕಾಣುತ್ತಿರುವಷ್ಟು ಸರಳವಲ್ಲ ಈ ಸಮಸ್ಯೆ. ಆದರೆ ಬೇರುಗಳು ಇನ್ನೆಲ್ಲೋ ಇವೆ ಎನಿಸುತ್ತದೆ. ಹಣದ ದಾಹ, ಅಧಿಕಾರದಾಹ, ಕಾಮದಾಹ ಇಂತಹ ಹೇಯ ಕೆಲಸಗಳನ್ನು ಮಾಡಿಸುತ್ತಿವೆ. ಇವೆಲ್ಲವೂ ಉದ್ದೇಶಪೂರ್ವಕ.

**ನಲಗಾಮ :** ನಾಗಮ್ಮ ಹೀಗೆ ಮಾಡಿಸುವುದರಿಂದ ಯಾರಿಗೆ ಯಾವ ಪ್ರಯೋಜನವಿದೆ. ನಾವೆಲ್ಲ ಇದ್ದು ಪ್ರಜೆಗಳು ನಿಶ್ಚಿಂತೆಯಿಂದ ನೆಮ್ಮದಿಯಿಂದ ಬದುಕುವುದು ಸಾಧ್ಯವಿಲ್ಲವಾದರೆ ಅಧಿಕಾರಿಗಳಾದ ನಮ್ಮ ಅಸಮರ್ಥತೆಗೆ ನಾವೇ ನಾಚಿಕೊಳ್ಳಬೇಕು. ಅಪರಾಧಿಗಳಾಗಿ ಅವರ ಮುಂದೆ ನಿಲ್ಲಬೇಕಾಗಿ ಬಂದಿರುವುದು ಶುದ್ಧ ಅವಮಾನದ ಸಂಗತಿಯಾಗಿದೆ.

ಬ್ರಮ್ಮಣ್ಣ : ಪ್ರಭು. ಈ ವಿಷಯದಲ್ಲಿ ನಾವು ಗಂಭೀರವಾಗಿ ಆಲೋಚಿಸಬೇಕು. ಇದನ್ನೆಲ್ಲ ಮಾಡಿಸುತ್ತಿರುವವರು ಮಾಡುತ್ತಿರುವವರು ಯಾರೆಂಬುದನ್ನು ಆದಷ್ಟು ಬೇಗ ಪತ್ತೆ ಹಚ್ಚಬೇಕು.

ನಲಗಾಮ : ಪ್ರಜೆಗಳೇ ನಿಮ್ಮ ಸಮಸ್ಯೆ ನಿಮ್ಮ ಆತಂಕಗಳು ಏನೆಂಬುದು ನಮಗೆ ಅರ್ಥವಾಯಿತು. ನೀವಿನ್ನು ನಿಶ್ಚಿಂತರಾಗಿ ಇರಿ. ಇಂದಿನಿಂದ ರಾತ್ರಿಯ ಹೊತ್ತು ವಿಶೇಷ ಪಹರೆದಳವನ್ನು ನೇಮಿಸುತ್ತೇವೆ. ಅವರು ನಿಮಗೆ ರಕ್ಷಣೆ ಕಲ್ಪಿಸುವರು. ಅಲ್ಲದೆ ಅಪರಾಧಿಗಳನ್ನು ಆದಷ್ಟು ಬೇಗ ಹಿಡಿಯಲಿಕ್ಕೆ ಪ್ರಯತ್ನಿಸುತ್ತೇವೆ (ಬ್ರಮ್ಮಣ್ಣನ ಕಡೆ ತಿರುಗಿ) ಮಂತ್ರಿಗಳೇ ಪರಿಸ್ಥಿತಿ ಎಷ್ಟು ಗಂಭೀರವಾಗುತ್ತಿದೆ ಎಂದು ನೋಡಿದಿರಲ್ಲ. ಆದಷ್ಟು ಶೀಘ್ರದಲ್ಲಿ ಅಪರಾಧಿಗಳು ಪತ್ತೆಯಾಗಬೇಕು. ಅದಕ್ಕಾಗಿ ಬೇಕಾದ ವ್ಯವಸ್ಥೆಯನ್ನು ಕೂಡಲೇ ಒದಗಿಸಿ. (ನಾಗಮ್ಮನಿಗೆ) ನಾಗಮ್ಮ ಈ ರಾಷ್ಟ್ರದ ಜವಾಬ್ದಾರಿ ನಿಮ್ಮೆಲ್ಲರ ಮೇಲಿದೆ. ಸಮಸ್ಯೆಗಳು ಅತಿರೇಕಕ್ಕೆ ಹೋಗಿ ರಾಷ್ಟ್ರ ನಾಶವಾಗುವುದಕ್ಕೆ ಅವಕಾಶಕೊಡಬೇಡಿ. ಬ್ರಮ್ಮಣ್ಣ ಮಂತ್ರಿಗಳೆಷ್ಟೋ ನೀವೂ ಅಷ್ಟೆ! ಅಪರಾಧಿಗಳನ್ನು ಎಳೆದು ತಂದು ಕೂಡಲೇ ಶಿಕ್ಷೆಯಾಗುವಂತೆ ನೋಡಿಕೊಳ್ಳಿ.

ನಾಯಕಿ : ಪ್ರಭು ಈ ಪರಿಸ್ಥಿತಿ ನಿನ್ನೆ ಮೊನ್ನೆಯದಲ್ಲ. ಸುಮಾರು ದಿನಗಳಿಂದ ಪರಿಸ್ಥಿತಿ ಹೀಗೆ ಇದೆ. ನನಗೂ ಗೊತ್ತಿದೆ. ನಿಮಗೆ ಇದನ್ನೆಲ್ಲ ತಿಳಿಸಿ ನಿಮ್ಮ ಮನಸ್ಸಿಗೆ ಬೇಸರವುಂಟು ಮಾಡಬಾರದೆಂದು ನಾನೇ ಕೆಲವು ಸೈನಿಕರನ್ನು ಕಳಿಸಿ ಹುಟ್ಟಡಗಿಸುವ ಪ್ರಯತ್ನ ಮಾಡಿದೆ. ಅಪರಾಧಿಗಳು ಯಾರೆಂಬುದು ನನ್ನ ಊಹೆಗೂ ಬಂದಿದೆ. ಆದರೆ ಪ್ರತ್ಯಕ್ಷವಾದರೂ ಪ್ರಮಾಣಿಸಿ ನೋಡಬೇಕಲ್ಲವೇ?...... ಕಾದು ನೋಡೋಣವೆಂದು ಸುಮ್ಮನಾದೆ. ಈಗ ನೋಡಿದರೆ ಪ್ರಜೆಗಳ ಕುತ್ತಿಗೆಗೇ ಬಂದಿದೆ. ನಮ್ಮಿಂದ ಯಾವ ಸಹಾಯವು ಆಗಿಲ್ಲವೆಂದು ಪ್ರಜೆಗಳೇ ಉಗ್ರರಾಗಿ ಬಂಡೆದ್ದು ಆಳುವ ಪ್ರಭುಗಳ ಮೇಲೆಯೇ ಏರಿ ಬಂದಿದ್ದಾರೆ. ನಾನೇನು ಮಾಡಲಿ ಪ್ರಭು?.... ನನ್ನ ಮೇಲೆ ಅಸೂಯಾ ಪರರಾದವರಿಗೆ ನಾನು ಮಾಡುವ ಒಂದೊಂದು ಕೆಲಸವೂ ಒಂದೊಂದು ಹೆಜ್ಜೆಯೂ ಅರ್ಥಾಂತರಗಳಿಗೆ ದಾರಿ ಮಾಡಿಕೊಡುತ್ತಿವೆ. ಅಪರಾಧಿಗಳು ಯಾರೆಂದು ತಿಳಿದಿದ್ದರೂ ತಿಳಿಸಲಾಗದ ಅಸಹಾಯಕತೆ, ಅಸಮರ್ಥತೆ ನಮ್ಮದಾಗಿದೆ.

ನಲಗಾಮ : ನಾಗಮ್ಮ ಇಲ್ಲಿ ಅನುಮಾನ ಸಂದೇಹಗಳಿಂದ ಸಮಸ್ಯೆ ಪರಿಹಾರವಾಗುವುದಿಲ್ಲ. ಬಹಿರಂಗವಾಗಿ ಈ ರೀತಿ ಮಾತನಾಡುವುದನ್ನು ನಾನು ವಿರೋಧಿಸುತ್ತೇನೆ.

**ವ್ಯಕ್ತಿ** : ಪ್ರಭು ಕ್ಷಮಿಸಬೇಕು. ಅವರಿಗೆ ಮಾತ್ರವೇ ಅಲ್ಲ. ನಮಗೂ ಅಪರಾಧಿಗಳು ಯಾರೆಂದು ತಿಳಿದಿದೆ. ನೀವು ಅಪ್ಪಣೆ ಕೊಡಿಸಿದರೆ ನಾವೇ ಅಪರಾಧಿಗಳನ್ನು ಹೆಸರಿಸುತ್ತೇವೆ.

**ನಲಗಾಮ** : ಹೇಳಿ ಪ್ರಜೆಗಳೇ ನಿಸ್ಸಂಕೋಚವಾಗಿ, ನಿರ್ಭಯವಾಗಿ ಹೇಳಿ.

**ಪ್ರಜೆಗಳು** : ಅಪರಾಧಿಗಳು ಬೇರೆ ಯಾರೂ ಅಲ್ಲಪ್ರಭು. ತಮ್ಮ ತಮ್ಮಂದಿರಾದ ಮಲಿದೇವ ಸೋದರರು. ಮೊನ್ನೆ ನೀರಿಗೆಂದು ಹೋಗುತ್ತಿದ್ದ ಹೆಣ್ಣು ಮಗಳೊಬ್ಬಳ ಮೇಲೆ ಅತ್ಯಾಚಾರ ಪ್ರಯತ್ನ ನಡೆಯಿತು. ಅದೃಷ್ಟವಶಾತ್ ಅಪರಿಚಿತ ವ್ಯಕ್ತಿಯೊಬ್ಬ ಅವರನ್ನು ಎದುರಿಸಿ ಹೆಣ್ಣುಮಗಳ ಮಾನ ಕಾಪಾಡಿದ.

**ನಲಗಾಮ** : ಏನು ನಮ್ಮ ಮಲಿದೇವ ಸೋದರರೇ? ಖಂಡಿತ ಸಾಧ್ಯವಿಲ್ಲ..... ಅವರಿನ್ನೂ ಎಳೆಯರು. ಇಂತಹ ಅಕ್ರಮ ಸಾಹಸಗಳಿಗೆ ಎಂದೂ ಕೈ ಹಚ್ಚುವವರಲ್ಲ. ನೀವು ವೃಥಾ ನಮ್ಮ ಸೋದರರನ್ನು ಆರೋಪಿಗಳಾಗಿ ಮಾಡುತ್ತಿದ್ದೀರಿ. ಅವರನ್ನು ಹೆಸರಿಸುವಾಗ ಎಚ್ಚರವಿರಲಿ.

**ಒಬ್ಬ** : ಅದಕ್ಕೇ ಪ್ರಭು ಹೇಳಿದ್ದು. ನಿಮಗೆ ಇದು ನಂಬಲಾಗದ ನಿಷ್ಠುರ ಸತ್ಯವೆಂದು!

**ನಲಗಾಮ** : (ಚಿಂತೆಯಿಂದ) ಪ್ರಜೆಗಳೇ ದಯವಿಟ್ಟು ನೀವು ಈಗ ಇಲ್ಲಿಂದ ಹೊರಡಿ. ನನ್ನ ಸೋದರರನ್ನು ಕರೆಸಿ ವಿಚಾರಿಸಿ ನೋಡುತ್ತೇನೆ.

**ಪ್ರಜೆಗಳು** : ನಿಮ್ಮ ಮಾತಿನಲ್ಲಿ ನಮಗೆ ನಂಬಿಕೆಯಿದೆ ಪ್ರಭು. ದಯಾವಂತರಾದ ಪ್ರಜಾವತ್ಸಲರಾದ ಅಲಗುರಾಜರ ಮಕ್ಕಳು ತಾವು. ನಿಮ್ಮ ಮಾತಿನ ಮೇಲೆ ಗೌರವ ವಿಶ್ವಾಸಗಳಿವೆ. ಇಲ್ಲಿಯವರೆಗೂ ಸುಮ್ಮನಿದ್ದುದು ಈ ಕಾರಣಕ್ಕಾಗಿಯೇ!

**ನಲಗಾಮ** : ನಿಮ್ಮ ವಿಶ್ವಾಸಕ್ಕಾಗಿ, ಪ್ರೀತಿಗಾಗಿ ನಾವು ಕೃತಜ್ಞರಾಗಿದ್ದೇವೆ. ರಾಜ್ಯದಲ್ಲಿ ಅರಾಜಕತೆ, ಅನ್ಯಾಯಗಳು ನಡೆಯದಂತೆ ಎಚ್ಚರವಹಿಸುತ್ತೇವೆ. ಹೋಗಿ ಬನ್ನಿ ನನ್ನ ಪ್ರೀತಿಯ ಪ್ರಜೆಗಳೇ.

**ಪ್ರಜೆಗಳು** : ನಲಗಾಮ ಪ್ರಭುಗಳಿಗೆ ಜಯವಾಗಲಿ!

(ಜಯ ಘೋಷದೊಂದಿಗೆ ಗುಂಪು ಚದುರುತ್ತದೆ. ನಲಗಾಮ ದೊರೆ ಒಂದು ನಿಟ್ಟುಸಿರಿಟ್ಟು ಬ್ರಹ್ಮಣ್ಣ ಮತ್ತು ನಾಯಕಿಯರ ಕಡೆ ಅರ್ಥಪೂರ್ಣವಾಗಿ ನೋಡುತ್ತಾನೆ. ಇಬ್ಬರ ಮುಖದ ಮೇಲೂ ರೋಷದ ಛಾಯೆ ಕಂಡುಬರುತ್ತದೆ)

 OO

## ದೃಶ್ಯ – ೩

(ನಲಗಾಮನ ಖಾಸಗಿ ಕೋಣೆ. ನಲಗಾಮ ದೊರೆಯ ಮುಖದ ಮೇಲೆ ಉದ್ವಿಗ್ನತೆ ಕಾಣಿಸುತ್ತಿದೆ. ಅಸಹಾಯಕತೆಯೊಂದಿಗೆ ಕೈ ಕೈ ಹಿಸುಕಿಕೊಳ್ಳುತ್ತ ಶತಪಥಿಸುತ್ತಿದ್ದಾನೆ)

ನಲಗಾಮ : (ಸ್ವಗತ) ಈಗೇನು ಮಾಡಲಿ? ಪ್ರತಿಷ್ಠಿತ ರಾಜ ವಂಶದಲ್ಲಿ ಇಂತಹ ಹೊಲಸು ಕೀಟಗಳೆ!..... ಮಲಿದೇವ ಸೋದರರು ಈ ಬಗೆಯ ಸಾಹಸಕ್ಕೆ ಕೈ ಹಚ್ಚಿದ್ದಾರೆಂದು ನಂಬುವುದಾದರೂ ಹೇಗೆ? ಬ್ರಹ್ಮಣ್ಣ ಪ್ರಧಾನಿಗಳ ಉಸ್ತುವಾರಿಯಲ್ಲಿ, ಅವರ ಮಾರ್ಗದರ್ಶನದಲ್ಲಿ ಶಿಸ್ತಿನಲ್ಲಿ ಬೆಳೆದ ಈ ಎಳೆಯರು ಹೀಗೆಲ್ಲ ಮಾಡಿರಲು ಸಾಧ್ಯವೇ?...... ಇರಲಾರದು..... ಖಂಡಿತ ಇರಲಾರದು. ಪ್ರಜೆಗಳ ಆಸ್ತಿಯನ್ನು ಕೊಳ್ಳೆ ಹೊಡೆಯಬೇಕಾದ ಅಗತ್ಯವಾದರೂ ಏನಿದೆ?..... ಅವರಿಗೆ ನಾನೇನು ಕಡಿಮೆ ಮಾಡಿದ್ದೇನೆ. ರಾಜ ಬೊಕ್ಕಸದಿಂದ ಅವರ ಖರ್ಚುಗಳಿಗೆ ಧಾರಾಳವಾಗಿ ಹಣ ಒದಗಿಸುತ್ತಿದ್ದೇನೆ..... ಹೆಣ್ಣು ಮಕ್ಕಳ ಮೇಲೆ ದುರಾಕ್ರಮಣ ಮಾಡುವ ಕೀಳು ಬುದ್ಧಿ ಅವರಿಗೆ ಬರಲು ಸಾಧ್ಯವೇ ಇಲ್ಲ..... ಆದರೆ .....ಆದರೆ ಪ್ರಜೆಗಳೆಲ್ಲ ಒಕ್ಕೊರಲಿನಿಂದ ಅವರನ್ನೇ ಅಪರಾಧಿಗಳೆಂದು ಬೊಬ್ಬಿಡುತ್ತಿರುವರಲ್ಲ? ಯಾರನ್ನು ನಂಬಲಿ.... ಯಾವುದನ್ನು ನಂಬಲಿ?..... ನನಗೊಂದೂ ಹೊಳೆಯುತ್ತಿಲ್ಲ..... ತಲೆ ಚಿಟ್ಟೆನಿಸುತ್ತಿದೆ..... ಬ್ರಹ್ಮಣ್ಣ ಮಂತ್ರಿಗಳನ್ನಾದರೂ ಕರೆಸಿ ಮಾತನಾಡಿ ನೋಡುತ್ತೇನೆ.... ಇದರ ಬುಡದ ಸುಳಿವು ಹತ್ತೀತು...... (ಎನ್ನುತ್ತ ಕೈ ಚಪ್ಪಾಳೆ ಹೊಡೆದು)..... ಯಾರಲ್ಲಿ? (ಎಂದು ಕೂಗುವನು.) ಕೂಡಲೇ ಸೇವಕನೊಬ್ಬನ ಪ್ರವೇಶ!

ಸೇವಕ : (ಪ್ರವೇಶಿಸಿ) ಪ್ರಭು..... ಏನಪ್ಪಣೆ?

ನಲಗಾಮ : ಹೋಗು..... ಈ ಕೂಡಲೇ ಬ್ರಹ್ಮಣ್ಣ ಮಂತ್ರಿಗಳನ್ನು ನಾನು ಬರಹೇಳಿದೆನೆಂದು ತಿಳಿಸಿ ಬಾ.

**ನಲಗಾಮ :** (ಮತ್ತೆ ಶತಪಥಿಸುವುದನ್ನು ಮುಂದುವರೆಸುತ್ತಾನೆ) (ಸ್ವಗತ) ಎಂತಹ ಸಂದಿಗ್ಧ! ತಮ್ಮಂದಿರು ಅಪರಾಧಿಗಳೆಂದರೆ ಅವರನ್ನು ಶಿಕ್ಷಿಸಲೇ ಬೇಕು. ಆದರೆ ನನ್ನ ದೊಡ್ಡಮ್ಮನಿಗೆ ಏನೆಂದು ಹೇಳಿ ಸಮಾಧಾನಗೊಳಿಸಲಿ? ಮಲಸೋದರರೆಂಬ ಭಾವನೆಯಿಂದ ಉದ್ದೇಶ ಪೂರ್ವಕವಾಗಿಯೇ ಈ ಕೆಲಸ ಮಾಡಿದೆನೆಂದು ಭಾವಿಸುತ್ತಾಳೆ. ಶಿಕ್ಷಿಸದೆ ಬಿಟ್ಟಲ್ಲಿ ಪ್ರಜೆಗಳು ಬಂಡೇಳುತ್ತಾರೆ. ಹೀಗಿರುವಾಗ ನಾನೇನು ಮಾಡಲಿ? (ಅಷ್ಟರಲ್ಲಿ ಬ್ರಮ್ಮಣ್ಣ ಪ್ರವೇಶ. ಪ್ರವೇಶಿಸುತ್ತಿದ್ದಂತೆ ನಲಗಾಮನಿಗೆ ಗೌರವ ಸೂಚಿಸುತ್ತಾನೆ)

**ಬ್ರಮ್ಮಣ್ಣ :** ಪ್ರಭು ನನ್ನನ್ನೇಕೆ ಇಷ್ಟು ಅವಸರದಲ್ಲಿ ಬರಹೇಳಿದಿರಿ?

**ನಲಗಾಮ :** ಬ್ರಮ್ಮಣ್ಣ ಮಂತ್ರಿಗಳೆ ನಿನ್ನೆಯ ಹಗರಣವನ್ನು ನೀವು ನೋಡಿದಿರಲ್ಲ! ನಿಮಗೇನನಿಸುತ್ತಿದೆ? ನಮ್ಮ ತಮ್ಮಂದಿರು ಇಂತಹ ಕೆಲಸಕ್ಕೆ ಕೈ ಹಚ್ಚಿದರೇಕೆ? ನಿಮ್ಮ ಪ್ರೀತಿಯ ಮಡಿಲಲ್ಲಿ, ನಿಮ್ಮ ಮಾರ್ಗದರ್ಶನದಲ್ಲಿ ಬೆಳೆದವರು ಹೀಗೆ ಮಾಡಬಹುದೇ? ಅವರಿಗೆ ನಾನೇನು ಕಡಿಮೆ ಮಾಡಿದ್ದೇನೆ? ಬಡ ಪ್ರಜೆಗಳನ್ನು ಲೂಟಿ ಹೊಡೆದು ಹಣಗಳಿಸಿಕೊಳ್ಳಬೇಕೇಕೆ!

**ಬ್ರಮ್ಮಣ್ಣ :** ಪ್ರಭು ನೀವು ವೃಥಾ ಉದ್ವಿಗ್ನರಾಗುತ್ತಿದ್ದೀರಿ ಎಂದು ನನ್ನ ಭಾವನೆ. ನಿಮ್ಮೆದುರಿಗೆ ಕಾಣಿಸಿಕೊಂಡಷ್ಟು ಸಮಸ್ಯೆ ಗಂಭೀರವಾದುದೇನೂ ಇಲ್ಲ. ನಿಮಗೆ ಕೇಳಿಸಿದ್ದು, ಕಾಣಿಸಿದ್ದು ಕೇವಲ ಕಟ್ಟು ಕತೆ!

**ನಲಗಾಮ :** (ಆಶ್ಚರ್ಯ ಚಕಿತನಾಗಿ) ನೀವೇನು ಹೇಳುತ್ತಿದ್ದೀರಿ ಮಂತ್ರಿಗಳೇ! ಇದು ನಿಜವಾಗಿಯೂ ಕಟ್ಟು ಕತೆಯಾಗಿದ್ದರೆ ಪ್ರಜೆಗಳೆಲ್ಲರೂ ಏಕಕಾಲಕ್ಕೆ ಬಂದೇಕೆ ಮುತ್ತಿಗೆ ಹಾಕುತ್ತಿದ್ದರು?

**ಬ್ರಮ್ಮಣ್ಣ :** ಈ ಎಲ್ಲ ನಾಟಕದ ಹಿನ್ನೆಲೆಯಲ್ಲಿ ಒಂದು ಹೆಣ್ಣಿನ ಕೈವಾಡವಿದೆ. ಇದೆಲ್ಲವನ್ನು ಏಕೆ ಮಾಡಿಸುತ್ತಾರೆ ಎಂಬುದು ನನಗೂ ಸ್ಪಷ್ಟವಿಲ್ಲ..... ಆದರೆ ಒಂದು ನೀವಂದುಕೊಂಡ ಹಾಗೆ ನಿಮ್ಮ ತಮ್ಮಂದಿರು ಅಪರಾಧಿಗಳಲ್ಲ. ಬಡಪಾಯಿಗಳು..... ಏನೂ ತಿಳಿಯದ ಮುಗ್ಧರು. ಇನ್ನೂ ಹೇಳಬೇಕೆಂದರೆ ದುರಾಕ್ರಮಣ ಮಾಡಿದ ಮುಖವಾಡದ ವೀರರನ್ನು ಹೊಡೆದೋಡಿಸಿದ್ದು ಅವರು! ಖುದ್ದಾಗಿ ನನ್ನ ಮಡದಿ ಅದೆಲ್ಲವನ್ನೂ ಪ್ರತ್ಯಕ್ಷವಾಗಿ ಕಂಡಿದ್ದಾಳೆ. ರಕ್ಷಿಸಿದ ಹೆಣ್ಣನ್ನು ಮನೆತನಕ ಮುಟ್ಟಿಸಲು ಪ್ರಯತ್ನಿಸಿದಾಗ ಆಕೆಯೇ ಅದನ್ನು ನಿರಾಕರಿಸಿ, ಆಕ್ರಮಣಕಾರರು ಓಡಿದ ದಿಕ್ಕಿನ ಕಡೆಗೇ ಓಡಿದಳಂತೆ! ನನ್ನಾಕೆಯನ್ನು ಮನೆಯವರೆಗೆ ತಲುಪಿಸಿದ್ದೂ ಅವರೇ ಪ್ರಭು!

**ನಲಗಾಮ :** ನಂಬುವುದಕ್ಕೇ ಆಗುತ್ತಿಲ್ಲವಲ್ಲ ಮಂತ್ರಿಗಳೇ ಇಂತಹ ನಾಟಕವಾಡಿಸುವ ಅಗತ್ಯವಾದರೂ ಯಾಕಿರಬಾರದು?

ಬ್ರಹ್ಮಣ್ಣ : ಪ್ರಭು ಕೆಲವು ಸ್ವಾರ್ಥಪರ ವ್ಯಕ್ತಿಗಳು ನಿಮ್ಮ ಕೋಟೆಗಟ್ಟಿದ್ದಾರೆ. ಎಷ್ಟು ಚಾಣಾಕ್ಷತನದಿಂದ ರಾಜಕೀಯ ಸೂತ್ರಗಳನ್ನು ಹಿಡಿದಾಡಿಸುತ್ತಿದ್ದಾರೆಂದರೆ ನಿಮಗೂ ಕೂಡಾ ತಿಳಿಯುವುದಿಲ್ಲ......ನಿಮಗೆ ಅರ್ಥವಾಗುವುದಿಲ್ಲ ಪ್ರಭು. ಕಾಳಸರ್ಪವನ್ನೇ ಕೊರಳಿಗೆ ಕಟ್ಟಿಕೊಂಡು ಭೀತಿ ತಲ್ಲಣಗಳಿಗೆ ಮೂಲವನ್ನು ಬೇರೆಲ್ಲೋ ಹುಡುಕುತ್ತಿದ್ದೀರಿ.....ಇಷ್ಟೇ ಅಲ್ಲ ಪ್ರಭು ಈ ನಿರಪರಾಧಿ ಮಕ್ಕಳ ಪ್ರಾಣಕ್ಕೇ ಅಪಾಯಕಾದಿದೆ. ಆದರೆ ಅವರನ್ನು ಆಪತ್ತಿನಿಂದ ತಪ್ಪಿಸಿ ಸುರಕ್ಷಿತವಾಗಿ ಕಾಪಾಡಬೇಕಾದ ಜವಾಬ್ದಾರಿ ನನ್ನ ಮೇಲಿದೆ. ಹಿರಿಯ ಪ್ರಭುಗಳು, ತಮ್ಮ ತಂದೆಯವರು ನನ್ನ ಮೇಲೆ ಭರವಸೆ ಇಟ್ಟು ಈ ಜವಾಬ್ದಾರಿಯನ್ನು ಒಪ್ಪಿಸಿದ್ದಾರೆ. ಅದಕ್ಕಾಗಿ ನಾನು ನನ್ನ ಪ್ರಾಣವನ್ನೇ ಪಣವಾಗಿಟ್ಟಾದರೂ ಸರಿಯೆ ನಿಜವಾದ ಅಪರಾಧಿಗಳನ್ನು ನಿಮ್ಮ ಮುಂದೆ ತಂದು ನಿಲ್ಲಿಸುತ್ತೇನೆ.

**ನಲಗಾಮ :** ಆ ಕೆಲಸವನ್ನು ಬೇಗ ಮಾಡಿ.

ಬ್ರಹ್ಮಣ್ಣ : ಪ್ರಭು ನಾನೊಂದು ವಿವೇಕದ ಮಾತು ಹೇಳುತ್ತೇನೆ. ಹಿರಿಯನಾದ ನನ್ನ ಮಾತಿಗೆ ಬೆಲೆ ಕೊಡುತ್ತೇನೆಂದರೆ, ಒಂದು ಎಚ್ಚರಿಕೆ! ಆ ನಾಯಕಿ ನಾಗಮ್ಮನ ವಿಚಾರದಲ್ಲಿ ಜಾಗರೂಕರಾಗಿರಿ. ಸ್ವಾರ್ಥ ಪ್ರತಿಷ್ಠೆ, ಅಧಿಕಾರಕ್ಕಾಗಿ ಏನನ್ನೂ ಮಾಡಲು ಹೇಸುವುದಿಲ್ಲ. ಗಂಡು ಸಂತಾನವಿಲ್ಲದ ತಮ್ಮ ರಾಜ್ಯ ನರಸಿಂಹನಿಗೇ ಕೊಡಿಸುವ ಹುನ್ನಾರದಲ್ಲಿ ಎಷ್ಟು ಮಂದಿಯ ಪ್ರಾಣಗಳು ಹೋಗುತ್ತವೆಯೋ, ಎಷ್ಟೊಂದು ರಕ್ತಪಾತವಾಗುವುದೋ ಹೇಳಲಿಕ್ಕೆ ಬರುವುದಿಲ್ಲ. ನೀವು ಮಾತ್ರ ನಿಮ್ಮ ಎಚ್ಚರಿಕೆಯಲ್ಲಿರಿ.

**ನಲಗಾಮ :** ಏನದು ಮಂತ್ರಿಗಳೇ.... ಎಲ್ಲ ಹೊಸ ಹೊಸ ಸಂಗತಿಗಳು ಕೇಳಿ ಬರುತ್ತಿವೆ!....... ನಮ್ಮ ತಂದೆಯವರು ನಮ್ಮೆಲ್ಲರನ್ನೂ ನಿಮಗೆ ಒಪ್ಪಿಸಿರುವುದು ಸರಿಯಷ್ಟೆ! ನಮಗೇಕೆ ನೀವು ಆಗಾಗ ಈ ಬಗೆಯ ಎಚ್ಚರಿಕೆಗಳನ್ನು ನೀಡದೆ ಹೋದಿರಿ. ನಾವು ಯಾರಿಗೂ ಅನ್ಯಾಯ ಮಾಡುವವರಲ್ಲ. ಮಲ ಸೋದರರನ್ನು ನಾನೆಂದೂ ಮಲಸೋದರ ಭಾವನೆಯಿಂದ ನೋಡಲಿಲ್ಲ. ನರಸಿಂಹನೆ ರಾಜ್ಯವನ್ನು ಬಯಸುವುದಾದರೆ ಅವನೇ ಆಳಲಿ. ನಾವೆಲ್ಲಿಯಾದರೂ ದೇಶಾಂತರ ಹೋಗಿ ಬದುಕುತ್ತೇವೆ...... ಅದಕ್ಕಾಗಿ ಈ ಪಿತೂರಿ..... ನಾಟಕ ಇವೆಲ್ಲ ಯಾಕೆ ಬೇಕು?

ಬ್ರಹ್ಮಣ್ಣ : ಅಧಿಕಾರ ದಾಹ ಇಲ್ಲದ ಅನುಮಾನಗಳನ್ನು ಹುಟ್ಟು ಹಾಕುತ್ತದೆ...... ತಮ್ಮ ಆಶಯಗಳಿಗೆ ತೊಡರುಂಟಾಗಬಹುದು ಎಂದು ಭಾವಿಸುವ

ಮನಸ್ಸುಗಳಿಗೆ ಸ್ನೇಹ, ಪ್ರೀತಿ, ವಾತ್ಸಲ್ಯ, ಬಂಧುತ್ವ ಇತ್ಯಾದಿಗಳೊಂದೂ ಪರಿಗಣನೆಗೆ ಬರುವುದಿಲ್ಲ. ಸ್ವಾರ್ಥ ಪ್ರತಿಷ್ಠೆಗಳಿಗಾಗಿ ಸ್ವಜನರನ್ನೂ ಆಹುತಿ ತೆಗೆದುಕೊಳ್ಳುವುದು ರಾಜಕೀಯದಲ್ಲಿ ಹೊಸತೇನಲ್ಲ..... ಜೊತೆಯಲ್ಲಿಯೇ ತಮ್ಮ ಪ್ರತಿಸ್ಪರ್ಧಿ, ಎದುರಾಳಿಯೆಂದು ಭಾವಿಸುವವರು ಅವರ ವರ್ಚಸ್ಸು, ಏಳಿಗೆಯನ್ನು ಎಂದೂ ಸಹಿಸಲಾರರು. ರಾಜಾನುಗ್ರಹದಿಂದ, ರಾಜನ ವಿಶ್ವಾಸದಿಂದ ತಪ್ಪಿಸುವುದಕ್ಕೆ ಬಗೆ ಬಗೆಯ ಕುತಂತ್ರದ ಕಸರತ್ತುಗಳನ್ನು ಮಾಡುತ್ತಾರೆ.... ನನ್ನ ಅನೇಕ ವರ್ಷಗಳ ಅನುಭವದಿಂದ ಈ ಮಾತನ್ನು ಹೇಳುತ್ತಿದ್ದೇನೆ. ವ್ಯಕ್ತಿಯೊಬ್ಬನ ದುರಭಿಮಾನದ ಖಡ್ಗಕ್ಕೆ ಬಲಿಯಾಗುವ ಬಡಪಾಯಿಗಳನ್ನು ತಪ್ಪಿಸಲೇ ಬೇಕು ಪ್ರಭು. ತಪ್ಪಿಸಲೇಬೇಕು.

**ನಲಗಾಮ :** ನಿಮ್ಮ ಉದ್ದೇಶ ಯಾರ ಕಡೆಗಿದೆಯೆಂಬುದು ನಮಗೆ ತಿಳಿಯುತ್ತಿದೆ. ನಾವು ನಮ್ಮ ತಂದೆಯವರ ವಚನಕ್ಕೆ ಬದ್ಧರಾಗಿದ್ದೇವೆ. ಅಲ್ಲದೆ ಅವರಿಂದ ನಾಡಿಗೆ ಸಾಕಷ್ಟು ಪ್ರಯೋಜನವಾಗಿದೆ. ಅವರ ಪ್ರತಿಭೆ, ಜಾಣ್ತನಗಳು, ಅಮೂಲ್ಯವಾದ ಸಲಹೆ ಸೂಚನೆಗಳಿಂದ ನಾವು ಮುಗ್ಧರಾಗಿದ್ದೇವೆ. ಕಾರ್ಯ ಪ್ರವೇಶವಾಗುತ್ತಿದ್ದಂತೆಯೇ ರಾಜ ಬೊಕ್ಕಸಕ್ಕೆ ಅಪಾರ ಹಣ ಸಂಪತ್ತು ಸಂದಾಯವಾಯಿತು. ಪ್ರಜಾಕಲ್ಯಾಣಕಾರಿ ಯೋಜನೆಗಳು ನಿರೀಕ್ಷೆಗಿಂತ ಮೀರಿದ ಫಲ ನೀಡಿದೆ. ಎಂತಹ ಕ್ಲಿಷ್ಟ ಸಮಸ್ಯೆಗಳನ್ನೂ ಸುನಾಯಾಸವಾಗಿ ಪರಿಹರಿಸಬಲ್ಲ ಸಾಮರ್ಥ್ಯಕ್ಕೆ ಮಾರು ಹೋಗಿದ್ದೇವೆ...... ಹೀಗಿರುವಾಗ ಅವರ ವಿಚಾರದಲ್ಲಿ ಇಲ್ಲ ಸಲ್ಲದ್ದನ್ನು ಊಹಿಸಿಕೊಳ್ಳುವುದು ನಮ್ಮ ಯೋಗ್ಯತೆಗೇ ಭಂಗ ತಂದುಕೊಂಡಂತೆ!

**ಬ್ರಹ್ಮಣ್ಣ :** ಪ್ರಭು ನಿಮಗೆ ಅರ್ಥವಾಗುವುದಿಲ್ಲ. ನೀವು ಯಾರೆಂದು ಊಹಿಸಿದ ಮೇಲೆ ಮುಚ್ಚು ಮರೆಯೇಕೆ? ಆಕೆಯು ಮಾಂತ್ರಿಕ ಮೋಡಿಗೆ ಮರುಳಾಗಿದ್ದೀರಿ. ನಯವಂಚನೆಯ ಪರಿಣಾಮದ ಭೀಕರತೆ ಈಗ ನಿಮಗೆ ಅರಿವಾಗುವುದಿಲ್ಲ. ನಾಗಮ್ಮ ರೇಶಿಮೆಯ ನೂಲೆಳೆಯಿಂದಲೇ ನೇಣು ಹಾಕುವ ಜಾತಿ. ನಮ್ಮ ಏಳಿಗೆಯನ್ನು ಸಹಿಸಲಾಗದೆ ನಮ್ಮ ವಿರುದ್ಧವಾಗಿ ನಿಮ್ಮ ಮನಸ್ಸನ್ನು ಕೆಡಿಸುವ ಪ್ರಯತ್ನದಲ್ಲಿ ಸಾಕಷ್ಟು ಯಶಸ್ವಿಯಾಗಿದ್ದಾಳೆಂದೇ ನಮಗನಿಸುತ್ತಿದೆ. ಜಾತಿ, ಕುಲ, ಗೋತ್ರಗಳಿಲ್ಲದ ಅನಾಥಳು, ಹೆತ್ತವರನ್ನೂ, ಹೊತ್ತು ಸಾಕಿ ಸಲಹಿದವರನ್ನೂ ಕಟ್ಟಿಕೊಂಡ ಗಂಡನನ್ನೂ, ಗಂಡನ ಮನೆಯವರನ್ನೂ ನುಂಗಿ ನೊಣೆದ ನತದೃಷ್ಟ ಜಾತಕ ಹೆಣ್ಣು ಆಕೆ... ಜೀವನದಲ್ಲಿ ಕಳೆದುಕೊಂಡದ್ದೆಲ್ಲವನ್ನೂ ಹೀಗೆ ಇಲ್ಲಿ ಒಳನುಗ್ಗಿ ಅಧಿಕಾರ ಗಿಟ್ಟಿಸಿಕೊಂಡು.... ವ್ಯತಿರೇಕಿಸಿದವರನ್ನು ನಿರ್ದಯವಾಗಿ.......

**ನಲಗಾಮ :** ಮಂತ್ರಿಗಳೇ ನಿಮ್ಮ ಮಾತಿನಿಂದ ನೀವೇ ಆಕೆಯ ಹಗೆತನವನ್ನು ಗಳಿಸಿಕೊಂಡಿರೇನೋ ಎನಿಸುತ್ತಿದೆ. ಅವಳ ಜಾತಿ, ಕುಲಗಳ ಬಗ್ಗೆ ನಮಗೇನಾಗಬೇಕಿದೆ? ನಿಮ್ಮಿಬ್ಬರ ವೈಯಕ್ತಿಕ ಸೆಣಸಾಟಕ್ಕೆ ಈ ನಾಡನ್ನು ಚದುರಂಗವಾಗಿ ಬಳಸಿಕೊಳ್ಳಬೇಡಿ.

**ಬ್ರಹ್ಮಣ್ಣ :** ಕ್ಷಮಿಸಿ ಪ್ರಭು. ಹಿರಿಯನೆಂದು ನಾನು ನನ್ನ ಮನಬಿಚ್ಚಿ ಮಾತನಾಡಿ. ನಿಮ್ಮ ಮತ್ತು ರಾಷ್ಟ್ರದ ಹಿತದ ದೃಷ್ಟಿಯಿಂದ ಒಂದೆರಡು ಬುದ್ಧಿಯ ಮಾತುಗಳನ್ನು ಹೇಳಿದೆ. ನನಗಿಂತಲೂ ನಿಮಗೆ ಆಕೆಯಲ್ಲಿ ಹೆಚ್ಚಿನ ವಿಶ್ವಾಸ, ಭರವಸೆಗಳು ಇರುವಂತೆ ಕಾಣುತ್ತದೆ...... ನೀವು ಅಪ್ಪಣೆ ಕೊಡಿಸುವುದಾದರೆ ನಾನು ನಿಜವಾಗಿಯೂ ದೇಶಾಂತರ ಹೋಗುತ್ತೇನೆ.

**ನಲಗಾಮ :** ಬ್ರಹ್ಮಣ್ಣನವರೇ ನೀವು ಹಿರಿಯರು. ವಿವೇಕವಂತರು. ನನ್ನ ಮಾತುಗಳ ಅರ್ಥವನ್ನು ತಪ್ಪಾಗಿ ಗ್ರಹಿಸಿದಿರಿ. ನೀವು ಈ ರಾಜಕುಟುಂಬದ ಶ್ರೇಯೋಭಿಲಾಷಿಗಳು. ನನಗೆ ನೀವೂ ಬೇಕು. ಆಕೆಯೂ ಬೇಕು. ನಿಮ್ಮೆಲ್ಲರ ಮರ್ಗದರ್ಶನದಲ್ಲಿ ಈ ರಾಜ್ಯವನ್ನು ವಿಸ್ತರಿಸಿ ಬೆಳೆಸಬೇಕಾಗಿದೆ.... ಹೀಗೆ ನೀವು ದೇಶಾಂತರದ ಮಾತನ್ನಾಡಿ ಶಿಕ್ಷಿಸಬೇಡಿ..... ನಿಮ್ಮಿಂದ ಉಪಕಾರವಾಯಿತು..... ನನ್ನ ತಮ್ಮಂದಿರು ಅಪರಾಧಿಗಳಲ್ಲವೆಂದು ತಿಳಿದು ಸಂತೋಷವಾಯಿತು. ನಾಳಿನ ಸಭೆಯಲ್ಲಿ ಪ್ರಜೆಗಳ ಸಮಕ್ಷಮದಲ್ಲಿ ವಿಚಾರಣೆಯಾಗಲಿ. ನಿಜವಾದ ಅಪರಾಧಿಯನ್ನು ಬಹಿರಂಗಪಡಿಸುವಂತಾಗಲಿ.

**ಬ್ರಹ್ಮಣ್ಣ :** ಪ್ರಯತ್ನಿಸುತ್ತೇನೆ ಪ್ರಭು. ನನಗೆ ನಿಮ್ಮ ಮೇಲೆ ಈ ನಾಡಿನ ಮೇಲೆ ಇದ್ದ ಪ್ರೀತಿಯು ಇಷ್ಟೂ ದಿನ ಎಲ್ಲ ಅವಮಾನವನ್ನೂ, ಕುತಂತ್ರಗಳನ್ನೂ ಸಹಿಸಿಕೊಂಡು ಬದುಕಲು ಸಾಧ್ಯವಾದದ್ದು..... ಎಲ್ಲವೂ ನಮ್ಮ ಕೈಲೇನಿದೆ?.... ನಮ್ಮ ನಿರೀಕ್ಷೆಗಳು ಎಷ್ಟು ನಿಜವಾಗಬಹುದು, ಎಷ್ಟು ಸುಳ್ಳಾಗಬಹುದು, ಹೇಳುವವರಾರು?..... ಆದರೂ ಪ್ರಯತ್ನಿಸುತ್ತೇನೆ."...... (ಎದ್ದು) ನನಗಿನ್ನು ಅಪ್ಪಣೆ ಕೊಡಿ ಪ್ರಭು.... ಮತ್ತೊಮ್ಮೆ ಆ ಮಕ್ಕಳನ್ನು ಮಾತನಾಡಿಸಿ ವಿಷಯಗಳನ್ನು ಹೊರಡಿಸುತ್ತೇನೆ..... (ಹೋಗುತ್ತಾ) ನಾನಿನ್ನು ಬರುತ್ತೇನೆ. ನೀವು ನಿಶ್ಚಿಂತೆಯಿಂದ ಇರಿ. (ಹೋಗುವನು)

ಂಂ

# ದೃಶ್ಯ – ೪

(ವೀರ ವಿದ್ಯಾದೇವಿಯ ಅಂತಃಪುರ. ಎದುರು ಬದುರಾದ ಆಸನಗಳ ಮೇಲೆ ವೀರ ವಿದ್ಯಾದೇವಿ ಮತ್ತು ಬ್ರಹ್ಮಣ್ಣ ಮಂತ್ರಿಗಳು ಕುಳಿತಿದ್ದಾರೆ. ಗಂಭೀರವಾದ ಆಲೋಚನೆ ಯಲ್ಲಿ ತೊಡಗಿರುವಂತೆ ಕಾಣಿಸುತ್ತಿದೆ. ಇಬ್ಬರ ನಡುವೆಯೂ ಸ್ವಲ್ಪ ಹೊತ್ತು ಮೌನ ವಾತಾವರಣ. ವೀರ ವಿದ್ಯಾದೇವಿ ಒಂದು ದೀರ್ಘ ನಿಟ್ಟುಸಿರೆಳೆದು ಬ್ರಹ್ಮಣ್ಣನೆಡೆಗೆ ನೋಡುತ್ತಾಳೆ)

ಬ್ರಹ್ಮಣ್ಣ : ತಾಯಿ ಈ ಒಂದು ಸಣ್ಣ ವಿಷಯಕ್ಕಾಗಿ ಇಷ್ಟೊಂದು ಮನಸ್ಸನ್ನು ನೋಯಿಸಿಕೊಳ್ಳಬೇಕಾದ ಅಗತ್ಯವಿಲ್ಲ. ಕ್ರಮೇಣ ಎಲ್ಲವೂ ಸರಿ ಹೋಗುತ್ತದೆ. ನೀವು ನಿಶ್ಚಿಂತೆಯಿಂದ ಇರಿ. ನಿಮ್ಮ ಮಕ್ಕಳಿಗೆ ಯಾವ ತೊಂದರೆಯೂ ಆಗುವುದಿಲ್ಲ.

ವೀರವಿದ್ಯಾದೇವಿ: ಬ್ರಹ್ಮಣ್ಣ ಮಂತ್ರಿಗಳೇ ಇಲ್ಲಿನ ಪರಿಸ್ಥಿತಿಗಳು ಏನಾಗಿವೆ ಎಂಬುದು ನಿಮಗೆ ಗೊತ್ತಿದ್ದೂ ಹುಸಿ ಸಮಾಧಾನಗಳನ್ನು ಹೇಳುತ್ತಿದ್ದೀರಿ. ಇವತ್ತು ನನ್ನ ಮಕ್ಕಳನ್ನು ಅಪರಾಧಿಗಳಾಗಿ ಮಾಡಿ ನಿಲ್ಲಿಸಿದ್ದಾರೆ. ನಾಳೆ ಅವರ ಪ್ರಾಣಕ್ಕೇ ಸಂಚಕಾರ ಬರಬಹುದು. ಕ್ಷಣಕ್ಷಣವೂ ನನ್ನ, ಮಕ್ಕಳ ಭವಿಷ್ಯದ ಚಿಂತೆ ನನ್ನನ್ನು ದಹಿಸಿ ಹಾಕುತ್ತಿದೆ. ಪ್ರಭುಗಳಿಲ್ಲದ ನಾವು ಅನಾಥರಾಗಿದ್ದೇವೆ. ರಾಜ್ಯಾಧಿಕಾರ, ಆಸ್ತಿಯ ಹಕ್ಕು ನಮಗೂ ಇರುವಾಗ ಅವರು ನೀಡುವ ಮಾಶಾಸನದ ದಯಾಭಿಕ್ಷೆಗೆ ಕೈ ಚಾಚಿಕೊಂಡು ನಿಂತಿರಬೇಕು. ಕೊಡಬಹುದಾದ ಅದನ್ನು ಕೊಡುವುದಕ್ಕೂ ಹಿಂದು ಮುಂದು ನೋಡುತ್ತಾರೆ. ನೀವೆಲ್ಲ ಇದ್ದು ಆ ನಾಗಿಣಿಯ ವರ್ಚಸ್ಸಿಗೆ ಒಳಗಾಗಿ ಅವಳ ಕೈ ಗೊಂಬೆಗಳಾಗಿ ಬಿಟ್ಟಿದ್ದಾರೆ ಈಗಿನ ಪ್ರಭುಗಳು. ದಿನದಿನವೂ ಹೊಸ ಹೊಸ ನಿರ್ಬಂಧಗಳು, ನಿಯಮಗಳು. ಎಲ್ಲಿ ನೋಡಿದರೂ ಅವಳದೇ ಮಾತು ಅವಳದೇ ಅಧಿಕಾರ. ಈ ರಾಜ್ಯಕ್ಕೆ ಪ್ರಭುಗಳು ನಲಗಾಮರೋ. ನಾಗಮ್ಮನೋ ಎಂದು ಒಮ್ಮೊಮ್ಮೆ

ಅನುಮಾನ ಬರುತ್ತದೆ. ದಿನ ದಿನದ ಷಡ್ಯಂತ್ರಗಳ ಸುಳಿಯಲ್ಲಿ ಸಿಕ್ಕು ನಲುಗಿ ಹೋಗುತ್ತಿದ್ದೇವೆ. ಅನೋನ್ಯವಾಗಿದ್ದ ನಮ್ಮ ಮೂವರು ಸವತಿಯರ ನಡುವೆ ಇಲ್ಲಸಲ್ಲದ ತಪ್ಪು ಭಾವನೆಗಳನ್ನು ಹುಟ್ಟು ಹಾಕಿ ಒಬ್ಬರ ನೆರಳು ಕಂಡರೆ ಮತ್ತೊಬ್ಬರಿಗೆ ಆಗದಂತೆ ಮಾಡಿ ಕೂತಿದ್ದಾಳೆ. ಆ ಮಹಾತಾಯಿ!

ಬ್ರಹ್ಮಣ್ಣ : ಅಮ್ಮ ಅವಳ ವಿಚಾರವೆಲ್ಲ ನನಗೂ ಗೊತ್ತು. ಈ ನಾಡಿನ ವಿನಾಶಕ್ಕೆಂದೇ ಬಂದ ಮಹಾಮಾರಿಯಂತೆ ಒಳ ಹೊಕ್ಕು ಕುಳಿತಿದ್ದಾಳೆ. ದೊಡ್ಡವರು, ತಿಳಿದವರು ಎನ್ನುವ ಗೌರವವಿಲ್ಲ. ಎಲ್ಲವೂ ತಾನೇ ತಾನೆಂದು ಮೆರೆಯುತ್ತಿದ್ದಾಳೆ. ವಯಸ್ಸು, ಸೌಂದರ್ಯ, ಚಾಣಾಕ್ಷತೆಗಳಿಂದ ನಲಗಾಮ, ನರಸಿಂಹರಿಬ್ಬರನ್ನೂ ಸಂಪೂರ್ಣವಾಗಿ ತನ್ನ ವಶಮಾಡಿಕೊಂಡಿದ್ದಾಳೆ. ಅವಳ ಮಾತಿಗೆ ಎದುರಿಲ್ಲ. ಅವಳ ಸಲಹೆಗೆ ತಿರುಹಿಲ್ಲ. ಅಲಗುರಾಜರು ಆಕೆಗೆ ಎಂದೋ ಕೊಟ್ಟ ಮಾತು ಇಂದು ನಮಗೆಲ್ಲ ಮುಳುವಾಗಿ ಪರಿಣಮಿಸಿದೆ. ನನಗೂ ಸಾಕಾಗಿ ಹೋಗಿದೆ ತಾಯಿ. ಈ ನಾಡಿಗಾಗಿ ಪ್ರಭುಗಳಿಗಾಗಿ ನಾವು ಮಾಡಿದ ಸೇವೆ, ಇಟ್ಟ ಭಕ್ತಿ ಯಾವುದೂ ಪರಿಗಣನೆಗೆ ಇಲ್ಲದಂತಾಗಿದೆ. ನನ್ನ ವಿಚಾರವಾಗಿಯೂ ನಲಗಾಮರ ಮನಸ್ಸನ್ನು ಕೆಡಿಸಿದ್ದಾಳೆ. ಮೇಲು ನೋಟಕ್ಕೆ ನಲಗಾಮರು ನನ್ನ ಬಗ್ಗೆ ಗೌರವ ತೋರಿದರೂ ನಡೆಯುವುದು ಅವಳ ಮಾತಿನಂತೆ! ಅವಳು ಬರಿ ಹೆಣ್ಣಲ್ಲ, ವಿಷಕನ್ಯೆ. ಅವಳ ಮೈ ಮನಸ್ಸೆಲ್ಲವೂ ವಿಷಪೂರಿತ. ರಾಜ ಕುಟುಂಬವನ್ನು ಬಲಿ ತೆಗೆದುಕೊಳ್ಳದೆ ಬಿಡುವುದಿಲ್ಲ.... ಮಲಿದೇವಾದಿ ಕುಮಾರರ ಜವಾಬ್ದಾರಿ ನನ್ನ ಮೇಲೆ ಇಲ್ಲದಿದ್ದ ಪಕ್ಷದಲ್ಲಿ ನಾನೆಂದೋ ರಾಜಕೀಯ ಸಂನ್ಯಾಸ ತೆಗೆದುಕೊಂಡು ಬಿಡುತ್ತಿದ್ದೆ.

ವೀರವಿದ್ಯಾದೇವಿ: ಬ್ರಹ್ಮಣ್ಣನವರೇ ಇಂತಹ ಆಪತ್ಕಾಲದಲ್ಲಿ ನಮಗಿರುವುದು ನೀವೊಬ್ಬರೇ. ನಿಮ್ಮ ಭರವಸೆಯ ಮೇಲೆ ನಾವು ಬದುಕಿದ್ದೇವೆ. ನೀವೇ ಹೀಗಾದರೆ ನಮಗ್ಯಾರು. ಈ ಕಾಳ ಸರ್ಪಿಣಿಯ ಕಪಿ ಮುಷ್ಟಿಯಿಂದ ನಮಗೆ ಬಿಡುಗಡೆಯೇ ಇಲ್ಲವೇ? ಬ್ರಹ್ಮಣ್ಣವರೇ ಈ ವಿಚಾರದಲ್ಲಿ ನೀವು ಗಂಭೀರವಾಗಿ ಯೋಚಿಸಬೇಕು.... ಇನ್ನು ನಮಗೆ ಈ ಅರಮನೆಯ ಸೆರೆಮನೆ ಸಾಕು. ಈ ರಾಜ್ಯದಲ್ಲಿ ನಮಗೂ ಪಾಲುಕೊಡುವಂತೆ ನೀವು ಒತ್ತಾಯಿಸಬೇಕು. ನಮ್ಮ ಪಾಲು ತೆಗೆದುಕೊಂಡು ಎಲ್ಲಿಯೋ ಒಂದು ಕಡೆ ದೂರದಲ್ಲಿ ನೆಮ್ಮದಿಯಾಗಿ ಬಾಳುತ್ತೇವೆ.

ಬ್ರಹ್ಮಣ್ಣ : ಅಮ್ಮ ನಿಮಗಿಂತ ಮೊದಲೇ ನನಗೂ ಈ ಆಲೋಚನೆ ಬಂತು. ಆದರೆ ಆ ದುಷ್ಟ ಹೆಣ್ಣು ಇದಕ್ಕೆ ಅವಕಾಶ ಕೊಡುವುದಿಲ್ಲ. ಶಕುನಿಯಂತೆ ಸೇರಿಕೊಂಡು ಅವರ ಹಿತೈಷಿಯಂತೆಯೇ ಕಾಣಿಸಿಕೊಳ್ಳುತ್ತಾ ಅವರ ಕಾಲಡಿಯಲ್ಲಿಯೇ ಅವರ ಸಮಾಧಿಗಳನ್ನು ಅಗೆಯುತ್ತಿದ್ದರೂ ಅವರ ಅರಿವಿಗೆ ಬರುತ್ತಿಲ್ಲ. ನಾನೆಷ್ಟೇ ಪ್ರಯತ್ನಪಟ್ಟರೂ ನನ್ನ ಮಾತಿನಲ್ಲಿ ಅವರಿಗೆ ನಂಬಿಕೆಯಿಲ್ಲ. ಬದಲಾಗಿ ಅಪ್ರಿಯವೆನಿಸುತ್ತಿದೆ. ನಿಮ್ಮ ಮಕ್ಕಳ ಹಿತದೃಷ್ಟಿಯಿಂದ ನಾನೂ ಇದೇ ಬೇಡಿಕೆಯನ್ನು ಮುಂದಿಟ್ಟೆನೆಂದರೆ, ಅದನ್ನು ನನ್ನ ಸ್ವಲಾಭಕ್ಕೆಂದೇ ತೀರ್ಮಾನಿಸಿ ಬಿಡುತ್ತಾರೆ. ಅಲ್ಲದೇ ಮಲಿದೇವ ಸೋದರರನ್ನು ಬೇಕಾದರೆ ವಂಚನೆಯಿಂದ ಕೊಲ್ಲಿಸಿ ಅದನ್ನೂ ಅಂದರೆ ಆ ಕೊಲೆಯನ್ನೂ ನನ್ನ ತಲೆಗೇ ಕಟ್ಟುತ್ತಾರೆ. ಆಗ ದವರ ಅಮೃತವನ್ನು ಕಾಲಕೂಟವಿಷವಾಗಿ ಸಾಧಿಸಿ ಸಾಬೀತುಪಡಿಸುತ್ತಾರೆ. ದುಷ್ಟರ, ದುರ್ಜನರ ರೀತಿಗಳನ್ನು ಊಹಿಸುವುದೇ ಬಹು ಕಷ್ಟ. ಆದ್ದರಿಂದ ನಾನು ಪ್ರಯತ್ನಿಸಿ ಪ್ರಸ್ತಾಪಿಸುವುದಕ್ಕೆ ಮೊದಲು ನೀವೇ ನಲಗಾಮ ಪ್ರಭುಗಳನ್ನು ತಾಯಿಯ ಅಧಿಕಾರದ ನೆಲೆಯಿಂದ ಮಾತನಾಡಿಸಿ ನೋಡಿ. ಅವರಿಂದ ಏನು ಪ್ರತಿಕ್ರಿಯೆ ಬಂದೀತು ಎಂಬುದನ್ನು ಗಮನಿಸಿ ಮುಂದಿನ ಹೆಜ್ಜೆಯ ಬಗ್ಗೆ ಚಿಂತಿಸೋಣ.

ವೀರವಿದ್ಯಾದೇವಿ: ನೀವು ಹೇಳುವುದೂ ಒಂದು ವಿಧದಲ್ಲಿ ಸರಿಯೇ. ನೇರವಾಗಿ ನಾವೇ ಇದಕ್ಕೆಲ್ಲ ಗುರಿಯಾಗಿರುವಾಗ, ಸಂತ್ರಸ್ತರಾಗಿರುವಾಗ, ನಾನೇ ಕೇಳಿ ನೋಡುತ್ತೇನೆ. ದೊಡ್ಡಮ್ಮ ಎನ್ನುವ ಪ್ರೀತಿ, ಅಭಿಮಾನಗಳು ಪ್ರಭುಗಳಿಗಿದ್ದರೆ, ಖಂಡಿತವಾಗಿಯೂ ನನ್ನ ಪ್ರಾರ್ಥನೆಯನ್ನು ನಿರಾಕರಿಸಲಾರರು..... ಬ್ರಹ್ಮಣ್ಣ.... ನಿಮ್ಮನ್ನೊಂದು ಮಾತು ಕೇಳಬಯಸುತ್ತೇನೆ.....

ಬ್ರಹ್ಮಣ್ಣ : ಕೇಳಿ ತಾಯಿ. ಸಂಕೋಚವಿಲ್ಲದೆ ಕೇಳಿ.

ವೀರವಿದ್ಯಾದೇವಿ: ನಿಮ್ಮ ಬಗ್ಗೆಯೂ ಜನರಲ್ಲಿ ಏನೇನೋ ವದಂತಿಗಳನ್ನು ಎಬ್ಬಿಸಿದ್ದಾರಂತೆ. ಹೌದೇನು?

ಬ್ರಹ್ಮಣ್ಣ : (ನಕ್ಕು) ಇದೆಲ್ಲವನ್ನೂ ನಾನು ನಿರೀಕ್ಷಿಸಿಯೇ ಇದ್ದೆ. ನೇರವಾಗಿ ಸಾಧಿಸಲಾಗದೆ ಹೋದರೆ ವಕ್ರ ದಾರಿಗಳನ್ನು ಬಳಸಿಕೊಳ್ಳುವುದು ಸಹಜವೇ ಅಲ್ವೇ?...... ಯಾವ ಬ್ರಹ್ಮನಾಯುಡು ಅನ್ಯ ರಾಜ್ಯಗಳ ಮೇಲೆ ದಾಳಿ ನಡೆಸಿ ಅಲ್ಲಿನ ಸಂಪತ್ತನ್ನು ಸೂರೆಗೊಂಡು ತಂದು ಈ ನಾಡಿನ ಬೊಕ್ಕಸಕ್ಕೆ ಸುರಿದು ಸಂಪನ್ನಗೊಳಿಸಿದನೋ, ಶ್ರೀಮಂತಗೊಳಿಸಿದನೋ

ಅದೇ ಬ್ರಹ್ಮಣ್ಣ ಮತ್ತು ಅವನ ಅನುಯಾಯಿಗಳನ್ನು ಈ ನಾಡಿನ ಕೊಳ್ಳೆಗಾರರೆಂದು ಬಿರುದು ಕೊಡಿಸಿ ಸನ್ಮಾನಿಸಿದ್ದಾಳೆ! ಅಸಹಾಯಕ ಪ್ರಜೆಗಳನ್ನು ಹಿಂಸಿಸಿ ಅವರ ಮನೆಗಳನ್ನು ಲೂಟಿ ಮಾಡಿ, ಬಲವಂತದಿಂದ ತೆರಿಗೆಗಳನ್ನು ಕಿತ್ತುಕೊಂಡು ನಲಗಾಮ ಪ್ರಭುಗಳ ಮುಂದೆ ಆ ಸಂಪತ್ತನ್ನು ರಾಶಿಯೊಡ್ಡಿ ನಮ್ಮಿಂದ ಸಂಗ್ರಹಿಸಿದ ರಾಜ ಬೊಕ್ಕಸದ ಕೊಳ್ಳೆ ಇದೆಂದು ತೋರಿಸಿ ಪ್ರಭುಗಳ ವಿಶ್ವಾಸವನ್ನು ಆತ್ಮೀಯತೆಯನ್ನು ಗೆದ್ದುಕೊಂಡಿದ್ದಾಳೆ. ತನ್ನವರಿಂದಲೇ ಜಂಗಮನ ಕೊಲೆ ಮಾಡಿಸಿ, ಅದು ನಮ್ಮಿಂದ, ನಮ್ಮ ವಿಷ್ಣು ಭಕ್ತರಿಂದ ಆದದ್ದೆಂದು ಪ್ರಚಾರ ಮಾಡಿದ್ದಾಳೆ.

**ವೀರವಿದ್ಯಾದೇವಿ:** ಇಷ್ಟೆಲ್ಲ ಆಗುವಾಗ ನೀವು ಸುಮ್ಮನೇಕೆ ಇದ್ದೀರಿ. ಪ್ರಭುಗಳ ಕಣ್ಣು ತೆರೆಸುವ ಪ್ರಯತ್ನ ಮಾಡಬಾರದೇ?

**ಬ್ರಹ್ಮಣ್ಣ :** ಅದಷ್ಟು ಸುಲಭವಲ್ಲ. ಆ ಹೆಣ್ಣು ಮಹಾಪ್ರಚಂಡ ಬುದ್ಧಿಯುಳ್ಳವಳು. ಯಾವಾಗ ಹೇಗೆ ಕಾಯಿಗಳನ್ನು ನಡೆಸುತ್ತಾಳೋ ತಿಳಿಯುವುದೇ ಇಲ್ಲ. ಮಂತ್ರಕ್ಕಿಂತಲೂ ಮುಂಚೆ ಪ್ರತಿ ಮಂತ್ರವನ್ನು ಊಹಿಸಿರುತ್ತಾಳೆ. ಅವಳ ಆ ಪ್ರಚಂಡ ಬುದ್ಧಿ ರಚನಾತ್ಮಕ ಯೋಜನೆಗಳಿಗೆ ವಿನಿಯೋಗವಾದರೆ ರಾಷ್ಟ್ರದ ಅಭ್ಯುದಯದಲ್ಲಿ ಸಂಶಯವೇ ಇರುವುದಿಲ್ಲ..... ಆದರೆ ದುರಾದೃಷ್ಟ! ಆ ಆಹೆಣ್ಣು ಯಾವ ಗಮ್ಯಕ್ಕಾಗಿ ಇಂತಹ ಸ್ವಾರ್ಥ ವಂಚನೆ, ದ್ರೋಹ, ಷಡ್ಯಂತ್ರಗಳ ಮೊರೆ ಹೋಗುತ್ತಿದ್ದಾಳೋ ನನಗಂತೂ ಅರ್ಥವಾಗಿಲ್ಲ.

**ವೀರವಿದ್ಯಾದೇವಿ:** ಇಂತಹವಳ ನೆರಳಿನಲ್ಲಿ ಬದುಕುವುದು ಹಾವಿನ ಹೆಡೆಯ ಕೆಳಗೆ ಬದುಕುವಷ್ಟೇ ಅಪಾಯಕಾರಿಯಾದುದು. ಅದಕ್ಕೆಂದೇ ನನಗೆ ಈ ರಾಜ್ಯ ಈ ರಾಜ ಈ ಜನ ಯಾವುದೂ ಬೇಡವೆನಿಸಿದೆ. ಅಸೂಯೆ, ಅಂತಃಕಲಹ, ಆತಂಕಗಳ ನಡುವೆ ಸಾಯುತ್ತ ಬದುಕುವುದಕ್ಕಿಂತ ಪ್ರಶಾಂತವಾಗಿ ಅಜ್ಞಾತವಾಗಿ ದೂರದಲ್ಲೆಲ್ಲೋ ಜೀವಿಸುವುದೇ ಶ್ರೇಯಸ್ಕರವಾಗಿದೆ. ಸದ್ಯಕ್ಕೆ ನನ್ನ ಮಕ್ಕಳ ಮೇಲೆ ತೂಗಾಡುತ್ತಿದ್ದ ಖಡ್ಗದ ಭೀತಿ ತಪ್ಪಿತು. ನಿಮ್ಮಿಂದ ಬಹಳ ಉಪಕಾರವಾಯಿತು. ನಮ್ಮ ಕುಮಾರ ಪ್ರಭುಗಳಿಗೆ ನನ್ನ ಮಕ್ಕಳು ನಿರಪರಾಧಿಗಳೆಂಬುದು ಮನದಟ್ಟಾಗಿದ್ದರೆ ಸಾಕು..... ಇತ್ತೀಚೆಗೆ ನರಸಿಂಹನ ಆರ್ಭಟ ಹೆಚ್ಚಾಗುತ್ತಿದೆ. ಅಧಿಕಾರದಲ್ಲಿರುವ ಅಣ್ಣನ ಬೆನ್ನು ಹತ್ತಿದ್ದಾನೆ.

**ಬ್ರಹ್ಮಣ್ಣ :** ಅಣ್ಣನ ಬೆನ್ನು ಹತ್ತಿರುವುದು ಮಾತ್ರವಲ್ಲ. ನಾಯಕಿ ನಾಗಮ್ಮನ ಅಂತರಂಗ ಸ್ನೇಹಿತನೂ ಆಗಿದ್ದಾನೆ. ನನ್ನ ಮಟ್ಟಿಗೆ ಹೇಳುವುದಾದರೆ, ನಲಗಾಮ ಪ್ರಭುಗಳೂ ಸುರಕ್ಷಿತರಲ್ಲವೇನೋ ಎನಿಸುತ್ತದೆ.

ವೀರವಿದ್ಯಾದೇವಿ: ಹಾಗಾದರೆ ಬ್ರಹ್ಮಣ್ಣನವರೇ ನಾಳೆಯೇ ನಲಗಾಮರನ್ನು ಕಂಡು ಮಾತನಾಡಿಸುತ್ತೇನೆ.

ದಾಸಿ : (ಪ್ರವೇಶಿಸಿ) ಮಹಾರಾಣಿಯವರು ಕ್ಷಮಿಸಬೇಕು.

ವೀರವಿದ್ಯಾದೇವಿ: ಏನು ರತ್ನ? ಏನಾಗಬೇಕಿದೆ? ನಾವಿಬ್ಬರೂ ಮಾತನಾಡುತ್ತಿರುವಾಗ ಬಂದು ತೊಂದರೆ ಕೊಡ ಬೇಡವೆಂದು ಹೇಳಿರಲಿಲ್ಲವೇ?.... ನಾನು ಕರೆಯುವಷ್ಟರಲ್ಲಿ ನಿನಗೇನಿತ್ತು ಅವಸರದ ಕೆಲಸ?

ದಾಸಿ : ಅಮ್ಮ ಪ್ರಭುಗಳು ತಮ್ಮನ್ನು ಕಾಣಲೇಬೇಕೆಂದು ಒತ್ತಾಯದಿಂದ ಹೇಳಿದರು. ಅದಕ್ಕಾಗಿ ಬರಲೇಬೇಕಾಯಿತು. ಕ್ಷಮಿಸಿ ತಾಯಿ..... ಅವರನ್ನು ಒಳಗೆ ಕಳಿಸಲೇನು?

ಬ್ರಹ್ಮಣ್ಣ : ನಾನಿನ್ನು ಬರುತ್ತೇನೆ. ತಾಯಿ ಮಕ್ಕಳ ಮಧ್ಯೆ ಆತ್ಮೀಯ ಮಾತುಕತೆ ನಡೆಯುವಾಗ ನಾನಿರುವುದು ಉಚಿತವಲ್ಲ. ಮುಕ್ತವಾಗಿ ಮನಬಿಚ್ಚಿ ಮಾತಾಡಬೇಕೆನ್ನುವ ಮನಸ್ಸಿಗೆ ಸಂಕೋಚವಾದೀತು.

ವೀರವಿದ್ಯಾದೇವಿ: ನಿಮಗೆ ತಿಳಿಯದ್ದೇನಿದೆ ಬ್ರಹ್ಮಣ್ಣನವರೇ. ನೀವೇನೂ ಬೇರೆಯಲ್ಲ. ಈ ಕುಟುಂಬದಲ್ಲಿ ಒಬ್ಬರು. ಆದ್ದರಿಂದ ನಮ್ಮ ಮಾತಿಗೆ ಯಾವ ಸಂಕೋಚವೂ ಇರುವುದಿಲ್ಲ.

ಬ್ರಹ್ಮಣ್ಣ : ನಿಮಗೆ ಸೂಕ್ಷ್ಮಗಳು ತಿಳಿಯದ್ದೇನೂ ಅಲ್ಲ. ಏಷ್ಟಾದರೂ ಈಗ ನಾನು ಪ್ರಭುಗಳ ದೃಷ್ಟಿಯಲ್ಲಿ ಸ್ವಲ್ಪ ದೂರವೇ..... ಅವರ ಮನಸ್ಸಿಗೆ ಬೇಸರ ತರಿಸುವುದು ನನ್ನ ಉದ್ದೇಶವಲ್ಲ....... ಆದ್ದರಿಂದ ನನಗೆ ಅಪ್ಪಣೆ ಕೊಡಿ.

ವೀರವಿದ್ಯಾದೇವಿ: ಸರಿ ನಿಮಗೆ ಹೇಗೆ ತೋಚಿದರೆ ಹಾಗೆ ಮಾಡಿ. ನಾಳೆ ಸಂಜೆಗೆ ಸ್ವಲ್ಪ ಬಿಡುವು ಮಾಡಿಕೊಂಡು ನಮ್ಮನ್ನು ಕಾಣಲು ಪ್ರಯತ್ನಿಸಿ.

ಬ್ರಹ್ಮಣ್ಣ : ಆಯಿತು ತಾಯಿ. ತಪ್ಪದೆ ಬರುತ್ತೇನೆ. (ಎಂದು ಹೊರಡುತ್ತಾನೆ. ಹೊರಡುವುದಕ್ಕೆ ಸರಿಯಾಗಿ ಎದುರಿನಿಂದ ನಲಗಾಮ ಪ್ರಭು ಪ್ರವೇಶಿಸುತ್ತಾ ಬ್ರಹ್ಮಣ್ಣನನ್ನು ಕಂಡು ಆಶ್ಚರ್ಯದಿಂದ ನೋಡುತ್ತಾನೆ)

ನಲಗಾಮ : ಓ ಬ್ರಹ್ಮಣ್ಣನವರು! ಇದೇನು ದೊಡ್ಡಮ್ಮನವರೊಂದಿಗೆ ಏನಾದರೂ ರಹಸ್ಯ ಸಮಾವೇಶವೇ? (ಎಂದು ನಗುತ್ತಾನೆ)

ಬ್ರಹ್ಮಣ್ಣ : ಪ್ರಭು ಅವರೊಂದಿಗೆ ನನ್ನದೇನು ರಹಸ್ಯ ಸಮಾವೇಶ? ಮಕ್ಕಳ ವಿಚಾರದಲ್ಲಿ ಬಹಳ ನೊಂದುಕೊಂಡಿದ್ದಾರೆ...... ನಾನೇ ಒಂದೆರಡು ಸಮಾಧಾನದ ಮಾತುಗಳನ್ನು ಹೇಳಿ ಹೋಗೋಣವೆಂದು ಬಂದೆ.

**ನಲಗಾಮ :** ಒಳ್ಳೆಯ ಕೆಲಸ ಮಾಡಿದಿರಿ. ನಾನೂ ಅವರನ್ನು ಮಾತಾಡಿಸಿ ಅವರ ಯೋಗಕ್ಷೇಮವನ್ನು ವಿಚಾರಿಸಲೆಂದೇ ಬಂದೆ..... ಆಯಿತು ಹೋಗಿ ಬನ್ನಿ.

(ಬ್ರಹ್ಮಣ್ಣ ವೇಗವಾಗಿ ಹೆಜ್ಜೆ ಹಾಕುತ್ತ ಬಾಗಿಲಿನ ಕಡೆಗೆ ನಡೆಯುವನು. ನಲಗಾಮ ಒಳ ಪ್ರವೇಶಿಸಿ ವೀರ ವಿದ್ಯಾದೇವಿಯನ್ನು ಕಂಡು ನಮಸ್ಕರಿಸುವನು)

**ವೀರವಿದ್ಯಾದೇವಿ:** (ಪ್ರೀತಿಯಿಂದ) ಬಾ ಕುಮಾರ. ಇಷ್ಟು ದಿವಸದ ಮೇಲೆ ದೊಡ್ಡಮ್ಮನ ನೆನಪಾಯಿತೇ? ಎಷ್ಟು ರಾಜಕಾರ್ಯ ಗಳಿದ್ದರೇನು, ಈ ಅಮ್ಮನ ನೆನಪಾಗುವುದು ಬೇಡವೇ?

**ನಲಗಾಮ :** ನಿಮ್ಮ ನೆನಪು ಮರೆಯುವುದೆಂದರೇನು? ನನಗೆ ನನ್ನಮ್ಮ ಭೂರಮಾದೇವಿಯರು ಹೇಗೋ ನೀವೂ ಹಾಗೆ.... ಏನೋ ಇತ್ತೀಚಿನ ದಿನಗಳಲ್ಲಿ ಏನೇನೋ ಸಮಸ್ಯೆಗಳು ಎದುರಾಗುತ್ತಿವೆ. ನೆಮ್ಮದಿಯೆ ಇಲ್ಲದಂತಾಗಿದೆ.

**ವೀರವಿದ್ಯಾದೇವಿ:** ಕುಮಾರ ನಾನು ನಿನ್ನ ತಾಯಿಯಂತೆ. ಒಂದೆರಡು ಬುದ್ದಿಮಾತು ಹೇಳುತ್ತೇನೆ. ಕೇಳಿಸಿಕೋ.

**ನಲಗಾಮ :** ಹೇಳಿ ದೊಡ್ಡಮ್ಮ. ನೀವು ಏನು ಹೇಳಿದರೂ ನಾನು ತಪ್ಪು ತಿಳಿಯುವುದಿಲ್ಲ.

**ವೀ.ವಿದ್ಯಾದೇವಿ:** ಹಾಗಾದರೆ ಆ ನಾಗಮ್ಮನನ್ನು ಸ್ವಲ್ಪ ದೂರದಲ್ಲಿಡು. ಅವಳ ಮಾತುಗಳ ಮೋಹಜಾಲದಲ್ಲಿ ಸಿಲುಕಬೇಡ. ಅವಳ ನಡೆ ನುಡಿ ಕಾರ್ಯಚಟುವಟಿಕೆಗಳನ್ನು ಸೂಕ್ಷ್ಮವಾಗಿ ಗಮನಿಸಿದರೆ ನಿನಗೇ ತಿಳಿದೀತು, ಅವಳ ಅಂತರ್ಯದ ಗುಟ್ಟು.

**ನಲಗಾಮ :** (ನಕ್ಕು) ಓಹೋ ಇದೆಲ್ಲವೂ ಬ್ರಹ್ಮಣ್ಣ ಮಂತ್ರಿಗಳ ಪಿತೂರಿಯೋ. ನಾಗಮ್ಮನ ಬಗ್ಗೆ ಇನ್ನೂ ಏನೇನು ಹೇಳಿದರೋ?

**ವೀ.ವಿದ್ಯಾದೇವಿ:** ಕುಮಾರ ಅವಳ ವಿಚಾರವಾಗಿ ಅತಿಯಾದ ನಂಬಿಕೆ ಬೇಡ. ಬ್ರಹ್ಮಣ್ಣನವರು ಹೇಳಿದ್ದನ್ನು ಕೇಳಿಕೊಂಡು ಮಾತಾಡುತ್ತಿದ್ದೇನೆಂದು ಭಾವಿಸಬೇಡ.... ಎಲ್ಲಿಂದಲೋ ಬಂದ ಅವಳ ಮೇಲೆ ಇಷ್ಟೊಂದು ಭರವಸೆಯನ್ನು ಇರಿಸಿಕೊಳ್ಳುವುದು ಒಳ್ಳೆಯದಲ್ಲ.

**ನಲಗಾಮ :** ದೊಡ್ಡಮ್ಮ ನಿಮಗೆ ಅವಳ ಸ್ವಭಾವ ಗೊತ್ತಿಲ್ಲ. ಅವಳು ನಮ್ಮ ಹಿತವನ್ನು ಕೋರುವವಳು. ರಾಜ್ಯಕ್ಕೆ ಅವಳಿಂದ ಎಷ್ಟು ಉಪಕಾರವಾಗಿದೆ ಗೊತ್ತೆ?...... ನಮ್ಮವರೆಂದು ಮೊದಲಿನಿಂದಲೂ ಅತಿಯಾಗಿ ನಂಬಿಕೊಂಡು ನಮ್ಮ ಸಮಸ್ತವನ್ನೂ ಯಾರ ಜವಾಬ್ದಾರಿಗೆ ವಹಿಸಿದ್ದೇವೋ ಅವರೇ

ಹೆಗ್ಗಣಗಳಂತೆ ಸೇರಿಕೊಂಡು ಬೊಕ್ಕಸವನ್ನೇ ಬರಿದು ಮಾಡಿದ್ದರು. ನಾಗಮ್ಮ ಬಂದು ಲೆಕ್ಕ ಪತ್ರಗಳನ್ನು ಕ್ಷಣಮಾತ್ರದಲ್ಲಿ ಪರಿಶೀಲಿಸಿ ಆಯವ್ಯಯದಲ್ಲಿ ಆಗಿದ್ದ ವ್ಯತ್ಯಾಸಗಳನ್ನು ಪತ್ತೆ ಹಚ್ಚಿ ಮತ್ತೆ ಬೊಕ್ಕಸವನ್ನು ತುಂಬಿದ್ದು ವಂಚನೆ ಎನಿಸುತ್ತದೆಯೇ?

**ವೀ.ವಿದ್ಯಾದೇವಿ:** ಹಾಗಾದರೆ ನನ್ನ ಮಕ್ಕಳನ್ನು ಅಪರಾಧಿಗಳಾಗಿ ಮಾಡಿದ್ದು ಯಾರ ಕೈವಾಡ?

**ನಲಗಾಮ :** ಅವಳಿಗೂ ಗೊತ್ತು ನಿಮ್ಮ ಮಕ್ಕಳು ಮುಗ್ಧರು ಯಾರೋ ಮಾಡಿ ಅವರ ಹೆಸರನ್ನು ಎಳೆದಿದ್ದಾರೆಂದು ಭಾವಿಸಿದ್ದಳು. ಆದರೆ ಪ್ರಜೆಗಳೇ ಪ್ರತ್ಯಕ್ಷವಾಗಿ ಕಂಡು ಆರೋಪಿಸಿದರೆ ಅವಳೇನು ಮಾಡಿಯಾಳು?..... ಆದರೂ ರಾಜವಂಶಕ್ಕೆ ಕಳಂಕ ಬರಬಾರದೆಂದು ಬೇರೊಬ್ಬರನ್ನು ಅಪರಾಧ ಸ್ವೀಕಾರ ಮಾಡುವಂತೆ ಮಾಡಿ ನಿಮ್ಮ ಮಕ್ಕಳನ್ನು ನಿರಪರಾಧಿಗಳೆಂದು ತೋರಿಸಿಕೊಟ್ಟದ್ದು ಅವಳೇ.

**ವೀ.ವಿದ್ಯಾದೇವಿ:** ನೀನು ಏನೇ ಹೇಳು. ಅವಳನ್ನು, ಅವಳ ನೆರಳನ್ನು ಕಂಡರೆ ವಿನಾಶದ ಕಲ್ಪನೆಯ ಭೀತಿ ಹೆಡೆ ಬಿಚ್ಚುತ್ತದೆ. ನಮಗೆ ಭವಿಷ್ಯವೇ ಇಲ್ಲವೇನೋ ಎನಿಸುತ್ತದೆ. ಅವಳ ಗರ್ವ, ಅಹಂಕಾರ, ಕುಟಿಲ ತಂತ್ರ..........

**ನಲಗಾಮ :** ಅದಕ್ಕೆ ನನ್ನಿಂದೇನಾಗಬೇಕಿದೆ ದೊಡ್ಡಮ್ಮ? ನೀವು ಏನು ಕೇಳಿದರೆ ಅದನ್ನು ನಡೆಸಿಕೊಡಲು ಸಿದ್ಧನಾಗಿದ್ದೇನೆ.

**ವೀ.ವಿದ್ಯಾದೇವಿ:** ಹಾಗಾದರೆ ಈ ರಾಜ್ಯವನ್ನು ನನ್ನ ಮಕ್ಕಳಿಗೆ ಹಂಚಿಕೊಡು. ಇಲ್ಲಿಂದ ದೂರ ಹೋಗಿ ನನ್ನ ಮಕ್ಕಳೊಂದಿಗೆ ಜೀವಿಸಿರುತ್ತೇನೆ.

**ನಲಗಾಮ :** ದೊಡ್ಡಮ್ಮ ರಾಜ್ಯ ಹಂಚಿಕೊಡುವುದೆಂದರೆ ಸಾಮಾನ್ಯವೇ? ರಾಜ್ಯವೆನ್ನುವುದು ತಿಂಡಿಯ ಪೊಟ್ಟಣವಲ್ಲ. ಬಿಚ್ಚಿ ಹಂಚಿಕೊಂಡು ಅನುಭವಿಸಲಿಕ್ಕೆ. ನಾನೊಬ್ಬನೇ ಅಲ್ಲ ಮಿಕ್ಕ ಸೋದರರೂ ಇದ್ದಾರೆ. ಮಂತ್ರಿಗಳಿದ್ದಾರೆ. ಎಲ್ಲರೊಡನೆ ಸಮಾಲೋಚಿಸಿ ತೀರ್ಮಾನ ತೆಗೆದುಕೊಳ್ಳಬೇಕಾದ ವಿಷಯ.... ಅಲ್ಲದೆ ನಮ್ಮನ್ನು ತಿರಸ್ಕರಿಸಿ ಎಲ್ಲಿಯೋ ಹೋಗಿ ಅನಾಥರಂತೆ ಜೀವಿಸಬೇಕಾದ ಅಗತ್ಯವೇನಿದೆ ಹೇಳಿ ದೊಡ್ಡಮ್ಮ. ನಿಮಗೆ ಸವಲತ್ತುಗಳು ಸಾಲದಿದ್ದ ಪಕ್ಷದಲ್ಲಿ ನಿಮಗೆ ಬೇಕಾದ್ದೇನಿದೆ ಹೇಳಿ. ಎಲ್ಲವನ್ನೂ ಪೂರೈಸಿಕೊಡಲು ಪ್ರಯತ್ನಿಸುತ್ತೇನೆ.

**ವೀ.ವಿದ್ಯಾದೇವಿ:** (ನಿಟ್ಟುಸಿರುಬಿಟ್ಟು) ಹೂಂ! ಬಯಕೆಗಳು ಸವಲತ್ತುಗಳು.... ! ಅರಮನೆಯಿಂದ ಬರುವ ಭತ್ಯಕ್ಕೇ ಸೊನ್ನೆಯಾಗಿದೆ. ಕಾಸು ಕಾಸಿಗೂ ಕೈ ಚಾಚಬೇಕು.

ಪ್ರತಿಯೊಂದಕ್ಕೂ ಲೆಕ್ಕ ಒಪ್ಪಿಸಬೇಕು. ಎಲ್ಲಿಗೆ ಹೋಗಬೇಕಾದರೂ ಪ್ರಭುಗಳ ಆಜ್ಞೆ ಬೇಕು. ನಮ್ಮ ನಡವಳಿಕೆಯ ಮೇಲೆ ಬೇಹುಗಾರಿಕೆ ಬೇರೆ! ನಮ್ಮ ಮನೆಯಲ್ಲಿ ನಮ್ಮವರ ವ್ಯವಹಾರಗಳಲ್ಲಿ ನಮಗೇ ಸ್ವಾತಂತ್ರ್ಯವಿಲ್ಲದೆ ಗುಲಾಮರಂತೆ ಗಳಿಗೆ ಗಳಿಗೆಗೂ ಹೆದರಿಕೆಯ ಹೆಜ್ಜೆಗಳನ್ನಿಟ್ಟು ಉಸಿರು ಕಟ್ಟಿ ಬದುಕುವ ಬದುಕು ನಮಗೆ ಬೇಡ ಕುಮಾರ. ಅವಳ ಹಿತ ಚಿಂತನೆಯ ಭದ್ರ ಕಾವಲಿನಲ್ಲಿ ನೀನು ಬೇಕಾದರೆ ಇರು. ನಮಗೆ ನಮ್ಮ ಪಾಲಿನ ರಾಜ್ಯವನ್ನು ಕೊಟ್ಟು ಬಿಡು.

**ನಲಗಾಮ :** (ಆಲೋಚನ ಮಗ್ನನಾಗಿ) ಆಗಲಿ ದೊಡ್ಡಮ್ಮ ಇದರ ಬಗ್ಗೆ ಉಳಿದವರೊಂದಿಗೆ ಪರಾಮರ್ಶಿಸಿ ತಿಳಿಸುತ್ತೇನೆ. ಆಕೆಯ ವಿಚಾರವಾಗಿ ಸಂಪೂರ್ಣವಾಗಿ ನಿಮ್ಮ ಮನಸ್ಸು ಕದಡಿ ಹೋಗಿದೆ. ನಾನೆಷ್ಟು ತಿಳಿಸಿದರೂ ನಿಮಗೆ ಸಮಾಧಾನವಾಗುವುದಿಲ್ಲ.... ನಾನಿನ್ನು ಬರುತ್ತೇನೆ..... ನೀವೂ ಮತ್ತೊಮ್ಮೆ ಯೋಚಿಸಿ.... ನಿಮ್ಮ ನಿಲುವು ಬದಲಾಗಬಹುದು (ಎಂದು ಹೇಳುತ್ತಾ..... ಬಿರುಸಿನಿಂದ ಹೊರಡುತ್ತಾನೆ ಕತ್ತಲು ಕವಿಯುತ್ತಿದೆ.)

OO

## ದೃಶ್ಯ – ೫

(ನಲಗಾಮನು ಪೂಜೆ ಮುಗಿಸಿ ಬಂದು ಒಂದು ಆಸನದಲ್ಲಿ ಕುಳಿತುಕೊಳ್ಳುತ್ತಾನೆ. ಮತ್ತೇನನ್ನೋ ಆಲೋಚಿಸಿ ಎದ್ದು ಒಳಗೆ ಬರುತ್ತಾನೆ. ಬರುವಾಗ ಜೊತೆಯಲ್ಲಿ ಮಗಳು ಪೇರಮ್ಮ ಇದ್ದಾಳೆ. ಏನೋ ಗಂಭೀರ ಚರ್ಚೆಯಲ್ಲಿ ತೊಡಗಿದ್ದಂತೆ ಕಾಣಿಸುತ್ತದೆ)

**ನಲಗಾಮ** : ಹಾಗಾದರೆ ನೀನು ನಿರ್ಧಾರವನ್ನು ಬಿಟ್ಟುಕೊಡುವುದಿಲ್ಲ. ಅಲರಾಜನನ್ನು ಮೀರಿಸಿದ ವೀರ ಪರಾಕ್ರಮಿ ಸುಂದರನಾದ ರಾಜಕುಮಾರನನ್ನು ತಂದು ಮದುವೆ ಮಾಡುತ್ತೇನೆ. ಈಗಲೂ ಕಾಲ ಮಿಂಚಿಲ್ಲ. ಯೋಚನೆ ಮಾಡಿ ಹೇಳು ಪೇರಮ್ಮ.

**ಪೇರಮ್ಮ** : ಇಲ್ಲ ಅಪ್ಪಾಜಿ. ಈ ಒಂದು ವಿಷಯದಲ್ಲಿ ನನ್ನನ್ನು ನಿರ್ಬಂಧಿಸಬೇಡಿ. ಅಲರಾಜನಿಗೆ ಎಂದೋ ನನ್ನ ಮನಸ್ಸು ಕೊಟ್ಟು ಬಿಟ್ಟಿದ್ದೇನೆ.

**ನಲಗಾಮ** : ಪೇರಮ್ಮ, ಅಲರಾಜನ ತಂದೆ ಕೊಮ್ಮರಾಜು ಬ್ರಹ್ಮಣ್ಣನ ಕಡೆಯವನು. ಇತ್ತೀಚೆಗೆ ಬ್ರಹ್ಮಣ್ಣನ ನಿಯತ್ತೇ ಬದಲಾಯಿಸಿ ಬಿಟ್ಟಿದೆ. ಯಾವ ಸಮಯದಲ್ಲಿ ಏನಾಗುವುದೋ ಹೇಳ ಬರುವುದಿಲ್ಲ. ನನಗಿರುವವಳು ನೀನೊಬ್ಬಳೇ. ನನ್ನ ವಾರಸುದಾರಳು ನೀನೇ ಮಗಳೇ. ಗಂಡು ಮಕ್ಕಳಿಲ್ಲದ ನನಗೆ, ಬರುವ ಅಳಿಯನೇ ಗಂಡು ಮಗ. ನನ್ನದೆಲ್ಲವೂ ಅವನಿಗೆ ಒಪ್ಪಿಗೆ ಬಿಡುತ್ತೇನೆ. ಮುದಿ ವಯಸ್ಸಿನಲ್ಲಿ ನಿಮ್ಮಿಬ್ಬರ ಪ್ರೀತಿಯ ನೆರಳಿನಲ್ಲಿ ಕಾಲ ಕಳೆಯ ಬೇಕೆಂಬುದೇ ನನ್ನಾಸೆ. ಆದರೆ ನಿನ್ನ ಹಠಮಾರಿತನದಿಂದ ನನಗೆ ಭಯವುಂಟಾಗಿದೆ.

**ಪೇರಮ್ಮ** : ನಿಮಗೇಕೆ ಭಯ ಅಪ್ಪಾಜಿ. ನಾಯಕಿ ನಾಗಮ್ಮ, ನಿಮ್ಮ ಜೊತೆಗಿರುವಾಗ ನಿಮಗೇತರ ಭಯ? ಭಯ ಪಡಬೇಕಾಗಿರುವುದು ನಾವು!

**ನಲಗಾಮ** : (ಸ್ವಲ್ಪ ಸಿಡುಕಿನಿಂದ) ಏನು ಮಗಳೆ ನೀನೂ ನಾಗಮ್ಮನನ್ನು ದೂಷಿಸಲು ಆರಂಭಿಸಿ ಬಿಟ್ಟಿಯೇನು? ಯಾರೊಬ್ಬರೂ ಅವಳ ಒಳ್ಳೆಯತನವನ್ನು ಗುರುತಿಸುವುದೇ ಇಲ್ಲವಲ್ಲ!

**ಪೇರಮ್ಮ** : ಅಪ್ಪಾಜಿ ಅಲರಾಜನಿಗಿಂತ ವೀರ ಪರಾಕ್ರಮಿ ಸುಂದರಪುರುಷ ಬೇರೆ ಇರಲು ಸಾಧ್ಯವಿಲ್ಲ. ನಾನು ಮದುವೆಯಾಗುವುದಾದರೂ ಅವರನ್ನೇ ಅಪ್ಪಾಜಿ.

**ನಲ್ಗಾಮ** : ಸರಿ ನಿನ್ನಿಷ್ಟದಂತೆ ಆಗಲಿ. ಆದರೆ ನಾಗಮ್ಮನನ್ನು ಒಂದು ಮಾತು ಕೇಳಿ ನೋಡುತ್ತೇನೆ.

**ಪೇರಮ್ಮ** : ನಾಗಮ್ಮ! ನಾಗಮ್ಮ!...... ನಾಗಮ್ಮನಿಲ್ಲದೆ ನಾವು ಉಸಿರಾಡಲೂ ಸಾಧ್ಯವಿಲ್ಲ.

**ನಲಗಾಮ** : ಸಿಟ್ಟಾಗಬೇಡ ಮಗಳೆ. ಅವಳೆಂದೂ ನಮ್ಮ ಮನಸ್ಸುಗಳನ್ನು ನೋಯಿಸುವುದಿಲ್ಲ. ನಿನ್ನ ಮೇಲೆ ಅವಳಿಗೆ ಎಷ್ಟು ಅಭಿಮಾನವಿದೆ. ಪ್ರೀತಿಯಿದೆ– ಗೊತ್ತೇನು? ನಿನ್ನ ಮನಸ್ಸಿಗೆ ನೋವಾಗುವ ಯಾವ ಕೆಲಸವನ್ನೂ ಮಾಡುವುದಿಲ್ಲ. ಈಗ ನೀನೇ ನೋಡುತ್ತಿರು. ನಾಗಮ್ಮನಿಗೆ ಹೇಳಿ ಕಳುಹಿಸುತ್ತೇನೆ. ನಿನ್ನ ಮುಂದೆಯೇ ಅವಳ ಮನಸ್ಸು ಏನೆಂಬುದು ತಿಳಿಯುತ್ತದೆ. (ಕೈ ಚಪ್ಪಾಳೆ ಹೊಡೆದು 'ಯಾರಲ್ಲಿ' ಎಂದು ಕರೆಯುತ್ತಾನೆ. ಅದನ್ನು ಕೇಳಿ ಕಂಚುಕಿ ಒಳಗೆ ಬಂದು ನಲಗಾಮನಿಗೆ ತಲೆ ಬಾಗುತ್ತಾನೆ)

**ನಲಗಾಮ** : ಕಂಚುಕಿ ಈ ಕೂಡಲೇ ಹೋಗಿ ನಾಗಮ್ಮನನ್ನು ಬರಹೇಳಿದೆನೆಂದು ಹೇಳು.

**ಕಂಚುಕಿ** : ಅಪ್ಪಣೆ ಪ್ರಭು (ಎಂದು ಹಿಂತಿರುಗುತ್ತಾನೆ) ಒಂದೆರಡು ನಿಮಿಷಗಳಲ್ಲಿಯೇ ಮರಳಿ ಬಂದು ಪ್ರಭು ನಾಯಕಿ ನಾಗಮ್ಮನವರೇ ಖುದ್ದಾಗಿ ತಮ್ಮನ್ನು ಕಾಣಲು ಬಂದಿದ್ದಾರೆ. ಒಳಗೆ ಬರ ಹೇಳಲೇ ಪ್ರಭು?

**ನಲಗಾಮ** : ಓ ಹೌದೇನು?....ಹಾಗಾದರೆ ಕೂಡಲೇ ಒಳಗೆ ಬರಲಿ. ನೀನು ಬೇಗ ಹೋಗಿ ಕರೆದು ತಾ.

**ಕಂಚುಕಿ** : ಇದೋ ಈಗಲೇ ಹೊರಟೆ ಪ್ರಭು. (ಎಂದು ಹೋಗಿ ನಾಯಕಿ ನಾಗಮ್ಮನನ್ನು ಜೊತೆಯಲ್ಲಿ ಕರೆದು ತರುತ್ತಾನೆ)

**ನಾಯಕಿ** : ಕ್ಷಮಿಸಬೇಕು ಪ್ರಭುಗಳೇ. ತುರ್ತಾಗಿ ನಿಮ್ಮೊಂದಿಗೆ ಒಂದೆರಡು ಮಾತನಾಡಬೇಕಿತ್ತು. ಅದಕ್ಕಾಗಿ ನಿಮ್ಮ ವಿರಾಮದ ವೇಳೆಯಲ್ಲಿ ಅತಿಕ್ರಮ ಪ್ರವೇಶ ಮಾಡಬೇಕಾಯಿತು. ನನ್ನಿಂದ ನಿಮ್ಮ ಅಂತರಂಗ ಸಂಭಾಷಣೆಗೆ ಭಂಗವುಂಟಾಗಿರಬೇಕಲ್ಲವೇ ಪ್ರಭು?

**ನಲಗಾಮ** : ಹಾಗೇನಿಲ್ಲ ನಾಗಮ್ಮ. ನೆನೆದವರ ಮನದಲ್ಲಿ ಎಂಬಂತೆ, ನಿನಗಾಗಿಯೇ ಹೇಳಿ ಕಳಿಸಬೇಕೆಂದು ಯೋಚಿಸುತ್ತಿದ್ದೆ. ನೀನೇ ಬಂದದ್ದು ಒಳ್ಳೆಯದಾಯಿತು.

**ನಾಯಕಿ** : ಪ್ರಭುಗಳಿಗೆ ನಮ್ಮಂತಹ ಅಲ್ಪರ ನೆನಪಾಗುವುದೆಂದರೆ?

**ನಲಗಾಮ** : ನಮ್ಮ ಶ್ರೇಯೋಭಿಲಾಷಿಯಾದ ನಿನ್ನನ್ನು ಮರೆಯುವುದು ಸಾಧ್ಯವೇ?.... ಈಗಲೂ ನಿನ್ನಿಂದ ಪರಿಹಾರವಾಗಬೇಕಾದ ಸಮಸ್ಯೆಯೊಂದಿದೆ.

**ನಾಯಕಿ** : ಹೇಳಿ ಪ್ರಭು...... ನನಗೆ ಪರಿಹರಿಸಲು ಸಾಧ್ಯವಾಗುವುದಾದರೆ ಧನ್ಯಳೆಂದು ಭಾವಿಸುತ್ತೇನೆ.

**ಪೇರಮ್ಮ** : (ಸಂಕೋಚದಿಂದಲೇ) ಅಪ್ಪಾಜಿ, ನನಗೆ ಹೋಗಲು ಅಪ್ಪಣೆ ಕೊಡಿ. ಹಿರಿಯರ ಮಧ್ಯದಲ್ಲಿ ನನಗೇನು ಕೆಲಸ?

**ನಲಗಾಮ** : ಈ ಸಮಸ್ಯೆ ನಿನಗೆ ಸಂಬಂಧಿಸಿದ್ದೇ ಅಲ್ಲವೇ?

**ಪೇರಮ್ಮ** : ಇರಬಹುದು..... ಆದರೆ ನಾನು ಮಾತ್ರ ಇಲ್ಲಿ ಇರಲಾರೆ. ನೀವಿಬ್ಬರೇ ನಿಮ್ಮ ನಡುವೆ ತೀರ್ಮಾನಿಸಿಕೊಳ್ಳಿ. ನನ್ನ ನಿರ್ಧಾರವಂತೂ ನಿಮಗೆ ತಿಳಿಸಿಬಿಟ್ಟಿದ್ದೇನೆ. (ಎಂದು ಅಪ್ಪನ ಮಾತಿಗೆ ಕಾಯದೆ ಅಲ್ಲಿಂದ ದಿಢೀರನೆ ಹೊರಟು ಬಿಡುತ್ತಾಳೆ)

**ನಾಯಕಿ** : ಪ್ರಭು ನಿಮ್ಮ ಮಗಳಿಗೆ ನಾನು ಬಂದದ್ದು ಒಪ್ಪಿಗೆಯಾಗಿಲ್ಲವೆನಿಸುತ್ತದೆ. ನೀವು ಮುಂದುವರೆಸಿ. ನಾನು ಬೇಕಾದರೆ ಮತ್ತೆ ಬರುತ್ತೇನೆ.

**ನಲಗಾಮ** : ನಾಗಮ್ಮ ನಿನ್ನಿಂದ ನನಗೊಂದು ಉಪಕಾರವಾಗಬೇಕು. ಕೊಮ್ಮ ರಾಜುವಿನ ಮಗ ಅಲರಾಜುವಿನ ಪರಿಚಯ ನಿನಗಿರಬೇಕಲ್ಲವೇ?

**ನಾಯಕಿ** : ಇದೆ ಪ್ರಭು. ನಾನು ಆ ಹುಡುಗನನ್ನು ಚೆನ್ನಾಗಿ ಬಲ್ಲೆ. ಸುಂದರ ಯುವಕ ಜೊತೆಗೆ ಸಾಹಸಿ.

**ನಲಗಾಮ** : ಆ ಯುವಕ ನನ್ನ ಅಳಿಯನಾದರೆ ಹೇಗೆ?

**ನಾಯಕಿ** : ಅಂತಹ ಯುವಕ ಅಳಿಯನಾಗುವುದು ಅದೃಷ್ಟವೇ ಪ್ರಭು. ಆದರೆ ಆ ತಂದೆ ಮಕ್ಕಳು ಬ್ರಹ್ಮನಾಯುಡುವಿನ ಅಂತರಂಗ ವಲಯಕ್ಕೆ ಸೇರಿದವರು. ಅವನ ದುರ್ಭೋಧನೆಗಳಿಂದ ಪ್ರಭಾವಿತರಾಗಿ ನಿಮ್ಮ ಕೋರಿಕೆಯನ್ನು ತಿರಸ್ಕರಿಸಬಹುದು...... ನಿಮ್ಮ ಮಗಳಿಗೆ ಅನುರೂಪನಾದ ವರ.

**ನಲಗಾಮ** : ಅಂತಹ ಪ್ರಸಂಗ ಬರುವುದಿಲ್ಲ ನಾಗಮ್ಮ. ನನ್ನ ಮಗಳು ಅಲರಾಜು ಒಬ್ಬರನ್ನೊಬ್ಬರು ತುಂಬ ಪ್ರೀತಿಸುತ್ತಿದ್ದಾರೆ. ನಾವು ವಿರೋಧಿಸಿದರೂ ಮದುವೆಯಾಗಿಯೇ ಆಗುತ್ತೇವೆಂದು ನನ್ನ ಮಗಳು ಹಠ ಹಿಡಿದಿದ್ದಾಳೆ.

**ನಾಯಕಿ** : ನಾವು ಬೇಡುವ ಮೊದಲೇ ನಮ್ಮ ಬಯಕೆಗಳನ್ನು ಅವರೇ ಪೂರೈಸುವುದಾದರೆ ಇದಕ್ಕಿಂತ ಬೇರೇನು ಬೇಕು ಪ್ರಭು? ನೀವು

ಕೂಡಲೇ ಒಪ್ಪಿಕೊಂಡು ಬಿಡಿ. ನಿಮ್ಮ ಮಗಳು ಮನಸ್ಸು ಕೊಟ್ಟಿರುವಾಗ ದೊಡ್ಡವರಾದ ನಾವು ಅವರನ್ನು ವಿರೋಧಿಸದೆ ತುಂಬು ಮನಸ್ಸಿನಿಂದ ಆಶೀರ್ವಾದ ಮಾಡಬೇಕು.

**ನಲಗಾಮ :** ನನಗೆ ಗೊತ್ತಿತ್ತು ನಾಗಮ್ಮ ನೀನು ಇದಕ್ಕೆ ಒಪ್ಪುತ್ತೀ ಎಂದು! ನನ್ನ ಮಗಳಿಗೆ ಇದನ್ನೇ ಹೇಳಿದೆ. ಆದರೆ ಅವಳಿಗೆ ತಾಳ್ಮೆಯಿಲ್ಲ. ಯಾರ ಯಾರದೋ ಮಾತು ಕೇಳಿಕೊಂಡು ತಲೆ ಕೆಡಿಸಿಕೊಂಡಿದ್ದಾಳೆ. ಈಗ ಅವಳಿಗೆ ಗೊತ್ತಾಗಬಹುದು ಯಾರು ಹೇಗೆ ಅಂತ!

**ನಾಯಕಿ :** ಪ್ರಭು ನಾನು ಬಂದದ್ದೇ ಬೇರೆ ವಿಷಯ ಹೇಳಿ ಹೋಗಲೆಂದು. ಗಂಭೀರವಾದ ಕೆಲವು ವಿಷಯಗಳನ್ನು ನಿಮಗೆ ಹೇಳಲೇಬೇಕು. ನನಗಂತೂ ಈ ಪಲನಾಡಿನ ಪರಿಸ್ಥಿತಿಯ ಬಗ್ಗೆ ಗಾಭರಿಯಾಗಿದೆ. ಎಲ್ಲಿ ಕೈ ಹಾಕಿದರೂ ಹಾವಿನ ಹುತ್ತಗಳೇ ಎದ್ದು ನಿಲ್ಲುತ್ತಿವೆ. ನೀವು ನಂಬಿದ್ದ ವ್ಯಕ್ತಿಗಳೇ ನಿಮ್ಮ ಕೊರಳು ಕೊಯ್ಯುತ್ತಿದ್ದಾರೆ. ನಿಮ್ಮ ಗೋರಿ ಸಿದ್ಧಪಡಿಸುತ್ತಿದ್ದಾರೆ.

**ನಲಗಾಮ :** ನೀನು ಹೇಳುತ್ತಿರುವ ಮಾತುಗಳು ನನಗೆ ಅರ್ಥವಾಗುತ್ತಿಲ್ಲ. ಹೇಳಬೇಕೆಂದಿರುವುದನ್ನು ಸ್ಪಷ್ಟವಾಗಿ ಹೇಳು.

**ನಾಯಕಿ :** ಏನು ಹೇಳಲಿ ಪ್ರಭು. ನಾನು ನಿಮ್ಮೊಂದಿಗೆ ವಿಶ್ವಾಸದಿಂದ ಇರುವುದೇ ಕೆಲವರಿಗೆ ಸಹಿಸುತ್ತಿಲ್ಲ. ನನ್ನ ಪ್ರವೇಶದಿಂದಾಗಿ ಅವರ ಆಟಗಳಿಗೆ ಅಡ್ಡಿಯಾಗಿದೆ ಎಂಬ ಭಾವನೆಯಿಂದ ನನ್ನ ಮೇಲೆ ಕತ್ತಿ ಮಸೆಯುತ್ತಿದ್ದಾರೆ. ಅವರ ವಂಚನೆ, ದ್ರೋಹವನ್ನು ಬಯಲು ಮಾಡುತ್ತಿದ್ದೇನೆಂಬ ರೋಷ. ಅವರೆಲ್ಲರನ್ನೂ ನೀವು ದೂರವಿರಿಸಲು ನಾನೇ ಕಾರಣವೆಂದೂ, ನನ್ನ ವಶವಾಗಿರುವ ನಿಮಗೆ ಸರಿಯಾಗಿ ಬುದ್ಧಿ ಕಲಿಸುತ್ತೇವೆಂದು ಬೀಗುತ್ತಿದ್ದಾರೆ. ಅಲ್ಲದೆ ಆ ಬ್ರಹ್ಮಣ್ಣನ ದುಷ್ಟ ತಂತ್ರಗಳು ದಿನ ದಿನಕ್ಕೆ ಮಿತಿ ಮೀರುತ್ತಿವೆ. ಅವನಂತೂ ಬಹಿರಂಗವಾಗಿಯೇ "ಆ ನಲಗಾಮನು ಯಾರು? ಈ ನಾಗಮ್ಮ ನಾಯಕಿಯಾರು? ಊರು ಕುಲ ಗೋತ್ರಗಳಿಲ್ಲದ ಈ ಇವಳಿಗೂ ಈ ರಾಜ್ಯಕ್ಕೂ ಎಲ್ಲಿಯ ಸಂಬಂಧ? ಅವಳನ್ನು ಉಚ್ಚಾಟನೆ ಮಾಡಿ ಈ ನಾಡಿನಿಂದ ಹೊರಗೆ ಹಾಕಬೇಕು. ಪಟ್ಟ ಮಹಿಷಿಯಾದ ವೀರ ವಿದ್ಯಾದೇವಿಯ ಮಕ್ಕಳಿಗೇ ನ್ಯಾಯಬದ್ಧವಾಗಿ ರಾಜ್ಯ ಸಲ್ಲಬೇಕು. ಮಧ್ಯೆ ಈ ನಲಗಾಮನು ಉದುರಿಬಿದ್ದ. ಇರಲಿ ಅವನ ಅಧಿಕಾರ ಎಷ್ಟು ದಿನ? ಸಮಯ ಬರಲಿ. ನಲಗಾಮನನ್ನು ಸಿಂಹಾಸನದಿಂದ

ಇಳಿಸಿ ಮಲಿದೇವನಿಗೆ ರಾಜ್ಯ ಸಂಪಾದಿಸಿ ಕೊಡುತ್ತೇನೆ! ಎಂದೆಲ್ಲ ಬಡಬಡಿಸುತ್ತಿದ್ದಾನಂತೆ!"..... ಇದೆಲ್ಲವನ್ನು ಕೇಳಿಯೂ ನಾವು ನಿಷ್ಕ್ರಿಯರಾಗಿ, ನಿರಾತಂಕವಾಗಿ ಉಳಿಯುವುದು ಎಷ್ಟರಮಟ್ಟಿಗೆ ಸರಿಯಾದ್ದು ನೀವೇ ಯೋಚಿಸಿ ಪ್ರಭು... ನನಗೆಂದೋ ಗೊತ್ತು. ಬ್ರಹ್ಮಣ್ಣ ನಮಗೆ ಹಗೆಯಲ್ಲದೆ ಸ್ನೇಹಿತನಾಗಿರಲಾರ. ಹಿತೈಷಿಯಾಗಲಾರ.

**ನಲಗಾಮ :** (ಚಿಂತಾಕ್ರಾಂತನಾಗಿ) ನಾಗಮ್ಮ ನೀನು ಹೇಳುತ್ತಿರುವುದೆಲ್ಲ ನಿಜವೇ?.... ಬ್ರಹ್ಮಣ್ಣ ಹಾಗೆಲ್ಲ ಮಾತನಾಡಿದನೇ?

**ನಾಯಕಿ :** ಪ್ರಭು, ನಿಮಗೆ ನಾನೇಕೆ ಸುಳ್ಳು ಹೇಳಲಿ? ನನ್ನ ನಿಷ್ಠೆಯಲ್ಲಿ ನಿಮಗೆ ನಂಬಿಕೆಯಿಲ್ಲವೇ? ನನ್ನ ಮೇಲಿನ ಬ್ರಹ್ಮಣ್ಣನ ಸೇಡು ನಿಮ್ಮ ಮೇಲೆ ನಿಮ್ಮ ರಾಜ್ಯದ ಮೇಲೆ ತಿರುಗಿದೆ. ನನ್ನ ಕಾರಣದಿಂದ ನಿಮಗೆ ಈ ರಾಷ್ಟ್ರಕ್ಕೆ ಕೇಡಾಗುವುದನ್ನು ನಾನು ಸಹಿಸಲಾರೆ. ನನ್ನ ಪ್ರಾಣವನ್ನಾದರೂ ಪಣವಾಗಿಟ್ಟು ನಿಮ್ಮೆಲ್ಲರನ್ನೂ, ರಾಜ್ಯವನ್ನೂ ಕಾಪಾಡುತ್ತೇನೆ ಪ್ರಭು.... ಅವರ ಕುತಂತ್ರಗಳನ್ನು ಅವರ ಪ್ರತಿಯೊಂದು ಚಲನವಲನವನ್ನು ಗಮನಿಸುವುದಕ್ಕೆಂದೇ ಒಂದು ಗುಪ್ತ ಬೇಹುಗಾರಿಕೆಯ ದಳವನ್ನು ಸಿದ್ಧಪಡಿಸಿದ್ದೇನೆ.

**ನಲಗಾಮ :** (ತುಂಬಿ ಬಂದು) ನಾಗಮ್ಮ! ನಾಗಮ್ಮ! ನಮಗಾಗಿ ನೀನು ಮಾಡುತ್ತಿರುವ ತ್ಯಾಗ ನಮ್ಮ ಹಿತಕ್ಕಾಗಿ ವಹಿಸುತ್ತಿರುವ ಶ್ರದ್ಧೆಗಳನ್ನು ನೋಡಿ ನಮಗೆ ಬಹಳ ಸಂತೋಷವಾಗಿದೆ. ಈ ರಾಜ್ಯದ ವ್ಯವಹಾರದಲ್ಲಿ ನಿನಗೆ ಸರ್ವ ಸ್ವಾತಂತ್ರ್ಯವನ್ನು ಕೊಡುತ್ತಿದ್ದೇನೆ. ನಿಮಗೆ ತೋಚಿದಂತೆ ನೀನು ಮಾಡು. ನಮಗೆ ಬೇಕಾದ್ದೆಲ್ಲವೂ ರಾಜ್ಯದ, ರಾಜವಂಶದ ಕ್ಷೇಮ!

**ನಾಯಕಿ :** (ವಿನಯಳಾಗಿ) ನಾನು ಧನ್ಯಳಾದೆ ಪ್ರಭು. ಒಂದು ಹೆಣ್ಣಿಗೆ ಇಷ್ಟೊಂದು ಮರ್ಯಾದೆ, ಗೌರವಗಳನ್ನು ನೀಡುತ್ತಿರುವ ನಿಮ್ಮಂತಹವರು..... ಬರುತ್ತೇನೆ...... ನಿಮಗೆ ಎಚ್ಚರಿಸಿ ಹೋಗಲೆಂದೇ ಬಂದೆ. (ತಡೆದು).... ಆಂ!.... ಒಂದನ್ನು ಮರೆತಿದ್ದೆ ಪ್ರಭು. ನಿಮ್ಮ ಬೆಂಗಾವಲಿಗಾಗಿ ಒಬ್ಬ ವೀರಯುವಕನನ್ನು ನಿಮಗೆ ಪರಿಚಯಿಸಬೇಕೆಂದಿದ್ದೇನೆ.

**ನಲಗಾಮ :** ನಮ್ಮ ಬೆಂಗಾವಲಿಗೆಂದೆ? (..... ನಕ್ಕು) ನಮಗೆ ಬೇಡ ನಾಗಮ್ಮ.... ನಿನಗೇ ಈಗ ಹೆಚ್ಚಿನ ಅವಶ್ಯಕತೆ ಇರುವುದು. ನೀನೇ ಆ ವೀರ ಯುವಕನನ್ನು ನೇಮಿಸಿಕೋ.... ಅಂದ ಹಾಗೆ ಈ ವೀರಯುವಕ ನಿನ್ನ ಕಣ್ಣಿಗೆ ಬಿದ್ದದ್ದು ಹೇಗೆ?

**ನಾಯಕಿ :** (ಅನುಮಾನಿಸುತ್ತ) ಹೇಗೆ ಎಂದರೆ? (ತಡೆತಡೆದು) ಹೇಗೆ ಹೇಳಲಿ ಪ್ರಭು? ನಾನು ಹೇಳುವ ಮಾತುಗಳನ್ನು ಕೇಳಿದರೆ, ಬ್ರಹ್ಮಣ್ಣನನ್ನು

ಅನುಮಾನಿಸುವುದು. ದೂರುವುದು ಬಿಟ್ಟರೆ ಬೇರೆ ಕೆಲಸವಿಲ್ಲವೆಂದೇ ತಿಳಿಯುತ್ತೀರಿ.... ನಾನು ಆಗಲೇ ಹೇಳಿದೆನಲ್ಲ ಪ್ರಭು.... ಬ್ರಹ್ಮಣ್ಣ ನನ್ನ ಕೊಲೆಗೆ ಪ್ರಯತ್ನಿಸುತ್ತಿದ್ದಾನೆ..... ಮೊನ್ನೆ ನಡೆದ ಸಂಗತಿಯೇ ಇದಕ್ಕೆ ಸಾಕ್ಷಿ.

**ನಲಗಾಮ :** (ಆಶ್ಚರ್ಯದಿಂದ) ಏನಂದೆ ಮೊನ್ನೆ ನಡೆದ ಸಂಗತಿಯೇ.....?.... ಅದೂ ನಾವಿರುವಾಗ ನಮ್ಮ ರಾಜ್ಯದಲ್ಲಿ ನನಗೇ ತಿಳಿಯದೆ ಸಂಗತಿಗಳು ನಡೆಯುತ್ತವೆಯೇ!...." ಆಶ್ಚರ್ಯವಾಗಿದೆ!.... ನೀನೇಕೆ ಅದನ್ನೆಲ್ಲ ನಮಗೆ ಹೇಳಲಿಲ್ಲ?

**ನಾಯಕಿ :** ನಿಮಗೇ ನೂರೆಂಟು ಸಮಸ್ಯೆಗಳಿರುವಾಗ ಆಡಳಿತದ ತೊಂದರೆಗಳಿರುವಾಗ ಪ್ರತಿ ಸಣ್ಣ ವಿಷಯವನ್ನೂ ನಿಮ್ಮ ಮುಂದೆ ತಂದು ನಿಮಗೆ ತೊಂದರೆ ಕೊಡುವುದಕ್ಕೆ ನನ್ನ ಮನಸ್ಸಿಗೆ ಒಪ್ಪಿಗೆಯಾಗಲಿಲ್ಲ..... ನಾನೇ ಅದನ್ನು ಪರಿಹರಿಸಿಕೊಳ್ಳುವುದಕ್ಕೆ ಪ್ರಯತ್ನಿಸುತ್ತೇನೆ.

**ನಲಗಾಮ :** ಹೋ ನಿನ್ನ ಮೇಲೆ ಹತ್ಯಾ ಪ್ರಯತ್ನ ಸಣ್ಣ ಸಂಗತಿ ಎನಿಸುವುದೇ?

**ನಾಯಕಿ :** ಪ್ರಭು ಈ ರಾಷ್ಟ್ರ ರಕ್ಷಣೆಯಲ್ಲಿ ನನ್ನ ಪ್ರಾಣ ಹೋದರೆ ಹುತಾತ್ಮಳೆನಿಸಿದರೆ ಇದಕ್ಕಿಂತ ಮಹಾಭಾಗ್ಯ ಇನ್ನೇನಿದೆ?

**ನಲಗಾಮ :** ಧನ್ಯಳಾದೆ ನಾಗಮ್ಮ ಧನ್ಯಳಾದೆ!.... ಎಂತಹ ಉನ್ನತ ವಿಚಾರಗಳು!........ ನೀನು ನಮಗೆ ದೊರೆತದ್ದು ನಮ್ಮ ಭಾಗ್ಯ! ನಮ್ಮ ತಂದೆಯವರು ನಿನಗೆ ಸ್ವಲ್ಪ ಕಾಲ ಮಂತ್ರಿ ಪದವಿ ಕೊಡುತ್ತೇನೆಂದು ಕೊಟ್ಟ ಮಾತು ಸಾರ್ಥಕವಾಯಿತು. ನಿನ್ನ ಹಿರಿಮೆ ಆಗಲೇ ನಮ್ಮ ತಂದೆಯವರಿಗೆ ಹೊಳೆದಿರಬೇಕು. ಇಲ್ಲದಿದ್ದರೆ ಇಂತಹ ವಚನವನ್ನು ನೀಡಲು ಸಾಧ್ಯವಿತ್ತೆ! ನಾವೂ ಅದೃಷ್ಟವಂತರಾದೆವು..... ನಿನ್ನಂತಹ ಅಮೂಲ್ಯ ಸ್ತ್ರೀಯನ್ನು ಪ್ರತಿಭಾವಂತಳನ್ನು ರಾಜನೀತಿಜ್ಞಳನ್ನು ಭದ್ರವಾಗಿ ಕಾಪಾಡಿಕೊಳ್ಳುವುದು ನಮ್ಮ ಧರ್ಮವಲ್ಲವೇ.... ಹೇಳು ನಾಗಮ್ಮ.... ನಿನ್ನ ಮೇಲೆ ಆಕ್ರಮಣ... ಮಾಡಿದವರು ಯಾರು? ನಿನ್ನ ಹತ್ಯೆಗೆ ಕೈ ಹಚ್ಚಿದವರು ಯಾರು?.... ಅವರನ್ನು ಈ ಕೂಡಲೇ ಎಳೆದು ತಂದು ಶಿರಚ್ಛೇದನ ಮಾಡಿಸುತ್ತೇನೆ. (ರೋಷವನ್ನು ತೋರುವನು)

**ನಾಯಕಿ :** ಅಷ್ಟೊಂದು ಉದ್ವಿಗ್ನರಾಗಬೇಡಿ ಪ್ರಭು. ಅನಿರೀಕ್ಷಿತವಾಗಿ ಬಂದ ವೀರ ಯುವಕನೇ ಅವರೆಲ್ಲರನ್ನೂ ಎದುರಿಸಿ, ಸದೆ ಬಡಿದು ಹೊಡೆದಟ್ಟಿದ. ಅವನ ಆ ಪರಾಕ್ರಮ ಸಮಯಸ್ಫೂರ್ತಿ ವೀರಾವೇಶಗಳನ್ನು ಪ್ರತ್ಯಕ್ಷವಾಗಿ ಕಂಡು ನಾನು ಮುಗ್ಧಳಾಗಿ ಹೋದೆ.... ನನ್ನ ಪ್ರಾಣ ಉಳಿಸಿ ನನ್ನನ್ನು

ಕಾಪಾಡಿದ ಆ ಯುವಕ ಈಗ ನನ್ನ ಅತಿಥಿಯಾಗಿದ್ದಾನೆ. ನಿಮ್ಮ ನಂಜಿಕೆಯ ಬಂಟರಲ್ಲಿ ಒಬ್ಬನಾಗಿ ನಮ್ಮ ಸೇವೆಯಲ್ಲಿ ಇರಲೆಂಬುದೇ ನನ್ನ ಆಸೆ ಪ್ರಭು.

**ನಲಗಾಮ :** ನಿನ್ನ ಮಾತಿಗೆ, ನಿನ್ನ ಬೇಡಿಕೆಗೆ ಎಂದಾದರೂ ಇಲ್ಲವೆಂದು ಹೇಳಿದ್ದೇನೆಯೇ ನಾಗಮ್ಮ?... ಹೋಗು..... ನಿನಗೆ ತೋಚಿದಂತೆ ಮಾಡು ನಿನಗೆ ಬೇಕಾದವರನ್ನು ಇರಿಸಿಕೋ.

**ನಾಯಕಿ :** ನಿಮ್ಮ ಕಡೆ ಗಮನವಿರಲಿ. ಮಲಿದೇವ ಸೋದರರನ್ನು ಸುಲಭವೆಂದು ಭಾವಿಸಬೇಡಿ. ಬ್ರಹ್ಮಣ್ಣನ ಪಿತೂರಿಯಿಂದ ಅವರು ನಿಮ್ಮ ಮೇಲೆ ಏರಿ ಬರಬಹುದು. ಸಾಯಿಸಲೂಬಹುದು..... ಸ್ವಲ್ಪ ಜಾಗರೂಕತೆಯಿಂದ ಇರಿ.

**ನಲಗಾಮ :** (ಏನೋ ಹೊಳೆದಂತೆ) ನಾಗಮ್ಮ–ಇದೆಲ್ಲ ಆಗುವುದಕ್ಕೆ ಅವಕಾಶ ಕೊಡುವುದಕ್ಕಿಂತ ಮೊದಲೇ ಅವರನ್ನು ಸೆರೆಯಲ್ಲಿಟ್ಟರೆ ಹೇಗೆ?

**ನಾಯಕಿ :** ನಾನೂ ಅದನ್ನೇ ಆಲೋಚಿಸಿದ್ದೆ. ಆದರೆ ನಿಮ್ಮ ಮಲಸೋದರರು... ನಾನು ಹೇಗೆ ಅವರ ಬಗ್ಗೆ ಕೆಟ್ಟದ್ದನ್ನು ಆಲೋಚಿಸಲಿ?

**ನಲಗಾಮ :** ಭಲೆ! ಭಲೆ! ನಾಗಮ್ಮ. ನಮ್ಮ ಹಗೆಗಳ ಬಗ್ಗೆಯೂ ನಿನ್ನ ಸಹಾನುಭೂತಿ!

**ನಾಯಕಿ :** ನಾನಿನ್ನು ಬರುತ್ತೇನೆ ಪ್ರಭು.... ನೀವು ಯೋಚಿಸಿದಂತೆಯೇ ಅವರನ್ನು ಆದಷ್ಟು ಬೇಗ ಬಂಧನದಲ್ಲಿರಿಸಿ.... ಹಾಗೆಯೇ ನಿಮ್ಮ ಮಗಳ ಮದುವೆಯೂ ಶೀಘ್ರವಾಗಿ ಜರುಗಿ ಹೋಗಲಿ. ಮುಂದೆ ಏನು ಕಾದಿದೆಯೋ ಯಾರಿಗೆ ಗೊತ್ತು? ಯಾವ ಕ್ಷಣದಲ್ಲಿ ಯಾರ ಮೇಲೆ ಬ್ರಹ್ಮಣ್ಣನ ದ್ವೇಷದ ಕತ್ತಿ ಎರಗುವುದೋ ಯಾರಿಗೆ ಗೊತ್ತು!

**ನಲಗಾಮ :** ಹೋಗಿ ಬಾ ನಾಗಮ್ಮ.... ಮುನಿದು ಹೋದ ಮಗಳಿಗೆ ಈ ಸುದ್ದಿಯಿಂದ ಸಂತಸಪಡಿಸುತ್ತೇನೆ.... ನೀನೂ ನಮ್ಮ ಮಗಳ ಮದುವೆಯ ಸಿದ್ಧತೆಗಳ ಕಡೆ ಗಮನಕೊಡು.

**ನಾಯಕಿ :** ಆಗಬಹುದು ಪ್ರಭು.... (ನಮಸ್ಕರಿಸಿ ಹಿಂತಿರುಗುತ್ತಾಳೆ. ನಲಗಾಮನು ಆವಳು ಹೋದ ದಿಕ್ಕಿನತ್ತಲೇ ದಿಟ್ಟಿಸುತ್ತ ಮುಗುಳು ನಗುತ್ತಾನೆ)

○○

# ದೃಶ್ಯ – ೬

(ನಾಯಕಿ ನಾಗಮ್ಮನ ಖಾಸಗಿ ಕೋಣೆ. ನರಸಿಂಹ, ವೀರಭದ್ರ, ನಾಗಮ್ಮ ಮೂವರೂ ಆಸನಗಳಲ್ಲಿ ಕುಳಿತಿದ್ದಾರೆ. ನರಸಿಂಹ ಸಿಟ್ಟಿನಿಂದ ಕೂಡಿರುವಂತಿದೆ. ನಾಗಮ್ಮನ ಮುಖದ ಮೇಲೆ ವಿಜಯ ಗರ್ವದ ಛಾಯೆ ಕಾಣಿಸುತ್ತದೆ. ವೀರಭದ್ರ ಒಮ್ಮೆ ನರಸಿಂಹನ ಕಡೆ ಮತ್ತೊಮ್ಮೆ ನಾಗಮ್ಮನ ಕಡೆಗೆ ಸರದಿಯಂತೆ ದೃಷ್ಟಿ ಹರಿಸುತ್ತಾನೆ.)

**ನರಸಿಂಹ** : (ಸಿಟ್ಟಿನಿಂದ) ಇನ್ನೂ ಎಷ್ಟು ಕಾಲ ಹೀಗೆ? ನಿನ್ನ ಮಾತುಗಳನ್ನು ನಿನ್ನ ಭರವಸೆಗಳನ್ನು ಕೇಳಿ ಕೇಳಿ ಸಾಕಾಯಿತು. ಇನ್ನು ನಮಗೆ ರಾಜ್ಯ ಸಿಕ್ಕಂತೆಯೇ ಸರಿ! (ವ್ಯಂಗ್ಯ)

**ನಾಯಕಿ** : ಸಿಟ್ಟಾಗಬೇಡ ಯುವರಾಜ. ಎಲ್ಲಕ್ಕೂ ಕಾಲ ಒದಗಿ ಬರಬೇಕು. ಆತುರಪಟ್ಟು ಕೈ ಹಚ್ಚಿದರೆ ಕೆಲಸ ಕೆಡುತ್ತದೆ.

**ನರಸಿಂಹ** : ಮುಂದೆ ಕೆಡುವುದೇನು ಬಂತು? ಈಗಾಗಲೇ ಕೆಟ್ಟು ಕೂತಿದೆಯಲ್ಲ.... ಬ್ರಹ್ಮಣ್ಣನ ಜಾಣತನದ ಮುಂದೆ ನಮ್ಮದೇನೂ ನಡೆಯುವುದಿಲ್ಲ.... ನೀನೇನೋ ಮಹಾ ಉದಾರಿಯಂತೆ ನಮ್ಮಣ್ಣನ ಮಗಳಿಗೆ ಆ ಅಲರಾಜುವಿನ ಜೊತೆ ಮದುವೆ ಬೇರೆ ಮಾಡಿಸುತ್ತಿರುವಿಯಂತೆ!... ಅಳಿಯನೇ ಮಾವನ ಉತ್ತರಾಧಿಕಾರಿಯಾಗಿ ರಾಜ್ಯವಹಿಸಿಕೊಳ್ಳುತ್ತಾನೆ.... ಇನ್ನು ನನಗೆಲ್ಲಿಯ ರಾಜ್ಯ..... ನಿನ್ನ ಸೋಗಲಾಡಿತನದ ಮಾತುಗಳನ್ನು ಕೇಳಿದ್ದು ಸಾಕು... ನನ್ನ ಪಾಡಿಗೆ ನನ್ನನ್ನು ಬಿಟ್ಟು ಬಿಡಿ.

**ನಾಯಕಿ** : (ಸಮಾಧಾನದ ದನಿಯಲ್ಲಿ) ಯುವರಾಜ ನಿನಗೆ ಸ್ವಲ್ಪವೂ ಮುಂದಾಲೋಚನೆಯಿಲ್ಲ. ನಾನು ಬೇಕೆಂದೇ ಈ ಮದುವೆಯನ್ನು ಪ್ರೋತ್ಸಾಹಿಸಿದ್ದೇನೆ. ನಮ್ಮ ಮೇಲೆ ಕಿಂಚಿತ್ತೂ ಅಪವಾದವಿಲ್ಲದೆ, ನಮ್ಮ ಉದ್ದೇಶಗಳು ತಮಗೆ ತಾವೇ ಈಡೇರುವಂತಹ ನನ್ನ ಹುನ್ನಾರಗಳು ನಿನಗೆ ಅರ್ಥವಾಗುವುದಿಲ್ಲ. ಬರಿ ಮದುವೆಯಷ್ಟೇ ಅಲ್ಲ.... ಬ್ರಹ್ಮಣ್ಣ

ರಾಜ್ಯದ ಹಂಚಿಕೆಗೂ ಪ್ರಯತ್ನಿಸುತ್ತಾನೆ. ಮಲಿದೇವ ಸೋದರರನ್ನು ಸೆರೆಯಲ್ಲಿರಿಸಿ ನಲಗಾಮ ಬ್ರಹ್ಮಣ್ಣ ಮತ್ತು ಅವನ ಬಂಟರ ಉಗ್ರಕೋಪಕ್ಕೆ ಗುರಿಯಾಗಿದ್ದಾನೆ. ಅವರೆಲ್ಲರೂ ಮಲಿದೇವ ಸೋದರರನ್ನು ಬಿಡಿಸಲು ಪ್ರಯತ್ನಿಸುವುದೇ ಅಲ್ಲದೆ ರಾಜ್ಯದ ಮೇಲೆ ಆಕ್ರಮಣ ಮಾಡಿ ಕಸಿದುಕೊಂಡರೂ ಆಶ್ಚರ್ಯಪಡಬೇಕಿಲ್ಲ.

**ನರಸಿಂಹ** : ಅದರಿಂದ ನನಗೆ ಬರುವ ಪ್ರಯೋಜನವೇನು?

**ನಾಯಕಿ** : ಅಲ್ಲೇ ಇರುವುದು ರಾಜಕೀಯ. (ವೀರಭದ್ರನ ಕಡೆ ನೋಡುತ್ತ) ವೀರಭದ್ರ ಈಗ ನೀನೊಂದು ಮುಖ್ಯವಾದ ಕೆಲಸ ಮಾಡಬೇಕು. ಬ್ರಹ್ಮಣ್ಣನು ತನ್ನವರನ್ನೆಲ್ಲ ಮಂತ್ರಾಲೋಚನೆಗೆ ಕರೆದಿದ್ದಾನಂತೆ. ನೀನೂ ಹೇಗಾದರೂ ನಿನ್ನ ಗೂಢಚಾರಿಕೆಯ ಜಾಣ್ಮೆಯಿಂದ ಅಲ್ಲಿ ನಡೆಯುವುದೆಲ್ಲವನ್ನೂ ತಿಳಿದು ಬಂದು ಹೇಳು. ಮುಂದಿನ ಹೆಜ್ಜೆಯನ್ನು ಹೇಗಿಡಬೇಕೆಂದು ಆಮೇಲೆ ನಿರ್ಧರಿಸೋಣ.

**ವೀರಭದ್ರ** : ಆಯಿತು ಅಮ್ಮ. ನೀವು ಹೇಳಿದಂತೆಯೇ ಅಲ್ಲಿಗೆ ಹೋಗಿ ತಿಳಿದು ಬರುತ್ತೇನೆ..... ಅಮ್ಮ, ಜಂಗಮನನ್ನು ಕೊಲೆ ಮಾಡಿದ ಆ ನಮ್ಮ ವೆಂಕಾರೆಡ್ಡಿಯನ್ನು ರಹಸ್ಯ ಮಂದಿರಲ್ಲಿಯೇ ಮುಂದುವರೆಸುವುದೇ ಅಥವಾ ಬಿಟ್ಟು ಬಿಡೋದೇ?

**ನಾಯಕಿ** : ಇನ್ನೂ ಸ್ವಲ್ಪ ಕಾಲ ಮರೆಯಾಗಿಯೇ ಇರಲಿ. ಅವನನ್ನು ಹೊರಗೆ ಬಿಟ್ಟರೆ ನಮ್ಮ ಗುಟ್ಟು ರಟ್ಟಾದೀತು. ನಾವೇ ಕೊಂದು ವೈಷ್ಣವರ ಮೇಲೆ ಅಪವಾದ ಹೊರಿಸಿದ ಸಂಗತಿ ಬಯಲಾದರೆ ಪ್ರಜೆಗಳು ದಂಗೆ ಎದ್ದಾರು.... ಜೋಕೆ! ಗುಟ್ಟಾಗಿ ಹೋಗಿ ಬಾ.

(ವೀರಭದ್ರ ತಲೆಬಾಗಿ ನಮಸ್ಕರಿಸಿ ಹಿಂತಿರುಗುತ್ತಾನೆ. ನಾಯಕಿ ನರಸಿಂಹನ ಕಡೆ ತಿರುಗಿ)

**ನಾಯಕಿ** : (ಏನನ್ನೋ ತಟ್ಟನೆ ನೆನಪಿಸಿಕೊಂಡಂತೆ) ಹಾಂ! ನಾನು ಏನು ಹೇಳುತ್ತಿದ್ದೆ?.... ಅದೇ. ರಾಜ್ಯ ಇಬ್ಭಾಗವಾದರೆ ನಮಗೆ ಲಾಭ! ಅದೂ ನಮ್ಮ ಸಮರ್ಥನೆಗೆ ಸಹಾಯಕವಾಗುತ್ತದೆ.

**ನರಸಿಂಹ** : ಅದು ಹೇಗೆ ಸಾಧ್ಯ?... ರಾಜ್ಯದಲ್ಲಿ ಪಾಲನ್ನು ಅವರು ತೆಗೆದುಕೊಳ್ಳುತ್ತಾರೆ. ಅಣ್ಣನಿಗೆ ಉಳಿದ ಭಾಗವಿರುತ್ತದೆ. ಮಧ್ಯದಲ್ಲಿ ನಾನು!.... ನನಗೇನು ಸಿಗುತ್ತದೆ ನಾಗಮ್ಮ? ನಿನ್ನ ಮಾತುಗಳನ್ನು ಕೇಳಿ ಕೇಳಿ ಬರೀ ಕನಸುಗಳ ಸಾಮ್ರಾಜ್ಯ ಕಟ್ಟಿಕೊಂಡು ಬಾಳುವುದಷ್ಟೇ ನನ್ನ ಪಾಲಿಗೆ ಉಳಿಯುವುದೆನಿಸುತ್ತದೆ.

**ನಾಯಕಿ** : ನರಸಿಂಹ ಯುವರಾಜರೇ, ಕಾರ್ಯಗಳು ಫಲಿಸಬೇಕಾದರೆ ಕಾರಣಗಳು ಪಕ್ವವಾಗುವವರೆಗೆ ಕಾಯಬೇಕು. ನಿಮ್ಮಣ್ಣಂದಿರಿಗೆ ಮನಸ್ಸಿನ ದೃಢತೆ ಇಲ್ಲ. ಯಾವಾಗ ಏನನ್ನು ಮಾತನಾಡುತ್ತಾರೋ, ಯಾರಿಗೆ ಏನು ಮಾತು ಕೊಡುತ್ತಾರೋ ಹೇಳುವುದಕ್ಕೆ ಆಗುವುದಿಲ್ಲ. ದೊಡ್ಡಮ್ಮನ ಕಣ್ಣೀರು, ಬ್ರಹ್ಮಣ್ಣನ ನರಿಬುದ್ಧಿಗಳಿಗೆ ಬಲಿಯಾಗಿ ರಾಜ್ಯದ ಪಾಲು ಕೊಡಲು ಒಪ್ಪಿಕೊಳ್ಳುವ ಸಾಧ್ಯತೆಯೂ ಇದೆ.... ನೀವು ಈ ಅವಕಾಶವನ್ನು ಉಪಯೋಗಿಸಿಕೊಂಡು ಪಾಲು ಕೊಡುವುದು ಬೇಡ ಎಂದು ವಿರೋಧಿಸಿ. ಒಂದು ವೇಳೆ ಕೊಡುವುದೇ ಅನಿವಾರ್ಯವೆನಿಸಿದರೆ, ನಿಮಗೂ ಪಾಲು ನೀಡಬೇಕೆಂದು ಹಟ ಹಿಡಿಯಿರಿ. ಆಗ ನಲಗಾಮ ಪ್ರಭುಗಳಿಂದ ಏನು ಪ್ರತಿಕ್ರಿಯೆ ಬರಬಹುದೋ ಕಾದು ನೋಡಿ.... ನನ್ನನ್ನು ಪರಾಮರ್ಶಿಸಿಯೇ ಪರಾಮರ್ಶಿಸುತ್ತಾರೆ. ಬ್ರಹ್ಮಣ್ಣನ ದುಷ್ಟ ಸಂಚಿನ ಹಿನ್ನೆಲೆ ಇದೆಯೆಂದು ನಾನು ಪ್ರಭುಗಳ ತಲೆ ಕೆಡಿಸುತ್ತೇನೆ.

**ನರಸಿಂಹ** : ನಮ್ಮಣ್ಣನ ನಂತರ ನನಗೆ ಈ ರಾಜ್ಯ ಸಮಸ್ತವೆಂದೂ ನನ್ನನ್ನೇ ರಾಜನನ್ನಾಗಿ ಮಾಡುತ್ತೇನೆಂದು ಹೇಳಿದವಳು ಅಲರಾಜನನ್ನು ಅಳಿಯನಾಗಿಸಿ, ಅವನೇ ಮುಂದೆ ರಾಜನಾಗುವಂತೆ ನೀನೇ ದಾರಿ ಮಾಡಿಕೊಟ್ಟಿರುವೆ.

**ನಾಯಕಿ** : ಯುವರಾಜರೇ ಎಷ್ಟು ಸಲ ನಿಮಗೆ ತಿಳಿಸಿ ಹೇಳಲಿ? ನಾನು ಯಾವುದನ್ನೇ ಮಾಡಲಿ ಮುಂದಿನ ಯೋಜನೆಗಳನ್ನು ಯೋಚಿಸಿಯೇ ಮಾಡುತ್ತೇನೆ. ನಿಮಗೆ ಗೊತ್ತೇ ಇದೆ. ಅಲರಾಜು, ಕೊಮ್ಮರಾಜುಗಳು ಬ್ರಹ್ಮಣ್ಣನ ಹಿಂಬಾಲಕರು. ಅವನು ಹೇಳಿದಂತೆ ಕೇಳುವವರು. ಬ್ರಹ್ಮಣ್ಣನ ಪರವಾಗಿ ನಿಲ್ಲುವವರು ನಮಗೆ ಶತ್ರುಗಳೇ ಅಲ್ಲವೇ. ನಲಗಾಮ ಪ್ರಭುಗಳು ಮಾವಂದಿರೇ ಆದರೂ ಅವರು ತಮ್ಮ ರಾಷ್ಟ್ರಭಕ್ತಿ ಬ್ರಹ್ಮಣ್ಣನ ಮೇಲಿನ ಗೌರವವನ್ನು ಮರೆಯುವುದಿಲ್ಲ. ಯಾವುದಾದರೂ ನೆಪದಿಂದ ಸಂಚಿನಿಂದ ಅಲರಾಜು ಹತನಾದರೆ, ಆ ಆಘಾತ ಸಹಿಸಲಾರದೆ, ಮಗಳ ವೈಧವ್ಯವನ್ನು ನೋಡಿ ಭರಿಸಲಾಗದೆ ನಲಗಾಮ ಪ್ರಭುಗಳು ಆತ್ಮಹತ್ಯೆ ಮಾಡಿಕೊಳ್ಳುತ್ತಾರೆ. ಹೀಗಾಗಿ ಉಳಿಯುವುದು ನೀವೊಬ್ಬರೇ! ಮಲಿದೇವ ಸೋದರರು ಮೊದಲೇ ಬೇರೆಯಾಗಿ ಹೋಗಿದ್ದಾರೆ. ಅವಕಾಶ ನೋಡಿ ಅವರ ರಾಜ್ಯದ ಮೇಲೆ ದಂಡೆತ್ತಿ ಹೋಗಿಯೋ, ಉಪಾಯಾಂತರದಿಂದಲೋ ವಶಪಡಿಸಿಕೊಂಡರೆ ಮುಗಿಯಿತು. ಪಲನಾಡ ಏಕಚ್ಛತ್ರದ ಅಡಿಯಲ್ಲಿ ನೀವೇ ಪ್ರಭುಗಳಾಗಿ ಮೆರೆಯುತ್ತೀರಿ.

**ನರಸಿಂಹ** : (ಆಶ್ಚರ್ಯೋದ್ಗಾರದಿಂದ) ವಾಹ್ ನಾಗಮ್ಮ! ವಾಹ್! ಸ್ತ್ರೀ ಬುದ್ಧಿ! ಪ್ರಳಯಾಂತಕ! ಎನ್ನುವ ಮಾತು ಸುಳ್ಳಲ್ಲ. ನಿನ್ನ ವಿಚಾರದಲ್ಲಿಯಂತೂ ಅಕ್ಷರಶಃ ನಿಜವಾಗಿದೆ.... ಸರಿ ಈಗ ನಾನೇನು ಮಾಡಲಿ? ಅಣ್ಣನನ್ನು ಕಂಡು ಬಂದು ಮುಂದಿನದನ್ನು ಯೋಚಿಸೋಣವೇ?

**ನಾಯಕಿ** : ಹಾಗೆಯೇ ಆಗಲಿ.... ಈ ಸಮಯದಲ್ಲಿ ನಾವೆಲ್ಲರೂ ಎಚ್ಚರಿಕೆಯಿಂದ ಇರಬೇಕು. ನನಗೆ ಅನಿಸುತ್ತೆ, ನಿಮ್ಮಣ್ಣ ಮಲಿದೇವಾದಿಗಳಿಗೆ ರಾಜ್ಯದಲ್ಲಿ ಪಾಲು ಹಂಚಿಯೇ ಕೊಡುತ್ತಾರೆ.... ಆದರೆ ನೀವೇನೂ ಯೋಚಿಸಬೇಡಿ. ಮುಂದಿನ ಆಟಕ್ಕೆ ಕಾಯಿಗಳನ್ನು ಎತ್ತ ನಡೆಸಬೇಕೆಂಬುದನ್ನು ಲೆಕ್ಕಾಚಾರ ಹಾಕಿದ್ದೇನೆ. (ಎಂದು ಮಾತನಾಡುತ್ತಿರುವಷ್ಟರಲ್ಲಿ ಗಾಭರಿ. ಚೀತ್ಕಾರದ ಧ್ವನಿಗಳು ಕೇಳಿಸುತ್ತವೆ. ಅಯ್ಯೋ! ಅಯ್ಯೋ! ಓಡಿ! ಗುರುಜಾಲದ ಮೇಲೆ ಬ್ರಮ್ಹಣ್ಣನ ಕಡೆಯವರು ದಾಳಿ ಮಾಡಿದ್ದಾರೆ. ಅರಮನೆಯನ್ನು ನಾಲ್ಕೂ ಕಡೆಯಿಂದ ಸುತ್ತುವರೆದಿದ್ದಾರೆ ಕಾಪಾಡಿ! ಕಾಪಾಡಿ......ಅದೋ ಬಂದರು....ತಪ್ಪಿಸಿಕೊಳ್ಳಿ ಎಂಬ ಮಾತುಗಳು ಕೇಳಿ ಬರುತ್ತವೆ)

**ನರಸಿಂಹ** : (ಆಶ್ಚರ್ಯೋದ್ಗಾರದಿಂದ) ವಾಹ್ ನಾಗಮ್ಮ! ವಾಹ್! ಸ್ತ್ರೀ ಬುದ್ಧಿ! ಪ್ರಳಯಾಂತಕ! ಎನ್ನುವ ಮಾತು ಸುಳ್ಳಲ್ಲ. ನಿನ್ನ ವಿಚಾರದಲ್ಲಿಯಂತೂ ಅಕ್ಷರಶಃ ನಿಜವಾಗಿದೆ.... ಸರಿ ಈಗ ನಾನೇನು ಮಾಡಲಿ? ಅಣ್ಣನನ್ನು ಕಂಡು ಬಂದು ಮುಂದಿನದನ್ನು ಯೋಚಿಸೋಣವೇ?

**ನಾಯಕಿ** : ಹಾಗೆಯೇ ಆಗಲಿ...ಈ ಸಮಯದಲ್ಲಿ ನಾವೆಲ್ಲರೂ ಎಚ್ಚರಿಕೆಯಿಂದ ಇರಬೇಕು. ನನಗೆ ಅನಿಸುತ್ತೆ, ನಿಮ್ಮಣ್ಣ ಮಲಿದೇವಾದಿಗಳಿಗೆ ರಾಜ್ಯದಲ್ಲಿ ಪಾಲು ಹಂಚಿಯೇ ಕೊಡುತ್ತಾರೆ..... ಆದರೆ ನೀವೇನೂ ಯೋಚಿಸಬೇಡಿ. ಮುಂದಿನ ಆಟಕ್ಕೆ ಕಾಯಿಗಳನ್ನು ಎತ್ತ ನಡೆಸಬೇಕೆಂಬುದನ್ನು ಲೆಕ್ಕಾಚಾರ ಹಾಕಿದ್ದೇನೆ. (ಎಂದು ಮಾತನಾಡುತ್ತಿರುವಷ್ಟರಲ್ಲಿ ಗಾಭರಿ. ಚೀತ್ಕಾರದ ಧ್ವನಿಗಳು ಕೇಳಿಸುತ್ತವೆ. ಅಯ್ಯೋ! ಅಯ್ಯೋ! ಓಡಿ! ಗುರುಜಾಲದ ಮೇಲೆ ಬ್ರಮ್ಹಣ್ಣನ ಕಡೆಯವರು ದಾಳಿ ಮಾಡಿದ್ದಾರೆ. ಅರಮನೆಯನ್ನು ನಾಲ್ಕೂ ಕಡೆಯಿಂದ ಸುತ್ತುವರೆದಿದ್ದಾರೆ ಕಾಪಾಡಿ! ಕಾಪಾಡಿ......... ಅದೋ ಬಂದರು..... ತಪ್ಪಿಸಿಕೊಳ್ಳಿ ಎಂಬ ಮಾತುಗಳು ಕೇಳಿ ಬರುತ್ತವೆ)

**ನರಸಿಂಹ** : ಅಯ್ಯೋ ಈಗೇನು ಮಾಡುವುದು? ಬ್ರಹ್ಮಣ್ಣನ ಬಂಟರು ನಮ್ಮನ್ನು ಜೀವ ಸಹಿತ ಉಳಿಸುವುದಿಲ್ಲ.

**ನಾಯಕಿ** : ಗಾಭರಿಯಾಗಬೇಡಿ ಯುವರಾಜರೇ. ಅವರು ನಮ್ಮನ್ನು ಏನೂ ಮಾಡುವುದಿಲ್ಲ. ಬ್ರಹ್ಮಣ್ಣ ನಮಗೆ ಎಷ್ಟೇ ಶತ್ರುವೆನಿಸಿದರೂ ನಿಮ್ಮ ಮೇಲಿನ ರಾಜ ಭಕ್ತಿಯಿಂದ ನಿಮ್ಮನ್ನು ಯಾರನ್ನೂ ಕೊಲ್ಲುವುದಿಲ್ಲ..... ಇನ್ನು ನನ್ನನ್ನು.....!.... (ನಕ್ಕು) ಅವನೆಂದೂ ಸ್ತ್ರೀ ಹತ್ಯೆಗೆ ಕೈ ಹಚ್ಚುವುದಿಲ್ಲ.

ಅವನಿಗೆ ದೈವ ಭೀತಿ, ಪಾಪ ಭೀತಿಗಳಿವೆ.... ಅಲ್ಲದೆ ಇದೆಲ್ಲ ಈಗ ಮಾಡಿರುವುದು ನಮ್ಮನ್ನು ಹೆದರಿಸುವುದಕ್ಕೆ ಮಾತ್ರ. ಮಲಿದೇವ ಸೋದರರ ಸೆರೆ ಬಿಡಿಸುವುದಕ್ಕಾಗಿ ಮತ್ತು ಕೆಲವು ಷರತ್ತುಗಳನ್ನು ಹಾಕುವುದಕ್ಕಾಗಿಯೇ ಈ ಆರ್ಭಟ ಈ ಸಿಂಹ ಗರ್ಜನೆ ಎಲ್ಲ!

**ನರಸಿಂಹ** : ಆದರೂ ನನಗೇಕೋ ಭಯವಾಗುತ್ತಿದೆ.

**ನಾಯಕಿ** : ನಿಮಗೆ ಭಯ ಬೇಡವೆಂದು ಹೇಳಿದೆನಲ್ಲ.... ಬನ್ನಿ ಈಗ ನಾವು ಕೂಡಲೇ ಪ್ರಭುಗಳನ್ನು ಕಾಣಬೇಕು. ಅವರ ಕೈಯಲ್ಲಿ ಸಿಕ್ಕು ಏನು ಪಾಡು ಪಡುತ್ತಿದ್ದಾರೋ! ಅವರನ್ನು ಮೊದಲು ಸಂಕಟದಿಂದ ಬಿಡಿಸೋಣ.

(ನಲಗಾಮ-ಎಲ್ಲಿರುವೆ.... ನಿನ್ನನ್ನು ಸುಮ್ಮನೆ ಬಿಡುವುದಿಲ್ಲ... ಹೋಗು ಹೋಗು.... ಎಲ್ಲಿಗೆ ಹೋಗಲು ಸಾಧ್ಯ? ನಾಗಮ್ಮನ ಸೆರಗಿನ ಮರೆಯಲ್ಲಿ ಅವಿತು ಕೊಳ್ಳುವುದೊಂದೇ ನಿನಗೆ ಗೊತ್ತಿರುವುದು..... ನಿನ್ನನ್ನು ಬಿಡುವುದಿಲ್ಲ" ಎಂಬ ಸದ್ದುಗಳು ಕೇಳಿಸುತ್ತಲೇ ಇರುತ್ತವೆ.)

OO

# ದೃಶ್ಯ – ೭

(ನಲಗಾಮ ರಾಜನ ಸಭೆ ಆಪ್ತರು ಮಂತ್ರಿಗಳು ಕುಳಿತಿದ್ದಾರೆ. ನಲಗಾಮನ ಎಡಬಲಗಳಲ್ಲಿ ನರಸಿಂಹ, ನಾಯಕಿ ಕುಳಿತಿದ್ದಾರೆ. ಬ್ರಹ್ಮಣ್ಣನ ಬಂಟ ಕನ್ನಮನಾಯುಡು ನಲಗಾಮನ ಎದುರಿಗೆ ಕೈ ಕಟ್ಟಿ ನಿಂತಿದ್ದಾನೆ. ಸಭೆಯಲ್ಲಿ ಆಸನಗಳ ಮೇಲೆ ಇನ್ನೂ ಕೆಲವು ಹಿರಿಯರು, ಪ್ರಜೆಗಳು ಕುಳಿತಿದ್ದಾರೆ. ಸಭೆಯಲ್ಲಿ ಗಂಭೀರ ವಾತಾವರಣ ಕವಿದಿದೆ.)

**ನಲಗಾಮ :** ಏನು ಕನ್ನಮ, ನನ್ನ ರಾಜ್ಯದಲ್ಲಿ ನನ್ನ ಅನ್ನ ತಿಂದು ನನ್ನ ಮೇಲೆ ಆಕ್ರಮಣ ಮಾಡುವ ಸಾಹಸ ಬಂತೇನು ನಿಮ್ಮ ಬ್ರಹ್ಮಣ್ಣನಿಗೆ?

**ಕನ್ನಮ :** ಪ್ರಭು ನಾನು ಸಣ್ಣವನು ಕ್ಷಮಿಸಬೇಕು. ಈಗ ನಾನು ಹೇಳುವ ಮಾತುಗಳು ನನ್ನ ಮಾತುಗಳಲ್ಲ. ಬ್ರಹ್ಮಣ್ಣನ ಮಾತುಗಳು....ನೀವು ವೃಥಾ ಸಿಟ್ಟಾಗದೆ ತಾಳ್ಮೆಯಿಂದ ಕೇಳಿ.

**ನಲಗಾಮ :** ಏನದು ಅವನ ಸೊಕ್ಕಿನ ಮಾತುಗಳು. ಯಾಕೆ? ಅವನಿಗೇ ಬರುವುದಕ್ಕೆ ಆಗುವುದಿಲ್ಲವೇನು (ಸಿಟ್ಟಿನಿಂದ) ಯಾರಲ್ಲಿ?..... (ಎಂದು ಬೊಬ್ಬೆ ಹಾಕುತ್ತಾನೆ. ಇಬ್ಬರು ಭಟರು ತಕ್ಷಣ ಬಂದು ನಿಲ್ಲುತ್ತಾರೆ. ಅವರನ್ನು ಕಂಡು).... ಹೋಗಿ ಈಗಲೇ ಹೋಗಿ ಆ ಸೊಕ್ಕಿನ ಮನುಷ್ಯ ಬ್ರಹ್ಮಣ್ಣನನ್ನು ಎಳೆದುಕೊಂಡು ಬನ್ನಿ..... (ಎಂದ ಕೂಡಲೇ ಭಟರು ಮರಳುತ್ತಾರೆ. ನಲಗಾಮ ಇನ್ನೂ ಸಿಟ್ಟಿನಿಂದಲೇ ಮಾತು ಮುಂದುವರೆಸುತ್ತಾನೆ) ಎಂತಹ ಅಹಂಕಾರ! ನಮ್ಮ ಮೇಲೇ ದುರಾಕ್ರಮಣ ಮಾಡುವ ಸಾಹಸಕ್ಕೆ ಹೊರಟಿರುವ ಈ ಬ್ರಹ್ಮಣ್ಣನನ್ನು ಕೂಡಲೇ ಗಲ್ಲಿಗೇರಿಸಬೇಕು.... ನೆಮ್ಮದಿಯಿಂದ ಇದ್ದ ಈ ನಾಡು ಬ್ರಹ್ಮಣ್ಣನ ಪಿತೂರಿಗಳಿಂದ ವಂಚನೆಗಳಿಂದ ಅಂತಃ ಕಲಹಗಳ, ಅಶಾಂತಿಯ ನೆಲೆವೀಡಾಗಿದೆ..... (ಎಲ್ಲರ ಕಡೆ ತಿರುಗಿ) ನೀವು... ನೀವೆಲ್ಲ ಏನು ಮಾಡುತ್ತಿದ್ದೀರಿ?..... (ಸಭೆಯಲ್ಲಿ ಗುಜು ಗುಜು ಒಬ್ಬ ರೊಬ್ಬರ ಮುಖವನ್ನು ನೋಡಿಕೊಳ್ಳುತ್ತಾರೆ. ಅಷ್ಟರಲ್ಲಿ ಅಗೋ ಬ್ರಹ್ಮಣ್ಣ ಎಂದದ್ದು ಕೇಳಿ ಎಲ್ಲರ ದೃಷ್ಟಿ ಆ ಕಡೆಗೆ ಹೊರಳುತ್ತದೆ. ಬ್ರಹ್ಮಣ್ಣ ಎಂದದ್ದು ಕೇಳಿ ಎಲ್ಲರ ದೃಷ್ಟಿ ಆ ಕಡೆಗೆ ಹೊರಳುತ್ತದೆ.

ಬ್ರಹ್ಮಣ್ಣ ಭಟರ ಬೆಂಗಾವಲಿನಲ್ಲಿ ನಿಧಾನವಾಗಿ ನಡೆದು ಬಂದು ನಲಗಾಮ ಪ್ರಭುಗಳಿಗೆ ವಂದಿಸಿ ಗೌರವ ಸೂಚಿಸುತ್ತಾನೆ)

**ನಲಗಾಮ :** (ವ್ಯಂಗ್ಯವಾಗಿ) ಏನು ಬ್ರಹ್ಮಣ್ಣನವರೇ, ನಿಮ್ಮ ರಾಜಭಕ್ತಿಯ ರೀತಿ ಇದೇ ಏನು? ಉಪ್ಪುಂಡ ಮನೆಗೆ ಕನ್ನ ಹಾಕುವುದು ನಿಮ್ಮಂತಹ ಹಿರಿಯರಿಗೆ ಶೋಭಿಸುವುದಿಲ್ಲ. ನಿಮಗೆ ನಾವೇನು ಅನ್ಯಾಯ ಮಾಡಿದ್ದೇವೆಂದು ನಮ್ಮ ಮೇಲೆ ಆಕ್ರಮಣ ಮಾಡಿದಿರಿ?

**ಬ್ರಹ್ಮಣ್ಣ :** (ಮೆಲು ದನಿಯಲ್ಲಿ ನಿಧಾನವಾಗಿ) ಪ್ರಭು ನಿಮ್ಮಿಂದ ಏನಾಗಿದೆ ಎನ್ನುವುದನ್ನು ನಿಮ್ಮ ಮನಸಾಕ್ಷಿಯನ್ನು ಕೇಳಿಕೊಳ್ಳಿ. ಒಬ್ಬ ತಂದೆಯ ಮಕ್ಕಳಲ್ಲಿಯೇ ತಾರತಮ್ಯ ಪಕ್ಷಪಾತಗಳು ಎಷ್ಟು ಸರಿ ಎಂದು ಹೇಳಿ! ಹಿರಿಯಣ್ಣನಾದ ನೀವು ನಿಮ್ಮ ಮಲಸೋದರರನ್ನು ನಡೆಸಿಕೊಳ್ಳುವ ರೀತಿ ಇದೇ ಏನು? ನಿರಪರಾಧಿಗಳಾದ, ಮುಗ್ಧರಾದ ಮಲಿದೇವ ಸೋದರರನ್ನು ಸೆರೆಯಲ್ಲಿ ಇರಿಸುವುದು ಯಾವ ನ್ಯಾಯ?

**ನಲಗಾಮ :** ರಾಜದ್ರೋಹ, ದೇಶದ್ರೋಹ ಮಾಡಿದವರನ್ನು ಅವರು ಯಾರೇ ಆಗಿರಲಿ ಬಂಧಿಸುವುದು ನಮ್ಮ ಕರ್ತವ್ಯ.

**ಬ್ರಹ್ಮಣ್ಣ :** ಪ್ರಭು ಅವರು ದ್ರೋಹ ಬಗೆಯುವ ಆಲೋಚನೆಯನ್ನೂ ಮಾಡಲಾಗದಷ್ಟು ಸರಳರು. ಮುಗ್ಧರು.... ಹೋಗಲಿ ಅವರು ಮಾಡಿದ ದ್ರೋಹ ಯಾವುದು...... ನೀವೇನಾದರೂ ಖುದ್ದಾಗಿ ಕಂಡಿದ್ದೀರೇನು?

**ನಲಗಾಮ :** ನಾವೇ ಕಾಣಬೇಕೆಂದೇನೂ ಇಲ್ಲವಲ್ಲ ಬೇರೆಯವರಿಂದ ತಿಳಿದು ಬಂದರೂ, ದೂರು ಬಂದರೂ ಅದನ್ನು ಪರಿಗಣಿಸಿ ಶಿಕ್ಷಿಸುವುದು ನನ್ನ ಧರ್ಮ.

**ಬ್ರಹ್ಮಣ್ಣ :** (ಆಶ್ಚರ್ಯದಿಂದ) ಅಂದರೆ? ಯಾರ ಮೇಲೆ ಬೇಕಾದರೂ ದೂರು ಕೊಟ್ಟರೆ, ವಿಚಾರಣೆ, ತೀರ್ಪು ಇದು ಯಾವುದೂ ಇಲ್ಲದೆ ನೀವೇ ನಿರ್ಧರಿಸಿ ಬಿಡುತ್ತೀರೇನು ಶಿಕ್ಷೆಯನ್ನು?.... ಹಾಗಾದರೆ ನ್ಯಾಯಾಂಗದ ಅಸ್ತಿತ್ವದ ಅಗತ್ಯವೇಕೆ ಈ ಅರಾಜಕ ರಾಜ್ಯಕ್ಕೆ?

**ನಲಗಾಮ :** ಬ್ರಹ್ಮಣ್ಣನವರೆ ಹಿರಿತನದ ಅಧಿಕಾರದಿಂದ ನಿಮಗೆ ತೋಚಿದ್ದೆಲ್ಲವನ್ನೂ ಮಾತನಾಡಬೇಡಿ. ಆ ಪೋರರು ನನ್ನ ಕೊಲೆಗೆ ಪ್ರಯತ್ನಿಸಿ ಸಿಕ್ಕಿ ಬಿದ್ದರು. ನಮ್ಮ ನಾಯಕಿ ನಾಗಮ್ಮನ ಸಮಯ ಸ್ಫೂರ್ತಿ, ಚಾಣಾಕ್ಷತೆಗಳಿಂದ ಅಂದು ಹೇಗೋ ಉಳಿದು ಪಾರಾದೆವು.

**ಬ್ರಹ್ಮಣ್ಣ :** (ನಕ್ಕು) ಬಹಳ ಚೆನ್ನಾಗಿದೆ ಪ್ರಭು ನಿಮ್ಮ ಕಟ್ಟುಕತೆ!... ಆಗಲೇ ಅವರನ್ನು ಹಿಡಿದು ಪರೀಕ್ಷಿಸಬಾರದಿತ್ತೆ?

**ನಲಗಾಮ :** ತಪ್ಪಿಸಿಕೊಂಡು ಓಡಿಹೋದರಲ್ಲ!

**ಬ್ರಹ್ಮಣ್ಣ :** ಇಷ್ಟೊಂದು ಮಂದಿ ನಂಬಿಗೆ ಬಂಟರು ನಿಮ್ಮ ಮೈಗಾವಲಿಗಿರುವಾಗ ಅದು ಹೇಗೆ ತಪ್ಪಿಸಿಕೊಂಡರು ಪ್ರಭು?... ಸುಮ್ಮನೆ ನೀವು ನಿಮ್ಮ ಅನ್ಯಾಯವನ್ನು ಸಮರ್ಥಿಸಿಕೊಳ್ಳಲು ಪ್ರಯತ್ನಿಸಬೇಡಿ... ಆ ಕುಟಿಲ ಕುತಂತ್ರಗಳ ಹೆಣ್ಣಿನ ಕೈಗೊಂಬೆಯಾಗಿ ವಿವೇಕರಹಿತವಾಗಿ ಮಾಡಬಾರದ್ದನ್ನೆಲ್ಲ ಮಾಡಲು ಹೊರಟಿದ್ದೀರಿ. ಇದರ ಪರಿಣಾಮಗಳು ನೆಟ್ಟಗಾಗುವುದಿಲ್ಲವೆಂದು ಎಚ್ಚರಿಸುತ್ತಿದ್ದೀನಿ... ಕಡೆಗೆ ಪಲನಾಡು ವಿನಾಶದ ಅಂಚನ್ನು ತಲುಪುತ್ತದೆ. ಇದು ಸತ್ಯ. ಈಗಲಾದರೂ ಬುದ್ಧಿ ತಂದುಕೊಳ್ಳಿ.

**ನಲಗಾಮ :** ಬ್ರಹ್ಮಣ್ಣನವರೇ ನಮಗೆ ಬುದ್ಧಿವಾದ ಹೇಳಲೆಂದು ನಿಮ್ಮನ್ನು ಕರೆಸಲಿಲ್ಲ. ನಮ್ಮ ಮೇಲೆ ಆಕ್ರಮಣದ ಪ್ರಯತ್ನ ಮಾಡಿ ನೀವೂ ದೇಶದ್ರೋಹಿಗಳೇ ಆಗಿದ್ದೀರಿ. ಮೊದಲಿನಿಂದಲೂ ನಿಮಗೆ ನಾಯಕಿ ನಾಗಮ್ಮನ ಮೇಲೆ ಅಸೂಯೆ, ಆಕೆಯ ಅಭಿವೃದ್ಧಿ ನಿಮಗೆ ಸಹಿಸಲಾಗುತ್ತಿಲ್ಲ. ಅವಳ ಮೇಲೆ ನಮ್ಮ ನಂಬಿಕೆ ವಿಶ್ವಾಸಗಳನ್ನು ಕಂಡು ಕರುಬುತ್ತಿದ್ದೀರಿ.

**ಬ್ರಹ್ಮಣ್ಣ :** ಪ್ರಭು ಆಕೆಯನ್ನು ವಹಿಸಿಕೊಂಡು ನಮ್ಮನ್ನು ಅವಮಾನ ಮಾಡುತ್ತಿದ್ದೀರಿ. ಇನ್ನು ನಮಗೆ ಸಹಿಸಿಕೊಳ್ಳಲು ಸಾಧ್ಯವಿಲ್ಲ.... ಮಲಿದೇವ ಸೋದರರನ್ನು ಸೆರೆಯಿಂದ ಬಿಡುಗಡೆ ಮಾಡಿ ಅವರಿಗೆ ಸಲ್ಲಬೇಕಾದ ರಾಜ್ಯದ ಪಾಲನ್ನು ಅವರಿಗೆ ಕೊಟ್ಟುಬಿಡಿ. ಅವರನ್ನು ಕರೆದುಕೊಂಡು ಹೇಗೋ ಬದುಕಿಕೊಳ್ಳುತ್ತೇವೆ. ಅವರಿಗೆ ಒಂದು ದಾರಿ ಆಗುವವರೆಗೆ ಈ ರಾಜಕುಟುಂಬದೊಂದಿಗೆ ನಮ್ಮ ಸಂಬಂಧ ಅನಿವಾರ್ಯ. ಹಿರಿಯ ಪ್ರಭುಗಳು ನನಗೆ ವಹಿಸಿಕೊಟ್ಟ ಜವಾಬ್ದಾರಿಯನ್ನು ನಿರ್ವಹಿಸಿದಲ್ಲದೆ ನಮಗೆ ನೆಮ್ಮದಿಯಿಲ್ಲ.

**ನಾಯಕಿ :** (ತಟ್ಟನೆ ಎದ್ದು) ಪ್ರಭು ಮಧ್ಯ ಪ್ರವೇಶಿಸುತ್ತಿರುವುದಕ್ಕೆ ಮನ್ನಿಸಬೇಕು. ಇಲ್ಲೀವರೆಗೆ ಬ್ರಹ್ಮಣ್ಣನವರು ನನ್ನ ಬಗ್ಗೆ ಹೇಳಿದ್ದೆಲ್ಲವನ್ನೂ ಸಹಿಸಿಕೊಂಡೆ. ಹಿರಿಯರು, ಮಂತ್ರಿಗಳು ಈ ನಾಡಿನ ಶ್ರೇಯೋಭಿಲಾಷಿಗಳು ಎಂದು ಸುಮ್ಮನಿದ್ದೆ... ಆದರೆ ರಾಜ್ಯದಲ್ಲಿ ಪಾಲು ಕೇಳುವುದು ನನಗೆ ಹಿಡಿಸುವುದಿಲ್ಲ. ಪ್ರಭುಗಳು ತಂದೆಯವರೇ ಈ ರಾಜ್ಯಾಧಿಕಾರವನ್ನು ಯಾರು ವಹಿಸಿಕೊಳ್ಳಬೇಕೆಂಬುದನ್ನು ಸ್ಪಷ್ಟಪಡಿಸಿರುವುದು ಬ್ರಹ್ಮಣ್ಣನವರಿಗೆ ತಿಳಿಯದ ವಿಷಯವೇನಲ್ಲ. ಈಗ ರಾಜ್ಯ ಹಂಚಿಕೆಕೊಡಬೇಕೆಂದು ಕೇಳುವುದಕ್ಕೆ ಯಾವ ಅಧಿಕಾರವಿದೆ?

**ಬ್ರಹ್ಮಣ್ಣ :** ಪಟ್ಟ ಮಹಿಷಿಯಾದವೀರ ವಿದ್ಯಾದೇವಿಯ ಸಂತಾನಕ್ಕೇ ನ್ಯಾಯಬದ್ಧವಾಗಿ ರಾಜ್ಯ ಸಲ್ಲಬೇಕು. ಹಾಗಿದ್ದೂ ನಾವೇನೂ ಇಡೀ ರಾಜ್ಯವನ್ನೂ

ಕೊಡಬೇಕೆಂದು ಕೇಳುತ್ತಿಲ್ಲ. ಸೋದರರು ದಾಯಾದಿಗಳಂತೆ ಪರಸ್ಪರ ದ್ವೇಷಾಸೂಯೆಗಳಿಂದ ಕತ್ತಿ ಮಸೆಯುತ್ತ ಇರುವುದು ನೋಡುಗರಿಗೆ ಅಸಹ್ಯವೆನಿಸಬಾರದು. ಅಂತಃಕಲಹಗಳು ಆತ್ಮೀಯವಾಗಿಯೇ ಕಡೆ ಮುಟ್ಟಬೇಕು. ಅದು ಹೊರಗೆ ಚಾಚಿ ಎಲ್ಲರನ್ನೂ ಸೆಳೆಯಬಾರದು. ಅದಕ್ಕಾಗಿ ಹೇಳುತ್ತೇನೆ. ಅವರ ಪಾಲಿನ ಭಾಗವನ್ನು ಕೊಟ್ಟುಬಿಡಿ. ಅದನ್ನು ಬೆಳೆಸಿ ಅಭಿವೃದ್ಧಿಪಡಿಸಿಕೊಳ್ಳುವದು ಅವರ ಜವಾಬ್ದಾರಿ.

**ನರಸಿಂಹ :** ಅಣ್ಣಯ್ಯ ಇದನ್ನು ನಾನು ಒಪ್ಪುವುದಿಲ್ಲ. ಅವರಿಗೆ ರಾಜ್ಯವನ್ನು ಹಂಚಿಕೊಡುವುದಾದರೆ, ನನಗೂ ಒಂದು ಭಾಗವನ್ನು ಕೊಡಿ. ನಾನೂ ಯಾರ ಹಂಗಿಗೂ ಒಳಗಾಗದೆ ಸ್ವತಂತ್ರವಾಗಿ ಬದುಕಿಕೊಳ್ಳುತ್ತೇನೆ. ಅವರು ನಿನಗೆಷ್ಟು ಹತ್ತಿರವೋ ನಾನು ಅಷ್ಟೇ ಹತ್ತಿರ. ಆದ್ದರಿಂದ ನನಗೂ ಪಾಲನ್ನು ಕೊಡಿ.

**ನಲಗಾಮ :** (ಎಲ್ಲರ ಕಡೆ ನೋಡಿ) ಮಂತ್ರಿಗಳೇ ಹಿರಿಯರೇ ಇಲ್ಲಿ ನಡೆಯುತ್ತಿರುವುದನ್ನು ನೀವೆಲ್ಲ ನೋಡುತ್ತಿದ್ದೀರಿ. ಬ್ರಹ್ಮಣ್ಣನವರು ರಾಜ್ಯವನ್ನು ಹಂಚಿಕೊಡಬೇಕೆಂದು ಒತ್ತಾಯಿಸುತ್ತಿದ್ದಾರೆ. ನಿಮ್ಮ ಅಭಿಪ್ರಾಯವೇನು ದಯವಿಟ್ಟು ತಿಳಿಸಿ.

**ಒಬ್ಬ ಮಂತ್ರಿ:** ಪ್ರಭು ಸಮಸ್ಯೆ ಬಹಳ ಸಂಕೀರ್ಣವಾಗಿದೆ, ಗಂಭೀರವಾಗಿದೆ. ಬ್ರಹ್ಮಣ್ಣನವರು ಹೇಳುವಂತೆ ರಾಜಕುಟುಂಬದ ಕಲಹಗಳು ಬೀದಿರಂಪವಾಗಬಾರದು. ಪ್ರಭುಗಳಿಗೆ ಎಲ್ಲರೂ ಮಕ್ಕಳೇ. ಯಾರಿಗೆ ಅನ್ಯಾಯವಾದರೂ ಅನ್ಯಾಯವೇ!...... ಒಂದು ರೀತಿಯಿಂದ ಈ ಬ್ರಹ್ಮಣ್ಣನವರು ಪುರಸ್ಕರಿಸುತ್ತಿರುವ ಸಲಹೆಯನ್ನು ಒಪ್ಪಿ ನಡೆಯುವುದೇ ಎಲ್ಲ ವಿಧದಿಂದ ಸಮುಚಿತವೆನಿಸುತ್ತದೆ.

**ಸಭಿಕರು :** ಹೌದು ಪ್ರಭು. ಮಂತ್ರಿಗಳು ಹೇಳುತ್ತಿರುವುದು ಸತ್ಯ. ಅದೇ ಸರಿಯಾದ ದಾರಿ. ಅಣ್ಣ ತಮ್ಮಂದಿರ ಅಂತಃಕಲಹಗಳು ಸಮರಾಗ್ನಿಯನ್ನು ಹೊತ್ತಿಸಿ ನಿರಪರಾಧಿ ಪ್ರಜೆಗಳ ಪ್ರಾಣ ಹಾನಿಗೆ ಅವಕಾಶ ಮಾಡಿಕೊಡುವುದು ನ್ಯಾಯಸಮ್ಮತಲ್ಲ.

**ನಲಗಾಮ :** (ನಾಗಮ್ಮನ ಕಡೆ ತಿರುಗಿ) ನೀನು ಏನು ಹೇಳುವೆ ನಾಗಮ್ಮ? ಈ ಸಲಹೆಗೆ ನಿನ್ನ ಒಪ್ಪಿಗೆಯಿದೆಯೇ?

**ನಾಯಕಿ :** ಪ್ರಭು ನನಗೆ ಬೇಕಾಗಿರುವುದು ಈ ದೇಶದ ಕ್ಷೇಮ, ಶಾಂತಿಗಳು, ನಿಮ್ಮೆಲ್ಲರ ಸುಖ. ಹಿರಿಯರು ತಿಳಿದವರು ಇದನ್ನು ಸಮ್ಮತಿಸುತ್ತಿರುವಾಗ ನಾನೇನು ಹೇಳಲಿ?.... ಇದನ್ನು ಸಮ್ಮತಿಸುತ್ತಿರುವಾಗ ನಾನೇನು ಹೇಳಲಿ?.... ಇದನ್ನು ವಿರೋಧಿಸಿ ಪ್ರಜೆಗಳ ಕಣ್ಣಲ್ಲಿ ಅಪರಾಧಿಯಾಗಲಾರೆ. ನಿಮ್ಮೆಲ್ಲರಿಗೆ ಸರಿಯೆನಿಸಿದ್ದು ನನಗೂ ಸರಿಯೇ!

ನಲಗಾಮ : ಆಯಿತು ಬ್ರಹ್ಮಣ್ಣನವರೇ ಇನ್ನೂ ನಿಮ್ಮ ಮೇಲೆ ನಮಗೆ ಗೌರವವಿರುವುದರಿಂದ ನಿಮ್ಮ ಬೇಡಿಕೆಯನ್ನು ಒಪ್ಪುತ್ತೇನೆ. ನನಗೂ ಸಾಕಾಗಿದೆ. ದಿನ ಬೆಳಗಾದರೆ ನನ್ನ ತಮ್ಮಂದಿರ ದುರಾಚಾರಗಳ ಬಗ್ಗೆ ಪ್ರಜೆಗಳು ತರುವ ದೂರುಗಳನ್ನು ಕೇಳಿ ತಾಳಿಕೊಳ್ಳುವುದು ನನಗೆ ಬಹಳ ಕಷ್ಟವಾಗಿದೆ. ಇನ್ನಾದರೂ ನೆಮ್ಮದಿಯಿಂದ ಇರುವುದಕ್ಕೆ ಸಾಧ್ಯವಾದೀತು.

ಬ್ರಹ್ಮಣ್ಣ : ಧನ್ಯವಾದಗಳು ಪ್ರಭು. ಇನ್ನೆರಡು ದಿನಗಳಲ್ಲಿಯೇ ಹೊರಡುತ್ತೇವೆ. ಚಂದ್ರವಂಕ ನದಿಯ ಆ ದಡದ ಗಡಿಯಲ್ಲಿ ನೆಲಸುತ್ತೇವೆ. ಮಾಚೆರ್ಲವೇ ನಮ್ಮ ನೆಲೆಯಾಗಲಿ.

ನಲಗಾಮ : ರಾತ್ರಿಗೆ ಸ್ವಲ್ಪ ನನ್ನನ್ನು ಬಂದು ಕಾಣಿ ಬ್ರಹ್ಮಣ್ಣನವರೇ. ಗಡಿಗಳನ್ನು ಗುರುತು ಮಾಡೋಣ. ನಾಳೆಯೇ ನಾಡಿನಲ್ಲಿ ನಿಮ್ಮ ವಲಸೆ ಹೋಗುವ ಕಾರ್ಯಕ್ರಮವನ್ನು ಡಂಗುರ ಸಾರಿಸೋಣ. ನಿಮ್ಮನ್ನು ಹಿಂಬಾಲಿಸಿ ಬರುವವರು ಬರಲಿ..... ನನ್ನ ಪ್ರಿಯ ಸಭಿಕರೇ, ಇಂದಿನ ಈ ಸಭೆಯನ್ನು ಇಲ್ಲಿಗೆ ಮುಗಿಸೋಣ. (ತೆರೆ ಬೀಳುತ್ತದೆ)

OO

# ದೃಶ್ಯ - ೮

(ನಾಗಮ್ಮ ತನ್ನ ಚಾವಡಿಯಲ್ಲಿ ಒಬ್ಬಳೇ ಕುಳಿತಿದ್ದಾಳೆ. ಮುಖದಲ್ಲಿ ಚಿಂತೆಯ ರೇಖೆಗಳು ಮೂಡಿವೆ. ಏನನ್ನೋ ಆಲೋಚಿಸುತ್ತಿದ್ದಾಳೆ. ಹತ್ತಿರದಲ್ಲಿ ಆಪ್ತದಾಸಿ ಮಾಲತಿ ನಿಂತು ಬೀಸುತ್ತಿದ್ದಾಳೆ)

**ಮಾಲತಿ** : ಅಮ್ಮ ಊಟ-ತಿಂಡಿ ನಿದ್ದೆಗಳಿಲ್ಲದೆ ಏನನ್ನು ಯೋಚಿಸುತ್ತಿದ್ದೀರಿ?.... ಇತ್ತೀಚೆಗೆ ದೇಶದ ಪರಿಸ್ಥಿತಿಯೇ ಹದಗೆಟ್ಟಂತಿದೆ. ಯಾರ ಮೇಲೂ ಭರವಸೆ ಇಲ್ಲ. ಏನನ್ನು ನೋಡಿದರೂ ಅನುಮಾನದಿಂದ, ಸಂದೇಹದಿಂದ ನೋಡುವಂತಾಗಿದೆ. ಏಕಮ್ಮ ಈ ಗೊಂದಲಗಳು?.... ಬನ್ನೀಮ್ಮ ಸ್ವಲ್ಪವಾದರೂ ತಿಂಡಿ ತನ್ನಿ. ಎಲ್ಲವನ್ನು ಬಿಟ್ಟು ನೀವೇಕೆ ಹೀಗೆ ಸೊರಗುತ್ತಿದ್ದೀರಿ?

**ನಾಯಕಿ** : ಇಲ್ಲಿ ಸೊರಗುವ ಪ್ರಮೇಯವೆ ಇಲ್ಲ. ನಾನಾಗಿ ಬಯಸಿ ಆರಿಸಿಕೊಂಡೆ. ನನಗೆ ಯಾರೂ ಇಲ್ಲ ಏನೂ ಇಲ್ಲ ನನ್ನ ಪ್ರಪಂಚವೇ ಶೂನ್ಯ. ನನಗಾಗಿ ನನ್ನ ಸುಖಕ್ಕಾಗಿ ಇದನ್ನೆಲ್ಲ ಮಾಡುತ್ತಿಲ್ಲ ಮಾಲತಿ. ನನ್ನೊಳಗಿನ ಅಭಿಮಾನವನ್ನು ತಣಿಸುವುದಕ್ಕಾಗಿ ಹೀಗೆ ದುಡಿಯುತ್ತಿದ್ದೇನೆ. ನನಗೆ ಹಣಬೇಡ; ಅಧಿಕಾರ ಬೇಡ; ನಾನು ಸಾವನಪ್ಪಿದರೂ ಚಿಂತೆಯಿಲ್ಲ; ಛಲಕ್ಕಾಗಿ, ದ್ವೇಷಕ್ಕಾಗಿ ಹೋರಾಡುತ್ತೇನೆ. ನನ್ನನ್ನು ಅವಮಾನಿಸಿದ, ಹಗುರವಾಗಿ ಪರಿಗಣಿಸಿದ, ಹೆಣ್ಣೆಂದರೆ ಕ್ಷುಲ್ಲಕವೆಂದು ಭಾವಿಸಿರುವ ಅವನಿಗೆ ನಾನು ಏನೆಂಬುದನ್ನು, ಹೆಣ್ಣೆಂದರೆ ಏನು ಮಾಡಬಲ್ಲಳೆಂಬುದನ್ನು ತೋರಿಸಿಕೊಡುತ್ತೇನೆ. ಈ ನಾಗಮಣಿಯಂತಹವಳನ್ನು ಜನ್ಮ ಜನ್ಮಾಂತರದಲ್ಲಿಯೂ ನೋಡಲು ಸಾಧ್ಯವಿಲ್ಲವೆಂಬುದನ್ನು ಮನಗಾಣಿಸುತ್ತೇನೆ.

(ಹೊರಗಿನಿಂದ ನಾಗಮಣಿ, ನಾಗಮಣಿ.... ಮಗಳೆ ಎಂದು ಯಾರೋ ಕೂಗುತ್ತಿರುವುದು ಕಾಣಿಸುತ್ತದೆ)

**ನಾಯಕಿ** : (ಆಲಿಸಿ) ಮಾಲತಿ–ನೋಡು ಯಾರೋ ನನ್ನನ್ನು ಹುಡುಕಿಕೊಂಡು ಬಂದಿರುವಂತೆ ಕಾಣುತ್ತದೆ.... ಹೋಗಿ ನೋಡಿ ವಿಚಾರಿಸು (ಎನ್ನುತ್ತಲೇ ಮಾಲತಿ ಆಯಿತು ಅಮ್ಮ ಎಂದು ಹೇಳಿ ಹೋಗುತ್ತಾಳೆ. ಎರಡು ನಿಮಿಷದ ನಂತರ ಹಿಂತಿರುಗಿ ಬಂದು)

**ಮಾಲತಿ** : ಅಮ್ಮ ಯಾರೋ ಭಟ್ಟಾಚಾರ್ಯರಂತೆ ನಿಮ್ಮ ವಿದ್ಯಾಗುರುಗಳಂತೆ. ನಿಮ್ಮನ್ನು ನೋಡಿ ಹೋಗಲು ಬಂದಿರುವರಂತೆ.

**ನಾಯಕಿ** : (ಆತುರದಿಂದ) ಹೋಗು ಮಾಲತಿ ಹೋಗು. ಬೇಗ ಮರ್ಯಾದೆಯಿಂದ ಕರೆದು ತಾ ಹಾಗೆಯೇ ಅವರಿಗೆ ಹಾಲು ಹಣ್ಣುಗಳನ್ನು ತೆಗೆದುಕೊಂಡು ಬಾ.

**ಮಾಲತಿ** : ಇದೋ ಅಮ್ಮ ಹೊರಟೆ (ಹೋಗುತ್ತಾಳೆ)

**ಭಟ್ಟಾಚಾರ್ಯರು:** (ಮಾಲತಿಯೊಂದಿಗೆ ಪ್ರವೇಶಿಸುತ್ತ) ನಾಗಮಣಿ ಮಗಳೆ... ಚೆನ್ನಾಗಿದ್ದೀಯ?.... ಎಷ್ಟು ದಿವಸಗಳಾದವು ನಿನ್ನನ್ನು ಕಂಡು!

**ನಾಯಕಿ** : ಬನ್ನಿ ಗುರುಗಳೇ. ಇಲ್ಲಿ ಬನ್ನಿ ಈ ಆಸನದ ಮೇಲೆ ಕುಳಿತುಕೊಳ್ಳಿ (ಎಂದು ಹೇಳುತ್ತ ಆಸನದ ಮೇಲೆ ಕುಳಿತ ನಂತರ ಅವರ ಪಾದಗಳನ್ನು ಮುಟ್ಟಿ ನಮಸ್ಕರಿಸುತ್ತಾಳೆ)

**ಭಟ್ಟಾಚಾರ್ಯ:** (ಹೃದಯ ತುಂಬಿ ಬರುತ್ತದೆ. ಅವಳನ್ನು ಹಿಡಿದೆತ್ತಿ) ಏಳು ಮಗಳೆ. ಇಷ್ಟು ಕಾಲದ ಮೇಲೆ ನಿನ್ನನ್ನು ನೋಡಿ ನನಗೆ ಹೃದಯ ತುಂಬಿದೆ. ಬಹುಶಃ ನಿನ್ನ ಮಹತ್ವಾಕಾಂಕ್ಷೆಗಳು ಈಡೇರಿರಬೇಕಲ್ಲವೇ?

**ನಾಯಕಿ** : ಗುರುವರ್ಯ ನನ್ನ ಮಹತ್ವಾಕಾಂಕ್ಷೆಗಳು ಈಡೇರುವುದು ಅಷ್ಟು ಸುಲಭವಲ್ಲ. ಅದು ನಿಮಗೂ ಗೊತ್ತಿದೆ.

**ಭಟ್ಟಾಚಾರ್ಯ:** ಗೊತ್ತಿದೆ. ಆದರೆ ನೀನೊಂದು ಹಠಮಾರಿ ಹೆಣ್ಣು. ಹಿಡಿದಿದ್ದನ್ನು ಸಾಧಿಸದೆ ಸುಲಭವಾಗಿ ಕೈ ಬಿಡುವವಳಲ್ಲ.

**ನಾಯಕ** : (ವಿನಯದಿಂದ) ಗುರುವರ್ಯ ನನ್ನ ಛಲದ ಜೊತೆಗೆ ನಿಮ್ಮ ಹಾರೈಕೆ, ಆಶೀರ್ವಾದಗಳು ಇದ್ದಾಗ ಮಾತ್ರವೇ ಎಲ್ಲವೂ ಸಾಧ್ಯವಾಗುವುದು.

**ಭಟ್ಟಾಚಾರ್ಯ:** ಇರಲಿ. ಖಂಡಿತ ನಿನ್ನ ಗುರಿಗಳು ಸಾರ್ಥಕವಾಗುತ್ತವೆ.... ರಾಜಕೀಯ ವಿಶೇಷತೆಗಳೇನಾದರೂ ಇವೆಯೇನು? ಬ್ರಹ್ಮಣ್ಣ ನಾಯುಡು ಹೇಗಿದ್ದಾನೆ?

**ನಾಯಕಿ** : ಅದೆಲ್ಲವೂ ನಂತರ ಮಾತನಾಡೋಣ. ಮೊದಲು ನೀವು ಸ್ವಲ್ಪ ಫಲಾಹಾರ ಸ್ವೀಕರಿಸಿ.

**ಭಟ್ಟಾಚಾರ್ಯ:** ಬೇಡ ಮಗಳೆ ಬರುವಾಗಲೇ ಎಲ್ಲವನ್ನೂ ಮುಗಿಸಿ ಬಂದಿದ್ದೇನೆ.

**ನಾಯಕಿ** : ಇಲ್ಲ ಗುರುಗಳೆ. ನೀವು ಹಣ್ಣನ್ನು ಸ್ವೀಕರಿಸಲೇಬೇಕು (ಎಂದು ತಟ್ಟೆಯಲ್ಲಿನ ಹಣ್ಣೊಂದನ್ನು ತೆಗೆದುಕೊಡುತ್ತಾಳೆ) ... ಮಾಲತಿ.... ಒಂದು ಲೋಟ ಹಾಲನ್ನು ತಂದುಕೊಡು. (ಮಾಲತಿ ಒಳಗೆ ಹೋಗಿ ಬೆಳ್ಳಿಕಯ ಲೋಟವೊಂದರಲ್ಲಿ ಹಾಲನ್ನು ತಂದು ಗುರುಗಳಿಗೆ ನೀಡುತ್ತಾಳೆ. ಗುರುಗಳು ಮರುಮಾತಿಲ್ಲದೆ ಹಾಲನ್ನು ಕುಡಿದು ಲೋಟವನ್ನು ಕೆಳಗಿರಿಸುವರು.)

**ನಾಯಕಿ** : ಗುರುಗಳೇ ನೀವು ಕಲಿಸಿದ ರಾಜನೀತಿಯನ್ನು ನಿಮ್ಮ ನಿರೀಕ್ಷೆಗೆ ಅನುಗುಣವಾಗಿಯೇ ಬಳಸಿಕೊಂಡು, ನನ್ನ ಉದ್ದೇಶಗಳನ್ನು ಸಾಕಷ್ಟು ಮಟ್ಟಿಗೆ ಸಾಧಿಸಿಕೊಳ್ಳುತ್ತಿದ್ದೇನೆ.

**ಭಟ್ಟಾಚಾರ್ಯ**: ಅದಿರಲಿ ಮಗಳೆ ಬ್ರಹ್ಮಣ್ಣನೊಡನೆ ನಿನ್ನ ಸೆಣಸಾಟ ಪ್ರಾರಂಭವಾಗಿರಬೇಕಲ್ಲ? ..... ಏನನ್ನುತ್ತಾನೆ ಬ್ರಹ್ಮಣ್ಣ?

**ನಾಯಕಿ** : ರಾಜಕೀಯ ಮಹತ್ವಾಕಾಂಕ್ಷೆಗಳು ಯಾರಿಗೆ ಇರುವುದಿಲ್ಲ ಗುರುಗಳೆ? ಬ್ರಹ್ಮಣ್ಣ ಸಾಮಾನ್ಯನಲ್ಲ ಕಾಣಿಸಿಕೊಳ್ಳುವ ವ್ಯಕ್ತಿತ್ವದ ಹಿಂದೆ ಕಾಣಿಸಲಾರದ ವ್ಯಕ್ತಿತ್ವವೊಂದು ಅಡಗಿ ಕುಳಿತಿದೆ. ಅದು ಅವನಿಗಾಗಿ ದುಡಿಯುತ್ತದೆ. ಹೊರಗಿನದು ರಾಜಭಕ್ತಿಯ ಕೆಲಸಗಳನ್ನು ಮಾಡಿಸುತ್ತದೆ..... ಏನಾದರಾಗಲಿ ನಿಮ್ಮ ಅಭೀಪ್ಸೆಯಂತೆ ಅನುಗುರಾಜು ಮತ್ತು ದೊಡ್ಡ ನಾಯುಡೂರ ನಡುವೆ ಭೇದ ಕಲ್ಪಿಸಲಾಗಿದೆ. ದೊಡ್ಡ ನಾಯುಡು ಖಾಲಿ ಮಾಡಿದ ಮಂತ್ರಿಪದವಿಗೆ ಬ್ರಹ್ಮನಾಯುಡು ಬಂದು ಆಕ್ರಮಿಸಿಕೊಂಡಿದ್ದಾನೆ.

**ಭಟ್ಟಾಚಾರ್ಯ**: ತಂದೆ ಮಕ್ಕಳು ಎಂದದರೂ ಒಂದಾದರೆ?

**ನಾಯಕಿ** : ಗುರುಗಳೇ ಇತಿಹಾಸ ಉದ್ದಕ್ಕೂ ನೋಡುತ್ತ ಬಂದಿದ್ದೀರಿ. ಹಣ, ಅಧಿಕಾರದ ವಿಚಾರದಲ್ಲಿ ಮಾನವ ಸಂಬಂಧಗಳು, ರಕ್ತ ಸಂಬಂಧಗಳು ಕೊಚ್ಚಿ ಹೋಗುತ್ತವೆ. ತಂದೆ ಮಗನನ್ನು, ಮಗ ತಂದೆಯನ್ನು, ಅಣ್ಣ ತಮ್ಮನನ್ನು, ತಮ್ಮ ಅಣ್ಣನನ್ನು, ಖೇದವಾಗಲಿ, ಪಾಪಪ್ರಜ್ಞೆಯಾಗಲಿ ಯಾವುದೂ ಇಲ್ಲದಂತಹ ಮನಃಸ್ಥಿತಿಯಲ್ಲಿ ವಂಚನೆಯಿಂದಲೋ ಹೊಡೆದಾಟದಿಂದಲೋ ಕೊರಳಿರಿದು ಕೊಲ್ಲುತ್ತಾರೆ. ಬ್ರಹ್ಮಣ್ಣನು ದೇವರಲ್ಲ ಅವನೂ ಮನುಷ್ಯನೇ. ಮತ್ತೆ ಅನುಗುರಾಜು, ದೊಡ್ಡ ನಾಯುಡುವಿನ ನಡುವಿನ ವಿರಸ ದೂರವಾಗಿ ಎಲ್ಲಿ ಸ್ನೇಹಿತರಾಗಿ, ತನ್ನ ಮಂತ್ರಿ ಪದವಿಗೆ ಸಂಚಕಾರ ಬರುವುದೋ ಎಂದು ಹೆದರಿ ರಾಜಭಕ್ತಿಯ ಅಗ್ರೇಸರನನೆನಿಸಿಕೊಂಡು ಮೆರೆಯುತಿರುವ ಈ ಬ್ರಹ್ಮಣ್ಣನೇ ಮೋಸದಿಂದ ಅನುಗುರಾಜನನ್ನೂ, ತಂದೆಯನ್ನೂ ಕೊಲೆ ಮಾಡಿದ.

**ಭಟ್ಟಾಚಾರ್ಯ:** ಯಾರೂ ಅನುಮಾನಿಸಲಿಲ್ಲವೇ?

**ನಾಯಕಿ :** ಅನುಮಾನಿಸುವುದೆಲ್ಲಿಂದ ಬಂತು? ತನ್ನ ನಯವಿನಯದ ಬೂಟಾಟಿಕೆಯಿಂದ ಅನುಗುರಾಜನ ನಂಬಿಕೆ ವಿಶ್ವಾಸಗಳನ್ನು ಗಳಿಸಿಕೊಂಡಿದ್ದು, ಸಾಯುವ ಕ್ಷಣಗಳಲ್ಲಿ ಅನುಗುರಾಜ ರಾಜ್ಯದ, ಕುಟುಂಬದ ಸಮಸ್ತ ಜವಾಬ್ದಾರಿಯನ್ನೂ ಬ್ರಹ್ಮಣ್ಣನಿಗೇ ವಹಿಸಿಕೊಟ್ಟ ಇಲ್ಲಿಯವರೆಗೆ ತಂದೆಯಿಲ್ಲದ ಮಕ್ಕಳಿಗೆ ತಂದೆಯಾಗಿ, ರಾಜ್ಯದ ಹಿತೈಷಿಯಾಗಿ, ಮಂತ್ರಿಯಾಗಿ ರಾಜ್ಯಾಂಗಗಳನ್ನು ನಡೆಸಿ ನಿರ್ವಹಿಸುತ್ತಿದ್ದಾನೆ. ಅರಮನೆಯ ಹೆಣ್ಣುಗಳ ಅಂತರಂಗವನ್ನು ಗೆದ್ದು ಕುಳಿತಿದ್ದಾನೆ. ಅವರೆಲ್ಲರ ಆಶೋತ್ತರಗಳು, ಭರವಸೆಗಳು ಅವನನ್ನೇ ಹೆಣೆದುಕೊಂಡಿರುವಂತಿದೆ.... ಅಷ್ಟೇ ಅಲ್ಲ ತನ್ನ ನಯವಂಚನೆಯಿಂದ ನನ್ನ ಬಗ್ಗೆ ತಪ್ಪು ಕಲ್ಪನೆಗಳನ್ನು ಮೂಡಿಸಿದ್ದಾನೆ. ಇಲ್ಲಸಲ್ಲದ ಅಪಪ್ರಚಾರಗಳಿಂದ ನನ್ನ ನೆರಳನ್ನೂ ದ್ವೇಷಿಸುವಂತೆ ಮಾಡಿದ್ದಾನೆ. ಅರಸು ಮಕ್ಕಳು ಯಾರೂ ನನ್ನ ಬಳಿ ಸುಳಿಯದಂತೆ ಪ್ರಯತ್ನಿಸಿದನಾದರೂ ಪೂರ್ತಿಯಾಗಿ ಯಶಸ್ವಿಯಾಗಿಲ್ಲ.

**ಭಟ್ಟಾಚಾರ್ಯ:** ಅಂದರೆ? ನೀನು ಅವರನ್ನು ವಶಪಡಿಸಿಕೊಂಡೆಯೇನು?

**ನಾಯಕಿ :** ಎಲ್ಲರನ್ನೂ ಅಲ್ಲ. ಮಲಿದೇವ ಸೋದರರಿಗೆ ಸ್ವಂತ ಬುದ್ಧಿಯಿಲ್ಲ. ಮೊದ್ದು ಗೊಂಬೆಗಳು. ಅವನು ಬೆರಳು ತೋರಿದಂತೆ ಕುಣಿಯುತ್ತಾರೆ. ನರಸಿಂಹ ಸೋದರರನ್ನು, ಪ್ರಭುಗಳಾದ ನಲಗಾಮರನ್ನು ಸಾಕಷ್ಟು ಮಟ್ಟಿಗೆ ಸೆಳೆದುಕೊಂಡಿದ್ದೇನೆ. ನಲಗಾಮ ಪ್ರಭುಗಳ ಬ್ರಹ್ಮಣ್ಣನ ನಡುವೆ ಈಗಾಗಲೇ ಭೇದ ಕಲ್ಪಿಸಿಯಾಗಿದೆ. ಬ್ರಹ್ಮಣ್ಣನ ಬೇಳೆ ಬೇಯದಂತೆ ಎಚ್ಚರಿಕೆ ವಹಿಸಿ ನಲಗಾಮ ಪ್ರಭುಗಳ ಅಂತರಂಗ ಸಚಿವೆಯಾಗಿದ್ದೀನಿ. ನನ್ನ ಮಾತನ್ನು ಮೀರುವುದಿಲ್ಲ. ಆದೇಶದಂತೆ ಪಾಲಿಸುತ್ತಾರೆ. ಇನ್ನು ಆ ನರಸಿಂಹನೋ! ಮುಂಗೋಪಿ. ಮುಂದಾಲೋಚನೆ ಇಲ್ಲದವನು. ರಾಜನಾಗಬೇಕೆಂದು ಕುಣಿಯುತ್ತಿದ್ದಾನೆ.

**ಭಟ್ಟಾಚಾರ್ಯ:** ಮಗಳೆ ನಾಗಮಣಿ. ಇಷ್ಟೆಲ್ಲ ಆಗುತ್ತಿರುವಾಗ ಬ್ರಹ್ಮಣ್ಣನನ್ನು ಈ ನಾಡಿನಿಂದ ಹೊರಗಟ್ಟುವ ಪ್ರಯತ್ನಗಳನ್ನೇಕೆ ಮಾಡಲಿಲ್ಲ. ಮೊದಲು ಅವನು ಇಲ್ಲಿಂದ ದೂರ ಹೋಗಬೇಕು. ಅವನನ್ನು ಹೊರಗೆ ಹಾಕುವ ಉಪಾಯಗಳು ಫಲಿಸಲಿಲ್ಲವಾದರೆ ನೀನು ಪ್ರಯತ್ನಿಸಿ ನಲಗಾಮನ ಬ್ರಹ್ಮಣ್ಣನ ನಡುವೆ ಎಂತಹ ಭೇದ ಕಲ್ಪಿಸಬೇಕೆಂದರೆ ಬ್ರಹ್ಮಣ್ಣನು ನಿರ್ವೀರ್ಯನಾಗಿ, ವಿಧಿಯಿಲ್ಲದೆ ತಾನೇ ತಾನಾಗಿ ಸ್ವ-ಇಚ್ಛೆಯಿಂದ ದೇಶ ಬಹಿಷ್ಕೃತನಾಗಿ ಹೋಗಬೇಕು. ನಾಯುಡು ಇಲ್ಲಿಂದ ತೊಲಗಿ ಹೋಗುವವರೆಗೆ ನಮ್ಮ ಉದ್ದೇಶಗಳು, ನಮ್ಮ ತಂತ್ರಗಳು ಫಲಿಸುವುದಿಲ್ಲ.

**ನಾಯಕಿ** : ಗುರುಗಳೇ ನಮ್ಮ ಲೆಕ್ಕಾಚಾರದಂತೆಯೇ ಎಲ್ಲವೂ ನಡೆದಿದೆ. ಬ್ರಹ್ಮಣ್ಣನು ದೇಶ ಬಿಟ್ಟು ಹೋಗುತ್ತಿದ್ದಾನೆ. ಆದರೆ ಹೋಗುವ ಮೊದಲು ತಾನು ಅಂದುಕೊಂಡದ್ದನ್ನು ಸಾಧಿಸಿಯೇ ಹೋಗುತ್ತಿದ್ದಾನೆ. ರಾಜ್ಯದಲ್ಲಿ ಪಾಲನ್ನು ಕಸಿದುಕೊಂಡೇ ಹೋಗುತ್ತಿದ್ದಾನೆ.

**ಭಟ್ಟಾಚಾರ್ಯ:** ಹೇಗಾದರೂ ಅದನ್ನು ತಡೆಯಬಹುದಿತ್ತಲ್ಲ?

**ನಾಯಕಿ** : ತುಂಬಿದ ಸಭೆಯಲ್ಲಿ ತೀರ್ಮಾನವಾಗುತ್ತಿರುವಾಗ ನಾನೇನೂ ಮಾಡಲಾಗಲಿಲ್ಲ. ಅಲ್ಲದೆ ಗುರುಜಾಲವನ್ನು ಆಕ್ರಮಿಸಿ ಆಯುಧದ ಮೊನೆಯಿಂದ ಹೆದರಿಸಿ ಕೇಳಿದರೆ ನಮಗೆ ಗತ್ಯಂತರವಿಲ್ಲದೆ ಒಪ್ಪಲೇಬೇಕಾದ ಸ್ಥಿತಿ ಬಂತು. ಉಳಿದ ಮಂತ್ರಿಗಳು, ಹಿರಿಯರು, ಸಭಾಸದರೆಲ್ಲರೂ ಅದನ್ನೇ ಪುರಸ್ಕರಿಸುತ್ತಿರುವಾಗ ನಮ್ಮ ಒಡಕು ಧ್ವನಿಯನ್ನು ಕೇಳುವವರು ಯಾರು?

**ಭಟ್ಟಾಚಾರ್ಯ:** ಹಾಗಾದರೆ ಪಲನಾಡು ಇಬ್ಭಾಗವಾಯಿತೆನ್ನು.

**ನಾಯಕಿ** : ಆದರೇನಂತೆ! ಅದನ್ನು ಕಸಿದುಕೊಳ್ಳುವುದು ನನಗೆಷ್ಟರ ಕೆಲಸ? ಈಗಾಗಲೇ ಅದರ ಬಗ್ಗೆ ಆಲೋಚಿಸುತ್ತಿದ್ದೇನೆ..... ಬರಿ ರಾಜ್ಯ ಕಸಿದುಕೊಳ್ಳುವುದಷ್ಟೇ ಅಲ್ಲ.... ನೋಡುತ್ತಿರಿ ಗುರುಗಳೇ ನಿಮ್ಮ ಈ ಶಿಷ್ಯೆ ನೀವು ಕಲಿಸಿದ ರಾಜಕೀಯ ಚದುರಂಗದಾಟವನ್ನು ಹೇಗೆ ನಿಭಾಯಿಸುತ್ತಾಳೆ? ಇನ್ನೆಂದಿಗೂ ಬ್ರಹಣ್ಣನಾಗಲಿ, ಬ್ರಹ್ಮಣ್ಣನ ಕಡೆಯವರಾಗಲೀ ತಲೆ ಎತ್ತಲಾಗದಂತೆ ಪ್ರಳಯ ತಾಂಡವವಾಡುತ್ತೇನೆ.!

**ಭಟ್ಟಾಚಾರ್ಯ:** (ಮೆಚ್ಚಿಗೆಯಿಂದ) ಭಲಾ ನಾಗಮಣಿ.... ಭಲಾ ನನ್ನ ಶಿಷ್ಯಳಾಗಿದ್ದು ಸಾರ್ಥಕವಾಯಿತು.... ಇನ್ನು ಒಂದು ನೀತಿ ಸೂತ್ರವನ್ನು ನೆನಪಿಸುತ್ತೇನೆ. ಘಟಿಂಗಳಾದ ನಿನಗೆ ತಿಳಿಯದ್ದೇನಿಲ್ಲ. ಆದರೂ ಗುರುವಾಗಿ ನಿನಗೊಂದಿಷ್ಟು ತಂತ್ರಗಳನ್ನು ಬೋಧಿಸುತ್ತೇನೆ.

**ನಾಯಕಿ** : ಹೇಳಿ ಗುರುಗಳೇ.... ಹೇಳಿ.... ನಾನೆಷ್ಟಾದರೂ ನಿಮ್ಮ ಮುಂದೆ ಅಲ್ಪಳು. ನೀವು ಬೋಧಿಸುವ ನೀತಿಯ ಒಂದೊಂದು ಅಕ್ಷರವನ್ನೂ ಮನನ ಮಾಡಿಕೊಂಡು ಪ್ರಯತ್ನಿಸುತ್ತೇನೆ.

**ಭಟ್ಟಾಚಾರ್ಯ:** ರಾಜನಾಗಲೀ, ಮಂತ್ರಿಯಾಗಲೀ ತನ್ನ ಅಭಿವೃದ್ಧಿಯನ್ನು, ಭವಿಷ್ಯವನ್ನು ಬಯಸುವುದಾದರೆ ಮೊದಲು ಅವನು ತನ್ನ ಶತ್ರುಗಳ ಚಲನವಲನಗಳನ್ನು ಸೂಕ್ಷ್ಮವಾಗಿ ಗಮನಿಸಬೇಕು. ಅಪರಿಚಿತರ ಜೊತೆಗಿನ ಅವರ ಸಂಬಂಧಗಳ ಕಡೆ ನಿಗಾ ಇಟ್ಟಿರಬೇಕು. ಆಕ್ರಮಣಗಳ ಸೂಚನೆಗಳು ಕಾಣಿಸಿಕೊಂಡ ತಕ್ಷಣವೇ ಅವರ ಪ್ರಯತ್ನಗಳನ್ನು ಮಣ್ಣುಗೂಡಿಸಿ ಅವರು ಮುಂದೆ ತಲೆ ಎತ್ತುವ ಸಾಹಸಕ್ಕೆ ಹೊಗಲಾಗದಂತೆ ಅವರ ಬಲಾಬಲಗಳ ರೆಕ್ಕೆಗಳನ್ನು ಕತ್ತರಿಸಿ ಒಗೆಯಬೇಕು.

**ನಾಯಕಿ** : ಅಂತಹ ಪ್ರಯತ್ನಗಳಲ್ಲಿಯೇ ತೊಡಗಿದ್ದೇನೆ ಗುರುಗಳೇ. ಎಂದೆಂದಿಗೂ ನಲಗಾಮ ಸೋದರರ ನಡುವೆ ಮತ್ತೆ ಸ್ನೇಹ, ಪ್ರೀತಿ, ಸಂಬಂಧಗಳು ಚಿಗುರದಂತೆ ಚಿವುಟಿ ಹಾಕಿದ್ದೇನೆ.

**ಭಟ್ಟಾಚಾರ್ಯ**: ನೀನು ಅಂತಹ ಭ್ರಮೆಯಲ್ಲಿ ಇರಬೇಡ. ಶತ್ರುವು ಯಾವಾಗಲೂ ನಮಗಿಂತ ಒಂದು ಹೆಜ್ಜೆ ಮುಂದಿರುತ್ತಾನೆಂದೇ ಆಲೋಚಿಸಬೇಕು..... ರಾಜ್ಯ ತೆಗೆದುಕೊಂಡು ಹೋದ ಬ್ರಹ್ಮಣ್ಣ ಸುಮ್ಮನೆ ಕೈಕಟ್ಟಿ ಕೂರುವುದಿಲ್ಲ. ರಾಜ್ಯ ವಿಸ್ತಾರಕ್ಕಾಗಿ ಪ್ರಯತ್ನಗಳು ನಡೆಯುತ್ತದೆ. ಸುತ್ತಮುತ್ತಲ ರಾಜ್ಯಗಳನ್ನು ಗೆಲ್ಲುತ್ತಾ ಕಡೆಗೆ ಗುರುಜಾಲದ ಕಡೆಯೂ ಕಣ್ಣು ಹೊರಳಿಸಿದರೆ ಆಶ್ಚರ್ಯಪಡಬೇಕಾದ್ದಿಲ್ಲ. ಬ್ರಹ್ಮಣ್ಣನ ಹಗೆ ಹಾವಿನ ಹಗೆ. ಆರಿದಂತೆ, ತಣಿದಂತೆ ಕಂಡರೂ ಹೊಗೆಯಾಡುತ್ತಿರುತ್ತದೆ.

**ನಾಯಕಿ** : ಇರಬಹುದು. ನೀವು ಊಹಿಸಿದಂತೆ ನಡೆಯುವ ಸಾಧ್ಯತೆಗಳು ಇವೆಯೆಂದೇ ನನಗೂ ಅನಿಸುತ್ತಿದೆ.

**ಭಟ್ಟಾಚಾರ್ಯ**: ಅದಕ್ಕೆ ನಾನು ಹೇಳುವುದೇನೆಂದರೆ, ಅವರಿಗೂ ಮೊದಲೇ ನೀನು ನಿನ್ನ ನೆರೆಹೊರೆಯ ರಾಜ್ಯಗಳೊಂದಿಗೆ ಸ್ನೇಹ ಮಾಡಿಕೋ.... ಆಗ ಪರಿಸ್ಥಿತಿ ಎಷ್ಟೇ ಗಂಭೀರವಾದರೂ ನಿಮ್ಮ ಜಯಕ್ಕೆ ಮೋಸವಿರುವುದಿಲ್ಲ.

**ನಾಯಕಿ** : ಹೌದು ಗುರುಗಳೆ. ನಾನೂ ಒಮ್ಮೊಮ್ಮೆ ಇದನ್ನೇ ಆಲೋಚಿಸುತ್ತೇನೆ. ಇನ್ನು ಮುಂದೆ ಹಬ್ಬ, ಉತ್ಸವ, ಜಾತ್ರೆಗಳ ನೆಪದಲ್ಲಿ ಅವರೆಲ್ಲರನ್ನು ಆಹ್ವಾನಿಸಿ ಅವರಿಗೆ ಕಪ್ಪ ಕಾಣಿಕೆಗಳ ವ್ಯವಸ್ಥೆ ಮಾಡುತ್ತೇನೆ. ನಮ್ಮೊಂದಿಗೆ ಸ್ನೇಹ ಬಯಸಿ ಸಂಬಂಧಗಳನ್ನು ಬೆಸೆಯಲು ಪ್ರತಾಪರುದ್ರ, ಚೋಳ, ವೀರಬಲ್ಲಾಳ ಮೊದಲಾದವರು ತುಂಬ ಉತ್ಸುಕರಾಗಿದ್ದಾರೆ ಎಂಬ ವಿಷಯವನ್ನು ಚಾರರಿಂದ ತಿಳಿದೆ.

**ಭಟ್ಟಾಚಾರ್ಯ**: ಸರಿ ಮಗಳೆ. ನನಗೆ ನಿನ್ನ ಅಭಿವೃದ್ಧಿ, ನಿನ್ನ ಚಾಣಾಕ್ಷತೆ, ರಾಜನೀತಿ ಪ್ರಾವೀಣ್ಯತೆ, ದಕ್ಷತೆ, ಮುಂದಾಲೋಚನಾ ಸಾಮರ್ಥ್ಯಗಳನ್ನು ಕಂಡು ಬಹಳ ಸಂತೋಷವಾಯಿತು.....ಏನಾದರಾಗಲಿ ಬ್ರಹ್ಮನಾಯುಡುವಿನಿಂದ ದೂರವಿರು. ದೇವರು ನಿನಗೆ ಒಳ್ಳೆಯದು ಮಾಡಲಿ. ನಾನಿನ್ನು ಬರುತ್ತೇನೆ. ನಿನಗೆ ಮಂಗಳವಾಗಲಿ......... (ಹೊರಡುತ್ತಾನೆ ನಾಗಮ್ಮ ಗುರುಗಳು ಹೋದ ದಿಕ್ಕಿನಲ್ಲಿ ಕೃತಜ್ಞತಾ ಭಾವದಿಂದ ಮೃದು ಮಂದಹಾಸವನ್ನು ತಂದುಕೊಂಡು ನೋಡುತ್ತಾಳೆ).

○○

## ಅಂಕ ೨

# ದೃಶ್ಯ – ೧

(ಗುರುಜಾಲದಲ್ಲಿ ಸಂಕ್ರಾಂತಿಯ ಸಂಭ್ರಮ. ನಗರದ ಬೀದಿಗಳು. ಬೀದಿ ಬೀದಿಗಳಲ್ಲಿನ ಮನೆಗಳು, ರಂಗೋಲಿ, ಮಾವಿನ ತೋರಣಗಳಿಂದ ಸಜ್ಜುಗೊಂಡಿವೆ. ಎಲ್ಲೆಲ್ಲೀ ಉತ್ಸಾಹ, ಸಂಭ್ರಮಗಳು ತುಂಬಿವೆ. ಜನರ ಓಡಾಟದ ಗದ್ದಲ. ಒಂದಿಬ್ಬರು ಗೆಳೆಯರು ಮಾತನಾಡಿಕೊಳ್ಳುತ್ತಾ ಪ್ರವೇಶಿಸುವರು)

**ಬಲಣ್ಣ** : (ಏನೋ ನೆನಪಿಸಿಕೊಂಡು) ಏನೆ ಹೇಳು ಲಂಕ, ಬ್ರಹ್ಮಣ್ಣ ದೇವರು ಊರು ಬಿಟ್ಟು ಹೋದ ಮೇಲೆ ಈ ಊರಿನ ಕಳೇನೇ ಸತ್ತು ಹೋಯಿತು. ಸಾಕ್ಷಾತ್ ದೇವರಂತೆ ಇದ್ದ ಆ ಮಹಾನುಭಾವನನ್ನು ಆ ರಾಕ್ಷಸಿ ನಾಯಕಿ ಅಂತೂ ಇಂತೂ ಹೊಡೆದು ಓಡಿಸಿ ಬಿಟ್ಟಳಲ್ಲ.

**ಲಂಕಣ್ಣ** : (ಪಿಸು ದನಿಯಲ್ಲಿ) ಲೇ ಬಲ ಜೋರಾಗಿ ಮಾತಾಡಬೇಡವೋ. ಆ ನಾಯಕಿ ನಾಗಮ್ಮನ ಕಡೆಯವರು ಎಲ್ಲ ಕಡೆಯಲ್ಲಿ ಇರ್ತಾರೆ. ನಾವು ಏನು ಮಾತಾಡಿದರೂ ಅದು ಅವಳಿಗೆ ರವಾನೆಯಾಗುತ್ತೆ.

**ಬಲಣ್ಣ** : ಮನೆ ಇಲ್ಲ ಮಠ ಇಲ್ಲ. ಗಂಡ, ಮಕ್ಕಳು ಮೊದಲೇ ಇಲ್ಲ. ಇವಳು ಯಾಕೆ ಮಾರಿ ತರಹ ಅರಮನೆ ಹೊಕ್ಕು ಬೆಂಕಿ ಇಟ್ಟು ಸುಡುತ್ತಾ ಇದ್ದಾಳೆ? ಪಾಪ ಆ ಮಲಿದೇವ ಸೋದರರನ್ನೂ ಗೋಳಾಡಿಸಿ ಬಿಟ್ಟಳು.... ಅವರನ್ನು ಸೆರೆಯಲ್ಲಿ ಇರಿಸಿದ್ದು ಅವಳೇನಂತೆ!

**ಲಂಕಣ್ಣ** : ಅಷ್ಟೆ ಅಲ್ಲ, ಪ್ರಭುಗಳನ್ನು ಅವರ ತಮ್ಮ ನರಸಿಂಹನನ್ನು ತನ್ನ ಮುಷ್ಟಿಯಲ್ಲಿ ಇಟ್ಟುಕೊಂಡು ಅವರನ್ನು ತನ್ನ ಇಷ್ಟಕ್ಕೆ ಕುಣಿಸುತ್ತಾ ಇದ್ದಾಳಂತೆ.

**ಬಲಣ್ಣ** : ಸುಮ್ಮನೆ ಇರೋ. ದೊಡ್ಡವರ ವಿಚಾರ ಎಲ್ಲ ಹೀಗೇನೇ– ಅಗೆದಷ್ಟೂ ಭಯಂಕರ ಸಂಗತಿಗಳು ಹೊರಗೆ ಬೀಳುತ್ತವೆ.... ಅಂತೂ ಈ ರಾಜವಂಶಕ್ಕೆ ಅದೇನು ಕೇಡುಗಾಲವೋ! ನನಗಂತೂ ಮುಂದೆ ಏನೇನಾಗುವುದೋ ಎಂದು ಹೆದರಿಕೆಯಾಗುತ್ತಿದ್ದ. ಆಗಿನ ಕಾಲ.....

ಆಗಿನ ಜನ..... ನೆನಸಿಕೊಂಡರೆ...... ಇವತ್ತಿನ ಪರಿಸ್ಥಿತಿ ಭಯಂಕರ ಎನಿಸುತ್ತೆ.

**ಲಂಕಣ್ಣ** : ಬಿಡೋ ಬಲಣ್ಣ. ಮಾಡಿದವರ ಪಾಪ ಆಡಿದವರ ಬಾಯಲ್ಲಿ ಅಂತಾರೆ..... ಇಲ್ಲಿನ ಪರಿಸ್ಥಿತಿ ಒತ್ತಟ್ಟಿಗೆ ಇರಲಿ. ಬ್ರಹ್ಮಣ್ಣನವರು ಇಲ್ಲಿಂದ ಹೋದ ಮೇಲೆ ಹೇಗೆ ಇದ್ದಾರೋ ಏನೋ!..... ಎಂತಹ ನೀಯತ್ತಿನ ಮನುಷ್ಯ. ಜನರ ಬಗ್ಗೆ, ಪ್ರಜೆಗಳ ಬಗ್ಗೆ ಎಷ್ಟು ಪ್ರೀತಿ! ಬಡವರನ್ನು, ದೀನ ದಲಿತರನ್ನು ಕೂಡಾ ಎಷ್ಟು ಮರ್ಯಾದೆಯಿಂದ ಕಾಣುತ್ತಿದ್ದರು. ದೇವರ ದೃಷ್ಟಿಯಲ್ಲಿ ಎಲ್ಲರೂ ಸಮಾನರೇ. ದೊಡ್ಡವರು ಚಿಕ್ಕವರು ಅನ್ನುವ ಭೇದ ಇಲ್ಲ ಅನ್ನುತ್ತಿದ್ದರು.

**ಬಲಣ್ಣ** : ದೊಡ್ಡವರು ಯಾವಾಗಲೂ ದೊಡ್ಡವರೆ ಲಂಕ.

**ಲಂಕಣ್ಣ** : ಏನಾದರೂ ಮಾಚೆರ್ಲದಿಂದ ಸುದ್ದಿಗಳು ಬಂದವೇನು?

**ಬಲಣ್ಣ** : ಹೂಂ! ನಮ್ಮ ಬಂಧುಗಳು ಎಷ್ಟೋ ಜನ ಬ್ರಹ್ಮಣ್ಣನನ್ನು ಹಿಂಬಾಲಿಸಿ ಹೋದರು. ಮೊನ್ನೆ ಮಗಳ ಮದುವೆಗೆ ಕರೆಯೋಲೆ ನೀಡಲು ಬಂದಿದ್ದಾಗ ಅಲ್ಲಿನ ಪರಿಸ್ಥಿತೀನ ಎಲ್ಲ ವಿವರಿಸಿದ. ಕೇಳಿ ಸಂತೋಷ ಆಯಿತು. ಹಾಗೆಯೇ ನಾವೂ ಯಾಕೆ ಹೋಗಬಾರದಿತ್ತು ಎನಿಸಿತು. ಗುರುಜಾಲಕ್ಕಿಂತ ಮಾಚೆರ್ಲ ಸುಭಿಕ್ಷವಾಗಿದೆ. ನ್ಯಾಯ, ನೀತಿ, ಸುಖ, ಶಾಂತಿ, ಧರ್ಮಗಳು ನೆಲಸಿವೆ. ಬ್ರಹ್ಮಣ್ಣನು ಕಟ್ಟಿಸಿದ ಚೆನ್ನಕೇಶವ ದೇವಾಲಯದ ಸೌಂದರ್ಯ ನೋಡಲಿಕ್ಕೆ ಎರಡು ಕಣ್ಣು ಸಾಲದಂತೆ?.... (ಯೋಚಿಸಿ) ಇನ್ನೂ ಒಂದು ವಿಷಯ ಗೊತ್ತೇನು ದೊಡ್ಡ ಮಲಿದೇವನ ಮದುವೆ ವೀರಸೋಮನ ಮಗಳು ಶ್ರೀರಮಾ ಜೊತೆ ನಡೆಯಿತಂತೆ. ಹುಡುಗಿಯ ಅಪ್ಪ ಬಂಡಿಗಟ್ಟಲೆ ಕಾಣಿಕೆಗಳನ್ನು ಅಳಿಯನ ಜೊತೆಗೆ ಕಳಿಸಿಕೊಟ್ಟವಂತೆ.....ಒಟ್ಟಿನಲ್ಲಿ ಮಲದೇವ ರಾಜಕುಮಾರರು .ವೀರ ವಿದ್ಯಾದೇವಿ ರಾಣಿಯವರು ಬ್ರಹ್ಮಣ್ಣನ ಮೈಗಾವಲಿನಲ್ಲಿ ಸುರಕ್ಷಿತವಾಗಿ ಸಂತೋಷವಾಗಿ ಇದ್ದಾರೆ ಅಂತ ಗೊತ್ತಾಯ್ತು. ಅಷ್ಟು ಸಾಕು..... ಎಲ್ಲೊ ಒಂದು ಕಡೆ ಚೆನ್ನಾಗಿದ್ದರೆ ಆಯಿತು.

**ಲಂಕಣ್ಣ** : ಬಲಾ ಈ ನಾಗಿನಿ ನಾಗಮ್ಮ ಅವರು ಸುಖವಾಗಿರುವುದಕ್ಕೆ ಎಲ್ಲಿ ಬಿಟ್ಟಾಳು? ತನ್ನ ದುರ್ಬುದ್ಧಿ, ಕುತಂತ್ರಗಳಿಂದ ಅವಳು ಇನ್ನೇನು ಯೋಚಿಸಿದ್ದಾಳೋ!

**ಬಲಣ್ಣ** : ಅಂತೂ ಈ ನಾಗಮ್ಮನಿಂದ ನೆಮ್ಮದಿ ಇಲ್ಲದೆ ಹೋಯಿತು. ಬ್ರಹ್ಮಣ್ಣ ಮಂತ್ರಿಗಳು ಮನಸ್ಸು ಮಾಡಿದರೆ ಇವಳನ್ನು ಇಲ್ಲ ಎನಿಸಿ ಬಿಡುತ್ತಿದ್ದರು.

ಆದರೆ ಹೆಣ್ಣಿನ ಜೊತೆಗೆ ಸ್ಪರ್ಧೆ, ಹೆಣ್ಣಿನ ಕೊಲೆ ಇಂಥವುಗಳನ್ನು ನಮ್ಮ ದೇವರು ಒಪ್ಪೋದಿಲ್ಲ. ದುಷ್ಟರಿಂದ ದೂರವಿರುವುದೇ ಒಳ್ಳೆಯದೂಂತ ರಾಜ್ಯದ ಪಾಲು ಬೇಡಿ ತೆಗೆದುಕೊಂಡು ಹೋದದ್ದು!

**ಅಂಕಣ್ಣ** : ಒಮ್ಮೆ ಮಾಚೇರ್ಲಕ್ಕೆ ಹೋಗಿ ಬ್ರಹ್ಮಣ್ಣನವರಿಗೆ ನಮ್ಮ ಗೌರವ ಸೂಚಿಸಿ ಬರಬೇಕೂಂತ ಅನ್ನಿಸುತ್ತಿದೆ.

**ಬಲಣ್ಣ** : ಮಂತ್ರಿಗಳೇ ಇಲ್ಲಿಗೆ ಬರಬಹುದೂಂತ ಪುಕಾರಿದೆ. ಸ್ವಲ್ಪ ತಾಳು..... ಅಂದ ಹಾಗೆ ಲಂಕ..... ಮಾಮೂಲಿನಂತೆ ಈ ಸಲವೂ ಕಂಬಳವೋ ಕೋಳಿ ಕಾಳಗಗಳೊ ಇರುತ್ತವೆ. ಅಲ್ಲವೋ?!.... ಹೋದ ವರುಷ ಎಷ್ಟು ಚೆನ್ನಾಗಿತ್ತು! ಎಷ್ಟೊಂದು ಸಂಭ್ರಮವಿತ್ತು...... ಈ ವರ್ಷ ನೋಡು ಉತ್ಸಾಹವೇ ಇಲ್ಲ. ಎಲ್ಲ ಬಣ ಬಣ ಅನ್ನಿಸುತ್ತಿದೆ.

**ಅಂಕಣ್ಣ** : ಏನು ಮಾಡೋದಣ್ಣ. ಈ ಅಧಿಕಾರಿಗಳಿಗೆ ಅವರವರ ವೈಯಕ್ತಿಕ ಸಮಸ್ಯೆಗಳೇ ಮುಖ್ಯವಾಗುತ್ತದೆ. ತಮ್ಮ ತಮ್ಮ ಹಣ, ಸ್ಪರ್ಧೆ, ಸೆಣಸಾಟಗಳಲ್ಲಿ ಪ್ರಜೆಗಳೇ ನೆನಪಿಗೆ ಬರುವುದಿಲ್ಲ. ನಮ್ಮನ್ನು ಅಂತಹ ಪ್ರಸಂಗಗಳಲ್ಲಿ ದೇವರೇ ಕಾಪಾಡಬೇಕು.

**ಬಲಣ್ಣ** : ಈ ಗೋಳು. ಈ ಪ್ರಕರಣ ಇದ್ದದ್ದೇ!..... ನಡಿಯಣ್ಣ ಹೋಗೋಣ. ಮನೆಯಲ್ಲಿ ಹೆಂಡಿರು, ಮಕ್ಕಳು ನಮಗಾಗಿ ಎದುರು ನೋಡುತ್ತಿರುತ್ತಾರೆ. ಹಬ್ಬದ ದಿನಗಳಲ್ಲಿ ಅವರುಗಳ ಮನಸ್ಸನ್ನು ಯಾಕೆ ನೋಯಿಸಬೇಕು?

**ಅಂಕಣ್ಣ** : ನೀನು ಹೇಳೋದು ಸರಿ. ನಡಿ. ಹಾಗೇ ವೀರಾರೆಡ್ಡೀನ ಮಾತಾಡಿಸಿಕೊಂಡು ಹಬ್ಬದ ಶುಭಾಶಯ ಹೇಳಿ ಹೋಗೋಣ.

(ಇಬ್ಬರೂ ಹೋಗುತ್ತಾರೆ. ಜನರ ಓಡಾಟ ಮುಂದುವರೆದಿರುತ್ತದೆ. ಅಲ್ಲಲ್ಲಿ ಒಂದಿಬ್ಬರು ಮೂವರು ಗುಂಪು ಕಟ್ಟಿ ನಿಂತಿರುತ್ತಾರೆ.)

ОО

# ದೃಶ್ಯ – ೨

(ನಾಯಕಿ ತನ್ನ ಮನೆಯ ಪ್ರಾಂಗಣದ ತೋಟದಲ್ಲಿ ಚಂದ್ರಶಿಲೆ ಪೀಠದಲ್ಲಿ ಕುಳಿತು ಮಾಧವಿ ಬಳ್ಳಿಯ ಸೊಗಸನ್ನೂ ಆಸ್ವಾದಿಸುತ್ತಿರುತ್ತಾಳೆ. ಒಂದೆರಡು ಕ್ಷಣಗಳ ನಂತರ ಅವಳ ಮುಖ ಕ್ರೋಧದಿಂದ ಕೆಂಪಗಾಗುತ್ತದೆ. ಅಲ್ಲಿಂದ ಎದ್ದು ಅಸ್ವಸ್ಥಳಂತೆ ಅತ್ತಿಂದಿತ್ತ ಇತ್ತಿಂದತ್ತ ಹೆಜ್ಜೆ ಹಾಕುತ್ತಾಳೆ).

**ನಾಯಕಿ** : (ಮುಷ್ಠಿ ಬಿಗಿ ಹಿಡಿದು ಸ್ವಗತ) ಬ್ರಹ್ಮಣ್ಣ! ನನ್ನನ್ನು ಏನೆಂದು ಭಾವಿಸಿದ್ದೀ! ನನ್ನ ಜೊತೆ ಸೆಣಸಾಟಕ್ಕೆ ಸ್ಪರ್ಧೆಗೆ ನಿಲ್ಲಲು ಮನಸ್ಸು ಮಾಡಿರುವದನ್ನು ನೋಡಿದರೆ ನಿನಗೆ ನಿಜವಾಗಿಯೂ ಹುಚ್ಚಿಡಿದಿರಬೇಕೆನಿಸುತ್ತದೆ. ಹೆಣ್ಣಿನ ಅಂತರಂಗದ ಶಕ್ತಿ ಸಾಹಸಗಳು ನಿನ್ನ ಅರಿವಿಗೆ ಬಂದಿರಲಾರದು. ನಿನ್ನ ದೃಷ್ಟಿಯಲ್ಲಿ ಹೆಣ್ಣು ಅಜ್ಞಾನಿಯಾಗಿ ಗಂಡಸರ ಅಡಿಯಾಳಾಗಿ ಅಡಿಗೆ ಮನೆ, ಅಂತಃಪುರದ ವಿಲಾಸ ಮಂದಿರಗಳಲ್ಲಿ ಒಳಗೊಳಗೇ ನವೆಯುತ್ತ ಬಿದ್ದಿರಬೇಕೆಂಬ ನಿನ್ನ ವಿಚಾರಕ್ಕೆ ನಾನು ಅಪವಾದವಾಗಿ ನಿನ್ನ ಸಮಕ್ಕೆ, ನಿನಗಿಂತಲೂ ಒಂದು ಹೆಜ್ಜೆ ಮುಂದೆಯೇ ಇರುವುದು ನಿನಗೆ ಸಹಿಸಲಾಗಲಿಲ್ಲ ಅಲ್ಲವೇ? ನಿನ್ನ ನಿರೀಕ್ಷೆಗೆ ವ್ಯತಿರೇಕವಾಗಿ ಜ್ಞಾನಿಯೂ ಶೌರ್ಯ ಸಾಹಸವಂತಳೂ, ರಾಜನೀತಿ ವಿಶಾರದಳೂ ಶ್ರೀಮಂತಳೂ ಆಗಿರುವುದು ನಿನ್ನ ಮನಸ್ಸನ್ನೂ ಕುಟುಕುತ್ತಿದೆ. ತಂದೆ, ತಾಯಿ, ಬಂಧು, ಬಾಂಧವರು, ಪ್ರೀತಿಸಲು ನನ್ನದೇ ಸಂತಾನವಿಲ್ಲದೆ, ರಾಜಕುಮಾರರನ್ನಾದರೂ ಹತ್ತಿರಕ್ಕೆ ತೆಗೆದುಕೊಂಡು ನನ್ನ ಪ್ರೀತಿಯನ್ನು ತಣಿಸಿಕೊಳ್ಳೋಣವೆಂದು ಬಯಸಿದರೆ ಅವರನ್ನು ನನ್ನಿಂದ ದೂರಮಾಡಿದೆಯಲ್ಲ. ಇರಲಿ ನನ್ನನ್ನು, ನರಸಿಂಹನನ್ನು ಬದಿಗಿರಿಸಿ ಆ ತಲೆಯಿಲ್ಲದ ನಲಗಾಮ ಪ್ರಭುಗಳನ್ನು ಒಲಿಸಿ ರಾಜ್ಯವನ್ನು ಕಸಿದುಕೊಂಡು ಹೋದೆಯಲ್ಲ. ಅದನ್ನು ಮರಳಿ ಹೇಗೆ ಹಿಂದಕ್ಕೆ ಪಡೆಯುತ್ತೇನೆ, ನೋಡುತ್ತಿರು...: (ಎಂದು ಯಾರಲ್ಲಿ ಎಂದು ಚಪ್ಪಾಳೆ ಹೊಡೆದು ಕರೆಯಲು)

**ಸೇವಕ** : (ಪ್ರವೇಶಿಸಿ) ಅಮ್ಮಾ ಕರೆದಿರಾ? ಏನು ವಿಷಯ.

**ನಾಯಕಿ** : ನರಸಿಂಹ ಪ್ರಭುಗಳನ್ನು ಕರೆದು ಬಾ.

**ಸೇವಕ** : ಅಪ್ಪಣೆ ತಾಯಿ (ಎಂದು ನಮಿಸಿ ಹೋದವನು ಬಂದರೆ ಕ್ಷಣದಲ್ಲಿಯೇ ಹಿಂತಿರುಗಿ ಬಂದು) ಅಮ್ಮಾ ಅವರೇ ಬರುತ್ತಿದ್ದಾರೆ.

**ನಾಯಕಿ** : ಸರಿ ಹೋಗಿ ಗೌರವದಿಂದ ಕರೆದುಕೊಂಡು ಬಾ. (ಸೇವಕನು ಹೋಗಿ ನರಸಿಂಹನನ್ನು ಕರೆದುಕೊಂಡು ಬರುತ್ತಾನೆ.)

**ನಾಯಕಿ** : ಬನ್ನಿ ಪ್ರಭುಗಳೆ. ಸ್ವಾಗತ.

**ನರಸಿಂಹ** : ಏನು ನಾಗಮ್ಮ. ನಮ್ಮನ್ನು ಆಗಲೇ ಪ್ರಭುಗಳೆಂದು ಕರೆಯಲು ಆರಂಭಿಸಿಬಿಟ್ಟೆ. ನಿನಗೂ ನಮ್ಮನ್ನು ಕಂಡರೆ ವಿನೋದವೆನಿಸುತ್ತದೆಯೇ?

**ನಾಯಕಿ** : ಛೆ! ಛೆ! ತಾವು ತಪ್ಪಾಗಿ ತಿಳಿಯಬಾರದು. ನಮ್ಮ ಆಸೆಗಳು ಶೀಘ್ರವೇ ಈಡೇರಲಿದೆ.

**ನರಸಿಂಹ** : ನಾಗಮ್ಮ ಸಾಕು ಮಾಡು ನಿನ್ನ ಈ ಆಟಗಳನ್ನು ಅಣ್ಣಂದಿರು ರಾಜ್ಯವನ್ನು ಮಲಿದೇವ ಸೋದರರಿಗೆ ಹಂಚಿಕೊಟ್ಟಾಯಿತು. ಅಳಿಯನೂ ಬಂದಾಯಿತು.

**ನಾಯಕಿ** : ಆಗುತ್ತಿರುವುದೆಲ್ಲ ನಮ್ಮ ಒಳ್ಳೆಯದಕ್ಕೆ ಪ್ರಭು. ನಾನು ರಾಜ್ಯವನ್ನು ಉಪಾಯಾಂತರದಿಂದ ಹಿಂದಕ್ಕೆ ಪಡೆಯುತ್ತೇನೆ. ನಲಗಾಮ ಪ್ರಭುಗಳನ್ನು ಈ ರಾತ್ರಿಗೇ ಹೋಗಿ ಕಾಣುತ್ತೇನೆ. ನಾನು ಮಾಡುವ ಷಡ್ಯಂತ್ರಗಳ ಪರಿಣಾಮವಾಗಿ ಸಮರ ಸಂಭವಿಸುತ್ತದೆ. ನಮಗೆ ವಿರೋಧಿಗಳಾದ ಒಬ್ಬೊಬ್ಬರನ್ನು ಉಪಾಯಗಳಿಂದಲೇ ಬಲಿ ತೆಗೆದುಕೊಳ್ಳುತ್ತೇನೆ. ಈ ನಾಡಿನ ಮೇಲೆ ನರಸಿಂಹ ಪ್ರಭುಗಳ ಹೊರತು ಬೇರೆ ಯಾರಿಗೂ ಅಧಿಕಾರವಿರುವುದಿಲ್ಲ.

**ನರಸಿಂಹ** : ವಿಷಯಗಳು ನಿನಗೂ ಗೊತ್ತಿರಬೇಕು. ನಾವು ಕೇಡು ಕೋರಿದಷ್ಟೂ ಬ್ರಹ್ಮಣ್ಣ ಅಭಿವೃದ್ಧಿ ಹೊಂದುತ್ತಲೇ ಇದ್ದಾನೆ. ನನ್ನ ತಮ್ಮಂದಿರ ಮದುವೆ ಮಾಡಿಸಿ ನೆರೆ ರಾಜರ ಸ್ನೇಹ ಸಂಬಂಧಗಳನ್ನು ಬೆಳೆಸಿಕೊಂಡಿದ್ದಾನೆ. ರಾಜ್ಯವನ್ನು ವಿಸ್ತರಿಸಿಕೊಂಡಿದ್ದಾನೆ. ಪ್ರಜೆಗಳ ಪ್ರೀತಿ, ವಿಶ್ವಾಸಗಳನ್ನು ಗಳಿಸಿಕೊಂಡಿದ್ದಾನೆ.

**ನಾಯಕಿ** : ನಮಗೂ ಆಹ್ವಾನ ಬಂದಿತ್ತಲ್ಲ. ನಾನಾಗಿ ಪ್ರಭುಗಳನ್ನು ಹೋಗದಂತೆ ತಡೆದೆ. ಮದುವೆಗೆ ನಾವು ಹೋಗದಿರುವುದನ್ನು ನೋಡಿ, ಕಾರಣ ತಿಳಿಯಲು ಮತ್ತು ಕಪ್ಪ ಕಾಣಿಕೆಗಳನ್ನು ಹೊತ್ತು, ಕುಶಲ ಸಮಾಚಾರಗಳನ್ನು

ವಿಚಾರಿಸಲು ಬಂದೇ ಬರುತ್ತಾನೆ. ಅವನು ಬಹಳ ಪ್ರತಿಭಾಶಾಲಿ. ಬೇರೆಯವರ ಇಂಗಿತಗಳನ್ನು ಅರಿಯಬಲ್ಲವನು, ರಾಜನೀತಿ ಮರ್ಮಗಳನ್ನು ಚೆನ್ನಾಗಿ ಅರಗಿಸಿಕೊಂಡವನು.

**ನರಸಿಂಹ** : ಅವನ ಸ್ತೋತ್ರ ಮಾಡುತ್ತ ಕುಳಿತುಕೊಳ್ಳುವುದು ಬೇಡ. ಮುಂದೆ ನಾನೇನು ಮಾಡಬೇಕೆಂದು ಹೇಳು.

**ನಾಯಕಿ** : ಪ್ರಭು ನೀವು ಹೋಗಿ ನಿಮ್ಮ ಅಣ್ಣಯ್ಯನನ್ನು ನಿಲ್ಲಿಸಿ ಕೇಳಿ. ನಿಮಗೂ ಅವರಿಗೆ ಕೊಟ್ಟಂತೆ ರಾಜ್ಯವನ್ನೂ ಹಂಚಿಕೊಡಲು ಕೇಳಿ. ಅಲರಾಜುವಿನ ಪ್ರಸ್ತಾಪ ಮಾಡಿ, ಅವರಿಗೆ ಮುಂದೆ ರಾಜ್ಯಾಧಿಕಾರವನ್ನು ನೀಡುವುದನ್ನು ಸಹಿಸುವುದಿಲ್ಲವೆಂದು ಹೆದರಿಸಿ. ಆಗ ಅವರಿಂದ ಏನು ಉತ್ತರ ಬಂದೀತು ತಿಳಿದುಕೊಳ್ಳಿ..... ನಾನು ಈ ರಾತ್ರಿಗೇ ಹೋಗಿ ಬ್ರಹ್ಮಣ್ಣನ ವಿಚಾರವಾಗಿ ಪ್ರಭುಗಳ ಮನಸ್ಸು ರೊಚ್ಚಿಗೇಳುವಂತೆ ಪ್ರಚೋದಿಸುತ್ತೇನೆ.

**ನರಸಿಂಹ** : ಹಾಗೆಯೇ ಆಗಲಿ ನಾಗಮ್ಮ. ನಾನೆಷ್ಟು ಕೋಪಗೊಂಡರೂ ನಿನ್ನ ಭರವಸೆಯ ಮೇಲೆ ಸುಮ್ಮನಿದ್ದೇನೆ.

**ನಾಯಕಿ** : ನಿಮ್ಮ ಭರವಸೆಯನ್ನು ಎಂದೂ ಸುಳ್ಳು ಮಾಡುವುದಿಲ್ಲ. ಈ ನಾಗಮಣಿ ಯುಗದ ಇತಿಹಾಸದಲ್ಲಿ ಒಬ್ಬಳೇ ಒಬ್ಬಳಾಗಿ ನಿಲ್ಲುತ್ತಾಳೆ.... ನಿಶ್ಚಿಂತೆಯಿಂದ ಹೋಗಿ ಬನ್ನಿ.

(ನರಸಿಂಹ ಹೋಗುತ್ತಾನೆ. ನಾಯಕಿ ಮತ್ತೆ ಅಡ್ಡಾಡುತ್ತಾಳೆ)

೦೦

# ದೃಶ್ಯ – ೩

(ನಲಗಾಮನ ರಹಸ್ಯ ಮಂತ್ರಾಲೋಚನಾ ಗೃಹ. ನಲಗಾಮ ಯಾರನ್ನೋ ನಿರೀಕ್ಷಿಸುತ್ತಿರುವಂತಿದೆ. ಪದೇ ಪದೇ ಬಾಗಿಲಿನ ಕಡೆಗೆ ನೋಡುತ್ತಾನೆ).

**ನಲಗಾಮ :** (ಸ್ವಗತ) ಇನ್ನೂ ಯಾಕೆ ಬರಲಿಲ್ಲವೋ ಈ ನಾಗಮ್ಮ? ಅಲ್ಲ ನನಗಂತೂ ಸಾಕಾಗಿ ಹೋಗಿದೆ. ಈ ರಾಜತ್ವ, ಈ ಕಿರೀಟ, ಈ ಸಿಂಹಾಸನ ನನಗೆ ಮುಳ್ಳಿನ ಹಾಸಿಗೆಯೆನಿಸಿದೆ. ನಾನು ಮಾಡುವುದು, ಮಾಡುತ್ತಿರುವುದು ಯಾವುದು ಸರಿಯೋ ಯಾವುದು ತಪ್ಪೋ! ನಾನು ಏನಾಗುತ್ತಿದ್ದೇನೆ?... ಇವರಿಬ್ಬರ ಅಂತ;ಕಲಹಗಳಿಂದ ಸೆಣಸಾಟಗಳಿಂದ ನನಗೆ ಸಾಕಾಗಿ ಹೋಗಿದೆ. ನನಗೆ ಅಧಿಕಾರವಾಗಲೀ, ಸ್ವಾತಂತ್ರ್ಯವಾಗಲೀ ಇಲ್ಲವೇನೋ ಎನಿಸುತ್ತಿದೆ. ಇವರಿಬ್ಬರಲ್ಲಿ ನನ್ನ ಹಿತೈಷಿಗಳಾರು ಶತ್ರುಗಳಾರು?– ನಂಬುವುದಕ್ಕೇ ಆಗುತ್ತಿಲ್ಲ. ಈಗ ನಾಗಮ್ಮನ ದೃಷ್ಟಿಯಲ್ಲಿ ಬ್ರಹ್ಮಣ್ಣ ಏನೇ ಆಗಿದ್ದರೂ ಎಳೆತನದಿಂದ ನಮ್ಮನ್ನು ಸಾಕಿ ಸಲಹಿದವನು, ತಂದೆಯ ಸ್ಥಾನದಲ್ಲಿ ಇರುವವನು. ಇಂತಹವನನ್ನು ನಿಂದಿಸುವುದಾಗಲೀ, ಅನುಮಾನಿಸುವುದಾಗಲೀ ಸಾಧ್ಯವಾಗುತ್ತಿಲ್ಲ.... ಆದರೆ....... ಆದರೆ.......... ಈ ನಾಗಮ್ಮ.......... ಈ ನಾಯಕಿ.......... ಓಹ್ ಅವಳನ್ನೂ ಕಡೆಗಣಿಸುವುದು ಸಾಧ್ಯವಿಲ್ಲ. ಬುದ್ಧಿ ಬಲದಿಂದ, ತಂತ್ರ ಬಲದಿಂದ ಈ ನಾಡಿನಲ್ಲಿಯೇ ಪ್ರಮುಖ ವ್ಯಕ್ತಿಯಾಗಿ ಮೆರೆಯುತ್ತಿದ್ದಾಳೆ. ನಮಗೆ ಬೇಕು ಬೇಕಾದಾಗ ಹಣ ಒದಗಿಸುತ್ತ, ವ್ಯಾಪಾರ ಉದ್ಯಮಗಳಿಗೆ, ಬಂಡವಾಳ ಒದಗಿಸುತ್ತ ರಾಜ್ಯದ ಆರ್ಥಿಕ ವ್ಯವಸ್ಥೆಯ ಅಭಿವೃದ್ಧಿಗೆ ಎಷ್ಟೋ ಸಹಕರಿಸುತ್ತಿದ್ದಾಳೆ. ದಾನಧರ್ಮಾದಿಗಳಿಂದ ಪ್ರಜಾವತ್ಸಲಳಾಗಿದ್ದಾಳೆ. ಅಲ್ಲದೆ ಅವಳ ಪ್ರಚಂಡ ಬುದ್ಧಿ ಬಲದಿಂದ ಬಯಸಿದರೇ ರಾಜ್ಯಗಳನ್ನೇ ಮುಳುಗಿಸಬಲ್ಲಳು. ಬೇಕಾದರೆ ನಮ್ಮೆಲ್ಲರನ್ನು ಬದಿಗಿರಿಸಿ ತಾನೇ

ಅಧಿಕಾರವನ್ನು ಕಿತ್ತುಕೊಳ್ಳಬಲ್ಲಳು. ಒಮ್ಮೆ ಅವಳ ವಶಕ್ಕೆ ಸಿಲುಕಿದರೆ ಅದರಿಂದ ಬಿಡಿಸಿಕೊಳ್ಳುವುದೇ ಸಾಧ್ಯವಿಲ್ಲವೇನೋ ಎನಿಸುತ್ತದೆ.......... ಈ ರಾಜ್ಯವನ್ನು ಹಂಚಿಕೊಟ್ಟಿರುವುದು ಅವಳಿಗೆ ಅಸಮಾಧಾನವಾಗಿದೆ.... ಇದಕ್ಕಾಗಿ ಇನ್ನು ಏನೇನು ಷಡಯಂತ್ರಗಳನ್ನು ಹೂಡುವಳೋ ದೇವರೇ ಬಲ್ಲ. ಬಯಸಿ ಬಯಸಿ ಅಪಾಯದ ಕೆಂಡವನ್ನು ಸೆರಗಿಗೆ ಕಟ್ಟಿಕೊಂಡಂತಾಯಿತು. ಅವಳ ಸಹವಾಸ.

**ಸೇವಕ** : (ಪ್ರವೇಶಿಸಿ) ಪ್ರಭು ನಾಯಕಿ ಅವರು ಬರುತ್ತಿದ್ದಾರೆ.

**ನಲಗಾಮ** : ಓಹ್ ಬಂದರೇನು? ಹೋಗು ಒಳಗೆ ಕರೆದು ತಾ. ಬೇಗ ಹೋಗು.

(ಸೇವಕ ಹೋಗುತ್ತಾನೆ. ನಾಯಕಿ ಪ್ರವೇಶಿಸುತ್ತಾಳೆ)

**ನಾಯಕಿ** : ಪ್ರಭು ಹೊತ್ತಲ್ಲದ ಹೊತ್ತಲ್ಲಿ ಬಂದು ತಮಗೆ ತೊಂದರೆ ಉಂಟುಮಾಡಿದೆನೇನೋ!

**ನಲಗಾಮ** : ತೊಂದರೆ ಏನು ಬಂತು? ನೀನು ಬರಬೇಕೆಂದಿರುವ ವಿಷಯ ನರಸಿಂಹನಿಂದ ತಿಳಿಯಿತು. ನಾನೇ ನಿನ್ನ ನಿರೀಕ್ಷೆಯಲ್ಲಿದ್ದೆ.

**ನಾಯಕಿ** : ಹಾಗಾದರೆ ನರಸಿಂಹ ನಿಮ್ಮನ್ನು ಕಾಣಲು ಬಂದಿದ್ದನೇನು?

**ನಲಗಾಮ** : ಹೂಂ! ಅಂದರೆ ನಿನಗೆ ಅವನು ಬರುವ ವಿಷಯ ತಿಳಿದಿತ್ತೆನ್ನು!

**ನಾಯಕಿ** : ಹೌದು ಪ್ರಭು (ವಿನಯದಿಂದ) ನನ್ನ ಬಳಿಗೆ ಬಂದು ಸುಮ್ಮನೆ ಕೂಗಾಡಿದರು. ಬ್ರಹ್ಮಣ್ಣನ ಮಾತಿಗೆ ಮರುಳಾಗಿ ರಾಜ್ಯವನ್ನು ಹಂಚಿಕೊಟ್ಟದ್ದು ಅವರಿಗೆ ಅಸಮಾಧಾನವಾಗಿದೆ. ನಾನೂ ನನ್ನ ಭಾಗವನ್ನು ಕೇಳುತ್ತೇನೆ ಎಂದು ಹಟ ಮಾಡಿದರು. ನಾನೇ ಸಮಾಧಾನ ಮಾಡಿ, ಇಲ್ಲಿ ಕೂಗಾಡುವುದು ಬೇಡ. ನಿಮ್ಮ ಅಣ್ಣ ಸುಮ್ಮನೆ ಕೊಟ್ಟಿರಲಾರರು; ಬಲವತ್ತರವಾದ ಕಾರಣ ಇರಬೇಕು. ಹೋಗಿ ವಿಚಾರಿಸು' ಎಂದೆ.

**ನಲಗಾಮ** : ನಾಗಮ್ಮ ನಿನಗೇ ಗೊತ್ತಿಲ್ಲದೆ ನನ್ನದೂ ಸ್ವಂತ ನಿರ್ಧಾರಗಳು. ಆಲೋಚನೆಗಳು ಬರಲು ಸಾಧ್ಯವೇ?..... ನಿಮ್ಮಿಬ್ಬರ ಹಗೆ, ದ್ವೇಷ, ಸೆಣಸಾಟಗಳಿಗೆ ಮುಗಿತಾಯ ಇರಲಿ ಎಂದೇ ಬ್ರಹ್ಮಣ್ಣನ ಸಲಹೆಗೆ ಅಸ್ತು ಹೇಳಿದೆ. ಅಲ್ಲದೆ ಮಲಿದೇವ ಸೋದರರ ದುರಾಚಾರಗಳಿಂದ ಪ್ರಜೆಗಳು ಬೇಸತ್ತಿರುವುದನ್ನು ನೀನೇ ಬಲ್ಲೆ. ಅವರೂ ಇಲ್ಲಿಂದ ದೂರವಿರುವುದೇ ಕ್ಷೇಮವೆಂದು ಮಾಚರ್ಲಕ್ಕೆ ಬ್ರಹ್ಮಣ್ಣನೊಡನೆ ಅಟ್ಟಬಿಟ್ಟೆ.

**ನಾಯಕಿ** : ಪ್ರಭು. ನೀವು ಈ ನಾಡಿನ ಪ್ರಭುಗಳು. ನೀವು ತೆಗೆದುಕೊಳ್ಳುವ ನಿರ್ಧಾರಗಳನ್ನು ಯಾರೂ ಪ್ರಶ್ನಿಸಲಾರರು. ಅಲ್ಲದೆ ನೀವು ಹೇಳಿದ್ದನ್ನು ಶಿರಸಾವಹಿಸಿ ನಿರ್ವಹಿಸಿ ಕೊಡುವುದು ನಮ್ಮ ಕರ್ತವ್ಯ.

**ನಲಗಾಮ** : ಹಾಗಿದ್ದ ಮೇಲೆ ಯಾರಿಗೆ ಯಾಕೆ ಅಸಮಾಧಾನವಾಗಬೇಕು. ನರಸಿಂಹನಿಗೇ ಅಲ್ಲ. ನನಗೂ ಈ ವಿಷಯದಲ್ಲಿ ಸಮ್ಮತವಿಲ್ಲ. ಆದರೇನು ಮಾಡುವುದು?

**ನಾಯಕಿ** : ಪ್ರಭು ತಾವು ತಪ್ಪು ತಿಳಿಯುತ್ತಿದ್ದೀರಿ. ನನ್ನ ಉದ್ದೇಶದಲ್ಲಿ ಯಾವ ಕೇಡೂ ಇಲ್ಲ. ನನಗೆ ಬೇಸರ, ಭಯಗಳು ನಿಮ್ಮ ವಿಚಾರದಲ್ಲಿ. ನಿಮ್ಮೆಲ್ಲರ ಕ್ಷೇಮದ ಚಿಂತೆಯಿಂದ ಅಸ್ವಸ್ಥಳಾದೆನೇ ಹೊರತು, ನಿಮ್ಮ ಅಧಿಕಾರವನ್ನು ಪ್ರಶ್ನಿಸಬೇಕೆಂದಲ್ಲ......... ರಾಜ್ಯವನ್ನು ಹಂಚಿಕೊಟ್ಟಿರಿ......... ಸರಿ... ಆದರೆ ಅದು ಯಾರಿಗೆ ಲಾಭ! ಯಾರಿಗೆ ನಷ್ಟ?... ಆಲೋಚಿಸಿದಿರಾ?

**ನಲಗಾಮ** : ಯಾರಿಗೇನು?....... ಆಲೋಚಿಸುವುದಕ್ಕೇನಿದೆ? ನನ್ನ ಮಲಸೋದರರಿಗೆ ನಾನು ಕೊಟ್ಟೆ. ಬ್ರಹ್ಮಣ್ಣ ಅವರ ರಕ್ಷಕ. ಸಾಕಿ, ಬೆಳೆಸಿ ಅವರಿಗೆ ಒಂದು ದಾರಿ ಕಾಣಿಸಬೇಕೆಂದು ಅಪೇಕ್ಷೆ ಪಟ್ಟೆ, ಅಷ್ಟೆ!

**ನಾಯಕಿ** : ಅಲ್ಲೇ ನಿಮ್ಮ ಲೆಕ್ಕಾಚಾರ ತಪ್ಪಿದ್ದು. ಬ್ರಹ್ಮಣ್ಣ ನಾಯುಡು ಮೇಲೆ ಕಾಣುವಷ್ಟು ಸಾಚಾ ಅಲ್ಲ. ಅವನು ಗೋಮುಖ ವ್ಯಾಘ್ರ. ಮಹಾಧೂರ್ತ. ಅವನ ಅಂತರಂಗದ ತಳ ಹಿಡಿಯುವುದು ಸುಲಭವಲ್ಲ.... ಅವನು ಮೇಲು ನೋಟಕ್ಕೆ ನಿಮ್ಮ ಹಿತೈಷಿಯಂತೆ ಕಾಣಿಸಿಕೊಳ್ಳುತ್ತಿದ್ದಾನೆ. ಅವನ ಆಲೋಚನೆಗಳೇ ಬೇರೆ ಇವೆ..... ಪ್ರಭು ನಿಮಗೆ ಇನ್ನೊಂದು ರಹಸ್ಯ ಗೊತ್ತಿಲ್ಲ. ತಂದೆ ಇಲ್ಲದೆ ನೀವು ಅನಾಥರಾಗುವುದಕ್ಕೆ ಕಾರಣ ಯಾರು ಗೊತ್ತೇ?....... ಆ ಬ್ರಹ್ಮಣ್ಣ!

**ನಲಗಾಮ** : (ದನಿ ಏರಿಸಿ) ನಾಗಮ್ಮ...ಮಾತನಾಡುವುದಕ್ಕೆ ಮೊದಲು ಸ್ವಲ್ಪ ವಿಚಾರ ಮಾಡು..... ಸುಮ್ಮನೆ ನಿನ್ನ ವೈಯಕ್ತಿಕ ದ್ವೇಷಕ್ಕಾಗಿ ತಂದೆಯಂತೆ ನಮ್ಮನ್ನು ಕಾಪಾಡಿದ ಬ್ರಹ್ಮಣ್ಣನ ಮೇಲೆ ಇಂತಹ ಆರೋಪಗಳ ಪರಿಣಾಮವೇನಾದೀತು, ಅರಿವಿದೆಯಾ?

**ನಾಯಕಿ** : (ಸಮಾಧಾನದಿಂದಲೇ) ಅದೇ ಪ್ರಭು ಬ್ರಹ್ಮಣ್ಣನ ಜಾಣ್ಮೆ!....... ಯಾರಿಗೂ ಕಿಂಚಿತ್ತೂ ಅನುಮಾನ ಬಾರದಂತೆಯೇ ತನ್ನ ಧೂರ್ತ ಕೆಲಸಗಳನ್ನು ಮುಗಿಸಿದ. ಬೇಟೆಯ ನೆಪದಲ್ಲಿ ಕಾಡಿಗೆ ಹೋದ ನಿಮ್ಮ ತಂದೆಯವರು ಬ್ರಹ್ಮಣ್ಣನಿಂದಲೇ ಕೊಲೆಯಾದರು. ಆಕಸ್ಮಿಕ ಸಾವಿನಂತೆ ಸನ್ನಿವೇಶವನ್ನು ಸೃಷ್ಟಿಸಿದರು.... ಅಷ್ಟೇ ಏಕೆ ನಿಮ್ಮ ತಂದೆ ಅವರ ತಂದೆಯ ನಡುವೆ

ವಿರಸವುಂಟುಮಾಡಿ ಮಂತ್ರಿ ಪದವಿಯನ್ನು ತಂದೆಯಿಂದ ತಾನು ಕಸಿದುಕೊಂಡ. ಮುಂದೆ ಎಂದಾದರೂ ಗುಟ್ಟು ಬಯಲಾಗಿ ತನ್ನ ಮಂತ್ರಿ ಪದವಿ ಎಲ್ಲಿ ಕೈ ಜಾರಿ ಹೋಗುವುದೋ ಎಂದು ಅದನ್ನು ಶಾಶ್ವತವಾಗಿ ದಕ್ಕಿಸಿಕೊಳ್ಳಲು ತಂದೆಗೇ ವಿಷವಿಟ್ಟು ಕೊಲ್ಲಿಸಿದ.... ಈಗ ನೋಡಿದರೆ ಇನ್ನೂ ಅಪ್ರಬುದ್ಧರಾಗಿರುವ ಮಲಿದೇವ ಸೋದರರನ್ನು ಸಮಯ ನೋಡಿ ಕೊಲೆ ಮಾಡಿಸಿ, ನಿಮ್ಮ ಮತ್ತು ಅವರ ನಡುವೆ ವಿರಸವುಂಟಾಗಿರುವುದರ ಪ್ರಯೋಜನ ಪಡೆದು ನೀವೇ ಅವರನ್ನು ಕೊಲ್ಲಿಸಿದಿರೆಂದು ಪ್ರಚಾರ ಮಾಡಿ, ತಾನೇ ರಾಜ್ಯಾಧಿಕಾರವನ್ನು ಕೈಗೆ ತೆಗೆದುಕೊಂಡು, ನಿಮ್ಮ ಅಳಿಯಂದಿರನ್ನೂ ಉಪಾಯಾಂತರದಿಂದ ಮುಗಿಸಿ, ಗುರುಜಾಲವನ್ನು ಮುತ್ತಿ, ಇಡೀ ಪಲನಾಡಿಗೇ ಏಕಸ್ವಾಮಿಯಾಗುವುದು ಅವನ ಕನಸಾಗಿದೆ ಪ್ರಭು.

**ನಲಗಾಮ :** (ಜ್ಞಾನೋದಯವಾದಂತೆ) ನಾಗಮ್ಮ........ ಇಷ್ಟು ವರುಷಗಳು ಜೊತೆಗಿದ್ದರೂ ಬ್ರಹ್ಮಣ್ಣ ಮಂತ್ರಿಗಳ ಅಂತರ್ಯ ಅರ್ಥವಾಗಲಿಲ್ಲ. ಇಂತಹ ಧೂರ್ತ ಬುದ್ಧಿಯಿಂದ ಈ ಕೆಲಸ ಮಾಡಿದನೇ! ಅಯ್ಯೋ ಅನ್ಯಾಯವಾಗಿ ನನ್ನ ಸೋದರರನ್ನು ಆ ಕಟುಕನ ಕೈಗೆ ವಹಿಸಿಕೊಟ್ಟಂತಾಯಿತಲ್ಲ........ ನಾಗಮ್ಮ ಈಗೇನು ಮಾಡುವುದು?

**ನಾಯಕಿ :** ಪ್ರಭು ನಾನು ಹೇಳುವುದೆಲ್ಲಾ ನಿಮಗೆ ವಿಚಿತ್ರವೂ ಅಸತ್ಯವೂ ಎನಿಸಬಹುದು......... ನಿಮಗೆ ಗೊತ್ತಿಲ್ಲದ ವಿಷಯಗಳೇನೂ ಇಲ್ಲ........ ರಾಜನೀತಿ ಹೇಳುವುದೇನು? ಅಣ್ಣ ತಮ್ಮಂದಿರಾಗಲೀ, ಮಕ್ಕಳಾಗಲೀ...... ಸಂಪೂರ್ಣವಾಗಿ ನಂಬಬಾರದು ಎಂದು! ಅಂತಹುದರಲ್ಲಿ ಮಲಿ ಸೋದರರನ್ನು ವಿಶ್ವಾಸದ್ರೋಹಿಯಾಗಿರುವ ಮಂತ್ರಿಯನ್ನು ಹೇಗೆ ನಂಬಿದಿರಿ ಪ್ರಭು?

**ನಲಗಾಮ :** ನೀತಿ ಬೋಧೆಗೆ, ಮತ್ತು ಆದ ಅನಾಹುತಗಳ ಬಗ್ಗೆ ಯೋಚಿಸುವುದಕ್ಕೆ ಸಮಯವಲ್ಲ ಇದು. ಆದದ್ದನ್ನು ಸರಿಪಡಿಸುವುದಕ್ಕೆ ಕೈಗೊಳ್ಳಬೇಕಾದ ಕ್ರಮದ ಬಗ್ಗೆ ಆಲೋಚಿಸಿ ಹೇಳು.

**ನಾಯಕಿ :** ನಾನಾಗಲೇ ಯೋಚಿಸಿದ್ದೇನೆ ಪ್ರಭು. ಹೇಗಿದ್ದರೂ ಸಂಕ್ರಾಂತಿಯ ಸಂಭ್ರಮದ ಭಾಗವಾಗಿ ಹುಂಜದ ಕಾಳಗವನ್ನು ಏರ್ಪಡಿಸೋಣ. ಬ್ರಹ್ಮಣ್ಣನಿಗೂ ಸ್ಪರ್ಧೆಯಲ್ಲಿ ಭಾಗವಹಿಸಲು ಆಹ್ವಾನಿಸೋಣ. ಅವನಿಗೂ ಹುಂಜದ ಕಾಳಗವೆಂದರೆ ಎಲ್ಲಿಲ್ಲದ ಪ್ರೀತಿ. ಅದೂ ನಾವು ಸ್ನೇಹದಿಂದ ಆಹ್ವಾನಿಸುತ್ತಿದ್ದೇವೆಂದು ತಿಳಿದರೆ ನಿರಾಕರಿಸಲಾರ. ಬಯಸಿ ಯಾರನ್ನೂ ದ್ವೇಷ ಕಟ್ಟಿಕೊಳ್ಳಲು ಅವನು ಇಚ್ಛಿಸುವುದಿಲ್ಲ.

**ನಲಗಾಮ :** ಅವನಿಗಿಷ್ಟವಿರಬಹುದು. ಆದರೆ ಅವರ ರಕ್ಷಕ ಪರಿವಾರ ಈ ಆಹ್ವಾನದಲ್ಲಿ ಏನೋ ತಂತ್ರವಿದೆಯೆಂದು ವಾಸನೆ ಹಿಡಿದು ಬ್ರಹ್ಮಣ್ಣನನ್ನು ತಡೆಯುತ್ತಾರೆ.

**ನಾಯಕಿ :** ಇಲ್ಲ ಪ್ರಭು. ಆತ್ಮ ಗೌರವ, ಶೌರ್ಯ ಪರಾಕ್ರಮಗಳಿರುವ ಯಾರೂ ಇಂತಹ ಆಹ್ವಾನವನ್ನು ತಿರಸ್ಕರಿಸುವುದಿಲ್ಲ.

**ನಲಗಾಮ :** ಸರಿ ಹಾಗಿದ್ದರೆ. ನಾವೇ ಆತನನ್ನು ಆಹ್ವಾನಿಸುತ್ತಿದ್ದೇವೆಂದು ನಮ್ಮ ಹೆಸರಿನಲ್ಲಿಯೇ ಒಂದು ಪತ್ರವನ್ನು ಬರೆದು ಯಾರಾದರೂ ನಂಬಿಕಸ್ತನಾದವನೊಡನೆ ಕಳಿಸಿಕೊಡು.

**ನಾಯಕಿ :** ನಮ್ಮ ವೀರಾರೆಡ್ಡಿಯೇ ನಂಬಿಕೆಯ ಬಂಟ. ಅವನನ್ನೇ ಕಳಿಸಿ, ಅದಕ್ಕೆ ಅವರಿಂದ ಎಂತಹ ಪ್ರತಿಕ್ರಿಯೆ ದೊರೆಯುವುದೋ ಸೂಕ್ಷ್ಮವಾಗಿ ಎಲ್ಲವನ್ನು ತಿಳಿದು ಬರುವಂತೆ ಆದೇಶಿಸುತ್ತೇನೆ..... ನಾಳೆ ಬೆಳಿಗ್ಗೆಯೇ ಅವನು ಮಾಚೆರ್ಲಕ್ಕೆ ಹೊರಡಲಿ..... ಮತ್ತೇನಾದರೂ ಆದೇಶವಿದೆಯೇ ಪ್ರಭು?

**ನಲಗಾಮ :** ನಾಗಮ್ಮ ಈ ನಾಡಿನ ಭವಿಷ್ಯವನ್ನು ನಿನ್ನ ಕೈಯಲ್ಲಿರಿಸಿದೆ. ನೀನು ಅದೇನು ಮಾಡುತ್ತೀಯೋ ನನಗೆ ತಿಳಿಯದು. ಆದರೆ ನಮ್ಮಿಬ್ಬರ ಹಗೆ ಈ ಪಲನಾಡ ಸೀಮೆಯನ್ನು ವಿನಾಶದ ಕಡೆಗೆ ಕೊಂಡೊಯ್ಯದಿರಲಿ ........... ಅಷ್ಟೆ ನನ್ನ ಪ್ರಾರ್ಥನೆ.

**ನಾಯಕಿ :** ನಿಮಗೆ ಭರವಸೆ ನೀಡುತ್ತೇನೆ ಪ್ರಭು......... ಹಾಗೆಂದಿಗೂ ಆಗುವುದಿಲ್ಲ. ನನ್ನ ಮೇಲೆ ವಿಶ್ವಾಸವಿಡಿ........ ನಾನಿನ್ನು ಬರುತ್ತೇನೆ ಹೊತ್ತು ಮೀರಿದೆ.

**ನಲಗಾಮ :** ಆಯಿತು.......... ವೀರಾರೆಡ್ಡಿಗೆ ಜಾಗರೂಕತೆಯಿಂದ ಇರಲು ಹೇಳು. ಏಕೆಂದರೆ ನಮ್ಮ ಸುತ್ತಲೂ ಹಿತ ಶತ್ರುಗಳೆ ಹೆಚ್ಚಾಗಿದ್ದಾರೆ.

**ನಾಯಕಿ :** ನೀವು ಧೈರ್ಯದಿಂದ ಇರಿ ಪ್ರಭು. ನನ್ನ ಕೊರಳಲ್ಲಿ ಪ್ರಾಣವಿರುವವರೆಗೂ ನಿಮಗೆ ಭಯವಿಲ್ಲ.... ಬರುತ್ತೇನೆ ಪ್ರಭು.

(ನಾಯಕಿ ಅಲ್ಲಿಂದ ನಿರ್ಗಮಿಸುತ್ತಾಳೆ)

೦೦

# ದೃಶ್ಯ – ೪

(ಮಾಚರ್ಲದಲ್ಲಿ ಬ್ರಹ್ಮಣ್ಣನ ಪರಿವಾರ ಸದಸ್ಸು ಸೇರಿದೆ. ಬ್ರಹ್ಮಣ್ಣನ ಆತ್ಮೀಯ ಸ್ನೇಹಿತರು, ದೊಡ್ಡ ಮಲಿದೇವನೂ ಬ್ರಹ್ಮಣ್ಣನಿಗೆ ಸಮೀಪದಲ್ಲಿ ಕುಳಿತಿದ್ದಾರೆ. ಮಲಿದೇವನ ಕೈಯಲ್ಲಿ ಪತ್ರವಿದೆ. ಅದನ್ನು ಬಿಚ್ಚಿ ಸುಮ್ಮನೆ ಕಣ್ಣಾಡಿಸಿ ಬ್ರಹ್ಮಣ್ಣನ ಕಡೆಗೆ ನೀಡುತ್ತಾನೆ. ಬ್ರಹ್ಮಣ್ಣ ಅದನ್ನು ನೋಡಿ ಮುಗುಳ್ನಗುತ್ತಾನೆ).

**ದೊಡ್ಡಮಲಿದೇವ:** ಅಪ್ಪಾಜಿ, ಈಗ ಇದಕ್ಕೆ ಏನು ಉತ್ತರಿಸುತ್ತೀರಿ?

**ಬ್ರಹ್ಮಣ್ಣ :** ಮಲಿದೇವ ಈ ಪತ್ರವನ್ನು ನೀನೂ ಓದಿರುವಿ. ನಿನಗೇನನ್ನಿಸುತ್ತದೆ?

**ದೊ.ಮ.ದೇ:** ಅಪ್ಪಾಜಿ ನಿಜವಾಗಿಯೂ ನನಗೆ ಸಂತೋಷವಾಗಿದೆ. ಅಣ್ಣಾಜಿಯವರ ಆಸೆಯನ್ನೂ ನೆರವೇರಿಸಿದ ಹಾಗಾಗುತ್ತೆ. ಮತ್ತೆ ಕಡಿದು ಹೋದಂತಿರುವ ಬಾಂಧವ್ಯವೂ ಬೆಸೆಯುತ್ತದೆ. ಎರಡೂ ಕುಟುಂಬಗಳು ಒಂದಾಗುವುದಕ್ಕೆ ಇದೊಂದು ಸದವಕಾಶವೆಂದೇ ನನ್ನ ಭಾವನೆ.

**ಬ್ರಹ್ಮಣ್ಣ :** ಹೌದು ಮಲಿದೇವ ನನ್ನದೂ ಅದೇ ಭಾವನೆ. ಸುಮ್ಮನೆ ಹಗೆ ತನದಿಂದ ಸಾಧಿಸುವುದಾವರೂ ಏನನ್ನು?........... ಒಡೆದು ಹೋದ ಕುಟುಂಬಗಳು ಒಂದಾಗಿ ಮತ್ತೆ ಸೇರಿದರೆ ಅದಕ್ಕಿಂತ ಸಂತೋಷಕರವಾದ್ದು ನನಗೇನಿದೆ? ಸ್ವರ್ಗದಲ್ಲಿರುವ ಆ ನಿಮ್ಮ ತಂದೆಗೆ ನಾನು ಏನು ಉತ್ತರ ಕೊಡಲಿ ಎಂದು ಚಿಂತಿಸುತ್ತಿದ್ದೆ. ಈಗ ಶುಭದ ಸೂಚನೆ ಕಾಣುತ್ತಿದೆ. ನಾವು ಪಂದ್ಯಕ್ಕೆ ಒಪ್ಪಿದ್ದೇವೆಂದು ಪತ್ರ ಕಳಿಸೋಣ.

**ಬಾಲಚಂದ್ರ:** ಅಪ್ಪಯ್ಯ ನೀವು ಪತ್ರವನ್ನು ಸರಿಯಾಗಿ ಓದಿರುವಿರೇನು? .

**ಕೊಮ್ಮರಾಜು:** ಹೌದು ಬ್ರಹ್ಮಣ್ಣನವರೇ ಈ ಪಂದ್ಯಕ್ಕೆ ಎಲ್ಲ ರಾಜರನ್ನು ಆಹ್ವಾನಿಸಿ ಬರೆದಂತೆನಿಸಿದರೂ ಅದು ಕೇವಲ ಮಾಚರ್ಲದ ಪ್ರಭುಗಳನ್ನು ಉದ್ದೇಶಿಸಿಯೇ ಬರೆದಂತಿದೆ. 'ಪೌರುಷವಂತರು ಯಾರಾದರೂ ಇದ್ದರೆ ಈ ಪಂದ್ಯದಲ್ಲಿ ಗೆದ್ದು ತಮ್ಮ ಪೌರುಷವನ್ನು ಉಳಿಸಿಕೊಳ್ಳಬಹುದು'

ಎಂದಿದೆ. ಈ ರೀತಿಯಾಗಿ ಒಕ್ಕಣಿಸಿ ಸಾಮಂತರಾಜರೆಲ್ಲರಿಗೂ ಕಳಿಸಿದ್ದೇ ಆದರೆ ಅವರು ಯಾರೂ ಸುಮ್ಮನಿರಲಾರರು. ಆದ್ದರಿಂದ ನಮಗೆ ಮಾತ್ರ ಇದು ಆಹ್ವಾನವಾಗಿದೆ ಎಂಬುದನ್ನೇಕೆ ಅರ್ಥಮಾಡಿಕೊಳ್ಳಲಿಲ್ಲ. ಅಷ್ಟೇ ಅಲ್ಲ ಈ ಪತ್ರದ ಧಾಟಿ ನೋಡಿದರೆ ಇದನ್ನು ನಲಗಾಮ ಪ್ರಭುವಾಗಲೀ, ನರಸಿಂಹರಾಜನಾಗಲೀ ಬರೆದಂತಿಲ್ಲ. ನಾಯಕಿ ನಾಗಮ್ಮನದೇ ಕಿತಾಪತಿ ಎನಿಸುತ್ತಿದೆ. ನಾವು ಬಹಳ ಎಚ್ಚರಿಕೆಯಿಂದ ತೀರ್ಮಾನ ತೆಗೆದುಕೊಳ್ಳಬೇಕಾದೀತು.

**ಬಾಲಚಂದ್ರ:** ಅಷ್ಟೇ ಅಲ್ಲ ಅಪ್ಪಯ್ಯ. ಗುರುಜಾಲ, ಮಾಚೆರ್ಲಗಳು ಈಗ ಬೇರೆ ಬೇರೆಯಾಗಿವೆ. ಇದು ನಾಗಮ್ಮನಿಗೆ ಇಷ್ಟವಿಲ್ಲ. ಅವೆರಡನ್ನು ಮತ್ತೆ ಒಂದುಗೂಡಿಸುವ ಉಪಾಯವೇ ಹೊರತು ಕುಟುಂಬಗಳನ್ನು ಬೆಸೆಯುವುದಲ್ಲ. ಯಾವುದೋ ದೂರದ ದುರಾಲೋಚನೆಯೇ ಈ ಆಹ್ವಾನದ ಹಿಂದಿದೆ.

**ಕನ್ನಮದಾಸು:** ಬ್ರಹ್ಮಣ್ಣನವರೇ ನಿಮ್ಮ ಪುತ್ರರು ಸರಿಯಾಗಿ ಅರ್ಥೈಸಿದ್ದಾರೆ. ನಿಜವಾಗಿಯೂ ನಾಗಮ್ಮನ ಕುತಂತ್ರವೇ ಇದಾಗಿದೆ. ನಾಗಮ್ಮ ಬದುಕಿರುವವರೆಗೆ ನೆಮ್ಮದಿಯಾಗಿ ನಮ್ಮನ್ನು ಬಾಳಲು ಬಿಡುವುದಿಲ್ಲ. ನಮಗೆ, ನಮ್ಮ ರಾಜ್ಯಕ್ಕೆ ಹಾನಿಯುಂಟು ಮಾಡುವುದೇ ಅವಳ ಜೀವನದ ಗುರಿ.

**ಬ್ರಹ್ಮಣ್ಣ :** ಬಂಧುಗಳೇ ಸ್ನೇಹಿತರೆ ನೀವು ಊಹಿಸುತ್ತಿರುವುದೆಲ್ಲ ನಿಜವಿರಲೂಬಹುದು. ಆದರೆ ಪ್ರಭುಗಳಿಂದ ಬಂದಿರುವ ಆಹ್ವಾನವನ್ನು ನಿರಾಕರಿಸುವುದು ಅವರಿಗೆ ಅವಮಾನ ಮಾಡಿದಂತೆ. ಆದ್ದರಿಂದ ಪಂದ್ಯಕ್ಕೆ ಗುರುಜಾಲದ ಕಡೆಗೆ ಹೊರಡುವುದಂತು ಖಚಿತ. ಈ ಸಂದರ್ಭದಲ್ಲಿಯೇ ನಮಗೆ ಬೇರೆ ಬೇರೆ ಕಡೆಗಳಿಂದ ಬಂದ ರಾಜರ, ಅಧಿಕಾರಿಗಳ ಪರಿಚಯ, ಮಾಚೆರ್ಲದ ಗುರುಜಾಲದ ಪ್ರಜೆಗಳ ನಡುವೆ ಸ್ನೇಹ, ಬಾಂಧವ್ಯಗಳು ಏರ್ಪಡುತ್ತವೆ. ಆದ್ದರಿಂದ ಮತ್ತೇನನ್ನೂ ಯೋಚಿಸದೆ ಗುರುಜಾಲಕ್ಕೆ ಹೊರಡುವ ಪ್ರಯತ್ನಗಳನ್ನು ಮಾಡಿ.

**ಕೊಮ್ಮರಾಜು:** ಬ್ರಹ್ಮಣ್ಣನವರೇ ನೀವು ತಿಳಿದವರು. ಪ್ರಾಜ್ಞರು. ಸಪ್ತವ್ಯಸನಗಳಲ್ಲಿ ಒಂದಾದ ದ್ಯೂತದಂತಹುದು ಹುಂಜಗಳ ಕಾಳಗ ಪಂದ್ಯ. ಈ ವ್ಯಸನಗಳಲ್ಲಿ ತೊಡಗಿಸಿಕೊಳ್ಳುವ ಪ್ರತಿಯೊಬ್ಬರು ಒಂದಲ್ಲ ಒಂದು ರೀತಿಯ ನಷ್ಟವನ್ನು ಅನುಭವಿಸಿದ್ದಾರೆ. ನಾವು ತಿಳಿದೂ ತಿಳಿದೂ ಮತ್ತೆ ಅದೇ ಹಳ್ಳದಲ್ಲಿ ಹೆಜ್ಜೆ ಇಡುತ್ತಿದ್ದೇವೆ ಪ್ರಾಮಾಣಿಕವಾಗಿ ಹೇಳುವುದಾದರೆ, ಈ ಪಂದ್ಯಕ್ಕೆ

ನಾವು ಹೋಗುವುದು ಸರಿಯಲ್ಲವೆನಿಸುತ್ತದೆ. ನಿಜವಾದ ಸ್ನೇಹಿತರೊಂದಿಗೆ ಆಡುವುದು ಬೇರೆ, ಸ್ನೇಹಿತರಂತೆ ಕಾಣಿಸಿಕೊಳ್ಳುತ್ತಾ ಇರುವವರೊಂದಿಗೆ ಆಡುವುದು ಬೇರೆ. ನಮ್ಮ ದೌರ್ಬಲ್ಯದ ಜಾಡು ಹತ್ತಿದರೆ ಸಾಕು ಸಂಪೂರ್ಣವಾಗಿ ನಮ್ಮ ಗೋರಿ ಅಗೆಯುವವರೆಗೆ ಬಿಡುವುದೇ ಇಲ್ಲ. ಅದಕ್ಕೆಂದೇ ಹೇಳುತ್ತೇನೆ. ನಾವು ಬರುವುದಿಲ್ಲವೆಂದು ಬರೆದು ಕಳಿಸಿಬಿಡಿ.

**ದೊ.ಮ.ದೇ.:** ಅಪ್ಪಾಜಿ, ಅಣ್ಣಂದಿರ ಆಹ್ವಾನವನ್ನು ಗೌರವಿಸುವುದೇ ನನಗೆ ಸರಿ ಎನಿಸುತ್ತದೆ. ಇದರಿಂದ ನಮಗೇನೂ ತೊಂದರೆ ಇರಲಾರದು.

**ಬ್ರಹ್ಮಣ್ಣ :** ನನಗೂ ಅದೇ ಸರಿಯೆನಿಸುತ್ತದೆ. ಹೇಗಿದ್ದರೂ ನಿಮ್ಮಣ್ಣಂದಿರು ಮದುವೆಗೆ ಬರಲಿಲ್ಲ. ಅವರಿಗೆ ತೆಗೆದುಕೊಂಡು ಹೋಗಿ ಕೊಡಬೇಕಾದ ಕಾಣಿಕೆಗಳನ್ನು ಕೊಟ್ಟು ಅವರನ್ನು ವಿಚಾರಿಸಿದ ಹಾಗೂ ಆಗುತ್ತದೆ. (ಕನ್ನಮದಾಸನ ಕಡೆ ನೋಡಿ) ಕನ್ನಮದಾಸು ಪುರೋಹಿತರನ್ನು ವಿಚಾರಿಸಿ ನಮ್ಮ ಪ್ರಯಾಣಕ್ಕೆ ಒಂದು ಶುಭ ಮುಹೂರ್ತವನ್ನು ತಿಳಿಸಲಿಕ್ಕೆ ಹೇಳು.

**ಬಾಲಚಂದ್ರ:** ಅಪ್ಪಾಜಿ ನೀವು ಏನೇ ಹೇಳಿ ನನಗೆ ಈ ಆಹ್ವಾನ ಯುದ್ಧಕ್ಕೆ ನೀಡಿದ ಆಹ್ವಾನದಂತಿದೆ. ಅದರ ಹಿಂದೆ ಕಿಡಿಗೇಡಿತನ, ಧೂರ್ತತನಗಳ ದಟ್ಟ ವಾಸನೆಯಿದೆ. ನೀವು ಹಿರಿಯರು. ನಿಮಗೆ ಬುದ್ಧಿ ಹೇಳುವಷ್ಟು ಯೋಗ್ಯತೆ ನನಗಿಲ್ಲ. ಮತ್ತೊಮ್ಮೆ ಯೋಚಿಸುವುದು ಒಳ್ಳೆಯದೆನಿಸುತ್ತದೆ...... ಇಷ್ಟೇ ನಾನು ಹೇಳುವುದು.

**ಬ್ರಹ್ಮಣ್ಣ :** ಕುಮಾರ ವೃಥಾ ಭಯಪಡುತ್ತಿರುವೆ. ನಾವು ಈ ಪಂದ್ಯದಲ್ಲಿ ಸೋತರೆ ತಾನೇ ನಮಗೆ ಭಯ! ಹುಂಜಕಾಳಗದ ಪಂದ್ಯಗಳು ನನಗೆ ಹೊಸತೇನಲ್ಲ. ಅದಕ್ಕೆ ಬೇಕಾದ ಬಲಿಷ್ಠ ಮತ್ತು ಕಾಳಗಕ್ಕೆಂದೇ ತರಬೇತಿಗೊಂಡ ಹುಂಜಗಳಿವೆ. ನಮ್ಮ ಹುಂಜ 'ಚಿಟ್ಟಿಮಲ್ಲು'ವನ್ನು ಕರೆತರಿಸಿದರೆ ಮುಗೀತು. ಈ ಪ್ರಪಂಚದಲ್ಲಿ ಬ್ರಹ್ಮಣ್ಣನ ಕಡೆಯವರನ್ನು ಸೋಲಿಸುವುದು ಕನಸಿನಲ್ಲಿಯೂ ಯಾರಿಂದಲೂ ಸಾಧ್ಯವಾಗುವುದಿಲ್ಲ. ಒಂದೇ ಪ್ರಹಾರಕ್ಕೆ ಎದುರಾಳಿಯನ್ನು ಹಣ್ಣುಗಾಯಿ ನೀರುಗಾಯಿ ಮಾಡಿಬಿಡುತ್ತದೆ. ಅದೇ ನಮ್ಮ ಭರವಸೆ. ಅದೇ ನಮ್ಮ ಬಲ. ಹೀಗಿರುವಾಗ ಸೋಲಿನ ಭೀತಿಗೆ ಕಾರಣವಿಲ್ಲ.

**ಕೊಮ್ಮರಾಜ:** ಬ್ರಹ್ಮಣ್ಣ ನಾಯಕರೇ ನಿಮಗಿಷ್ಟೊಂದು ಭರವಸೆ ಇರುವುದಾದರೆ ಮುಂದುವರೆಯಲಿ..... ದೈವೇಚ್ಛೆ ಹೇಗಿದೆಯೋ ಹಾಗೇ ಆಗಲಿ. ಮನುಷ್ಯ ಮಾತ್ರರು ನಾವು. ಅವನದೇ ಪ್ರೇರಣೆ ಇದಾಗಿದ್ದರೆ ನಾವು ಅಸಹಾಯಕರು.

ಬ್ರಹ್ಮಣ್ಣ : ಹಾಗಾದರೆ ಎಲ್ಲರೂ ಒಪ್ಪಿದಂತಾಯಿತು. ಮುಹೂರ್ತ ಗೊತ್ತು ಮಾಡಿದ ಕೂಡಲೇ ಹೊರಡೋಣ..........

(ಸೇವಕನೊಬ್ಬನು ಪ್ರವೇಶಿಸಿ ಬ್ರಹ್ಮಣ್ಣನ ಕ್ಷಮೆ ಕೋರಿ)

ಸೇವಕ : ಮಂತ್ರಿಗಳೇ ಗೋಪಣ್ಣನವರು ತಮ್ಮನ್ನು ತುರ್ತಾಗಿ ಕಾಣಬೇಕಂತೆ ಒಳಗೆ ಬರಲು ಅಪ್ಪಣೆ ಕೇಳುತ್ತಿದಾರೆ.

ಬ್ರಹ್ಮಣ್ಣ : (ಆಶ್ಚರ್ಯದಿಂದ) ಏನು ಗೋಪಣ್ಣನೇ! ಇಷ್ಟು ಬೇಗ ನಾ ಹೇಳಿದ ಕೆಲಸ ಮುಗಿಸಿ ಹಿಂತಿರುಗಿದನೆ?

ಸೇವಕ : ಒಳಗೆ ಬರಹೇಳಲೇ ಮಂತ್ರಿವರ್ಯ?

ಬ್ರಹ್ಮಣ್ಣ : ಹೂಂ! ಬರಲೆಂದು ಹೇಳು ಹೋಗು.

(ಸೇವಕನು ಹೋಗುತ್ತಾನೆ. ಒಂದು ನಿಮಿಷದ ನಂತರ ಗೋಪಣ್ಣನ ಪ್ರವೇಶವಾಗುತ್ತದೆ)

ಗೋಪಣ್ಣ : (ಬ್ರಹ್ಮಣ್ಣನ ಸುತ್ತ ಕುಳಿತವರೆಲ್ಲರನ್ನೂ ಒಮ್ಮೆ ನೋಡಿ)

ಕ್ಷಮಿಸಿ ಬಂಧುಗಳೇ, ಈ ಕ್ಷಣಗಳಲ್ಲಿ ನಿಮ್ಮೆಲ್ಲರನ್ನು ಕಾಣಲೇಬೇಕೆಂದೆನಿಸಿ ಒಳನುಗ್ಗಿದೆನು.

ಬ್ರಹ್ಮಣ್ಣ : ಗೋಪಣ್ಣ ನಿನ್ನ ಆಕಸ್ಮಿಕ ಬರವು ಅನಿರೀಕ್ಷಿತವೆನಿಸಿದರೂ ನೀನು ಬಂದದ್ದು ನಮಗೆ ಸಂತೋಷವಾಗಿದೆ.... ಗೋಪಣ್ಣ ನಿನಗೆ ತಿಳಿಯದ ಒಂದು ವಿಷಯವಿದೆ. ಅದನ್ನು ಕುರಿತೇ ಚರ್ಚಿಸುತ್ತಿದ್ದೆವು. ಇನ್ನೇನು ಎಲ್ಲ ತೀರ್ಮಾನವಾಗಿದೆ. ಸರಿಯಾದ ಮುಹೂರ್ತ ನೋಡಿ ಗುರುಜಾಲಕ್ಕೆ ಹೊರಡುವವರಿದ್ದೇವೆ.

ಗೋಪಣ್ಣ : (ಅನುಮಾನಿಸುತ್ತ) ಬ್ರಹ್ಮಣ್ಣ, ನನಗೆ ತಿಳಿದಿಲ್ಲವೆಂದು ತಿಳಿದಿರುವ ವಿಷಯವನ್ನು ತಿಳಿದುಕೊಂಡೇ ಬಂದಿದ್ದೇನೆ. ಅದನ್ನು ಹೇಳಲೆಂದೇ ಇಲ್ಲಿಗೆ ಓಡಿ ಬಂದಿದ್ದೇನೆ.

ಬ್ರಹ್ಮಣ್ಣ : ಓಡಿ ಬಂದಿರುವ ನೀನು ಆತುರದಿಂದ ಹೇಳಬೇಕೆಂದಿರುವ ವಿಷಯವನ್ನಾದರೂ ಬೇಗ ಹೇಳು.

ಗೋಪಣ್ಣ : ಬ್ರಹ್ಮಣ್ಣ ನಿನಗೆ ಕೈ ಮುಗಿದು ಕೇಳಿಕೊಳ್ಳುತ್ತೇನೆ. ಈ ಪ್ರಯಾಣವನ್ನು ನಿಲ್ಲಿಸು. ಹುಂಜಗಳ ಕಾಳಗ ಪಂದ್ಯ ಇವೆಲ್ಲವುಗಳ ಗೊಡವೆ ನಮಗೆ ಬೇಡ. ಚನ್ನಕೇಶವ ದೇವಾಲಯದ ಅಪ್ಪಯ್ಯ ದೀಕ್ಷಿತರು ನಿಮ್ಮ ಬಗ್ಗೆ ತುಂಬ ಚಿಂತೆಗೊಂಡಿದ್ದಾರೆ. ಏನೇನೋ ಅಪಶಕುನಗಳಿಂದ ಕಳವಳಗೊಂಡಿದ್ದಾರೆ. ನಾನು ಬರುವಾಗ ಅವರನ್ನು ಕಂಡು ಬಂದೆ. ಆಗ ಅವರೇ ಸೂಕ್ಷ್ಮವಾಗಿ ಈ ಪ್ರಯಾಣದ ಪ್ರಸ್ತಾಪ ಮಾಡಿದರು. ಬಹುಶಃ ಈ ದಿನ ನಿಮ್ಮನ್ನು ಕಾಣಲು ಬರಬಹುದು.

**ಬ್ರಹ್ಮಣ್ಣ** : ಅಪ್ಪಣ್ಣ ದೀಕ್ಷಿತರು ಬರುತ್ತೇವೆಂದರೆ?....... ಬರಲಿ ಹೋಗುವ ಮುನ್ನ, ಅವರ ಆಶೀರ್ವಾದ ಪಡೆಯುತ್ತೇನೆ.

**ಗೋಪಣ್ಣ** : ಬಹುಶಃ ಅವರು ನಿಮ್ಮನ್ನು ಹೋಗ ಗೊಡುವುದಿಲ್ಲ.

**ಬ್ರಹ್ಮಣ್ಣ** : ಅದು ಮಾತ್ರ ಸಾಧ್ಯವಿಲ್ಲ ಗೋಪಣ್ಣ ಹೋಗುವುದು ನಿಶ್ಚಿತ. ಈಗಾಗಲೇ ಅದೆಲ್ಲ ತೀರ್ಮಾನವಾಗಿದೆ. ಒಮ್ಮೆ ನಿಶ್ಚಯಿಸಿದರೆ ಮುಗಿಯಿತು. ಹಿಂದಕ್ಕೆ ಹೋಗುವಂತಿಲ್ಲ.... ಗೋಪಣ್ಣ ಸುಮ್ಮನೆ ಕಳವಳಬೇಡ.

**ಗೋಪಣ್ಣ** : ಬ್ರಹ್ಮಣ್ಣ ನನಗೆ ಗೊತ್ತು ನೀನು ಯಾವುದಕ್ಕೂ ಹಿಂಜರಿಯುವುದಿಲ್ಲ. ಶಕುನಗಳಲ್ಲಿ ನಂಬಿಕೆಯಿಲ್ಲ.

**ಬ್ರಹ್ಮಣ್ಣ** : ನನ್ನ ಬಗ್ಗೆ ಗೊತ್ತಿದೆ ಎಂದ ಮೇಲೆ ನನ್ನನ್ನೇಕೆ ತಡೆಯುತ್ತಿರುವೆ.

**ಗೋಪಣ್ಣ** : ಬ್ರಹ್ಮಣ್ಣ ನಮ್ಮ ಶೌರ್ಯ, ಸಾಹಸಗಳ ಮೇಲೆ ನಮಗೆ ಎಷ್ಟೇ ನಂಬಿಕೆಯಿದ್ದರೂ ಕೆಲವು ಸಂದರ್ಭಗಳಲ್ಲಿ ಅತಿಮಾನುಷ ಕ್ರಿಯೆಗಳಿಗೆ ನಾವು ಗಮನ ಕೊಡಬೇಕಾಗುತ್ತದೆ. 'ಶಕುನಗಳೆಂಬ' ಅನಿಷ್ಟಗಳನ್ನು ನಂಬಬೇಕಾಗುತ್ತದೆ.

**ಬ್ರಹ್ಮಣ್ಣ** : ಗೋಪಣ್ಣ ನಮ್ಮ ಮೇಲಿನ ಪ್ರೀತಿಗಾಗಿ, ವಿಶ್ವಾಸಕ್ಕಾಗಿ ನಮ್ಮನ್ನು ಎಚ್ಚರಿಸುತ್ತಿರುವಿ. ಧನ್ಯವಾದಗಳು. ಆದರೆ ಈಗ ಕೆಲಸ ಕೈ ಮೀರಿದೆ.

**ಗೋಪಣ್ಣ** : ನನಗೆ ಗೊತ್ತು ಬ್ರಹ್ಮಣ್ಣ. ನಿನಗೆ ಶಕುನಗಳ ಮೇಲಿನ ನಂಬಿಕೆಗಿಂತ ನಿನ್ನ ಖಡ್ಗದ ಮೇಲೇ ನಿನಗೆ ಭರವಸೆ, ನಂಬಿಕೆಗಳು ಹೆಚ್ಚು ಶಕುನಗಳಿಗೆ ಹೆದರಿ ಓಡುವವನು ನೀನಲ್ಲವೆಂದೂ ನನಗೆ ತಿಳಿದಿದೆ.

**ಬ್ರಹ್ಮಣ್ಣ** : ನೋಡು ಗೋಪಣ್ಣ ವಿಧಿ ಲಿಖಿತವನ್ನು ಯಾರಿಂದಲೂ ತಪ್ಪಿಸಲು ಸಾಧ್ಯವಿಲ್ಲ. ಈಶ್ವರೇಚ್ಛೆ ಹೇಗಿರುವುದೋ ಹಾಗೆಯೇ ಆಗಲಿ. ನಳ-ದಮಯಂತಿ, ಧರ್ಮರಾಯ-ದ್ರೌಪದಿ, ಮೊದಲಾದವರೆಲ್ಲರೂ ವಿಧಿ ಲಿಖಿತವನ್ನು ಅನುಭವಿಸಿಯೇ ಅನುಭವಿಸಿದರು. ಅದರಿಂದ ಎಷ್ಟೇ ಪ್ರಯತ್ನಿಸಿದರೂ ತಪ್ಪಿಸಿಕೊಳ್ಳಲಾಗಲಿಲ್ಲ. ಆದ್ದರಿಂದ ವಿಧಿ ಲಿಖಿತವನ್ನು ವಿರೋಧಿಸಲು ನಾನೆಷ್ಟರವನು? ಇಷ್ಟಕ್ಕೂ ನೀನು ಇಷ್ಟೊಂದು ಹೆದರಿಕೊಳ್ಳುವಂತಹ..........

**ಗೋಪಣ್ಣ** : ಹಲ್ಲಿ, ಕಾಗೆ, ಒಂಟಿ ಬ್ರಾಹಣ, ಅಲ್ಲದೆ ತುಂಬಿದ ಕೊಡ ಒಡೆದುದನ್ನು ಮತ್ತು ಧೂಮಕೇತು ಕಾಣಿಸಿಕೊಂಡದ್ದನ್ನು ನೋಡಿದೆ. ಇವೆಲ್ಲವೂ ನಿನ್ನ ಪರಾಜಯವನ್ನು, ಪ್ರಾಣಹಾನಿಯನ್ನು ಸೂಚಿಸುತ್ತಿವೆ. ನಿನ್ನ ಆಳ್ವಿಕೆಯಲ್ಲಿ ಪ್ರಜೆಗಳು ಸುಖ ಸಂತೋಷಗಳಿಂದ ಬಾಳುತ್ತಿರುವುದು ತಪ್ಪಿ ಹೋಗಿ ನಲಗಾಮ ನಾಗಮ್ಮರ ಅಧೀನದಲ್ಲಿ ನಾನಾ ಕಷ್ಟಗಳನ್ನು ಅನುಭವಿಸುತ್ತಾ ನಲುಗಿ ಹೋಗಬೇಕಾದ ಪರಿಸ್ಥಿತಿ ಏರ್ಪಡುತ್ತದೆ.

**ಕೊಮ್ಮರಾಜು:** ಬ್ರಹ್ಮಣ್ಣ ಈಗಲೂ ಕಾಲ ಮಿಂಚಿಲ್ಲ. ನಾವು ಪಂದ್ಯಕ್ಕೆ ಬರುವುದಿಲ್ಲವೆಂದು ಹೇಳಿಕಳಿಸು. ಬಯಸಿ ಬಯಸಿ ಬವಣೆಗಳನ್ನು ತಂದುಕೊಳ್ಳುವುದು ಬೇಡ.

**ಗೋಪಣ್ಣ :** ಬ್ರಹ್ಮಣ್ಣ ಹಾಗೇನಾದರೂ ನಿನಗೆ ಪಂದ್ಯಕ್ಕೆ ಹೋಗಲೇ ಬೇಕೆನಿಸಿದರೆ ನಾನೇ ಹೋಗಿ ನಿನ್ನ ಪರವಾಗಿ ನಿರ್ವಹಿಸಿಕೊಂಡು ಬರುತ್ತೇನೆ. ನೀನು ಮಾತ್ರ ಈ ಪ್ರಯಾಣ ಕೈಗೊಳ್ಳಬೇಡ.

**ಬ್ರಹ್ಮಣ್ಣ :** ಪ್ರಿಯ ಬಂಧುಗಳೇ, ಮಿತ್ರರೇ ಗೋಪಣ್ಣ ತುಂಬ ಹೆದರಿದ್ದಾನೆ ನಿಜ. ಆದರೆ ನಾವು ಸೋಲಲೇಬೇಕು ಸಾಯಲೇಬೇಕು ಎಂಬುದೆ ನಿಶ್ಚಿತವಾದಲ್ಲಿ ನಾವು ಕುಳಿತೆಡೆಯಲ್ಲಿಯೇ ಅವೆಲ್ಲ ಸಂಭವಿಸುತ್ತವೆ. ನಾವು ಹೋಗದಿದ್ದ ಪಕ್ಷದಲ್ಲಿ ನಾಗಮ್ಮನ ಗರ್ವ ಇಮ್ಮಡಿಸುತ್ತದೆ. ನಾವು ಅವಳಿಗೆ ಹೆದರಿಕೊಂಡಿದ್ದೇವೆಂದು, ಹೇಡಿಗಳೆಂದು ಅವಹೇಳನ ಮಾಡುತ್ತಾಳೆ. ಅವಳ ಅಟ್ಟಹಾಸಕ್ಕೆ ಕಡೆಯಿಲ್ಲವಾಗುತ್ತದೆ. ಇದೆಲ್ಲವೂ ನಿಮಗೆ ಪ್ರಿಯವೆನಿಸುತ್ತದೆಯೇ? ಶತ್ರುಗಳಾಗಲೀ, ಮಿತ್ರರಾಗಲೀ ಹಾಕುವ ಸವಾಲುಗಳನ್ನು ಎದುರಿಸುವುದೇ ಪೌರುಷದ ಸಂಕೇತ. ಆದ್ದರಿಂದ ನೀವೆಲ್ಲ ಎಷ್ಟೇ ನನ್ನನ್ನು ತಡೆಯಲು ಪ್ರಯತ್ನಿಸಿದರೂ ನನ್ನ ನಿರ್ಧಾರ ಬದಲಾಗುವುದಿಲ್ಲ. ದಯವಿಟ್ಟು ನನ್ನನ್ನು ನೀವೆಲ್ಲ ಕ್ಷಮಿಸುತ್ತೀರೆಂದು ಭಾವಿಸುತ್ತೇನೆ.

(ಎಲ್ಲರೂ ಅವಾಕ್ಕಾಗಿ ಬ್ರಹ್ಮಣ್ಣನನ್ನೇ ನೋಡುತ್ತಿರುತ್ತಾರೆ. ಕತ್ತಲು ಕವಿಯುತ್ತದೆ)

○○

# ದೃಶ್ಯ – ೫

(ನಲಗಾಮ, ನರಸಿಂಹ, ನಾಗಮಣಿ ಮೂವರೂ ಮೂರು ಆಸನಗಳ ಮೇಲೆ ಕುಳಿತಿದ್ದಾರೆ. ನಾಯಕಿ ನಾಗಮಣಿಯ ಮುಖದ ಮೇಲೆ ವಿಜಯಗರ್ವ ತಾಂಡವ ವಾಡುತ್ತಿದೆ. ನಲಗಾಮ, ನರಸಿಂಹರ ಮುಖಗಳಲ್ಲೂ ಗೆಲುವಿನ ಛಾಯೆಯಿದೆ)

**ನಲಗಾಮ :** (ಮೆಚ್ಚುಗೆಯಿಂದ) ನಾಗಮ್ಮ ನಿನ್ನ ಬುದ್ಧಿಬಲ ಜಾಣ್ಮೆಗಳಿಗೆ ನಾವೆಲ್ಲರೂ ಮುಗ್ಧರಾಗಿದ್ದೇವೆ. ಕಡೆಗೂ ನಿನ್ನ ಮಾತನ್ನು ಉಳಿಸಿಕೊಂಡೆ. ಪಲನಾಡು ರಾಜ್ಯ ಒಡೆದು ಚೂರಾದ್ದನ್ನು ಮತ್ತೆ ಸೇರಿಸಿ ಒಂದುಗೂಡಿಸಿದೆ. ಈ ಹುಂಜಗಳ ಪಂದ್ಯದಲ್ಲಿ ನಾವು ಗೆದ್ದದ್ದು ಒಂದು ಪವಾಡವೇ ಸರಿ. ಮೊದ ಮೊದಲು ಬ್ರಹ್ಮಣ್ಣನ ಗೆಲುವನ್ನು ನೋಡಿ ನನಗೆ ಆಕಾಶ ಕಳಚಿ ಬಿದ್ದಂತೆನಿಸಿತು. ಆ ಬ್ರಹ್ಮಣ್ಣನ ಹುಂಜ 'ಚಿಟ್ಟಿಮಲ್ಲು'ವಿನ ಹೋರಾಟ ಆಕ್ರಮಣಗಳ ಶೈಲಿ ನಿಜವಾಗಿಯೂ ಅದ್ಭುತ. ಒಂದು ಸಲವೂ ಸೋಲನ್ನು ಅನುಭವಿಸದ ಚಿಟ್ಟಿಮಲ್ಲು ಮರುದಿವಸದ ಪಂದ್ಯದಲ್ಲಿ ಸೋತದ್ದು ಹೇಗೆಂದೇ ನನಗರ್ಥವಾಗಲಿಲ್ಲ.

**ನಾಯಕಿ :** ಪ್ರಭು ನೇರವಾಗಿ, ನ್ಯಾಯವಾಗಿ ಆಗದ್ದನ್ನು ವಕ್ರದಾರಿಗಳಿಂದ, ಮಂತ್ರ ತಂತ್ರಗಳಿಂದಲಾದರೂ ಸಾಧಿಸಿಕೊಳ್ಳುವುದೇ ರಾಜನೀತಿಯ ಮೊದಲಪಾಠ. ನಮ್ಮಲ್ಲಿ ಸಾವಿರ ಹುಂಜಗಳೂ ಆ ಚಿಟ್ಟಿಮಲ್ಲುವಿಗೆ ಸಾಟಿ ಯಾಗಲಾರದು. ಎಷ್ಟೇ ದಿನ ಪಂದ್ಯ ನಡೆದರೂ ನಮಗೆ ಗೆಲುವು ಸಿಗಲಾರದೆಂದು ತಿಳಿದೇ ನಾನೊಬ್ಬ ಮಂತ್ರವಾದಿಯ ನೆರವು ಪಡೆದು ಮರುದಿವಸದ ಪಂದ್ಯದಲ್ಲಿ ಅದನ್ನು ಸೋಲಿಸಿ ಸಾಯಿಸಿದೆ. ಬ್ರಹ್ಮನಾಯುಡು ಪಂದ್ಯದಲ್ಲಿನ ಪಣದಂತೆ ರಾಜ್ಯಕೋಶಗಳನ್ನು ಬಿಟ್ಟುಕೊಟ್ಟು ಏಳುವರ್ಷ ಅರಣ್ಯವಾಸಕ್ಕೆ ಹೋಗುವಂತೆ ಮಾಡಿದೆ..........

**ನಲಗಾಮ :** ಅರಣ್ಯವಾಸ ಮುಗಿಸಿ ಬಂದು ರಾಜ್ಯವನ್ನು ಹಿಂದಕ್ಕೆ ಕೇಳಿದರೆ...........?

**ನಾಯಕಿ** : ಪಣದಲ್ಲಿ ಹಾಗಿಲ್ಲವಲ್ಲ? ಮತ್ತೆ ರಾಜ್ಯವನ್ನು ಹಿಂತಿರುಗಿಸುತ್ತೇವೆಂದು ಶರತ್ತುಗಳು ಇಲ್ಲವಲ್ಲ? ರಾಜ್ಯ ಬೇಕೇ ಬೇಕೆನಿಸದರೆ ಹೋರಾಡಬೇಕು. ಹೋರಾಟಕ್ಕೆ ಅವರಲ್ಲಿ ಅಷ್ಟು ಹೊತ್ತಿಗೆ ಉಳಿದಿರುವುದಾದರೂ ಏನಿರುತ್ತೆ? ಅರಣ್ಯವಾಸದಿಂದ ಬಳಲಿ ಬೆಂಡಾಗಿ ತ್ರಾಣವಿಲ್ಲದೆ ಸತ್ತ ಹಾವುಗಳಂತೆ ಬಿದ್ದಿರುತ್ತಾರೆ. ಅವರೇನು ಬಂದು ಕೇಳಿಯಾರು?

**ನಲಗಾಮ** : ನಾಗಮ್ಮ ತಿಳಿದೂ ತಿಳಿದೂ ಬ್ರಹ್ಮಣ್ಣನ ವಿಚಾರವಾಗಿ ತಪ್ಪು ಲೆಕ್ಕ ಹಾಕುತ್ತಿರುವಿಯಲ್ಲ? ಅವನು ಸುಮ್ಮನೆ ಕುಳಿತುಕೊಳ್ಳುವುದಿಲ್ಲ. ನಾವು ಮಾಡಿದ ಅನ್ಯಾಯ, ಮೋಸ ತಿಳಿದು ಬಿಟ್ಟರೆ, ನಮ್ಮನ್ನು ಸುಮ್ಮನೆ ಬಿಡುವುದಿಲ್ಲ. ಗುರುಜಾಲದ ಮೇಲೆ ದಂಡೆತ್ತಿ ಬಂದು ನಮ್ಮನ್ನು ಕೊಚ್ಚಿ ಹಾಕುತ್ತಾನೆ.

**ನಾಯಕಿ** : ಅಲ್ಲಿಯವರೆಗೆ ಬ್ರಹ್ಮಣ್ಣ ಜೀವಂತವಾಗಿದ್ದರೆ ತಾನೇ? ಅವನ ಭಯ ನಿಮಗೆ ಬೇಡ ಪ್ರಭು.

**ನಲಗಾಮ** : (ಆಶ್ಚರ್ಯದಿಂದ) ಅಂದರೆ?

ನಾಯಕಿ : ಅಂದರೇನು ಪ್ರಭು... ಅರ್ಥ ಸ್ಪಷ್ಟವಾಗಿಯೇ ಇದೆಯಲ್ಲ. ಈ ದಿನದ ಊಟದಲ್ಲಿ ಬ್ರಹ್ಮಣ್ಣನಿಗೆ ವಿಷ ಪ್ರಾಶನವಾಗಲಿದೆ. ಅವನು ಸಾಯುತ್ತಾನೆ. ಆ ಮಲಿದೇವ ಸೋದರರು ಅನಾಥರಾಗುತ್ತಾರೆ. ಅಸಹಾಯಕರೂ ಅನಾಥರೂ ಆದ ಅವರನ್ನು ಇಲ್ಲದಂತೆ ಮಾಡುವುದು ಎಷ್ಟರ ಕೆಲಸ? ಯಾವುದಾದರೂ ನೆಪದಲ್ಲಿ ಗದ್ದಲವೆಬ್ಬಿಸುವುದು, ಕ್ರಾಂತಿ ಮಾಡುವುದು ಆ ಗದ್ದಲ ಗಲಭೆಗಳಲ್ಲಿ ಆ ಸೋದರರು ಸಾಯುತ್ತಾರೆ. ವಿಚಾರಣೆ ನಡೆಯುತ್ತದೆ. ಯಾರೆಂದು ತಿಳಿಯುವುದಿಲ್ಲ. ದೊಂಬಿಯಲ್ಲಿ ಮಾರಾಮರಿಯಲ್ಲಿ ಯಾರು ಕೊಂದರೋ ತಿಳಿಯುವುದಿಲ್ಲ. ವಿಚಾರಣೆ ಮುಗಿಯುತ್ತದೆ. ಎಲ್ಲ ತಣ್ಣಗಾಗುತ್ತದೆ. ರಾಜ್ಯ ನಿಮ್ಮದಾಗುತ್ತದೆ. ಬ್ರಹ್ಮಣ್ಣನಿಲ್ಲದೆ, ಮಲಿದೇವ ಸೋದರರಿಲ್ಲದೆ ನಿಮ್ಮ ಅಳಿಯ ನಿಮ್ಮಲ್ಲಿಗೇ ಬಂದೇ ಬರುತ್ತಾನೆ.

ನರಸಿಂಹ : (ರೋಷದಿಂದ) ನಾಗಮ್ಮ! (ಎಂದು ಚೀರುತ್ತಾನೆ)

**ನಾಯಕಿ** : (ಅವನತ್ತ ಕಣ್ಸನ್ನೆ ಮಾಡುತ್ತಾಳೆ) ಸ್ವಲ್ಪ ಸಮಾಧಾನ ಯುವರಾಜ. ಇಷ್ಟೊಂದು ಆತುರ ಬೇಡ. ಈಗಲೇ ಆತುರಪಡುವುದು ಬೇಡ.

**ನಲಗಾಮ** : ಯಾಕೆ ನರಸಿಂಹ ಅಷ್ಟೊಂದು ರೋಷ?

**ನಾಯಕಿ** : (ಮಾತನ್ನು ಬದಲಾಯಿಸಿ) ಏನಿಲ್ಲ ಪ್ರಭು. ಯುವರಾಜರಿಗೆ ಯಾವುದಕ್ಕೂ ಆಲಸ್ಯವೆಂದರೆ ಸಹಿಸುವುದಿಲ್ಲ. ಅವರಿಗಂತೂ ಈಗಲೇ ನಾನು

ಸೂಚಿಸಿದಂತೆ ಅವರನ್ನು ಕತ್ತರಿಸಿ ಬರುವ ಬಯಕೆ. ನಾನು ಹೇಳಿದ್ದರಲ್ಲಿ ವಿಳಂಬವಾದೀತೇನೋ ಎಂದು ಸಲ್ಪ ಸಿಟ್ಟಾದರು ಅಷ್ಟೆ!

**ನಲಗಾಮ :** (ಅರ್ಥವಾದಂತೆ) ಓ ಹಾಗೋ!

**ನಾಯಕಿ :** ಪ್ರಭು ಬ್ರಹ್ಮಣ್ಣನ ಬಿಡಾರಕ್ಕೆ ಹೋಗಿ ಅವರನ್ನು ಅಡವಿಗೆ ಕಳಿಸಿಕೊಟ್ಟು ಬರೋಣ.

(ಎಂದು ವಾಕ್ಯ ಪೂರೈಸುತ್ತಿರುವಷ್ಟರಲ್ಲಿಯೇ ಬ್ರಹ್ಮಣ್ಣ, ಕನ್ನಮ್ಮ ನಾಯುಡು, ಗೋಪಣ್ಣ ಮೂವರೂ ರಭಸದಿಂದ ಒಳಗೆ ನುಗ್ಗುತ್ತಾರೆ. ಗೋಪಣ್ಣ ರೋಷವನ್ನು ಕಾರುತ್ತಾನೆ)

**ಗೋಪಣ್ಣ :** (ನಾಗಮ್ಮನನ್ನು ಕುರಿತು) ಛಿ! ನಾಗಮ್ಮ ನೀವು ಒಬ್ಬಳು ಹೆಂಗಸೇ! ಕುಟಿಲಾತ್ಮಳು! ವಂಚಕಿ ಮೋಸಗಾರ್ತಿ! ನೀಚಳು! ಸ್ವಸಾಮರ್ಥ್ಯಗಳಿಂದ ಗೆಲ್ಲಲಾಗದೆ ದೇವರಂತಹ ಬ್ರಹ್ಮಣ್ಣನನ್ನು ಮೋಸದಿಂದ ಸೋಲಿಸಿದೆಯಾ? ಬೆವರು ಸುರಿಸಿ ಕಟ್ಟಿ ಬೆಳೆಸಿದ ಅವನ ರಾಜ್ಯವನ್ನು ಕಸಿದುಕೊಳ್ಳುವೆಯಾ?

**ಕನ್ನಮ್ಮ ನಾಯುಡು:** ಕುಟಿಲ ಕುತಂತ್ರಗಳಿಂದ ಮಾಟಮಂತ್ರಗಳಿಂದ ಕೇವಲ ಒಂದು ಊರ ಕೋಳಿಯ ಕೈಯಲ್ಲಿ ಅಜೇಯನಾದ ನಮ್ಮ 'ಚಿಟ್ಟಿಮಲ್ಲು'ವನ್ನು ಕೊಲ್ಲಿಸಿದೆಯಾ? ನೀನು ಹೆಣ್ಣಲ್ಲ ಮಾರಿ. ದೇವರು ನಿನಗೆ ಖಂಡಿತ ಒಳ್ಳೆಯದು ಮಾಡುವುದಿಲ್ಲೊ.

**ಗೋಪಣ್ಣ :** (ನಲಗಾಮನ ಕಡೆ ನೋಡಿ) ರಾಜಾ ನೀನೂ ಅವಳ ಮಾತುಗಳನ್ನು ಕೇಳಿ ತಂದೆಯ ಸಮಾನರಾದ ಬ್ರಹ್ಮಣ್ಣನಿಗೆ, ನಿನ್ನ ಸೋದರರಿಗೆ ಅನ್ಯಾಯ ಮಾಡಿದೆ. ಬ್ರಹ್ಮಣ್ಣನನ್ನು ಕೊಲ್ಲುವುದಕ್ಕೆ ಅವನು ಕುಳಿತುಕೊಂಡಿದ್ದ ವೇದಿಕೆಯ ಕೆಳಗೆ ಗುಳಿಯನ್ನು ಅಗೆಯಿಸಿದ್ದಳು. ಊಟದಲ್ಲಿ ವಿಷ ಹಾಕಿಸಿದಳು. ಮಾಂತ್ರಿಕನ ಸಹಾಯದಿಂದ ಹುಂಜವನ್ನು ಕೊಲ್ಲಿಸಿದಳು. ಪಂದ್ಯವನ್ನು ಧರ್ಮದಿಂದ, ನ್ಯಾಯದಿಂದ ಗೆಲ್ಲದೆ ಮೋಸದಿಂದ ಗೆದ್ದಳು. ಇಷ್ಟಾದರೂ ನಿನಗೆ ಏನೂ ಅನಿಸಲಿಲ್ಲವೇ? ಅವಳ ಅನ್ಯಾಯಗಳನ್ನು ತಡೆಯಲಾಗಲಿಲ್ಲವೇ? ಬದಲಾಗಿ ಅವಳ ಪಾಪಗಳಲ್ಲಿ ನೀನೂ ಭಾಗಿಯಾಗಿ ಮಹತ್ತರವಾದುದೇನನ್ನೋ ಸಾಧಿಸಿದ್ದೇನೆಂದು ಹೆಮ್ಮೆಪಡುತ್ತಿರುವ ನೀನೂ ಒಬ್ಬ ರಾಜನೇ?..... ಸಿಂಹಾಸನದ ಮೇಲೆ ಕುಳಿತ ಮಾತ್ರಕ್ಕೆ ರಾಜನಾಗಲಾರೆ. ಅದಕ್ಕೆ ಸರಿಯಾದ ಯೋಗ್ಯತೆ ಬೇಕು; ಸ್ವಂತಿಕೆ ಬೇಕು. ದುಷ್ಟಜನರ ಕೋಟೆಯೊಳಗೆ ಎಷ್ಟು ದಿನ ನೀನು ಭದ್ರವಾಗಿ ಇರಬಲ್ಲೆ? ಆ ಕೋಟೆಯೇ ಒಂದು ದಿನ ನಿನ್ನನ್ನು ನುಂಗಿ ಬಿಡುತ್ತದೆ. ಎಚ್ಚರವಿರಲಿ.

**ನಾಯಕಿ** : ಎಲವೋ ಮೂರ್ಖ. ನನ್ನನ್ನು ಪ್ರಭುಗಳನ್ನು ಕುರಿತು ಬಾಯಿಗೆ ಬಂದಂತೆ ಮಾತನಾಡಲು ನಿನಗೆಷ್ಟು ಧೈರ್ಯ? ಚಿಕ್ಕವರು ದೊಡ್ಡವರು ಎನ್ನುವ ಪರಿಜ್ಞಾನ ಬೇಡ. ಎಷ್ಟು ಕೊಬ್ಬು ನಿನಗೆ ಏಕವಚನದಲ್ಲಿ ಸಂಬೋಧಿಸಿ ಮಾತನಾಡುತ್ತಿರುವೆ? ನಿಮ್ಮ ಬ್ರಹ್ಮಣ್ಣ ಇದನ್ನೇ ಏನು ನಿಮಗೆ ಕಲಿಸಿರುವ ಪಾಠ?.... ಹೌದು, ನಿನಗೆಲ್ಲಿ ಬಂದೀತು ದೊಡ್ಡವರ ಸಂಸ್ಕಾರ? ಪಂದ್ಯ ಆಡುವಾಗ, ಪಣ ಕಟ್ಟುವಾಗ ಇರಬೇಕಾಗಿದ್ದ ಬುದ್ಧಿ ಎಲ್ಲಿ ಹೋಗಿತ್ತು. ಆಡುವಾಗ ಆಡಿ ಪಣ ಸೋತದ್ದಕ್ಕೆ ಈಗ ಬಂದು ಹಾರಾಡುತ್ತಿರುವೆ? ನಿನ್ನ ಬ್ರಹ್ಮಣ್ಣನನ್ನೇ ಏಕೆ ಸೋತೆಯೆಂದು ಕೇಳು.

**ಗೋಪಣ್ಣ** : ಬಾಯಿ ಮುಚ್ಚುನಾಯಿ! ಎಲ್ಲಿಯೋ ಬಿದ್ದಿದ್ದವಳು ಬಂದು ಪಟ್ಟಭದ್ರಳಾಗಿ ಇಲ್ಲಿ ಬೇರೂರಿ ಪುಣ್ಯವಂತರನ್ನು, ದೇಶಭಕ್ತರನ್ನು, ರಾಜನಿಷ್ಠರನ್ನು ಉಚ್ಚಾಟನೆ ಮಾಡಲು ಪ್ರಯತ್ನಿಸುತ್ತಿರುವ ನಿನ್ನನ್ನು ಇಷ್ಟು ದಿವಸ ನಿರ್ಲಕ್ಷಿದ್ದೆ ತಪ್ಪಾಯಿತು. ಆದರೆ ನೀನು ಹೆಂಗಸೆಂದು ಕನಿಕರ ತೋರಿಸುತ್ತ ಬಂದದ್ದೇ ತಪ್ಪಾಯಿತು. ಮನಸ್ಸು ಮಾಡಿದ್ದರೆ ನಿನ್ನನ್ನು ಖಂಡತುಂಡವಾಗಿ ಕತ್ತರಿಸಿ ಹಾಕುತ್ತಿದ್ದೆ.

**ನಾಯಕಿ** : (ಬ್ರಹ್ಮಣ್ಣನನ್ನು ಕೆಣಕಿ) ಏನು ಬ್ರಹ್ಮಣ್ಣ ನಿನ್ನ ಬಾಯಿ ಸತ್ತು ಹೋಗಿದೆಯೇ? ನಿನ್ನವರು ಇಷ್ಟು ಅಬ್ಬರಿಸುತ್ತ ಅರಸನನ್ನೇ ಆಡಬಾರದ್ದನ್ನು ಆಡಿ ಅವಮಾನಿಸುತ್ತಿದ್ದರೂ ತುಟಿ ಎರಡು ಮಾಡದೆ ಕಂಬದಂತೆ ನಿಂತಿದ್ದೀಯಲ್ಲ. ಇದೇನಾ ನಿನ್ನ ರಾಜಭಕ್ತಿಯ ರೀತಿ?

**ನಲಗಾಮ** : ಇದಕ್ಕೇನು ಹೇಳುವೆ ಬ್ರಹ್ಮಣ್ಣ?

**ಬ್ರಹ್ಮಣ್ಣ** : (ಒಂದು ದೀರ್ಘ ನಿಟ್ಟುಸಿರಿಟ್ಟು) ಪ್ರಭು ಇಷ್ಟು ಹೊತ್ತೂ ನಾನು ಮೌನವಾಗಿರುವುದಕ್ಕೆ ಕಾರಣ ಬೇರೆಯೇ ಇದೆ. ನನಗೆ ನಿಮ್ಮ ಮೇಲೆ ಕೋಪವಿಲ್ಲ ದ್ವೇಷವಿಲ್ಲ ನೀವೇನು ಮಾಡುತ್ತೀರಿ? ನಿಮ್ಮನ್ನು ಆಡಿಸುತ್ತಿರುವ ಸೂತ್ರಧಾರಿ ಬೇರೆ ಇರುವಾಗ ನೀವು ಅವಳು ಕುಣಿಸುವ ತಾಳಕ್ಕೆ ಕುಣಿಯುವುದನ್ನು ಮಾತ್ರ ಬಲ್ಲಿರಿ. ಈ ನಾಗಮ್ಮನ ಕಪಿಮುಷ್ಠಿಯಿಂದ ಬಿಡುಗಡೆ ಹೊಂದುವುದು ಈ ಜನ್ಮದಲ್ಲಿ ಸಾಧ್ಯವಿಲ್ಲ.

**ನಾಯಕಿ** : ಬ್ರಹ್ಮಣ್ಣ..... ಬ್ರಹ್ಮಣ್ಣ.......... ನೀನು ಹೇಳುವುದೆಲ್ಲ ಸತ್ಯವೇ ಇರಬಹುದು. ನಿಜ. ನನ್ನನನ್ನು ಬಹಳ ನಿಕೃಷ್ಟಳೆಂದು, ಅಲ್ಪಳೆಂದು, ಅಜ್ಞಳೆಂದು, ಸಾಮಾನ್ಯಳೆಂದು ಭಾವಿಸಿ ನಿರ್ಲಕ್ಷಿಸಿದ್ದೆಯಲ್ಲ. ನೋಡು ಈಗ ಏನಾಯಿತು. ಉಟ್ಟ ಬಟ್ಟೆಯಲ್ಲಿ ಅನ್ನಾಹಾರಗಳಿಗೂ ಗತಿಯಿಲ್ಲದೆ

ಕಾಡು ಪ್ರಾಣಿಗಳಂತೆ ನಿನ್ನ ಪರಿವಾರದ ಹಿಂಡಿನ ಜೊತೆಗೆ ಅಲೆದಾಡುವಂತೆ ಮಾಡಿದೆ. ಈಗಲಾದರೂ ನಾನು ಏನೆಂದು ನಿನಗೆ ಅರ್ಥವಾಯಿತಲ್ಲ!

**ಬ್ರಮ್ಹಣ್ಣ** : ಪ್ರಭು, ನನಗೆ ಈ ನೀಚ ಹೆಣ್ಣಿನ ಜೊತೆಗೆ ಮಾತೇಕೆ?.... ನಾನು ಹೇಳಬಂದದ್ದೆಂದರೆ, ಎಲ್ಲಿಯಾದರೂ ಹೋಗಿ ತಲೆ ಮರೆಸಿಕೊಳ್ಳಿ. ಹೊರಗೆ ಜನ ಉದ್ವಿಗ್ನರಾಗಿದ್ದಾರೆ. ನಾಗಮ್ಮನ ಕುಟಿಲ ಕುತಂತ್ರಗಳ ಪರದೆ ಸರಿದಿದೆ. ಬ್ರಮ್ಹಣ್ಣ ಈ ರಾಜ್ಯದಲ್ಲಿ ಇಲ್ಲದಿರಬಹುದು. ಆದರೆ ಜನರ ಎದೆಯ ಗೂಡುಗಳಲ್ಲಿ ಇನ್ನೂ ಭದ್ರವಾಗಿದ್ದಾನೆ! ನನಗೆ ಹೆಜ್ಜೆ ಹೆಜ್ಜೆಗೆ ಮಾಡಿದ ಅನ್ಯಾಯಗಳ, ನಿನ್ನ ಸೋದರರಿಗೆ ನೀನು ಎಸಗಿದ ಮೋಸ ವಂಚನೆಗಳ ಒಂದೊಂದು ವಿವರವೂ ಅವರಿಗೆ ತಿಳಿದಿದೆ. ಒಳಗೊಳಗೇ ಈ ನಾಡಿನ ಪರಿಸ್ಥಿತಿಗಾಗಿ ಜನ ಮರುಗುತ್ತಿದ್ದಾರೆ. ಇದಕ್ಕೆ ಕಾರಣರಾದವರ ಬಗ್ಗೆ ಜ್ವಾಲಾಮುಖಿಯಾಗುತ್ತಿದ್ದಾರೆ. ಯಾವ ಕ್ಷಣದಲ್ಲಿಯೇ ಆದರೂ ಸ್ಫೋಟಿಸಬಹುದು. ಬ್ರಮ್ಹಣ್ಣನ ಮೇಲಿನ ಪ್ರೀತಿಗಾಗಿ ಪ್ರಾಣಗಳನ್ನೇ ಪಣವಾಗಿಟ್ಟು ನಿಮ್ಮೆಲ್ಲರ ಮೇಲೆ, ಈ ರಾಜವಂಶದ ಮೇಲೆ ಸೇಡು ತೀರಿಸಿಕೊಳ್ಳಲು ಸೊಂಟಕಟ್ಟಿ ನಿಂತಿದ್ದಾರೆ ಹೊರಗೆ. ನಿಮಗೆ ಧಿಕ್ಕಾರ ಹಾಕುತ್ತಿದ್ದಾರೆ...... ಆದರೆ ನಾನು ಅವರನ್ನೆಲ್ಲ ಸಮಾಧಾನಗೊಳಿಸಿ ಬಂದಿದ್ದೇನೆ.... ಬೇಗ ಹೋಗಿ ಪ್ರಭು.... ಬೇಗ ಓಡಿಹೋಗಿ.

**ನಾಯಕಿ** : (ಅಟ್ಟಹಾಸದಿಂದ ನಕ್ಕು) ಬ್ರಮ್ಹಣ್ಣ ಸಾಕು ಮಾಡು ನಿನ್ನ ನಾಟಕ. ನಾವು ಹೇಡಿಗಳಂತೆ ಹೆದರಿ ಓಡಿ ತಲೆಮರೆಸಿಕೊಳ್ಳಬೇಕೇ?... ವಾಹ್ ಬ್ರಮ್ಹಣ್ಣ ವಾಹ್!.......... ಅಂತಹ ಪರಿಸ್ಥಿತಿ ಬಂದಿರುವುದು ನಮಗಲ್ಲ!..... ನಿಮಗೆ!......... ಇಂತಹ ಪ್ರಸಂಗ ಎದುರಾಗಬಲ್ಲದೆಂದು ನಿರೀಕ್ಷಿಸಿಯೇ ನನ್ನ ಖಾಸಗೀ ಸೈನ್ಯವನ್ನು ನಿನ್ನ ಆ ದೊಂಬಿಯನ್ನು ಹತ್ತಿಕ್ಕಲು ಆದೇಶಿಸಿದ್ದೇನೆ. ಅವರು ಸುಮ್ಮನಿರುವುದು ನಿನ್ನ ಮಾತಿನಿಂದಲ್ಲ. ನನ್ನ ಸೈನ್ಯ ಅವರ ಬಾಯಿಗಳನ್ನು ಮುಚ್ಚಿಸಿದೆ. ಎಷ್ಟು ಮಂದಿ ಎದುರಾದರೂ ಎಳೆದೊಯ್ದು ಸೆರೆಯಲ್ಲಿಡುವ ವ್ಯವಸ್ಥೆ ಮಾಡಿ ಬಂದಿದ್ದೇನೆ..... ಈಗ ನೋಡುತ್ತಿರು ನಿಮ್ಮ ಮೂವರ ಗತಿ ಏನಾಗುವುದೆಂದು! (ಕೈ ಚಪ್ಪಾಳೆ ತಟ್ಟಿ 'ಯಾರಲ್ಲಿ' ಎನ್ನುವಳು. ಕೂಡಲೆ ನಾಲ್ಕೈದು ಮಂದಿ ಭಟರು ಒಳಗೆ ಬರುತ್ತಾರೆ)

**ನಾಯಕಿ** : (ವ್ಯಂಗ್ಯವಾಗಿ ನಗುತ್ತ) ಕರೆದೊಯ್ಯಿರಿ ಈ ಬಾಯಿ ಬಡುಕರನ್ನು..... ಬ್ರಮ್ಹಣ್ಣ... ಎಲ್ಲಿ ಹೋಯಿತು ನಿನ್ನ ಪ್ರತಾಪ?.... ಈಗಲಾದರೂ ಒಪ್ಪಿಕೊ. ಈ

ನಾಯಕಿ ಸಾಮಾನ್ಯಳಲ್ಲ. ನಿನ್ನನ್ನೂ ಮೀರಿಸಬಲ್ಲವಳು ಎಂಬುದನ್ನು ಒಪ್ಪಿಕೋ.

**ಬ್ರಹ್ಮಣ್ಣ** : ನಾಗಮ್ಮ... ನಾಗಮ್ಮ..... ನೀನು ಬುದ್ಧಿವಂತಳೇ ಇರಬಹುದು. ರಾಜನೀತಿ ನಿಪುಣೆ ಆಗಿರಬಹುದು. ಆದರೆ ನಿನ್ನಲ್ಲಿನ ಕುಟಿಲ ಬುದ್ಧಿ ರಾಜ್ಯಗಳನ್ನು ನಿರ್ಮಿಸಲು ಸಹಕರಿಸುವುದಿಲ್ಲ. ರಾಜ್ಯಗಳ ವಿನಾಶಕ್ಕೆ, ಪ್ರಜಾಕೋಟಿಯ ಕಷ್ಟಕಾರ್ಪಣ್ಯಗಳಿಗೆ, ಕ್ರೌರ್ಯ, ಹಿಂಸೆ, ರಕ್ತಪಾತಗಳಿಗಷ್ಟೇ ದಾರಿ ಮಾಡುತ್ತವೆ. ನಿನ್ನ ವೈಯಕ್ತಿಕ ಸ್ವಾರ್ಥ ದ್ವೇಷಗಳಿಗಾಗಿ ರಾಜರನ್ನು, ರಾಜ್ಯಾಂಗವನ್ನು ಬಳಸಿಕೊಳ್ಳಬೇಡ. ಒಂದಲ್ಲ ಒಂದು ದಿನ ಅದು ನಿನಗೇ ಅರಿವಾಗುತ್ತದೆ. ಈ ಪಲನಾಡು ಸೀಮೆ ನಿನ್ನಿಂದಾಗಿ ಸ್ಮಶಾನವಾಗುತ್ತದೆ. ಪಾಳು ಕೊಂಪೆಯಾಗುತ್ತದೆ. ನೀನೂ ಉಳಿಯಲಾರೆ. ನಿನಗಾಗಿ ಪ್ರೀತಿಯಿಂದ ಕಣ್ಣೀರು ಇಡಲು ಒಂದು ನರಪಿಳ್ಳೆಯೂ ಇರುವುದಿಲ್ಲ. ಅಕಸ್ಮಾತ್ತಾಗಿ ನೀನು ಬದುಕಿ ಉಳಿದರೆ ಹುಚ್ಚಿಯಾಗಿ, ಮರುಳಾಗಿ ಧೂಳು ಮಣ್ಣುಗಳಲ್ಲಿ ಹೊರಳಾಡಿ ಚೀರಿ ಚೀರಿ ನರಳುವೆ. ಇದು ಬ್ರಹ್ಮಣ್ಣನ ಶಾಪ.

**ನಾಯಕಿ** : ಬ್ರಹ್ಮಣ್ಣ, ಕೈಲಾಗದವ ಮೈ ಪರಚಿಕೊಂಡ ಎಂಬಂತೆ ನೀನು. ನಿನಗೇ ಹೆದರದ ನಾನು ನಿನ್ನ ಶಾಪಗಳಿಗೆ ಹೆದರುತ್ತೇನೆಯೇ? ಈ ನಾಯಕಿಗೆ ಸವಾಲುಗಳನ್ನು ಎದುರಿಸುವುದೇ ಒಂದು ಸವಾಲು!!..... ಭಟರೇ ಎಳೆದೊಯ್ದುಯ ಕತ್ತಲೆಯ ಕೂಪದಲ್ಲಿ ತಳ್ಳಿ ಬಾಯಿ ಮುಚ್ಚಿಸಿ (ಎಂದು ಭಟರಿಗೆ ಆದೇಶಿಸುತ್ತಾಳೆ)

೦೦

# ಪಾತ್ರವರ್ಗ

ಕುಂತೀಭೋಜ

ಸೌವೀರದರಸ

ಕೌಂಡಿನ್ಯ

ಭೂತಿಕಾ

ಅವಿಮಾರಕ

ಸಂತುಷ್ಟ/ವಿದೂಷಕ

ಮಹಾರಾಣಿ

ಕುರಂಗಿ

ಸುಚೇತನಾ

ಸುದರ್ಶನಾ

ನಳಿನಿಕಾ

ಮಧೂಲಿಕಾ

ವಿದ್ಯಾಧರ

ಸೌದಾಮಿನಿ

ವಸುಭೂತೆ, ಕಂಚುಕಿ, ಸೈನಿಕರು, ಸಭಿಕರು

# ದೃಶ್ಯ – ೧

(ಸುಂದರವಾದ ಉದ್ಯಾನ. ಬಳ್ಳಿ ಮಂಟಪಗಳೆಡೆಯಲ್ಲೆಲ್ಲ ಅಮೃತಶಿಲೆಯ ಎತ್ತರದ ಜಗುಲಿಗಳು. ಅಲ್ಲಲ್ಲಿ ಅರಳಿ ನಗುತ್ತಿರುವ ಹೂಗಿಡಗಳು. ಬೆಳೆದು ನಿಂತ ಒಂದೆರಡು ಮರಗಳು. ಪ್ರಶಾಂತ ವಾತಾವರಣ. ಓನ್ನಲೆಗೆ ಕೋಗಿಲೆಯ ದನಿ. ವಸಂತದ ಹೊಗರು ಎಲ್ಲೆಲ್ಲೂ ಎದ್ದು ಕಾಣುವಂತಿದೆ. ರಂಗದ ಎಡಗಡೆಯಿಂದ ಕುರಂಗಿ ಮತ್ತು ಮಧೂಲಿಕಾ ಪ್ರವೇಶಿಸುತ್ತಾರೆ. ಕುರಂಗಿಯ ನಡೆ ನಿಧಾನವಾಗಿದೆ).

**ಮಧೂಲಿಕಾ:** ಒಡತಿ ಸುತ್ತಾಡಿ ಬಹಳ ಆಯಾಸಗೊಂಡಿದ್ದೀರಿ ಇಲ್ಲೇ ಈ ಜಗುಲಿಯ ಮೇಲೆ ಸ್ವಲ್ಪ ಹೊತ್ತು ವಿಶ್ರಾಂತಿ ತೆಗೆದುಕೊಳ್ಳಬಾರದೇ?

**ಕುರಂಗಿ :** (ನಿಟ್ಟುಸಿರಿಡುತ್ತಾ) ಇನ್ನೆಲ್ಲಿಯ ವಿಶ್ರಾಂತಿ ಮಧು! ನನ್ನ ನೆಮ್ಮದಿಯ ಕಡಲನ್ನು ಕಲಕಿ ಬಿರುಗಾಳಿ ಎಬ್ಬಿಸಿ ಬಿಟ್ಟ! ತಂಪಿನ ಊಟೆಗಳ ಹಾಗಿದ್ದ ನನ್ನ ಕಣ್ಣುಗಳನ್ನು ಬೆಂಕಿ ಕುಂಡಗಳಾಗಿಸಿ ಬಿಟ್ಟ. ಮನಸ್ಸಿನ ಕತ್ತಲ ಮೂಲೆಯಲ್ಲಿ ಹುಗಿದು ಮರೆಮಾಚಿದ್ದ ನನ್ನ ಒಲವಿನ ರೂಪಚಿತ್ರವನ್ನು ಹೊರಗೆ ಕೆಡವಿ ನಡೆದು ಬಿಟ್ಟ. ಇಷ್ಟೊಂದು ಕಾಲ ಆರಾಧಿಸಿದ್ದು ಇದೇ ಮುಖವನ್ನು! ಅವೇ ಉನ್ಮತ್ತ ಕಣ್ಣುಗಳು. ಮೇರುವಿನೆತ್ತರ ಗಾತ್ರದ ಭುಜಗಳು,ವಿಶಾಲ ಕಡಲ ವಿಸ್ತಾರದ ವಕ್ಷ ಸ್ಥಳ. ದುಂಬಿಗುರುಳಿನ ಮದನ ಮೋಹನ!.... ಓ.... ನೆನೆಸಿಕೊಂಡಂತೆ ಹೃದಯ ಅಧೀರವಾಗುತ್ತದೆ. ಭಾವ ಶೂನ್ಯವಾಗುತ್ತದೆ...... ಎಂತು ಮರೆಯಲಿ ಆ ಮುಖವನ್ನು; ಚಂದ್ರ ಬಿಂಬವನ್ನು!... ಯಕ್ಷ, ಕಿನ್ನರ, ದೇವರನ್ನು ಮೀರಿದ ಕಾಮ ದೇವನನ್ನು!!

**ಮಧೂಲಿಕಾ:** ಒಡತಿ ಕೇವಲ ಕ್ಷಣಮಾತ್ರ ದರ್ಶನದಿಂದ ಪರಪುರುಷನೊಬ್ಬನನ್ನು ಹೀಗೆ ಇಷ್ಟೊಂದು ಹಚ್ಚಿಕೊಳ್ಳುವುದು ನ್ಯಾಯಸಮ್ಮತವೇ?

**ಕುರಂಗಿ :** ಪ್ರೀತಿ ಉಕ್ಕೇರಿ ಹರಿದಾಗ ನ್ಯಾಯ ಧರ್ಮಗಳು ನಮಗೇಕೆ ಬೇಕು?...ನನ್ನ ಮನದ ಆಂದೋಲನ ನಿನಗೆ ಅರ್ಥವಾಗದು. ನಿನ್ನದು ನಿಷ್ಠುರ ಹೃದಯ.. ಹದಗೊಂಡ ಅಂತರಂಗವಾದರೆ ಅದು ತನಗೆ ತಾನೇ

ಚಿಗುರೊಡೆದು ನಿಲ್ಲುತ್ತದೆ. ನನ್ನ ಸ್ಥಿತಿ ನಿನಗರ್ಥವಾಗಬೇಕಾದರೆ ನಿನಗೂ ಇಂತಹ ಅನುಭವವಾಗಬೇಕು.

**ಮಧೂಲಿಕಾ:** ಒಡತಿ ನೀವು ತಿಳಿದಿರುವಷ್ಟು ಕಲ್ಲು ಮನಸಲ್ಲ ನನ್ನದು. ನನಗೂ ಪ್ರೀತಿಯ ಅನುಭವವಿದೆ. ಆದರೆ ನಾವು ಪ್ರೀತಿಸುವುದು ನಮ್ಮ ಪಾಲಿಗೆ ದಕ್ಕದೆ ಹೋದಾಗ ಈಗಿನ ನೋವಿಗಿಂತ ಸಾವಿರ ಪಟ್ಟು ದುಃಖ ಅನುಭವಿಸಬೇಕಾಗುತ್ತದೆ. ಅದಕ್ಕಾಗಿ ಮಾತ್ರವೇ ಹಾಗೆ ಹೇಳಿದೆ. ಅದೂ ಅಲ್ಲದೆ ತಮ್ಮ ವಿವಾಹದ ಪ್ರಯತ್ನಗಳು ನಡೆಯುತ್ತಿವೆ. ಅನೇಕ ರಾಜಕುಮಾರರು ತಮ್ಮ ಕೈ ಹಿಡಿಯಲು ಅರಮನೆಯ ಮುಂದೆ ಸಾಲುಗಟ್ಟಿ ನಿಂತಿದ್ದಾರೆ. ಅಲ್ಲದೆ ಮಹಾಪ್ರಭುಗಳು ಬನಾರಸದೇಶದ ರಾಜಕುಮಾರ ಜಯವರ್ಮರ ಜೊತೆ ವಿವಾಹದ ಯೋಚನೆ ನಡೆಸಿದ್ದಾರೆ. ಅಂಥಾದ್ದರಲ್ಲಿ ಹೀಗೆ ತಾವು ಅಪರಿಚಿತ ಯುವಕನ ಮೇಲೆ ಮನಸೋಲುವುದು ಎಷ್ಟರಮಟ್ಟಿಗೆ ಉಚಿತವಾದೀತು!

**ಕುರಂಗಿ :** ನೀನು ಹೇಳೋದೇನೋ ಸರಿ ಮಧು. ಆದರೆ ಮದೋನ್ಮತ್ತವಾಗಿ ಮೇಲೇರಿ ಬರುತ್ತಿದ್ದ ಆನೆಯನ್ನು, ತನ್ನ ಪ್ರಾಣದ ಮೇಲಿನ ಆಸೇನೂ ಬಿಟ್ಟು ಮಿಂಚಿನಂತೆ ಅದರ ಮೇಲೆ ಎರಗಿಬಿದ್ದು ಅದರೊಂದಿಗೆ ನಿರಾಯಾಸವಾಗಿ ಸೆಣಸಾಡಿ ನನ್ನನ್ನು ರಕ್ಷಿಸಿ, ವಿಜಯ ಗರ್ವದಿಂದ ನಿಂತ ಆ ಯುವಕನ ಶೌರ್ಯ, ಪರಾಕ್ರಮಗಳು ಸೆಣಸಾಟದ ನಂತರವೂ ದಣಿದು ಬಾಡದೆ ನಿಂತ ಅವನ ನಿಲುವು ಚೆಲುವುಗಳು!!... ಅಬ್ಬ! ನೆನೆಸಿಕೊಂಡರೆ ಮೈ ತುಂಬಾ ಪುಲಕದ ಪುಷ್ಪಗಳು ಅರಳುತ್ತವೆ.... ಅವನ ಆ ಮೋಹಕ ರೂಪಕ್ಕೆ ನನ್ನ ಮನಸ್ಸನ್ನು ಪೂರ್ತಿಯಾಗಿ ತೆತ್ತುಕೊಂಡು ಬಿಟ್ಟಿದ್ದೇನೆ. ಏನು ಮಾಡಿದರೂ ಅವನಿಂದ ನನ್ನ ಮನಸ್ಸನ್ನು ಕೀಳಲಾಗುತ್ತಿಲ್ಲ. ಅವನನ್ನು ಕುರಿತು ಆಲೋಚಿಸಿದಷ್ಟೂ ಆ ಮುಖ ನನಗೆ ತೀರಾ ಪರಿಚಿತವೆನಿಸುತ್ತದೆ; ಆತ್ಮೀಯವೆನಿಸುತ್ತದೆ. ಆ ನೋಟದ ಸುಖ ನೂರು ಸ್ವರ್ಗಗಳನ್ನಾದರೂ ಧಿಕ್ಕರಿಸುತ್ತದೆ. ಆತನನ್ನು ಮರೆತು ಬದುಕುವುದು ಖಂಡಿತ ನನ್ನಿಂದ ಸಾಧ್ಯವಿಲ್ಲ.... ಸಾಧ್ಯವೇ ಇಲ್ಲ ಮಧೂ.... ನನ್ನೆದೆ, ಒಡಲನ್ನು ದಹಿಸುತ್ತಿರುವ ಈ ವಿರಹದ ಬೆಂಕಿಯನ್ನು ತಣಿಸಲು ನನಗೊಂದು ಉಪಾಯವನ್ನು ಹೇಳುವುದಿಲ್ಲವೇ. ಆಗಲೇ ನಿನಗೆ ಹೇಳಿದ್ದೇನೆ. ನಾನು ನಿನ್ನ ಒಡತಿಯಲ್ಲ! ಸಖಿ.... ನಿನ್ನ ಪ್ರೀತಿಯ ಸಖಿ..... ನನ್ನ ಅಂತರಂಗದ ಗುಟ್ಟುಗಳನ್ನು ಕಾಪಾಡುವುದು ನಿನ್ನ ಹೊಣೆ... ಆಗಬಹುದಲ್ಲ?

**ಮಧೂಲಿಕಾ:** ಆದರೆ...ಆದರೆ.... (ಅನುಮಾನಿಸುತ್ತಾಳೆ)

**ಕುರಂಗಿ :** ಬೇಡ! ಬೇಡ! ಇನ್ನೇನೂ ಹೇಳಬೇಡ. ಎಲ್ಲಿ ಭಾಷೆ ಕೊಡು.

(ಅಷ್ಟರಲ್ಲಿ ಹಿನ್ನೆಲೆಯಲ್ಲಿ ಮಧೂಲಿಕಾ ಮಧೂಲಿಕಾ..... ಎಂದು ಯಾರೋ ಕೂಗುತ್ತಿರುವುದು ಕೇಳಿಸುತ್ತದೆ)

**ಮಧೂಲಿಕಾ:** (ಆಲಿಸಿ) ಅದೋ ಯಾರೊ ನಮ್ಮನ್ನು ಹುಡುಕುತ್ತಾ ಬರುವಂತಿದೆ ನಡೆ ಹೋಗೋಣ. ಬೆಳಿಗ್ಗೆ ನಡೆದ ಪ್ರಸಂಗದಿಂದ ಎಲ್ಲರೂ ಗಾಭರಿಗೊಂಡಿದ್ದಾರೆ. ನಾವು ಈ ಕೂಡಲೇ ಹೋಗಬೇಕು.

**ಕುರಂಗಿ :** ಈ ಪ್ರಶಾಂತತೆಯನ್ನು ಬಿಟ್ಟು ಹೊರಡುವುದಕ್ಕೇ ಮನಸ್ಸಾಗುತ್ತಿಲ್ಲ. ಉರೀತಿರೋ ಈ ದೇಹಕ್ಕೆ ತಣ್ಣನೆಯ ಗಾಳಿ ಎಷ್ಟು ಹಿತವಾಗಿದೆ ಗೊತ್ತಾ?

**ನಳಿನಿಕಾ :** (ಪ್ರವೇಶಿಸಿ, ಆಶ್ಚರ್ಯದಿಂದ) ಓ ಇಲ್ಲಿದ್ದೀರಾ? ನಿಮಗಾಗಿ ಎಲ್ಲೆಲ್ಲೋ ಹುಡುಕಾಡಿದೆ. ಈ ಕೂಡಲೇ ನೀವು ಮಹಾರಾಣಿಯವರನ್ನು ಕಾಣಬೇಕಂತೆ.

**ಕುರಂಗಿ :** ಏನು ಮಹಾರಾಣಿಯವರನ್ನು ಕಾಣಬೇಕೇ? (ಅನುಮಾನಿಸಿ)

**ನಳನಿಕಾ :** ಹೌದು ಒಡತಿ. ಕೂಡಲೇ ನಿಮ್ಮನ್ನು ಕರೆತರಬೇಕೆಂದು ಆಜ್ಞಾಪಿಸಿದ್ದಾರೆ.

**ಕುರಂಗಿ :** ಅಂತಹ ಗಂಭೀರವಾದ ಕೆಲಸವಾದರೂ ಏನಿರಬೇಕು?

**ನಳಿನಿಕಾ :** ನನಗೆ ಹೇಗೆ ತಿಳೀಬೇಕು ಒಡತಿ? ಆದರೆ ಬೆಳಗಿನ ಪ್ರಸಂಗದಿಂದ ಎಲ್ಲರೂ ಗಾಭರಿಯಾಗಿದ್ದಾರೆ. ಮಹಾಪ್ರಭುಗಳಂತೂ ತೀರಾ ಉದ್ವಿಗ್ನರಾಗಿರುವಂತೆ ಕಾಣುತ್ತಿದ್ದರು. ಮಹಾಮಾತ್ಯ ಕೌಂಡಿನ್ಯರ ಜೊತೆ ಈಗ ತಾನೇ ಮಂತ್ರಾಲೋಚನಾಗೃಹದ ಕಡೆ ಹೊರಟರು.

**ಕುರಂಗಿ :** ನಳಿನಿಕಾ ಇನ್ನೊಂದೆರಡು ತಾಸು ಇಲ್ಲಿದ್ದು ಬರುತ್ತೇವೆ. ನಾವು ಕಾಣಲಿಲ್ಲವೆಂದೆ ಹೇಳಿಬಿಡು.

**ನಳಿನಿಕಾ :** ಕ್ಷಮಿಸಬೇಕು ಒಡತಿ. ಮಹಾರಾಣಿಯವರಿಗೆ ನಿಮ್ಮನ್ನು ನೋಡಿದ ಹೊರತು ನೆಮ್ಮದಿ ಇರುವಂತಿಲ್ಲ.

**ಮಧೂಲಿಕಾ:** ನಳಿನಿಕಾ ಹೇಳಿದ್ದು ಕೇಳಿದಿಯಲ್ಲ! ಪಾಪ ತಾಯಿ ಹೃದಯ! ಎಷ್ಟು ತಲ್ಲಣಿಸಿದೆಯೋ ಏನೋ! ಅವರಿಗೆ ನೆಮ್ಮದಿ ತರೋದು ನಮ್ಮ ಕರ್ತವ್ಯವಲ್ಲವೇ? ಬೇರೇನೂ ನೆಪಗಳನ್ನು ಹೇಳದೆ ಕೂಡಲೇ ಹೋಗೋಣ ಬಾ ಸಖಿ.

**ಕುರಂಗಿ :** (ನಿಟ್ಟುಸಿರು) ಅಂತೂ ಇಂತೂ ಇಬ್ಬರೂ ಸೇರಿ ನನ್ನ ಬಾಯಿ ಕಟ್ಟಿ ಹಾಕಿದಿರಿ... ನಡೆಯಿರಿ. ಹಾಗಾದರೆ.... ನಿಮ್ಮಿಷ್ಟದಂತೇ ಆಗಲಿ. (ಹೋಗುವರು)

OO

# ದೃಶ್ಯ – ೨

(ಮಂತ್ರಾಲೋಚನಾ ಗೃಹ. ಕುಂತಿಭೋಜ ಸ್ವಲ್ಪ ಎತ್ತರದ ಸಿಂಹಾಸನದ ಮೇಲೆ ಕುಳಿತಿದ್ದಾನೆ. ಎಡಗಡೆ ಮಹಾರಾಣಿ ಬಲಗಡೆ ಸ್ವಲ್ಪ ದೂರದಲ್ಲಿ ಕೌಂಡಿನ್ಯ ಮಂತ್ರಿ. ಕುಂತಿ ಭೋಜ ಚಿಂತಾಕ್ರಾಂತನಾಗಿ ಕಾಣುತ್ತಿದ್ದಾನೆ.)

**ಕೌಂಡಿನ್ಯ** : (ಸಮಾಧಾನ ಮಾಡುವ ದನಿಯಲ್ಲಿ) ಮಹಾಪ್ರಭುಗಳು ಇಷ್ಟೊಂದು ವ್ಯಾಕುಲರಾಗಬಾರದು. ಅದೃಷ್ಟದಿಂದ ರಾಜಕುಮಾರಿಯವರು ಪ್ರಾಣಾಪಾಯದಿಂದ ಪಾರಾದರು. ಆ ಯುವಕನ ಸಮಯಸ್ಫೂರ್ತಿ ಸಾಹಸಗಳು ಸಂದರ್ಭಕ್ಕೆ ಒದಗಿ ಬರದಿದ್ದರೆ.... ದೇವರೇ!! ನೆನೆಸಿಕೊಳ್ಳುವುದಕ್ಕೂ ಭಯವಾಗುತ್ತದೆ. ಆತನನ್ನು ನಿಲ್ಲಿಸಿ ಮಾತನಾಡಿಸಿ ಕೃತಜ್ಞತೆಗಳನ್ನು ಸಲ್ಲಿಸಬೇಕೆಂದುಕೊಳ್ಳುವಷ್ಟರಲ್ಲಿ ಮಿಂಚಿನಂತೆ ಎರಗಿ ಕಾಣದೆಲ್ಲೊ ಮರೆಯಾಗಿ ಹೋದ. ಆತ ಯಾರಿರಬಹುದೆಂದು ತಿಳಿಯಲು ಹುಡುಕಿಸಲು ಪ್ರಯತ್ನಗಳನ್ನು ಇಂದೂ ಮುಂದುವರೆಸಿದ್ದೇನೆ.

**ಕುಂತಿಭೋಜ:** ಖಂಡಿತವಾಗಿಯೂ ಈ ಕೆಲಸವನ್ನು ನೀವು ಹೇಗಾದರೂ ಸಾಧಿಸಲೇಬೇಕು. ಇಂತಹ ಅದ್ಭುತ ಸಾಹಸವನ್ನು ಎಸಗಿದ ಯುವಕ ಸಾಮಾನ್ಯನಿರಲಾರ. ಮದೋನ್ಮತ್ತ ಆನೆಯನ್ನು ಲೀಲಾಜಾಲವಾಗಿ ತಡೆದು ಅಂಕುಶವಿಟ್ಟವನು ಯಾರೋ ವೀರವಂಶಜನಾದ ರಾಜಕುಮಾರನೇ ಇರಬೇಕು.

**ಕೌಂಡಿನ್ಯ** : ನಿಮ್ಮ ಊಹೆ ಸರಿಯಾದ್ದೇ ಇರಬೇಕೆಂದು ನನಗೆ ಅನಿಸುತ್ತೆ. ಯಾಕೆಂದರೆ ವೇಷ ಸಾಮಾನ್ಯವೆನಿಸಿದರೂ ಮುಖದಲ್ಲಿ ರಾಜತೇಜಸ್ಸು ಒಡೆದೆದ್ದು ಕಾಣುತ್ತಿತ್ತು. ಮೋಡದ ಮರೆಯ ಚಂದ್ರನ ಹಾಗೇ ಇದ್ದ ಅವನ ನಿಲುವು ನಡೆ ಭಂಗಿಗಳು ರಾಜಕುಮಾರನೇ ಎಂಬುದನ್ನು ಸಾರಿ ಹೇಳುವಂತಿದ್ದವು. ಎಲ್ಲ ಕಡೆಗೂ ಗೂಢಚಾರರನ್ನು ಕಳಿಸಿದ್ದೇನೆ. ಇಷ್ಟರಲ್ಲೇ ಆತನ ವಿವರಗಳು ದೊರೆಯಬಹುದು.

**ಕುಂತಿಭೋಜ:** ಮಹಾಮಂತ್ರಿಗಳೇ ಆದಷ್ಟು ಬೇಗ ವಿವರಗಳು ಸಿಗುವಂತಾಗಲಿ. ಅದೇಕೋ ಏನೋ ಪರಿಚಯವೇ ಇಲ್ಲದ ಆ ಯುವಕನ ವಿಚಾರದಲ್ಲಿ ನನ್ನ ಮನಸ್ಸು ಸೋಲುತ್ತಿದೆ. ಆತ್ಮೀಯ ಸೆಳೆತಕ್ಕೆ ಒಳಗಾಗುತ್ತಿದ್ದೇನೆ ಎನಿಸುತ್ತಿದೆ. ಆತನನ್ನು ಕಾಣಲು ಹೃದಯ ಚಡಪಡಿಸುತ್ತಿದೆ.... ಅದ್ಯಾಕೆ ಹೀಗಾಗಿದೆ ಮಂತ್ರಿಗಳೇ?.... ಕಾರಣವನ್ನೇನಾದರೂ ಊಹಿಸಬಲ್ಲಿರಾ?

**ಕೌಂಡಿನ್ಯ :** ಯಾವುದೋ ಪೂರ್ವಜನ್ಮದ ಸಂಬಂಧವೇ ಇರಬೇಕು ಪ್ರಭು. ಇಲ್ಲವಾದಲ್ಲಿ ಆತನ ವಿಚಾರದಲ್ಲಿ ತಮಗೇಕೆ ಇಷ್ಟೊಂದು ಉತ್ಸುಕತೆ ಇರಬೇಕು. ಆತ ಕಾಣಿಸಿಕೊಂಡ ವೇಷ ಸುಳ್ಳಾಗಿ, ನಿಜವಾದ ರಾಜಕುಮಾರನೇ ಆಗಿದ್ದ ಪಕ್ಷದಲ್ಲಿ ರಾಜಕುಮಾರಿಯವರಿಗೆ ಆತನಿಗಿಂತ ಯೋಗ್ಯವರ ಬಹುಶಃ ಇರಲಾರ.

**ಕುಂತಿಭೋಜ:** ಭಲೆ ಮಂತ್ರಿಗಳೇ ನನ್ನ ಮನಸ್ಸನ್ನೇ ಮಾತನಾಡಿದಿರಿ! ಆದರೆ ಅದೃಷ್ಟವೆನ್ನುವುದು ಒಂದು ಇದೆಯಲ್ಲ. ಮೊದಲಿಗೆ ಆತ ರಾಜಕುಮಾರನಾಗಿರಬೇಕಲ್ಲವೆ! ನಮ್ಮ ಪುತ್ರಿಯ ಅದೃಷ್ಟದಲ್ಲಿ ಹೇಗೆ ಬರೆದಿದೆಯೋ ಯಾರಿಗೆ ಗೊತ್ತು.

**ಕೌಂಡಿನ್ಯ :** ನಮ್ಮ ಆಸೆಗಳಿಗೇನು ಪ್ರಭು! ಆದರೆ ಒಂದು ವಿಚಾರವನ್ನು ನಾವಿಲ್ಲಿ ಮರೆತಿದ್ದೇವೆ. ರಾಜಕುಮಾರಿಗೆ ಎಷ್ಟೋ ಸಂಬಂಧಗಳು ಬರುತ್ತಿದ್ದರೂ ಏನೇನೋ ಸಬೂಬುಗಳನ್ನು ಹೇಳಿ ನಿರಾಕರಿಸುತ್ತಿದ್ದೇವೆ. ಇದಕ್ಕೆ ಕಾರಣವನ್ನು ಬಹುಶಃ ನೀವು ಮರೆತಿರಬಹುದು. ಸೌವೀರ ರಾಜಕುಮಾರ, (ಬನಾರಸ) ವಾರಣಾಸಿಯ ರಾಜಕುಮಾರರಿಬ್ಬರೂ ನಿಮ್ಮ ದೃಷ್ಟಿಯಲ್ಲಿದ್ದರೂ, ನಿಮ್ಮ ಒಲವು ಹೆಚ್ಚಿಗೆ ಸೌವೀರ ರಾಜಕುಮಾರನ ಕಡೆಗೇ ಇದೆಯೆಂಬುದು ನಿಜವಲ್ಲವೇ ಪ್ರಭು? ಜೊತೆಗೆ ಆತ ಸೋದರಳಿಯನೂ ಆಗಿದ್ದಾನೆ. ಹೀಗಿರುವಾಗ ಮತ್ತೆ ಯಾರೋ ಆಗಂತುಕ ಯುವಕನ ವಿಚಾರದಲ್ಲಿ ಮನಸ್ಸು..... (ಸಂದೇಹಿಸುತ್ತಾ ಅರಸನ ಮುಖವನ್ನೇ ದಿಟ್ಟಿಸುತ್ತಾ ನಿಲ್ಲುವನು)

**ಕುಂತಿಭೋಜ:** ನಿಜ ಮಂತ್ರಿಗಳೆ. ಆದರೆ ತಾವಾಗಿ ನಮ್ಮ ಪುತ್ರಿಯನ್ನು ಸೊಸೆಯಾಗಿ ಕಳಿಸಲು ಕೇಳಿದಾಗ, ಅಪ್ರಾಪ್ತ ವಯಸ್ಕಳೆಂಬ ಕಾರಣದಿಂದ ಹಿಂದಿರುಗಿ ಹೋಗುವಂತೆ ಮಾಡಿದಿರಿ. ಈಗ ನಾವಾಗಿ ಮತ್ತೆ ಅವರ ಸಂಬಂಧವನ್ನು ಬಯಸಿ ಸೌವೀರ ರಾಜ್ಯಕ್ಕೆ ರಾಯಭಾರಿಯನ್ನು ಕಳಿಸಿಕೊಟ್ಟೆವು. ಆದರೆ ಅಲ್ಲಿ ರಾಜನಾಗಲೀ ರಾಜಪರಿವಾರವಾಗಲಿ ಇರಲಿಲ್ಲವೆಂದು ತಿಳಿದು ಬಂತು. ಅವರಿಗೆ ಏನಾಯಿತೋ ಏನೋ? ಯಾವ ಆಪತ್ತುಗಳು ಬಂದು ಎರಗಿದವೋ ಕಾಣೆ. ಇದ್ದಕ್ಕಿದ್ದಂತೆ ಹೀಗೆ ಮರೆಯಾಗಿದ್ದಾರೆ. ನೆರೆಯ ರಾಜ್ಯಗಳಲ್ಲೆಲ್ಲಾ ಹುಡುಕಿಸಿದೆ. ಏನೂ ಪ್ರಯೋಜನವಾಗಲಿಲ್ಲ.

ಪಾಪ ಯಾವ ಶತ್ರುಗಳ ಕುತಂತ್ರಕ್ಕೆ ಒಳಗಾದರೋ ಏನೋ! ಮೊದಲಿಗೆ ಸೂಚನೆ ದೊರೆತಿದ್ದರೆ, ಇಲ್ಲವೆ ನಮ್ಮ ಸಹಾಯವನ್ನು ಕೋರಿದ್ದರೆ, ಖಂಡಿತವಾಗಿಯೂ ಅವರನ್ನು ರಕ್ಷಿಸಲು ಸಾಧ್ಯವಿತ್ತು.

**ಕೌಂಡಿನ್ಯ :** ಈಗ ಆಲೋಚಿಸಿ ಪ್ರಯೋಜನವೇನು? ದೇವರಿಚ್ಛೆಯಿದ್ದಂತಾಗಲಿ. ಮಹಾರಾಣಿಯವರು ಈ ವಿಚಾರದಲ್ಲಿ ಏನು ಹೇಳುತ್ತಾರೋ!

**ಮಹಾರಾಣಿ:** ನಾವು ಹೇಳುವುದೇನಿದೆ ಮಂತ್ರಿಗಳೇ. ಹೆಂಗಸಾದ ನಮಗೆ ನಿಮ್ಮ ರಾಜಕೀಯ ಬುದ್ಧಿ, ಚಾಣಾಕ್ಷತನಗಳು ಹೇಗೆ ಬರಬೇಕು. ನಮ್ಮ ಪುತ್ರಿಯನ್ನು ಕರೆಸಿ ಮಾತನಾಡಿದೆವು.

**ಕೌಂಡಿನ್ಯ :** (ಆಶ್ಚರ್ಯದಿಂದ) ಏನೆಂದು ಹೇಳಿದರು ರಾಜಕುಮಾರಿಯವರು?

**ಮಹಾರಾಣಿ:** ಆ ಯುವಕನನ್ನೇ ಮನಸ್ಸಿನಲ್ಲಿ ತುಂಬಿಕೊಂಡಂತೆ ಕಾಣಿಸಿತು. ಮಾತನಾಡಿಸಿದರೂ ಅನ್ಯಮನಸ್ಕತೆಯಿಂದ ಏನೇನೋ ಉತ್ತರ ಹೇಳುವರು. ಪ್ರಭು ನನಗೆ ರಾಜಕುಮಾರಿಯ ಚಿಂತೆ ಬಹಳವಾಗಿದೆ. ಆದಷ್ಟು ಬೇಗನೆ ನಮ್ಮ ಮಗಳಿಗೊಂದು ದಾರಿ ಕಾಣಿಸಬೇಕು. ಇಲ್ಲವಾದಲ್ಲಿ ಕತೆ ಎಲ್ಲಿಂದ ಎಲ್ಲಿಗೋ ಹೋಗಬಹುದು.

**ಭೂತಿಕಾ :** (ಪ್ರವೇಶಿಸಿ) ಮಹಾಪ್ರಭುಗಳಿಗೆ ಜಯವಾಗಲಿ.

**ಕುಂತಿಭೋಜ:** ಬಾ ಭೂತಿಕಾ. ಕುಳಿತುಕೋ. ಏನು ವಿಶೇಷ? ಎಲ್ಲವೂ ಸರಿಯಾಗಿದೆ ತಾನೇ?

**ಭೂತಿಕಾ :** ಬಹಳ ಸಂತೋಷದ ಸುದ್ದಿ ಮಹಾಪ್ರಭು. ಮಹಾ ಮಂತ್ರಿಗಳು ಅಪ್ಪಣೆ ಕೊಡಿಸಿದ್ದ ಕಾರ್ಯ ಸಾಕಷ್ಟು ಯಶಸ್ವಿಯಾಯಿತು.

**ಕೌಂಡಿನ್ಯ :** (ಸಂಭ್ರಮಾಶ್ಚರ್ಯದಿಂದ) ಹೌದೇನು ಭೂತಿಕಾ! ಏನಾದರೂ ಆ ಯುವಕನ ವಿವರಗಳು ತಿಳಿದು ಬಂದುವೇ?

**ಭೂತಿಕಾ :** ಹೌದು ಮಂತ್ರಿಗಳೇ. ಗುಪ್ತಚಾರರಿಗಿಂತ ಸಮರ್ಥವಾಗಿ, ರಾಜಕುಮಾರಿಯ ಸಖಿಯರೇ ಈ ಕೆಲಸವನ್ನು ನಿರ್ವಹಿಸಿಕೊಂಡು ಬಂದಿದ್ದಾರೆ. ತಮ್ಮ ಜಾಣ್ಮೆ, ಚಾಕಚಕ್ಯತೆಗಳನ್ನು ಸಾರ್ಥಕಗೊಳಿಸಿದ್ದಾರೆ.

**ಕೌಂಡಿನ್ಯ :** ಆ ಯುವಕನು ಯಾರೆನ್ನುವುದು ತಿಳಿಯಿತೇ?

**ಭೂತಿಕಾ :** ಅದು ಮಾತ್ರ ಇನ್ನೂ ಸಾಧ್ಯವಾಗಲಿಲ್ಲ. ಆದರೆ ಆ ಯುವಕನ ವಿಳಾಸವನ್ನು ಪತ್ತೆ ಮಾಡಿ ಬಂದಿದ್ದಾರೆ. ಕ್ರಮೇಣ ಎಲ್ಲವೂ ಬಯಲಾಗುವುದು.

**ಕುಂತಿಭೋಜ:** ಹಾಗಾದರೆ ಭಟರನ್ನು ಕಳಿಸಿ ಆ ಯುವಕನನ್ನು ಬರಮಾಡಿಕೊಳ್ಳೋಣ.

**ಕೌಂಡಿನ್ಯ :** ಬೇಡಿ ಪ್ರಭು. ಆತುರ ಪಡಬೇಡಿ. ಕಾಲಬಂದಾಗ ಅವರಾಗಿ ಕಾಣಿಸಿಕೊಳ್ಳುವರು. ಸದ್ಯದಲ್ಲಿ ಈ ಯುವಕನನ್ನು ಮರೆತು ಸೌವೀರ ರಾಜನನ್ನು ರಾಜ ಪರಿವಾರವನ್ನು ಹುಡುಕಿಸಿ.

**ಕುಂತಿಭೋಜ:** ದೇವಿ (ಮಹಾರಾಣಿಯ ಕಡೆ ತಿರುಗಿ) ಈಗ ರಾಜಕುಮಾರಿ ಎಲ್ಲಿದ್ದಾಳೆ?

**ಮಹಾರಾಣಿ:** ಸ್ವಲ್ಪ ಬಳಲಿದಂತೆ ಕಾಣಿಸಿಕೊಂಡದ್ದರಿಂದ ನಾನೇ ನಮ್ಮ ಮಗಳನ್ನು ವಿಶ್ರಾಂತಿಗೆಂದು ಕಳಿಸಿಕೊಟ್ಟೆ. ಬಹಳ ಕಾಲ ಸಖಿಯರೊಂದಿಗೆ ಆಟವಾಡಿ ಆಯಾಸಗೊಂಡಿಬೇಕೆಂದು ಭಾವಿಸಿದೆ. ಬರಲೇ ಬೇಕೆಂದರೆ ಹೇಳಿ ಕಳಿಸುತ್ತೇನೆ.

**ಕುಂತಿಭೋಜ:** ಬೇಡ! ಬೇಡ! ನಾವೇ ಅಂತಃಪುರಕ್ಕೆ ಹೋಗುವವರಿದ್ದೇವೆ. ಬೆಳಗಿನ ಘಟನೆಯಿಂದ ಅವರೂ ದಣಿದಿರಬೇಕು. ನಾವೇ ಕಂಡು ವಿಚಾರಿಸಿ ಮಾತನಾಡುತ್ತೇವೆ. ಮಂತ್ರಿಗಳೇ ನಮ್ಮ ಮಗಳ ಮದುವೆಯ ವಿಚಾರವಾಗಿ ನಿಮ್ಮಿಂದ ಯೋಗ್ಯ ಸಲಹೆಯೊಂದರ ನಿರೀಕ್ಷೆಯಲ್ಲಿ ಇರುತ್ತೇವೆ. (ಮಹಾರಾಣಿಯ ಕಡೆ ತಿರುಗಿ) ದೇವಿ ನಾವು ಹೇಳಿದ್ದು ಸರಿಯಲ್ಲವೇ?

**ಮಹಾರಾಣಿ:** ನಿಮ್ಮ ಸರಿ ತಪ್ಪುಗಳು ನಮಗೇನು ತಿಳಿದೀತು ಪ್ರಭು. ನಾವು ಅಜ್ಞರು. ತಾವು ಮಂತ್ರಿಗಳು ಇರುವಾಗ ನಾವು ನಿಶ್ಚಿಂತೆಯಿಂದ ಉಸಿರಾಡುತ್ತೇವೆ. ಆದರೆ ಈ ಸಂದರ್ಭದಲ್ಲಿ ನನ್ನ ವಿವೇಕವೇಕೋ ತಲ್ಲಣಿಸುತ್ತಿದೆ.

**ಕೌಂಡಿನ್ಯ,**

**ಭೂತಿಕಾ :** ಅನವಶ್ಯಕವಾಗಿ ತಲ್ಲಣಿಸುತ್ತಿದ್ದೀರೆಂದು ನಮ್ಮ ಭಾವನೆ. ಮಹಾರಾಣಿಯವರೇ! ಎಲ್ಲವೂ ಮಂಗಳಕರವಾಗಿಯೇ ಮುಗಿಯುತ್ತದೆ. ನೀವು ಯಾವುದನ್ನೂ ಮನಸ್ಸಿಗೆ ಹಚ್ಚಿಕೊಳ್ಳಬೇಡಿ. ಪ್ರಭುಗಳು ಆಜ್ಞಾಪಿಸಿದ್ದನ್ನು ಶಿರಸಾವಹಿಸಿ ನೆರವೇರಿಸುತ್ತೇವೆ.

**ಕುಂತಿಭೋಜ:** ನಿಮ್ಮಂತಹ ಮಂತ್ರಿಗಳಿರುವುದು ನಮ್ಮ ಪುಣ್ಯ. ನಾವಿನ್ನು ಬರುತ್ತೇವೆ. ಮಂತ್ರಿಗಳೇ, ಆದಷ್ಟು ಬೇಗ ನಾವು ಹೇಳಿದ ಕೆಲಸವನ್ನು ಮುಗಿಸಿ ಬನ್ನಿ. (ಭೂತಿಕಾ ಕಡೆಗೆ ತಿರುಗಿ) ಭೂತಿಕಾ ನಿಮಗೆ ತಿಳಿದ ವಿವರಗಳನ್ನು ಮಂತ್ರಿಗಳಿಗೆ ತಿಳಿಸಿ ಹೇಳಿ ನಂತರ ನಾವು ಅದನ್ನು ಪರಾಮರ್ಶಿಸುತ್ತೇವೆ. (ಕುಂತಿಭೋಜ ಮಹಾರಾಣಿ ಇವರುಗಳ ನಿರ್ಗಮನ)

**ಕೌಂಡಿನ್ಯ :** (ಭೂತಿಕಾರನ್ನು ಉದ್ದೇಶಿಸಿ) ಭೂತಿಕಾ, ಪ್ರಭುಗಳು ಹೇಳಿದ್ದನ್ನು ಕೇಳಿದಿರಾ? ನಿಮಗೆ ತಿಳಿದ ವಿಷಯಗಳಾದರೂ ಏನು? ಅದೇ ಆ ಯುವಕನ ವಿಷಯವಾಗಿಯೇ ಇರಬೇಕಲ್ಲವೇ?....

**ಭೂತಿಕಾ** : ಸರಿಯಾಗಿ ಊಹಿಸಿದಿರಿ ಮಂತ್ರಿಗಳೇ.

**ಕೌಂಡಿನ್ಯ** : ಹಾಗಾದರೆ ಆ ಯುವಕನ ಕುಟುಂಬ ವಿಷಯಗಳು ತಿಳಿಯಿತೇನು?

**ಭೂತಿಕಾ** : ಆತನ ಮನೆಯ ವಿಳಾಸ ತಿಳಿಯಿತು. ಆದರೆ ಆ ಮನೆಯವರ ವಿಚಾರಗಳೊಂದೂ ಸದ್ಯಕ್ಕೆ ತಿಳಿದಿಲ್ಲ. ಒಂದಷ್ಟು ಜನರನ್ನು ಈ ಕೆಲಸಕ್ಕೆಂದೇ ನೇಮಿಸಿ ಬಂದಿದ್ದೇವೆ. ನಮ್ಮ ರಾಜಕುಮಾರಿಯ ಸಖಿಯರಲ್ಲಿ ಒಂದಿಬ್ಬರನ್ನು ಈ ಕೆಲಸಕ್ಕೆ ಹಚ್ಚಿದ್ದೇನೆ. ಇನ್ನೇನು ಇಷ್ಟರಲ್ಲೇ ಅವರು ಎಲ್ಲವನ್ನೂ ತಿಳಿದು ಬಂದಿರಬೇಕು.

**ಕೌಂಡಿನ್ಯ** : ಆದಷ್ಟು ಬೇಗ ಮತ್ತು ಆದಷ್ಟು ಜಾಗ್ರತೆಯಿಂದ ಈ ಕೆಲಸವನ್ನು ಪೂರೈಸಿಕೊಂಡು ಬಂದು ತಿಳಿಸು. ಏನೇನೋ ನಿರೀಕ್ಷೆಗಳಿಂದ ಹೊರಡುತ್ತಿದ್ದೇವೆ. ಆದರೆ ಯಾವ ಘಟ್ಟದಲ್ಲಿ ಹೋಗಿ ನಿಲ್ಲುತ್ತೇವೆಯೋ ಹೇಳುವುದಕ್ಕೇ ಸಾಧ್ಯವಿಲ್ಲ. ಪ್ರಭುಗಳ ಅಂತರಂಗದ ಆಸೆಯಂತೆ ಸೌವೀರ ರಾಜಕುಮಾರನನ್ನು ಹುಡುಕಿ ತಂದದ್ದೇ ಆದರೆ ನಮ್ಮ ಅದೃಷ್ಟವೇ ಅದೃಷ್ಟ!

**ಭೂತಿಕಾ** : ನಮ್ಮ ಪ್ರಯತ್ನಗಳನ್ನು ನಿಸ್ವಾರ್ಥದಿಂದ ಮಾಡಿದರಾಯಿತು. ದೇವರೇ ಕರುಣಿಸುತ್ತಾನೆ. ಮಂತ್ರಿಗಳೇ ನಾನಿನ್ನು ಬರಲೇ? ಈಗಾಗಲೇ ಕತ್ತಲಾಗಿದೆ. ಅರಮನೆ, ಅಂತಃಪುರದ ರಕ್ಷಣೆಯ ವ್ಯವಸ್ಥೆಗೆ ಸಮಯವಾಯಿತು. ಅಪ್ಪಣೆ ಕೊಡಿಸುವಿರಾ?

**ಕೌಂಡಿನ್ಯ** : ಆಯಿತು. ಇದೋ ನಾನೂ ಈಗಲೇ ಹೊರಟೆ. ಒಂದಷ್ಟು ದೂರ ನಿಮ್ಮ ಜೊತೆಗೇ ಬರುತ್ತೇನೆ.... ವಿವರಗಳು ತಿಳಿದು ಬಂದಲ್ಲಿ ಕೂಡಲೇ ನನಗೆ ತಿಳಿಸಿ. ತಡಮಾಡಬೇಡಿ.... ನಡೆಯಿರಿ ಹೋಗೋಣ (ಎಂದು ಇಬ್ಬರೂ ಏಳುವರು)

OO

# ದೃಶ್ಯ – ೩

(ಅವಿಮಾರಕನ ಮನೆ. ಬಾಗಿಲ ಮುಂದೆ ಮತ್ತು ಬಾಗಿಲ ಎರಡೂ ಬದಿಗಳಲ್ಲಿ ಕೆಳಗಿನಿಂದ ೩–೪ ಅಡಿಗಳೆತ್ತರದ ವರೆಗೆ ಗೋಡೆಗಳ ಮೇಲೆಲ್ಲ ರಂಗೋಲಿ ಚಿತ್ರಗಳು. ಮನೆಗೆ ಸೇರಿದಂತೆ ಜಗುಲಿಗಳು. ಜಗುಲಿಗಳ ಕೆಳಭಾಗವನ್ನು ಕೆಂಪು ಮಣ್ಣಿನಿಂದ ಸಾರಿಸಿದೆ. ಅದರ ಮೇಲೆ ರಂಗೋಲಿಯ ಬಳ್ಳಿಗಳು ಕಾಣುತ್ತಿವೆ. ಮುಂಬಾಗಿಲ ಎರಡೂ ಬದಿಯಲ್ಲಿ ಕಿಟಕಿಗಳು ಕಾಣುತ್ತಿವೆ. ಜಗುಲಿಯ ಮೇಲೆ ವ್ಯಕ್ತಿಯೊಬ್ಬ ಮಂಪರಿನಲ್ಲಿ ಬಡಬಡಿಸುತ್ತಾ ಮಲಗಿದ್ದಾನೆ. ರಂಗದ ಒಂದು ಬದಿಯಿಂದ ಮಧೂಲಿಕಾ ಪ್ರವೇಶಿಸುತ್ತಾಳೆ. ಮುಸುಕು ಎಳೆದುಕೊಂಡು ಮಲಗಿದ ವ್ಯಕ್ತಿಯ ಬಳಿಗೆ ಮೆಲ್ಲನೆ ಸಾರುತ್ತಾಳೆ. ಬಗ್ಗಿ ನೋಡುತ್ತಾಳೆ. ನಂತರ ನಸುನಕ್ಕು ಗಟ್ಟಿಯಾಗಿ ಆ ವ್ಯಕ್ತಿಗೆ ಕೇಳಿಸುವಂತೆ ಅದೃಶ್ಯ ಸಖಿಯೊಂದಿಗೆ ಮಾತನಾಡುತ್ತಾಳೆ)

**ಮಧೂಲಿಕಾ:** ನಳಿನಿಕಾ, ನಳನಿಕಾ....ಏನೇ ಇದು ಆಶ್ಚರ್ಯ! ಇಷ್ಟು ದೊಡ್ಡ ರಾಜ್ಯದಲ್ಲಿ ಅಂದರೆ ನಗರದಲ್ಲಿ ಒಬ್ಬನಾದರೂ ಬ್ರಾಹ್ಮಣನು ಸಿಗದೇ ಹೋದನಲ್ಲ! ಏನು ಕರ್ಮವೋ ಏನೋ! ಹಾಳಾಯ್ತು ನಮ್ಮ ಪೂಜೆ. ಬ್ರಾಹ್ಮಣ ಸಂತರ್ಪಣೆಯಾಗದೆ ನಾವು ಏನನ್ನೂ ತಿನ್ನುವಂತಿಲ್ಲ. ಎಂಥ ದುರಾದೃಷ್ಟ ಅಬ್ಬ! ಎಷ್ಟೊಂದು ಬಗೆಯ ಭಕ್ಷ್ಯಗಳು, ಕಾಯಿಪಲ್ಲೆಗಳು. ಪುಳಿಹೋರೆ, ಪಾಯಸ, ಗಾರಿಗೆ, ಮಂಡಿಗೆ, ಕಜ್ಜಾಯ ಕಡುಬು, ಲಡ್ಡುಗೆ.... ಇನ್ನೂ ಏನೇನೋ!! ಹೇಳುವುದಕ್ಕೇ ಬಾರದಷ್ಟು! ನೆನೆಸಿಕೊಂಡು ಸಾಯುವುದಷ್ಟೇ ನಮ್ಮ ಪಾಲಿಗೆ! ದರಿದ್ರ ಹಣೆ ಬರಹ. ಒಬ್ಬ ಬ್ರಾಹ್ಮಣನಿಗೂ ಗತಿಯಿಲ್ಲ. ನೀನಾದರೂ ಬೇಗ ಎಲ್ಲಿಂದಲಾದರೂ ಎಳೆದುಕೊಂಡು ಬಾರೇ!..... ಎಂದು ಬಾಯಿ ಚಪ್ಪರಿಸುತ್ತಾ.... ಮರುಗಳಿಗೆಯೇ ನಿಟ್ಟುಸಿರು ಬಿಡುತ್ತಾ.... ನೆನೆಸಿಕೊಂಡೂ ಪ್ರಯೋಜನವಿಲ್ಲ. ಅನುಭವಿಸೋಕೆ ಹಣೇಲಿಲ್ಲ.

**ವ್ಯಕ್ತಿ :** (ಕನಸಿನ ಗುಂಗಿನಲ್ಲಿ) ಭೋಜನ.... ಸಂತರ್ಪಣೆ........... ಅಯ್ಯೋ............. ಮೂರುದಿನವಾಯ್ತು ಊಟಮಾಡಿ.... ಏನಂದೆ... ಗಾರಿಗೆ... ಮಂಡಿಗೆ.... ಕಡುಬುಗಳೆಂದೆಯಾ?...... ಬ್ರಾಹ್ಮಣ ಸಿಗಲಿಲ್ಲವೇ? ಸಿಗುವುದಿಲ್ಲವೇ.....

ಸುಳ್ಳು! ಸುಳ್ಳು! ಬೆಟ್ಟದಂಗೆ ಬ್ರಾಹ್ಮಣ ಕಣ್ಮುಂದೆ ಬಿದ್ದಿರುವಾಗ ಸಿಗಲಿಲ್ಲ ಅಂತ ಸುಳ್ಳು ಹೇಳ್ತೀಯಾ? ಇದೋ ನಾನೇ.... ನಾನೇ ನಿಜವಾದ ಬ್ರಾಹ್ಮಣ.... ಬಂದೆ! ಬಂದೆ!

**ಮಧೂಲಿಕಾ:** (ಬಡಬಡಿಸುತ್ತಿರುವ ವ್ಯಕ್ತಿಯನ್ನು ತಟ್ಟಿ) ಅಯ್ಯಾ ಮಹಾನುಭಾವ. ನೀನೇನು ಮಲಗಿದ್ದೀಯೋ ಮಲಗಿದಂತೆ ನಟಿಸುತ್ತಿದ್ದೀಯೋ? ಏಳೇಳು ನಿನಗೆ ತಿಳಿದ ಯಾರಾದರೂ ಬ್ರಾಹ್ಮಣ ಇದ್ದರೆ ತಿಳಿಸಿ ಉಪಕಾರ ಮಾಡು. ನಿನಗೆ ಪುಣ್ಯ ಬರುತ್ತೆ.

**ವ್ಯಕ್ತಿ :** (ಗಾಭರಿಯಿಂದ ಎದ್ದು) ಏನಂದೆ? ಬ್ರಾಹ್ಮಣ ಬೇಕು... ಎಂದೆಯಾ? (ಸಂತೋಷದಿಂದ) ಇದೋ ಇಲ್ಲಿಯೇ ಇದ್ದೇನೆ. ನಾನೇ ಬ್ರಾಹ್ಮಣ. ನನಗಿಂತ ಸದ್ಬ್ರಾಹ್ಮಣನೇ?!.... ಭೋಜನಕ್ಕಲ್ಲವೇ ಕರೆದದ್ದು? ನಡೆ.... ನಡೆ ಹೋಗೋಣ.... ಹಸಿದ ಬ್ರಾಹ್ಮಣನನ್ನು ಕಾಯಿಸಿದರೆ ಮಹಾಪಾಪ ಬರುತ್ತೆ. ನೂರು ಬ್ರಾಹ್ಮಣರಿಗೆ ಉಣಬಡಿಸಿದ ಪುಣ್ಯ ಈ ಬ್ರಾಹ್ಮಣನು ತೃಪ್ತಿಯಾದರೆ, ಸಿಗುತ್ತದೆ. (ಆತುರಪಡಿಸುವನು)

**ಮಧೂಲಿಕಾ:** ಆಹಾಹಾ...! ಏನು ದುರಾಸೆಯೋ! ನಿನ್ನ ಮೂತಿ ನೋಡಿದರೆ ಶೂದ್ರನಂತೆ ಕಾಣ್ತಿ! ಬ್ರಾಹ್ಮಣಾಂತ ನನಗೇ ಮೋಸ ಮಾಡ್ತೀಯಾ? ನಿನಗೆ....... ನಿನಗೆ... ಏನು ಮಾಡ್ತೀನಿ ಗೊತ್ತಾ.... (ಎಂದು ಹೊಡೆಯಲು ಹೋಗುವಳು)

**ವ್ಯಕ್ತಿ :** ಅಯ್ಯೋ! ಅಯ್ಯೋ! ಹೊಡೀಬೇಡ ಹೆಣ್ಣೇ ನಿಜವಾಗಿಯೂ ನಿನ್ನಾಣೆಗೂ...... ನನ್ನಾಣೆಗೂ ನನ್ನ ಜನಿವಾರದಾಣೆಗೂ ನಾನು ಬ್ರಾಹ್ಮಣನೇ!..... ನೋಡು ನನ್ನ ಜನಿವಾರ.... (ಜನಿವಾರ ಕಾಣದೆ) ಅಯ್ಯೋ ದೇವರೇ ಮೋಸವಾಯಿತಲ್ಲ! ನಾನು ಇವಳನ್ನು ಹೇಗೆ ನಂಬಿಸಲಿ? (ಎಂದು ದುಃಖಿಸುವನು)

**ಮಧೂಲಿಕಾ:** (ನಗುತ್ತಾ) ಆಯ್ತು ಅಳಬೇಡ. ನೀನು ಬ್ರಾಹ್ಮಣನೆಂದೇ ಒಪ್ಪಿಕೊಳ್ಳುತ್ತೇನೆ. ಆದರೆ ಸಂಪ್ರದಾಯಸ್ಥ ಬ್ರಾಹ್ಮಣನಾಗಿರುವುದು ಮಾತ್ರ ಸಾಧ್ಯವೇ ಇಲ್ಲ. ನೀನು ಎಷ್ಟೇ ಹೇಳಿದರೂ ನನಗೆ ನಂಬಿಕೆ ಬಾರದು. ನಿಜವಾಗಿಯೂ ನೀನು ಬ್ರಾಹ್ಮಣನೇ ಆದರೆ, ಒಂದೆರಡು ಶ್ಲೋಕಗಳನ್ನಾದರೂ ಹೇಳುವೆಯಾ?

**ವ್ಯಕ್ತಿ :** ಶ್ಲೋಕಗಳು! ಒಂದೆರಡೇನು? ನೂರಾರು ಶ್ಲೋಕಗಳನ್ನೂ ಹೇಳಬಲ್ಲೆ. ಅರ್ಥವನ್ನು ವಿವರಿಸಬಲ್ಲೆ. ಆದರೆ ಈ ಹಾಳು ಹಸಿವಿನಿಂದಾಗಿ ನನ್ನ ಬುದ್ಧಿ ಸತ್ತು ಬಿದ್ದಿದೆ. ಊಟವಾದ ಮೇಲೆ ಬೇಕಾದರೆ ನೀನು

ಕೇಳಿದ್ದೆಲ್ಲವನ್ನೂ ಒಪ್ಪಿಸುತ್ತೇನೆ ದಯವಿಟ್ಟು ನನ್ನ ಮಾತಿನಲ್ಲಿ ನಂಬಿಕೆ ಇಡು. ಊಟದ ಆಸೆ ತೋರಿಸಿ ಕೊಡದೆ ಹಸಿವಿನಿಂದ ಸಾಯುವ ಹಾಗೆ ಮಾಡಿದರೆ, ನಿನಗೆ ಖಂಡಿತ ಬ್ರಾಹ್ಮಣನನ್ನು ಕೊಂದ ಪಾಪ ಬರುತ್ತದೆ.

**ಮಧೂಲಿಕಾ:** ಹಸಿವು ಹಸಿವು ಅಂತ ನಮ್ಮನ್ನು ಕಾಡಬೇಡಯ್ಯ ಪುಣ್ಯಾತ್ಮ. ನಿನಗೆ ಖಂಡಿತ ಊಟವಿಕ್ಕಿಸುತ್ತೇನೆ..... ಆದರೆ ಅದಕ್ಕೆ ಮೊದಲು ನಿನ್ನ ಕೈಯಲ್ಲಿ ಅದೇನೋ ಹೊಳೆಯುತ್ತಿದೆಯಲ್ಲಾ! ಅದೇನದು? ಉಂಗುರವೇನು? ಬಹಳ ಚೆನ್ನಾಗಿರುವಂತಿದೆ. ನೋಡಿಕೊಡಲೇನು?

**ವ್ಯಕ್ತಿ :** ನನ್ನನ್ನು ಊಟಕ್ಕೆ ಕರೆದೊಯ್ಯುತ್ತೇನೆಂದು ಮಾತುಕೊಡು, ನೋಡಲು ಕೊಡುತ್ತೇನೆ. (ಎಂದು ಬೆರಳಿನಿಂದ ಉಂಗುರ ಕಳಚುವನು)

**ಮಧೂಲಿಕಾ:** ಆಗಲೇ ಹೇಳಿದೆನಲ್ಲ, ಕರೆದೊಯ್ಯವೆನೆಂದು! .... ಎಲ್ಲಿ ಬೇಗ ಕೊಡು. (ಎಂದು ಕೈ ಚಾಚುವಳು. ವ್ಯಕ್ತಿ ಅದನ್ನು ಕೊಡುವನು).... ಅಬ್ಬ! ಎಷ್ಟು ಚೆನ್ನಾಗಿದೆ!...... ರಾಜಮಹಾರಾಜರು ಹಾಕಿಕೊಳ್ಳುವ ಈ ಉಂಗುರ ನಿನಗೆಲ್ಲಿಯದು? ರಾಜಕುಮಾರರು ನಿನಗೆ ಉಂಗುರವನ್ನು ಉಡುಗೊರೆಯಾಗಿ ಕೊಟ್ಟರೇನು?....... (ಇದ್ದಕ್ಕಿದ್ದಂತೆ) ಅರರೆ.... ರಾಜಕುಮಾರರು.... ರಾಜಕುಮಾರರು.... ರಾಜಕುಮಾರರು, ನೆನೆಸಿಕೊಳ್ಳುತ್ತಿದ್ದಂತೆ ಪ್ರತ್ಯಕ್ಷರಾಗುತ್ತಿರುವರಲ್ಲ!!

**ವ್ಯಕ್ತಿ :** ಏನು? ಏನು? ರಾಜಕುಮಾರರೇ!!.... ಅಯ್ಯೋಳ ಸತ್ತೆ! (ಎಂದು ಒಮ್ಮೆಲೇ ಓಡುವನು.)

**ಮಧೂಲಿಕಾ:** (ಬಿದ್ದು ಬಿದ್ದು ನಗುವಳು) ನಳಿನಿಕಾ! ನಳಿನಿಕಾ! ಬಾರೇ.... ಬೇಗ ಬಾರೇ (ಎಂದು ಕೂಗುತ್ತಲೇ ದೂರದಲ್ಲಿ ಅಡಗಿದ್ದ ನಳಿನಿಕಾ ಬರುವಳು).... ನೋಡಿದೆಯಾ ಹೇಗೆ ನಂಬಿಸಿಬಿಟ್ಟೆ ಆ ಹುಚ್ಚನನ್ನು!! (ಹೆಮ್ಮೆಯಿಂದ ಹೇಳುವಳು)

**ನಳಿನಿಕಾ :** (ಸಂತೋಷ ತೋರದೆ) ಮಧೂ ನೀನು ಮಾಡಿದ್ದು ಸರಿಯಲ್ಲ. ಪಾಪ! ಆ ಬಡಪಾಯಿಯನ್ನು, ಅದರಲ್ಲೂ ಹಸಿದ ಒಬ್ಬ ಬಡ ಬ್ರಾಹ್ಮಣನನ್ನು ಈ ರೀತಿ ಗೋಳು ಹುಯ್ದುಕೊಂಡೆಯಲ್ಲ! ಆ ಪಾಪ ನಿನ್ನನ್ನು ಬಿಡುವುದಿಲ್ಲ.

**ಮಧೂಲಿಕಾ:** ನನ್ನ ಪಾಪ ಒತ್ತಟ್ಟಿಗೆ ಇರಲಿ. ಮೊದಲು ನಮ್ಮ ಸಖಿಯ ತಾಪದ ಬಗ್ಗೆ ಯೋಚನೆ ಮಾಡು. ಆ ಯುವಕನ ಮನೆ ಇದೇ ಅನ್ನೋದಂತೂ ಖಾತ್ರಿಯಾಯ್ತು. ಇನ್ನು ಆತನನ್ನು ಮಾಲು ಸಹಿತ ಹಿಡೀಬೇಕು. ನಮ್ಮ ರಾಜಕುಮಾರಿಯ ಮನಸ್ಸನ್ನು ಕೊಳ್ಳೆ ಹೊಡೆದ ಆತನ

ಅಂತರಂಗವನ್ನು ನಾವು ತಿಳಿಲೇಬೇಕು. ಸ್ವಲ್ಪ ಹೊತ್ತು ಇಲ್ಲೇ ಎಲ್ಲಾದರೂ ಅವಿತುಕೊಂಡು ಆತನನ್ನು ಗಮನಿಸೋಣ. (ಇಬ್ಬರೂ ಮರೆಯಾಗಿ ನಿಲ್ಲುವರು. ಅವಿಮಾರಕ ಒಳಗಿನಿಂದ ಬಂದು ಜಗುಲಿಯ ಮೇಲೆ ಕೂರುವನು. ಜಗುಲಿಯ ಕಂಬಕ್ಕೆ ಒರಗಿ ಕನಸು ಕಾಣಲು ತೊಡಗುವನು. ಅರೆ ಮಂಪರಿನಲ್ಲಿ ತನ್ನಷ್ಟಕ್ಕೆ ತಾನೇ ಮಾತನಾಡಿಕೊಳ್ಳುವನು)

**ಅವಿಮಾರಕ:** ಹೇ ಸುಂದರಿ. ಮತ್ತೆಷ್ಟು ಕಾಡಬೇಕೆಂದಿರುವಿ. ನಿನ್ನ ಕಂಡ ಕ್ಷಣದಿಂದ ಹೃದಯ ಭಾರವಾಗಿದೆ. ನಿನ್ನ ಆ ಸುಂದರಮುಖ ನನ್ನೊಳಗನ್ನೆಲ್ಲಾ ನುಂಗಿಬಿಟ್ಟಿದೆ. ಸರ್ವೇಂದ್ರಿಯಗಳೂ ಕಣ್ಣಾಗಿ ನಿನ್ನ ಕಾಣುವ ಕಾತುರದಲ್ಲಿವೆ. ಹಗಲುಗಳ ಯಾತನೆ, ರಾತ್ರಿಗಳ ವಿರಹ ವೇದನೆ ನನ್ನನ್ನು ಜರ್ಝರಗೊಳಿಸಿದೆ. ನಿನ್ನನ್ನು ಕಲ್ಪಿಸಿಕೊಂಡಷ್ಟೂ, ಕನಸುಗಳಲ್ಲಿ ಕರಗಿದಷ್ಟೂ ಬದುಕು ಅಸಹನೀಯವಾಗುತ್ತಿದೆ.... (ಸ್ವಲ್ಪ ತಡೆದು) ಇಲ್ಲ ಇಲ್ಲ ಕೈಗೆ ಎಟುಕದ್ದಕ್ಕಾಗಿ ಚಿಂತಿಸಿ ಫಲವಿಲ್ಲ. ಕನಸು ಕಾಣುವುದನ್ನು ಬಿಡಲೇ ಬೇಕು.... (ಎನ್ನುತ್ತಲೇ ಮತ್ತೆ ನೆನಪಿಸಿಕೊಳ್ಳುತ್ತಾನೆ) ಲೋಕದ ಸೌಂದರ್ಯವೇ ಅವಳಲ್ಲಿ ಎರಕಗೊಂಡಿರಬೇಕು. ಹೆದರಿ ಬಂದಿರುವ ಸೌಂದರ್ಯ ದೇವತೆಯೇ ಅವಳಾಗಿರಬೇಕು. ಇಲ್ಲವೆ ಚಂದ್ರಪ್ರಭೆಯೇ ಮೈ ಪಡೆದಿರಬೇಕು. ಏ ನಿಷ್ಠುರ ಪ್ರೇಮ ದೇವತೆಯೇ ನಿನ್ನ ಮನವಿಷ್ಟೂ ಕರಗಲಾರದೇ... ಒಮ್ಮೆ... ಕೇವಲ ಒಮ್ಮೆ... ಅವಳ ದರ್ಶನಭಾಗ್ಯ ಲಭಿಸುವಂತಾದರೆ... (ಮಧೂಲಿಕಾ, ನಳಿನಿಕಾ ಒಬ್ಬರಿಗೊಬ್ಬರು ಸನ್ನೆ ಮಾಡಿಕೊಂಡು, ತಮ್ಮಲ್ಲಿ ತಾವೇ ಮಾತನಾಡಿಕೊಂಡು, ಮೈ ಮರೆತಿರುವ ಅವನ ಮುಂದೆ ಬಂದು ನಿಲ್ಲುವರು)

**ನಳಿನಿಕಾ :** (ಮಧೂಲಿಕಾಳನ್ನು ತಿವಿದು) ಏಯ್ ಮಧು ನೀನೇ ಮಾತನಾಡಿಸು.

**ಮಧೂಲಿಕಾ:** ಏಕೆ.... ನೀನೇ ಮಾತನಾಡಿಸು......ಬೇಗ ಮಾತನಾಡಿಸೆ. ಪಾಪ ರಾಜಕುಮಾರಿಯ ಪ್ರೀತಿಯಲ್ಲಿ ಅಸ್ವಸ್ಥವಾಗಿದ್ದಾನೆ.

**ಅವಿಮಾರಕ:** (ತನ್ನಲ್ಲಿ ತಾನು) ಆಹಾ! ಎಂತಹ ಸೌಂದರ್ಯ.... ಬಳಕುವ ವಿದ್ಯುಲ್ಲತೆಯೇ ಸರಿ. ಮತ್ತೇರಿಸುವ ಆ ಕಣ್ಣುಗಳು! ಕಮಲಗೆಂಪನ್ನು ನಾಚಿಸುವ ಕೆನ್ನೆಗೆಂಪು!.... ಯೌವನೋನ್ಮತ್ತ ಗಜಗಾಮಿನಿ, ರತ್ನಾಭರಣಾಲಂಕೃತೆ.... ನೀಳಗ್ರೀವೆ... ಅಬ್ಬಬ್ಬ ಅವಳ ಲಾವಣ್ಯ ರಾಶಿಯ ವರ್ಣನೆಗೆ ನನ್ನೊಂದು ನಾಲಗೆ ಸಾಲದಾಗಿದೆ. ಮಾತುಗಳು ಮೌನವಾಗಿವೆ. ನಾನೊಬ್ಬ,ಶೃಂಗಾರ ಕವಿಯಾಗಿದ್ದಿದ್ದರೆ ಮಹಾಕಾವ್ಯವೊಂದನ್ನು ಬರೆದು ಅನುಪಮ ಸೌಂದರ್ಯವನ್ನು ಅಮರವಾಗಿಸುತ್ತಿದ್ದೆ.

**ನಳನಿಕಾ :** ಮುಗಿದು ಹೋಯಿತು.... ಹುಚ್ಚಿಗೂ ಒಂದು ಮಿತಿ ಬೇಡವೇ?...ಇನ್ನು ಸಾಕಾಯಿತು. ಈತನನ್ನು ಆ ಭಾವನಾ ಜಗತ್ತಿನಿಂದ ಎಳೆದು ತರಲು ಆನೆ ಬಲವೇ ಬೇಕಾದೀತು. (ಎಂದು ಹೇಳಿಕೊಳ್ಳುತ್ತಾ... ಹತ್ತಿರ ಬಾಗಿ)

ಸ್ವಾಮಿ..... ಸ್ವಾಮಿ..... ನಮಸ್ಕಾರ... ನಮಸ್ಕಾರ ಎಂದೆ (ಕಿವಿಗೆ ತೀರಾ ಸಮೀಪ ಹೋಗಿ)

**ಅವಿಮಾರಕ:** (ಕನಸಿನಲ್ಲಿ ಮುಂದುವರೆಯುತ್ತಲೆ) ಭಯಕ್ರಾಂತ ಸ್ಥಿತಿಯಲ್ಲಿಯೇ ಅವಳಷ್ಟು ಅದ್ಭುತ ಸುಂದರಿಯಾಗಿ ಕಾಣಬೇಕಾದರೆ ಇನ್ನು ಬೇರೆ ಬೇರೆ ಭಾವಸ್ಥಿತಿಗಳಲ್ಲಿ ಹೇಗೆ ಕಾಣಬಹುದು!!

**ಮಧೂಲಿಕಾ:** ನಳಿನಿಕಾ ಈತನ ಈ ಸ್ಥಿತಿಯನ್ನು ನೋಡಿದರೆ ನಮ್ಮ ಕೆಲಸ ಸುಲಭವಾದಂತೆಯೇ. ರೋಗಿ ಬಯಸಿದ್ದೂ, ವೈದ್ಯ ಹೇಳಿದ್ದೂ ಎರಡು ಸಮವಾಯಿತು. ನೀ ಹೇಳಿದ್ದು ನಿಜವೇ ಆಯಿತು. ಕುರಂಗಿಯ ಸ್ಥಿತಿಯನ್ನು ನೋಡಿ ಈತನ ಸ್ಥಿತಿಯೂ ಹೀಗೆಯೇ ಇರುತ್ತದೆಂದು ಸರಿಯಾಗಿ ಊಹಿಸಿ ಹೇಳಿದೆ.

**ನಳಿನಿಕಾ :** ಹೂಂ! ಈಗಲಾದರೂ ಒಪ್ಪಿದೆಯಲ್ಲ (ಮತ್ತೊಮ್ಮೆ ಅವಿಮಾರಕನನ್ನು ಎಚ್ಚರಿಸುವಂತೆ ಸ್ವಾಮಿ. ನಮಸ್ಕಾರ ಎಂದೆ)

**ಅವಿಮಾರಕ:** (ಬೆಚ್ಚಿ) ಹಾಂ! ಎಂದು ಜಗ್ಗನೆ ಎದ್ದು ನಿಲ್ಲುವನು. ಏನು ಏನು..... ಯಾರು ನೀವು. ಎಷ್ಟು ಹೊತ್ತಿಂದ ಇಲ್ಲಿದ್ದೀರಿ! ನಮಸ್ಕಾರ.... ನಮಸ್ಕಾರ...... ಯುವತಿಯರೇ (ಗೌರವದಿಂದ ಮುಗಿಯುವನು)

**ಮಧೂಲಿಕಾ:** ಹೇಗಿದ್ದೀರಿ? ಕ್ಷೇಮವೇ? ಎಲ್ಲವೂ ಕುಶಲವೇ?

**ಅವಿಮಾರಕ:** ದೇವರ ದಯೆಯಿಂದ ಎಲ್ಲವೂ ಕುಶಲ.... ತಮ್ಮನ್ನು ಎಲ್ಲಿಯೋ ನೋಡಿದ ನೆನಪು..... ಇಲ್ಲಿಗೆ ತಾವು ದಯಮಾಡಿಸಿದ ಕಾರಣ ನನ್ನಿಂದೇನಾದರೂ ಆಗಬೇಕೇ?

**ನಳಿನಿಕಾ :** ಒಂದೇ ಸಮನೆ ತಾವೇ ಎಲ್ಲಾ ಮಾತಾಡಿ ಮುಗಿಸಿದರೆ ಹೇಗೆ? ನಮ್ಮ ವಿವರಗಳನ್ನು ತಿಳಿಯುವ ಮೊದಲು, ಅದೇನು ಅಷ್ಟೊಂದು ದೀರ್ಘವಾಗಿ ಆಲೋಚಿಸುತ್ತಿದ್ದೀರಿ? ಗಂಭೀರವಾಗಿ ಮೈಮರೆತು ಆಲೋಚಿಸುವಂಥಾದ್ದು ಏನೆಂದು... ನಾವು ತಿಳಿಯಬಹುದಾದಲ್ಲಿ ಅಪ್ಪಣೆ ಕೊಡಿಸಿ....

**ಅವಿಮಾರಕ:** ಓಹ್! ಅದಾ? ಅಂಥಾದ್ದೇನೂ ಗಂಭೀರವಾದ್ದಲ್ಲ. ಯಾವುದೋ ಒಂದು ಶಾಸ್ತ್ರ ಸಂಬಂಧವಾದ ಸಮಸ್ಯೆಯನ್ನು ಕುರಿತು ಯೋಚಿಸುತ್ತಿದ್ದೆ. ಅಷ್ಟೇ! ಅದೇನು ದೊಡ್ಡ ವಿಷಯವಲ್ಲ ಬಿಡಿ.

**ಮಧೂಲಿಕಾ:** ನಿಮ್ಮನ್ನು ಇಷ್ಟೊಂದು ಮೈಮರೆಸಿ ತಲೆಕೆಡಿಸಿದ ಶಾಸ್ತ್ರದ ಹೆಸರಾದರೂ ತಿಳಿಸಬಹುದಲ್ಲ?

**ಅವಿಮಾರಕ:** ಓ ಅದಕ್ಕೇನು? ಅದು ಯೋಗಶಾಸ್ತ್ರ.... (ತನ್ನಲ್ಲಿ) ಅರರೆ ಹೇಳಿಬಿಡುತ್ತಿದ್ದೆನಲ್ಲ (ಎಂದು ಬೆರಳು ಕಚ್ಚಿಕೊಳ್ಳುವನು)

**ಮಧೂಲಿಕಾ:** (ಅರ್ಥಪೂರ್ಣವಾಗಿ) ಯೋಗಶಾಸ್ತ್ರ! ಅಂದರೆ! 'ಸಂಯೋಗಶಾಸ್ತ್ರ' ಅಲ್ಲವೇ? ಅಯ್ಯೋ ನಿಮ್ಮ ಹಾಗೇ ನಮ್ಮ ಅರಮನೆಯಲ್ಲಿಯೂ ಒಬ್ಬರು ಈ ಯೋಗ, ಸಂಯೋಗ ಶಾಸ್ತ್ರದ ವಿಚಾರಾನ ತಲೆ ತುಂಬ ತುಂಬಿಕೊಂಡು ಹಾಸಿಗೆ ಹಿಡಿದು ಮಲಗಿಬಿಟ್ಟಿದ್ದಾರೆ.

**ಅವಿಮಾರಕ:** ಏನು... ಏನಂದಿರಿ? (ಸ್ವಗತ) ಓಹ್ ಕೊನೆಗೂ ಅದೃಷ್ಟ ನನ್ನ ಪಾಲಿಗೆ ಬರುವಂತಿದೆ. (ಪ್ರಕಟ) ಸುಂದರ ಯುವತಿಯರೇ.... ನನಗೆ ನಿಮ್ಮ ಮಾತಿನಿಂದ ಪುನರ್ಜನ್ಮ ಬಂದಂತಾಯಿತು. ನಿಮ್ಮ ಉಪಕಾರಕ್ಕೆ ನಾನು ಚಿರಋಣಿ. ಬಯಸಿದ್ದು ಬಾಯಿಯ ಬಳಿಗೇ ಬಂದಂತಾಯಿತು. ಇಲ್ಲಿಯವರೆಗೆ ನಾನು ಬದುಕಿ ಉಳಿದಿರುವುದೇ ಒಂದು ಪವಾಡದಂತೆನಿಸುತ್ತಿದೆ. ನನ್ನ ಇಷ್ಟಾರ್ಥವನ್ನು ಸಲ್ಲಿಸಲು ಬಂದ ದೇವತೆಯರಂತೆ ನೀವು ಕಾಣುತ್ತಿರುವಿರಿ. ಅರೆ ಪ್ರಜ್ಞಾವಸ್ಥೆಯಲ್ಲಿ ಯಾವುದೋ ಗುಂಗಿನಲ್ಲಿ ಬದುಕುತ್ತಿದ್ದ ನನ್ನನ್ನು ಈ ವಾಸ್ತವ ಜಗತ್ತಿಗೆ ಮತ್ತೆ ಕರೆತಂದಿರಿ.

**ಮಧೂಲಿಕಾ:** ಸರಿ ಸರಿ ಸ್ವಾಮಿ. ತಾವು ನಮ್ಮ ರಾಜಕುಮಾರಿಯ ಪ್ರಾಣ ಉಳಿಸಿ ಮಾಡಿದ ಉಪಕಾರಕ್ಕೆ ನಮ್ಮ ಕೃತಜ್ಞತೆಗಳು. ಕನಸುಗಳನ್ನು ಕಾಣುತ್ತಾ ಕಾಲ ವಿಳಂಬ ಮಾಡಬೇಡಿ. ಈ ರಾತ್ರಿಗೇ ನಮ್ಮ ರಾಜಕುಮಾರಿಯನ್ನು ಭೇಟಿ ಮಾಡಲು ವ್ಯವಸ್ಥೆ ಮಾಡುತ್ತೇವೆ. ಹೇಗಿದ್ದರೂ ರಾಜ ಕುಮಾರಿಯ ವಾಸಗೃಹದ ರಕ್ಷಣೆಯ ಜವಾಬ್ದಾರಿ ಹೊತ್ತಿರುವ ಭೂತಿಕಾರವರು ವಾರಾಣಾಸಿಯ ಪ್ರತಿನಿಧಿ ಬೀಳ್ಕೊಡಲು ಹೋಗಿದ್ದಾರೆ. ಇಂತಹ ಅವಕಾಶ ಮತ್ತೆಂದೂ ಸಿಗಲಾರದು....ಆದರೆ ಒಂದೇ ಒಂದು ತೊಂದರೆಯೆಂದರೆ, ಅರಮನೆಯನ್ನು ಪ್ರವೇಶಿಸುವುದು. ಒಂದು ಸಲ ಒಳಗೆ ಬಂದು ಬಿಟ್ಟರೆ ಉಳಿದದ್ದನ್ನು ನಾವು ನೋಡಿಕೊಳ್ಳುತ್ತೇವೆ.

**ಅವಿಮಾರಕ:** ಅರಮನೆಯ ಪ್ರವೇಶ?.... ಅದು ನಮಗೆಷ್ಟರ ಕೆಲಸ! ನಿಮ್ಮಲ್ಲಿ ಅರಮನೆ ನಕ್ಷೆಯಿದ್ದರೆ ತೋರಿಸಬಲ್ಲಿರಾ?

ನಳಿನಿಕಾ : ಓಹೋ.... ಈ ಸಮಸ್ಯೆ ಬರಬಹುದೆಂದು ಊಹಿಸಿಯೇ ಮೊದಲೇ ತಿಳಿದು ಭದ್ರವಾಗಿ ಬಚ್ಚಿಟ್ಟುಕೊಂಡು ತಂದಿದ್ದೇವೆ..... ಇದೋ ನೋಡಿ. (ನಕ್ಷೆ ನೀಡುವಳು)

**ಅವಿಮಾರಕ:** ಆಹಾ! (ಗಮನವಿಟ್ಟು)....ಈಗ ಸಮಾಧಾನವಾಯಿತು. ಇದನ್ನು ನೋಡಿದರೆ ಯಾಕೋ ಎಲ್ಲವೂ ತೀರಾ ಪರಿಚಿತವೆಂಬಂತೆ ಅನಿಸುತ್ತಿದೆ. ಆದರೆ

ಅದು ನನ್ನ ಭ್ರಮೆಯಿದ್ದರೂ ಇರಬಹುದು. ಎಲ್ಲವನ್ನೂ ಸುಲಭವಾಗಿ ತೆಗೆದುಕೊಳ್ಳುವಂತಿಲ್ಲ. ಅದೃಷ್ಟ ನಮ್ಮ ಜೊತೆಗಿದ್ದಾಗ ಮಾತ್ರವೇ ನಾವು ಕೈ ಹಾಕಿದ್ದು ನಮಗೆ ದಕ್ಕುವ ಸಾಧ್ಯತೆಗಳಿರುವುದ. ಅದೃಷ್ಟದ ಮುಂದೆ ನಾವು ಅಲ್ಪರು.

**ನಳಿನಿಕಾ :** ಇಷ್ಟೊಂದು ನಿರಾಶರಾಗಬೇಡಿ. ನಮ್ಮ ಮೇಲೆ ಭರವಸೆಯಿಡಿ.... ಇನ್ನು ನಾವು ಹೊರಡುತ್ತೇವೆ. ಮಾತಿಗೆ ತಪ್ಪಬೇಡಿ. ನಮ್ಮ ಒಡತಿಯನ್ನು ಬದುಕಿಸುವುದು ನಿಮಗೆ ಸೇರಿದ್ದು.

**ಅವಿಮಾರಕ:** ಅಷ್ಟು ದೊಡ್ಡ ಮಾತು ಬೇಡ. ರಾಜಕುಮಾರಿ ಉಪಕಾರಕ್ಕಲ್ಲ; ಬದುಕಿಸುವುದಕ್ಕಾಗಿಂಯೂ ಅಲ್ಲ ನನ್ನನ್ನು ನಾನು ಬದುಕಿಸಿಕೊಳ್ಳುವುದಕ್ಕಾಗಿಯಾದರೂ ಬಂದೇ ಬರುತ್ತೇನೆ. ಈ ಮಾತು ನಿಮ್ಮ ರಾಜಕುಮಾರಿಗೆ ಹೇಳಿ.

**ನಳಿನಿಕಾ, ಮಧೂ:** ಬಹಳ ಉಪಕಾರವಾಯಿತು. ನಾವಿನ್ನು ಬರುತ್ತೇವೆ. (ಹೊರಡುವರು)

**ಅವಿಮಾರಕ:** ಎಂತಹ ಸಂಯೋಗ! ಕನಸಿನಲ್ಲಿಯೇ ಊಹಿಸಲಾಗದ್ದು ಕೈ ಅಳತೆಯೊಳಗೇ ಬಂದು ಬಿತ್ತಲ್ಲ. ಈ ದರಿದ್ರ ಬದುಕಿನಲ್ಲಿ ಒಂದು ಸಂತೋಷದ ಕಿರಣವಾದರೂ ಹೊಳೆಯುವಂತಾದುದು ನನ್ನ ಪೂರ್ವಜನ್ಮದ ಪುಣ್ಯ ವಿಶೇಷವೇ ಇರಬೇಕು. ಇರಲಿ. ಇಂದು ಹೇಗಾದರೂ ರಾಜಕುಮಾರಿಯನ್ನು ಭೇಟಿಯಾಗಿ ನನ್ನೆದೆಯ ಭಾವನೆಗಳನ್ನೆಲ್ಲಾ ಸುರಿದು ಬಿಡುತ್ತೇನೆ. ಅನುಗ್ರಹವೋ ಆಗ್ರಹವೋ! ಯಾವುದಾದರೂ ಸರಿ. ಸ್ವೀಕರಿಸಿ ಬದುಕುತ್ತೇನೆ... (ಏನನ್ನೋ ನೆನಪಿಸಿಕೊಂಡಂತೆ) ಅರೆ ಗೆಳೆಯ ವಿದೂಷಕ ಎಲ್ಲಿ ಹೋದ?.... ಅಬ್ಬಬ್ಬ ಅವನನ್ನು ನಿಭಾಯಿಸುವುದೇ ನನಗೊಂದು ಪ್ರಯಾಸವಾಗಿದೆ. ಗೆಳೆಯನಿಗೆ ಈ ಸಂತೋಷದ ಸುದ್ದಿ ಹೇಳಿದರೆ ಹೇಗೆ?... ಇಲ್ಲ ಇಲ್ಲ. ಅವನ ಬಾಯೊಂದು ಜರಡಿಯಂತೆ. ಏನೂ ನಿಲ್ಲುವುದಿಲ್ಲ. ಹೋಗಿ ನೋಡಬೇಕು, ಎಲ್ಲಿಗೆ ಸವಾರಿ ಹೊರಟಿದೆ ಅಂತ ಪತ್ತೆ ಹಚ್ಚಲೇಬೇಕು. (ಎಂದು ಹೊರಡಲು ಅಣಿಯಾಗುತ್ತಾನೆ)

ಂಂ

# ದೃಶ್ಯ – ೪

(ರಾತ್ರಿಯ ಪ್ರಶಾಂತ ವಾತಾವರಣ. ಅಲ್ಲಲ್ಲಿ ಪಂಜುಗಳನ್ನು ಸಿಕ್ಕಿಸಿದ್ದಾರೆ. ರಕ್ಷಕಭಟರ ಕಾಲಸಪ್ಪಳ ಕೇಳಿ ಬರುವುದು) ದೂರದಿಂದ ನಾಯಿಗಳು ಬೊಗಳುತ್ತಿರುವುದು ಅಸ್ಪಷ್ಟವಾಗಿ ಕೇಳಿ ಬರುತ್ತಿದೆ. ಹಿನ್ನೆಲೆಗೆ ಅರಮನೆ ಕಾಣುತ್ತಿರಬೇಕು. ರಾಜಬೀದಿಯಲ್ಲಿ ವಿದೂಷಕ ಅವಿಮಾರಕ ಎದುರು ಬದುರಾಗಿ ಕಾಣುತ್ತಾರೆ).

**ಅವಿಮಾರಕ:** ಇದೇನು ಗೆಳೆಯಾ ಬೆಳಗಿನಿಂದ ಪತ್ತೆಯೇ ಇಲ್ಲ. ಈ ರಾತ್ರಿಯಲ್ಲಿ ಇಲ್ಲಿ? ಒಂಟಿಯಾಗಿ ಅಲೆದಾಡುತ್ತಾ ಎಲ್ಲಿಗೆ ಹೊರಟಿರುವೆ?

**ವಿದೂಷಕ :** ಎಲ್ಲಿಗೂ ಇಲ್ಲ ಗೆಳೆಯಾ. (ನಿಟ್ಟುಸಿರು) ಏನು ಮಾಡುವುದು! ಹಿಂದಿನ ನನ್ನ ಸುಖದ ದಿನಗಳನ್ನು ಮೆಲುಕು ಹಾಕುತ್ತಾ, ಈ ನಗರದ ನಗರ ವಧುಗಳ ಸೌಂದರ್ಯದ ಇಣುಕು ನೋಟಗಳನ್ನು ಆಸ್ವಾದಿಸುತ್ತಾ ಹೀಗೇ ಅಡ್ಡಾಡುತ್ತಿದ್ದೆ. ಮಾಡಲು ಕೆಲಸವಿಲ್ಲ. ಹೊಟ್ಟೆಗೆ ಊಟವಿಲ್ಲ. ಈ ನಗರದ ಅಂದ ಚೆಂದಗಳನ್ನಾದರೂ ನೋಡಿ ತಣಿಯಲು ಬಂದೆ. ಅಂದ ಹಾಗೆ.... ನೀನೇನು?.... (ಸಂಶಯದಿಂದ) ಇಲ್ಲಿ ಅರಮನೆಯ ಕಾವಲು ಕಾಯಲು ಬಂದಿರುವೆಯೋ ಅಥವಾ ಅರಮನೆಯೊಳಗಿನ ಅಮೂಲ್ಯ ರತ್ನವನ್ನು ಯಾರಾದರೂ ಕೊಳ್ಳೆ ಹೊಡೆದಾರೆಂದೋ! ಕೊಳ್ಳೆ ಹೊಡೆಯಲೆಂದೊ!! (ನಗುವನು)

**ಅವಿಮಾರಕ:** ಸಾಕು ಸುಮ್ಮನಿರು ಗೆಳೆಯಾ. ನಿನಗೆ ಹೊತ್ತು ಗೊತ್ತು ಒಂದೂ ತಿಳಿಯುವುದಿಲ್ಲ. ಬೆಳಗಿನಿಂದ ನಿನಗಾಗಿ ಎಲ್ಲೆಲ್ಲೋ ಹುಡುಕಾಡಿದೆ. ಎಲ್ಲಿಗೆ ಹೊರಟಿತ್ತೋ ಸವಾರಿ!.... ನಿನಗೆ ನಾನೊಂದು ಸಂತೋಷದ ಸುದ್ದಿ ಹೇಳಬೇಕೆಂದಿರುವೆ! (ಗೆಲುವು ಕಾಣಿಸುವುದು)

**ವಿದೂಷಕ :** ಸಂತೋಷದ ಸುದ್ದಿ!.... ಅಂದರೆ ನಮ್ಮ ಅಜ್ಞಾತವಾಸ ಮುಗಿಯಿತೇ?

**ಅವಿಮಾರಕ:** ಅಯ್ಯೋ ಗೆಳೆಯಾ!.... ಅದಷ್ಟು ಬೇಗ ಮುಗಿಯಲು ಹೇಗೆ ಸಾಧ್ಯ? ಆದರೆ ನಾನು ಹೇಳ ಹೊರಟಿರುವುದು ಅದಕ್ಕಿಂತ ಮಹತ್ವದ್ದು. ಬೆಳಿಗ್ಗೆ

ರಾಜಕುಮಾರಿ ಕುರಂಗಿಯ ಗೆಳತಿಯರು ಬಂದಿದ್ದರು. ನೀನೂ ನೋಡಿರಬೇಕಲ್ಲ! ಬಂದದ್ದಷ್ಟೇ ಅಲ್ಲ, ಬೆಂಕಿಯು ಬೇಯುತ್ತಿದ್ದ ನನ್ನನ್ನು ಶ್ರೀಗಂಧದ ಸರೋವರದಲ್ಲಿ ಮೀಯಿಸಿದಂತೆ ಮಾತಾಡಿದರು.

**ವಿದೂಷಕ :** ಹೂಂ! ಅಂತೂ ನಿನಗೂ ಒಳ್ಳೆಯ ದಿನಗಳು ಬರುತ್ತಿವೆ ಗೆಳೆಯಾ! ಆದರೆ ಈ ನಿನ್ನ ಹೊಟ್ಟೆ ಬಾಕ ಗೆಳೆಯನನ್ನು ಮಾತ್ರ ಮರೆಯಬೇಡ. ಅದು ಸರಿ ನೀನೀಗ ಇಲ್ಲಿಗೆ ಬಂದದ್ದೇನು?... ಅರಮನೆಯ ಪಂಜರದಲ್ಲಿನ ನಿನ್ನ ಪ್ರಾಣದ ಪಕ್ಷಿಯನ್ನು ಬಿಡಿಸಿಕೊಂಡು ಹೋಗಲು ತಾನೇ?!

**ಅವಿಮಾರಕ:** ಗೆಳೆಯಾ!! (ಆಶ್ಚರ್ಯ) ನಿನಗೆ ಇದು ಹೇಗೆ ಗೊತ್ತು. ನನ್ನ ಉಪಾಯವನ್ನು ನಿನಗೆ ತಿಳಿಸಲೆಂದೇ ನಾನು ನಿನಗೆ ಹುಡುಕಾಡಿದೆ. ಆದರೆ ನೀನು ನೋಡಿದರೆ, ನನ್ನ ವಿಚಾರಗಳನ್ನೆಲ್ಲಾ ಮೊದಲೇ ತಿಳಿದವನಾಗಿ ಕಾಣುತ್ತೀ. ಯಾರಿಂದ ಇದೆಲ್ಲವನ್ನು ತಿಳಿದುಕೊಂಡೆ?

**ವಿದೂಷಕ :** ಗೋಡೆಗಳಿಗೂ ಕಿವಿಗಳಿರುತ್ತವೆ ಎಂಬುದನ್ನು ಅದ್ಯಾಗೆ ಮರೆತೆ? ನಿಮ್ಮ ನಡುವಣ ಸಂಭಾಷಣೆಯೆಲ್ಲವನ್ನೂ ಗುಟ್ಟಾಗಿ ಆಲಿಸಿದೆ. ಜೊತೆಗೆ ನಿನಗೆ ವಿಷಯ ಹೇಳಿದವರೇ ನನಗೂ ಹೇಳಿದರು. ನೀನು ನನ್ನನ್ನು ಕರೆಯದಿದ್ದರೂ ನಾನೇ ನಿನಗಿಂತ ಮೊದಲು ಬಂದೆ. ಯಾಕೆಂದು ಬಲ್ಲೆಯಾ?.... ಆತುರದಲ್ಲೇನಾದರೂ ಅನಾಹುತ ನಡೆದು ನೀನು ಅಪಾಯಕ್ಕೆ ಸಿಗಬಾರದಲ್ಲ! ಅದಕ್ಕೇ!!

**ಅವಿಮಾರಕ:** ನನ್ನ ಬಗ್ಗೆ ನಿನಗಿರುವ ಸ್ನೇಹ, ಕಾಳಜಿಗಳಿಗಾಗಿ ಧನ್ಯವಾದಗಳು.

**ವಿದೂಷಕ :** ನಾವೆಷ್ಟೇ ಎಚ್ಚರಿಕೆಯಿಂದ ಇದ್ದರೂ ಒಳಗೆ ಹೋಗುವುದು ಮಾತ್ರ ಬಹಳ ಅಪಾಯಕಾರಿ. ಕುಂತಿಭೋಜನ ಮಂತ್ರಿಗಳು ಬಹಳ ಚಾಣಾಕ್ಷರು. ಅಲ್ಲದೆ ದಯೆ ದಾಕ್ಷಿಣ್ಯಗಳಿಲ್ಲದವರು.

**ಅವಿಮಾರಕ:** ಯಾರಿಂದಲೂ ನನಗೆ ಏನೂ ಆಗದು ಗೆಳೆಯಾ. ಯಾಕೆ ಸಮರದಲ್ಲಿ ನನ್ನ ಬಾಹುಬಲ. ಪರಾಕ್ರಮಗಳ ಪರಿಚಯ ಇಲ್ಲವೇನು? ಅದನ್ನೆಲ್ಲಾ ನೋಡಿದ್ದೂ ನನ್ನನ್ನು ಹೇಡಿ, ಹುಂಬ ಎಂದು ಭಾವಿಸುವೆಯಾ? ಕಾಮರೂಪಿ ರಾಕ್ಷಸರನ್ನು ಜಿಡದೆ ಸದೆಬಡಿದವನ ಬಗ್ಗೆಯೇ ನಿನಗೆ ಅನುಮಾನವೇ?

**ವಿದೂಷಕ :** ಹೌದೌದು. ನಿನ್ನ ಅತಿ ಮಾನವ ಸಾಹಸಗಳನ್ನೆಲ್ಲ ಬಲ್ಲೆನಾದರೂ ಈ ಅಪರಾತ್ರಿಯಲ್ಲಿ ಅನ್ಯರ ಮನೆಗೆ ಕನ್ನ ಹಾಕಿ ಪ್ರವೇಶಿಸುವುದಂತೂ ಬಹಳ ಅಪಾಯಕಾರಿಯೆಂದೇ ನನಗನಿಸುತ್ತದೆ.

**ಅವಿಮಾರಕ:** ಗೆಳೆಯಾ ಆಗಬಹುದಾದ್ದನ್ನೆಲ್ಲಾ ಊಹಿಸಿ ಆಲೋಚಿಸುತ್ತಾ ಕೈ ಕಟ್ಟಿ ಕುಳಿತುಕೊಳ್ಳುವುದು ಪುರುಷಸಿಂಹಗಳ ಲಕ್ಷಣವಲ್ಲ. ಕೆಚ್ಚೆದೆಯಿಂದ ಮುನ್ನುಗ್ಗಿ ಪರಿಣಾಮಗಳನ್ನು ಎದುರಿಸುವುದೇ ಪುರುಷ ಲಕ್ಷಣ. ತಿಳಿಯಿತೇ? ಶತಾಯಗತಾಯ ಮುನ್ನುಗ್ಗಿ ನಾನು ನನ್ನ ಪ್ರಿಯತಮೆಯ ಅಂತಃಪುರವನ್ನು ಪ್ರವೇಶಿಸುವುದು ಅನಿವಾರ್ಯ. ಇದರಲ್ಲಿ ನನ್ನ ಪ್ರಾಣ ಹೋದರೂ ನನಗೆ ಚಿಂತೆಯಿಲ್ಲ. ಆದ್ದರಿಂದ ಬ್ರಾಹ್ಮಣ ಮಹಾಶಯ ನನಗೆ ಸಮ್ಮತಿ ನೀಡಿ ಆಶೀರ್ವದಿಸು. ನಿನ್ನ ದಮ್ಮಯ್ಯಾಂತ ಬೇಡಿಕೊಳ್ಳುತ್ತೇನೆ.

**ವಿದೂಷಕ :** ಹೂಂ! ಸರಿ ಸರಿ. ನಾನೂ ಬರುತ್ತೇನೆ. ಆಪತ್ತಿನಲ್ಲಿ ಅಲ್ಲದೆ ಗೆಳೆಯರು ಇನ್ನೆಂದು ಒದಗಿ ಬಂದಾರು? ನಿನಗಾದದ್ದೇ ನನಗೂ!

**ಅವಿಮಾರಕ:** ಅಯ್ಯಯ್ಯೋ! ಬೇಡ! ಬೇಡ!..... ನೀನು ಬಂದರೆ ನನ್ನ ಕೆಲಸ ಆದ ಹಾಗೆಯೇ! ನಿನಗೊಂದು ಸುಭಾಷಿತ ಗೊತ್ತಿರಬೇಕಲ್ಲ. "ಯುದ್ಧಕ್ಕೆ ಹೋದಾಗ ಸಾವಿರ ಮಂದೀನ ಕರೆದೊಯ್ಯಿ; ಮನೆ ಕಳುವಲು ಮಾತ್ರ ಒಬ್ಬನೇ ಹೋಗು" ಎಂದು. ಅದಕ್ಕೇ ರಾಜಕುಮಾರಿಯ ಅಂತಃಪುರಕ್ಕೆ ಹೋಗುವಾಗ ನನ್ನೊಬ್ಬನ ಭರವಸೆ ಮೇಲೆ ಹೋಗಬೇಕು. ನೀನೇನೂ ಯೋಚನೆ ಮಾಡಬೇಡ. ನನ್ನ ಬಾಹುಗಳೇ ನನಗೆ ಆಯುಧಗಳು. ನನ್ನವಳ ಪ್ರೀತೀನೇ ನನಗೆ ವಜ್ರ ಕವಚ. ನಿನ್ನ ಸ್ನೇಹವೇ ನನಗೆ ಗುರಾಣಿ. ನನ್ನನ್ನು ನಾನು ರಕ್ಷಿಸಿಕೊಳ್ಳಬಲ್ಲೆ...........

**ವಿದೂಷಕ :** ನಿನ್ನಿಷ್ಟದಂತೆಯೇ ಆಗಲಿ ಗೆಳೆಯಾ... ನೀನಾಗಿ ನನ್ನನ್ನು ಒತ್ತಾಯದಿಂದ ದೂರವಿರಿಸಿದರೆ ನಾನೇನು ಮಾಡಲಿ? ದೇವರೇ ನಿನ್ನನ್ನು ರಕ್ಷಿಸಲಿ. ಇಲ್ಲಿಯೇ ಗೆಳೆಯನೊಬ್ಬನಿದ್ದಾನೆ. ಅವನಲ್ಲಿಗೆ ಹೋಗಿ ನಿನ್ನ ಬರವಿಗಾಗಿ ಎದುರು ನೋಡುತ್ತಾ ಕಾಯುತ್ತೇನೆ. ಎಚ್ಚರಿಕೆ ಗೆಳೆಯಾ! (ದೂರದಲ್ಲಿ ಸಪ್ಪಳ ಕೇಳಿ ಬರುವುದು).... ನೋಡು ಯಾರೋ ನಗರ ರಕ್ಷಕರಿರಬೇಕು. ಇತ್ತಲೇ ಬರುವಂತಿದೆ. ಮರೆಯಾಗು ಗೆಳೆಯಾ, ಮರೆಯಾಗು. ನಿನ್ನ ಕಾರ್ಯ ಸಫಲವಾಗಲಿ. ರಾಜಕುಮಾರಿಯ ಸುಖ ಸಂಯೋಗ ನಿನಗೆ ಲಭಿಸಲಿ. ಮಂಗಳವಾಗಲಿ... ಹೋಗಿ ಬಾ!

**ಅವಿಮಾರಕ:** (ಸ್ವಗತ) ಹೂಂ! ಹೊರಟು ಹೋದ.... ನನ್ನ ಕಷ್ಟ ಸುಖಗಳನ್ನು ಹೇಳಿಕೊಳ್ಳಲು ನನಗಿರುವ ಒಬ್ಬನೇ ಒಬ್ಬ ಆಪ್ತ ಮಿತ್ರನೆಂದರೆ ಇವನೇ.... ಇನ್ನು ಹೆಚ್ಚು ತಡಮಾಡಬಾರದು... ಸಮಯ ನೋಡಿ ಕಾರ್ಯಗತನಾಗಬೇಕು. ಹೇಗಿದ್ದರೂ ನಕ್ಷೆ ನನ್ನ ಬಳಿ ಇರುವುದರಿಂದ ಹೆಚ್ಚು ಚಿಂತೆಗೆ ಅವಕಾಶವಿಲ್ಲ. ಈ ದಿನ ನನ್ನ ಅದೃಷ್ಟ ಪರೀಕ್ಷೆಯ ದಿನ! ಇಂದಿನ ಸೋಲು ಗೆಲುವುಗಳೇ

ನನ್ನ ಮುಂದಿನ ಭವಿಷ್ಯದ ನಿರ್ಣಾಯಕಗಳು.... ಒಮ್ಮೆ ನಗರ ಪರಿವೀಕ್ಷಿಸಿ ಬಂದು, ನಿರ್ದಿಷ್ಟ ಎಡೆಯನ್ನು ನಿರ್ಧರಿಸುತ್ತೇನೆ. ಬರುತ್ತೇನೆ.... ಕಾವಲುಗಾರರ ಕೈಗೆ ಸಿಕ್ಕು ಕೆಲಸ ಕೆಡುವುದಕ್ಕೆ ಮೊದಲೇ ಇಲ್ಲಿಂದ ಕಾಲ್ತೆಗೆಯಬೇಕು. (ಹೋಗುತ್ತಾನೆ)

೦೦

# ದೃಶ್ಯ – ೫

(ಚಂದ್ರಶಾಲೆ. ಅದಕ್ಕೆ ಹೊಂದಿಕೊಂಡಂತೆ ಇರುವ ಒಂದು ಸುಂದರ ಆದರೆ ಪುಟ್ಟ ಉದ್ಯಾನವನ. ಮಧ್ಯೆ ನೀರಿನ ಚಿಲುಮೆ. ಉದ್ಯಾನದಿಂದ ಚಂದ್ರಶಾಲೆಗೆ ದಾರಿ ಮಾಡುವ ಒಂದು ಹಜಾರದಂತಹ ಜಾಗ ಅದು ಸ್ವಲ್ಪ ಎತ್ತರದಲ್ಲಿದೆ. ಉದ್ಯಾನಕ್ಕೆ ಬರಲು ಮೆಟ್ಟಿಲುಗಳಿವೆ. ಕುರಂಗಿ ಮತ್ತು ಸಖಿಯರು ಮಾತನಾಡುತ್ತಾ ಪ್ರವೇಶಿಸುವರು.)

**ಕುರಂಗಿ** : (ಅನ್ಯಮನಸ್ಕತೆಯಿಂದ) ನಳಿನಿಕಾ, ಅವನೇನಾದರೂ ಹೇಳಿದನೇ?

**ನಳಿನಿಕಾ** : (ಅಚ್ಚರಿಯಿಂದ) ಅವನೆಂದರೆ! ಅವನು ಯಾರು?

**ಕುರಂಗಿ** : (ಸ್ವಗತ) ಅಯ್ಯಯ್ಯೋ! ಸಿಕ್ಕಿ ಬಿದ್ದೆನಲ್ಲ! (ಸಾವರಿಸಿಕೊಂಡು) ಅದೇ ಅವನೇ ನಳನಿಕಾ! ಪಂಜರವೊಂದನ್ನು ತಯಾರಿಸಿಕೊಡಲು ಹೇಳಿದ್ದೆನಲ್ಲ!! ಹೋಗಲಿ ಬಿಡು. ಇಂದಿಲ್ಲದಿದ್ದರೆ, ನಾಳೆ ತಂದಾನು!

**ನಳಿನಿಕಾ** : ಆಂ! ಪಂಜರವೇ (ನಗುತ್ತಾ) ಪಂಜರವನ್ನೂ ಸಿದ್ಧಮಾಡಿದ್ದಾನೆ. ಆ ಪಂಜರದೊಳಗಿಡಲು ಒಂದು ಗಿಳಿಯನ್ನು ಹಿಡಿದು ಬಿಟ್ಟಿದ್ದಾನೆ.

**ಕುರಂಗಿ** : ನಳಿನಿಕಾ, ಏನಿದೆಲ್ಲಾ, ಹುಚ್ಚುಮಾತು. ನಾನೇನೋ ಹೇಳಿದರೆ ಅದಕ್ಕೆಲ್ಲಾ ಅರ್ಥ ಕಲ್ಪಿಸುತ್ತೀ. ನೀನಾಡುವ ಮಾತಿನ ಒಗಟು ನನಗೆ ಗೊತ್ತಿದೆ. ನೀನು ಭಾವಿಸಿವಂಥಾದ್ದು ಏನೂ ಇಲ್ಲ.

**ಮಧೂಲಿಕಾ**: ನಳಿನಿಕಾ, ಸುಮ್ಮನಿರೆ. ಮೊದಲೇ ನೊಂದಿರುವ ಮನಸ್ಸನ್ನು ಇನ್ನಷ್ಟು ನೋಯಿಸಬೇಡ. ಅವಳನ್ನು ಕಾಡಿದರೆ ನಿನಗೇನು ಸಂತೋಷ ಹೇಳು. ರಾಜಕುಮಾರ, ಈ ತಲೆಹರಟೆಯ ಮಾತುಗಳಿಗೆ ನೀನು ಗಮನ ಕೊಡುವುದೇ ಬೇಡ. ಅವಳಿಗೆ ಇಂತಹ ಕೀಟಲೆಗಳಲ್ಲೇ ಸಂತೋಷ.

**ನಳಿನಿಕಾ** : ಸಾಕು ಸುಮ್ಮನಿರೇ. ನೀನೇನೋ ಮಹಾಸಾಚಾ. ರಾಜಕುಮಾರಿಯ ಈ ಸ್ಥಿತಿಗೆ ನೀನೇ ಕಾರಣ. ಮಾಡೋದೆಲ್ಲಾ ಮಾಡಿ, ಮಳ್ಳಿ ತರಹ ಈಗ ನಡೆದುಕೊಳ್ಳುತ್ತಿದ್ದೀಯ.... ಅದಿರಲಿ. ಈಗ ಬಹಳ ಹೊತ್ತಾಯಿತು. ಇನ್ನು ಒಳಗೆ ಹೋಗಿ, ನಿದ್ದೆ ಮಾಡದೆ ಯಾವ ಯಕ್ಷನಿಗಾಗಿ ಕಾದು

ಕುಳಿತಿರಬೇಕಾಗಿದೆ? ನಡೀರೇ ಹೋಗೋಣ. ನನಗಂತೂ ತುಂಬಾ ನಿದ್ದೆ ಬರುತ್ತಿದೆ..... ನಿದ್ದೇನೂ ಹಾಳುಮಾಡಿಕೊಂಡು ಮನಸ್ಸನ್ನೂ ನೋಯಿಸಿಕೊಂಡು ನಾವ್ಯಾಕೆ ಇಲ್ಲಿರಬೇಕು? ಪಾಪ! ಎಂತಹ ಸುಂದರ ರಾತ್ರಿ. ಈ ಹಾಳು ಚಂದ್ರಮ ಮುಖದಗಲಕ್ಕೂ ಹಲ್ಲು ಕಿರಿದು ನಗುತ್ತಾ ಪ್ರಿಯತಮರ ಮೈಮನಗಳನ್ನು ಉರಿಸುತ್ತಿದ್ದಾನೆ. ಇವನನ್ನು ಏನು ಮಾಡಬೇಕೋ! ರಾಜಕುಮಾರಿ, ಪ್ರಿಯಸಖಿ. ಇವನನ್ನು ಸೆಳೆದು ತಂದು ಸೆರೆಯಲ್ಲಿಡಬೇಕಲ್ಲವೇ? (ನಗು)

**ಮಧೂಲಿಕಾ:** ನಳಿನಿಕಾ, ನಿನ್ನ ತಮಾಷೆಗೂ ಒಂದು ಮಿತಿಯಿರಬೇಕು. ಸಾಕುಮಾಡು ನಿನ್ನ ಕಾಡು ಹರಟೆ

**ನಳಿನಿಕಾ :** ಕೋಪವೇಕೆ ಮಧೂ! ನನಗೆ ನನ್ನ ಪ್ರಿಯತಮನ ನೆನಪಾಯಿತು. ಅವನನ್ನು ಕಾಣಲು ಮನಸ್ಸು ತಹತಹಿಸುತ್ತಿದೆ..... ನಿನಗೇನು ಗೊತ್ತು. ಪ್ರೀತಿಸಿದವರ ಮನಃಸ್ಥಿತಿ. (ನಾಟಕೀಯವಾಗಿ) ಓ ಪ್ರಿಯತಮಾ..... ಎಲ್ಲಿರುವೇ?.... ಬಾರೆಯಾ! ಕೆಂಡದುರಿಯಾಗಿರುವ ಮೈಮನಗಳ ತಣಿಸಲು ಶೀತಲಗಂಧ ಸೀಕರವಾಗಿ ಬಾ.... ಮಾದಕ ಮಂದಾನಿಲವಾಗಿ ಬೀಸಿ ಬಾ. ವಿರಹದುಷ್ಣತೆಗೆ ಬಿರಿದ ತುಟಿಗಳಿಗೆ ಜೇನ ಸವರಬಾ; ಕೋಡಿ ಹರಿವ ಕಂಬನಿಗೆ ಕಟ್ಟೆಯಿಡಲೆದ್ದು ಬಾ; ಬಾ ಬಾರಾ ಪ್ರಿಯ.....

**ಕುರಂಗಿ :** ನಳಿನಿಕಾ, ನಳಿನಿಕಾ, ನಿನ್ನ ಚೇಷ್ಟೆಗಳಿಂದ ನಾನು ಸಾಯುವಂತಾಗಿದ್ದೇನೆ. ನಿನಗೆ ನನ್ನ ಮೇಲೇಕೆ ಇಷ್ಟು ದ್ವೇಷ? ನನ್ನನ್ನು ಗೋಳಾಡಿಸಿದರೆ ನಿನಗೆ ಬರುವ ಸಂತೋಷವಾದರೂ ಎಂಥಾದ್ದು?... ದಯವಿಟ್ಟು ನೀವಿಬ್ಬರೂ ಇಲ್ಲಿಂದ ಹೊರಡಿ. ನನಗೆ ಏಕಾಂತವಾಗಿರಲು ಬಿಡಿ. ಬೆಳಕು ಹರಿಯುವ ತವಕ ನಾನಿಲ್ಲಿಯೇ ಇರುತ್ತೇನೆ.

**ನಳಿನಿಕಾ :** ಅಮ್ಮಯ್ಯ!..... ಅದು ಸಾಧ್ಯವೇ ಇಲ್ಲ. ಒಂದು ವೇಳೆ ಪ್ರಭುಗಳಿಗೆ ನಾವು ನಿಮ್ಮೊಬ್ಬರನ್ನೇ ಬಿಟ್ಟು ಹೋಗಿದ್ದೇವೆಂದು ತಿಳಿದರೆ, ನಮ್ಮ ತಲೆ ಹಾರಿ ಹೋದೀತು. ಅಲ್ಲವೇನೇ ಮಧು! ಏಯ್–ಯಾಕೇ.... ಯಾಕೇ..... ಹಾಗೆ ಬಾಯಿ ಬಿಟ್ಟುಕೊಂಡು ನೋಡುತ್ತೀ!

**ಮಧೂಲಿಕಾ:** ಪರಿಹಾಸ ಸಾಕುಮಾಡೆ ನಳಿನಿ.... (ರಾಜಕುಮಾರಿಯ ಕಡೆ ಸನ್ನೆ ಮಾಡಿ) ಹೇಳೋಣವೇನು?

**ನಳಿನಿಕಾ :** (ಬೇಡವೆಂದು ಸನ್ನೆಮಾಡಿ ಬಾಯಿ ಮೇಲೆ ಬೆರಳಿಟ್ಟು ಸುಮ್ಮನಿರುವಂತೆ ಹೇಳುವಳು) ಮಧೂ..... ಈಗ ವೇಳೆ ಎಷ್ಟಾಗಿರಬಹುದು? ಈ ಮಿಕವನ್ನು ಹುಡುಕುತ್ತಾ ಆ ಬಕ ಇಷ್ಟು ಹೊತ್ತಿಗೆ ಬರಬೇಕಿತ್ತು. (ಮೆಲು ದನಿಯಲ್ಲಿ ಮಾತಾಡಿಕೊಳ್ಳುವರು)

**ಕುರಂಗಿ** : (ಅನುಮಾನದಿಂದ) ಏನೇ ಅದು? ಮಿಕ...... ಬಕ..... ಏನೇನೊ ಮಾತನಾಡುತ್ತಿದ್ದೀರಿ.... ನಿಮ್ಮಲ್ಲಿ ಯಾರಾದರೂ ಸರಿ. ಹೇಳಿರೇ ಅದೇನೆಂದು. ನನ್ನಿಂದಲೇ ಗುಟ್ಟು ಮಾಡುತ್ತಿದ್ದೀರಿ. ಮಧೂ, ನನ್ನನ್ನು ನೀನೂ ಕಾಡಿಸಲು ಆರಂಭಿಸಿದೆಯಾ? ಈ ನಳಿನಿಯಂತೂ ತೀರಾ ಹದ್ದುಮೀರಿ ಹೋಗಿದ್ದಾಳೆ. ಒಂದು ಕೇಳಿದರೆ, ಕೇಳಿದ್ದೊಂದನ್ನು ಬಿಟ್ಟು, ನೂರೆಂಟು ಹರಟುತ್ತಾಳೆ.

**ಮಧೂಲಿಕಾ:** ರಾಜಕುಮಾರಿ.... ಒಂದು ನಿಮಿಷ. ಹೊರಗೆ ಹೋಗಿ ನೋಡಿಬಂದು ಹೇಳುತ್ತೇನೆ.

**ಕುರಂಗಿ** : (ಸ್ವಗತ) ಇವರಿಬ್ಬರ ನಡುವೆ ಏನೋ ಸಂಚು ನಡೆದಿದೆ. ಇವರಾಡುವ ಮಾತುಗಳೆಲ್ಲಾ ಒಗಟುಗಳಾಗಿವೆ. ಇಂತಹ ದುಷ್ಟೆಯರನ್ನು ಸಖಿಯರನ್ನಾಗಿ ಮಾಡಿಕೊಂಡದ್ದೇ ನನ್ನ ತಪ್ಪು.... ಹಾಳಾಗಿ ಹೋಗಲಿ. ಇಲ್ಲೇ ಈ ಮರದಡಿಯ ಜಗುಲಿಯ ಮೇಲೆ ಒಂದರೆಗಳಿಗೆ ಮೈಚಾಚುತ್ತೇನೆ. ಇದಕ್ಕೆ ಮೊದಲು ಈ ದುಷ್ಟೆಯನ್ನು ಇಲ್ಲಿಂದ ಹೊರಡಿಸುತ್ತೇನೆ. (ಪ್ರಕಟ) ನಳಿನಿಕಾ, ನನ್ನ ಪ್ರಿಯ ಸಖಿ, ಸ್ವಲ್ಪ ನನ್ನ ವೀಣೆಯನ್ನು ತಂದು ಕೊಡುತ್ತೀಯಾ? (ಅಂಗಲಾಚುವಳು)

**ನಳಿನಿಕಾ** : ಬೇಸರವಾಯಿತಾ ಗೆಳತಿ? ನಿನ್ನನ್ನು ಗೋಳಾಡಿಸಿದ್ದು ತಮಾಶೆಗೆ. ನಾವು ಮಾಡುತ್ತಿರುವುದೆಲ್ಲ ನಿನ್ನ ಒಳ್ಳೆಯದಕ್ಕೆ. ಸಮಯ ಬಂದಾಗ ನಾವು ಮಾಡಿದ್ದು ಏನೆಂದು ನಿನಗೇ ತಿಳಿಯುತ್ತದೆ (ಎಂದು ಹೇಳುತ್ತಿರುವಷ್ಟರಲ್ಲಿ "ಏಯ್ ಯಾರದು? ಏನದು ಸದ್ದು?............ಯಾವನೋ ಕಳ್ಳನಿರಬೇಕು. ಅಂತಃಪುರದ ರಕ್ಷಣೆಗೆ ಯಾರೂ ಇಲ್ಲಾಂತ ತಿಳಿದೇ ಘಟಿಂಗರು ದರೋಡೆಗೆ ಯೋಚಿಸಿರಬೇಕು. ಓಡಿರೋ, ಹಿಡಿದು ಚೆನ್ನಾಗಿ ಥಳಿಸಿ. ಬಿಡಬೇಡಿ – ಎಂಬ ಮಾತುಗಳು ಕೇಳಿ ಬರುವುವು)

**ನಳಿನಿಕಾ** : (ಹೆದರಿ ಹೌ ಹಾರಿ) ಅಯ್ಯಯ್ಯೋ! ದೇವರೇ.... ಏನೋ ಘಾತವಾದಂತಿದೆ. ಆತನೇನಾದರೂ ಸಿಕ್ಕಿಬಿದ್ದರೆ ನಮ್ಮ ಕತೆ ಮುಗಿದಂತೆಯೇ. (ಸ್ವಗತ) ಓ ಅದೃಷ್ಟವೇ!...... ನಮ್ಮ ಕೈ ಬಿಡಬೇಡ. ಪಾಪ! ರಾಜಕುಮಾರಿಯ ಬವಣೆಯನ್ನು ನೋಡಲಾಗುವುದಿಲ್ಲ. ಈ ಒಂದು ಅವಕಾಶ ದಕ್ಕುವಂತೆ ಕರುಣಿಸು ದೇವರೇ. ಕುರಂಗಿಗಾಗಿ ವಿಶೇಷ ಪೂಜೆ ಸಲ್ಲಿಸುತ್ತೇನೆ...... (ಪ್ರಕಟ) ರಾಜಕುಮಾರಿ, ವೀಣೆ ಚಿಂತೆ ಬಿಡು ಈಗ. ನಮ್ಮ ತಲೇ ಮೇಲೆ ಒಂದು ದೊಡ್ಡ ಆಘಾತ ಎರಗಲಿದೆ. (ಸ್ವಲ್ಪ ಹೊತ್ತು ನೀರವತೆ. ದೂರದಿಂದೆಲ್ಲೋ ಸುಂದರ ವೇಣುವಿನ ದನಿ ತೇಲಿ ಬರುತ್ತದೆ. ಮಧ್ಯೆ ಮಧ್ಯೆ ಗೂಬೆಯ ಕೂಗೂ ಕೇಳಿಸುತ್ತದೆ) ರಾಜಕುಮಾರಿ..... ಈಗ ಸದ್ಯಕ್ಕೆ ನೀನಿಲ್ಲಿ

ಈ ಮರದ ಕೆಳಗೆ ವಿಶ್ರಾಂತಿ ತಗೋ. ಮಧೂಲಿಕಾ ಹೋದವಳು ಇನ್ನೂ ಬರಲಿಲ್ಲ. ಎಲ್ಲಿ ಹೋಗಿದ್ದಾಳೋ ಏನೋ... ಹೋಗಿ ವಿಚಾರಿಸಿಕೊಂಡು ಬರುತ್ತೇನೆ..... (ಎಂದು ಒಂದಿಷ್ಟು ದೂರ ಹೋಗಿ ಮತ್ತೆ ಬರುವಳು. ಹಾಗೆಯೇ ಕಣ್ಣು ಮುಚ್ಚುತ್ತಾಳೆ. ಸ್ವಲ್ಪ ಹೊತ್ತಿಗೆಲ್ಲ ಗಾಢ ನಿದ್ರೆಗೆ ಸಲ್ಲುತ್ತಾಳೆ)

**ಮಧೂಲಿಕಾ:** (ಪ್ರವೇಶಿಸಿ, ನೇರ ರಾಜಕುಮಾರಿ ಮಲಗಿದ್ದಲ್ಲಿಗೆ ಹೋಗುತ್ತಾಳೆ.) ಅವಳನ್ನು ನೋಡಿ. ನಳಿನಿಕಾಗೆ ಬರಲು ಸನ್ನೆ ಮಾಡುತ್ತಾಳೆ.

**ನಳಿನಿಕಾ :** (ನಿಧಾನವಾಗಿ ಹೆಜ್ಜೆ ಇಡುತ್ತಾ) ಚೆನ್ನಾಗಿ ನಿದ್ದೆ ಹತ್ತಿರಬೇಕಲ್ಲ.

**ಮಧೂಲಿಕಾ:** ಹೌದು ಎಷ್ಟು ಪ್ರಶಾಂತವಾಗಿದೆ ಮುಖ!.... ನೋಡು ನೋಡು ಎಲ್ಲೋ ಪ್ರಿಯತಮನ ಕನಸನ್ನು ಕಾಣುತ್ತಿರಬೇಕು. ಅದಕ್ಕೇ ಆ ಮುಖದಲ್ಲಿ ನಗು! ಪಾಪ! ಇವಳ ಕನಸು ನಿಜವಾದರೆ ಎಷ್ಟು ಚೆನ್ನ!!

**ನಳಿನಿಕಾ :** ಮಧೂ, ರಾಜಕುಮಾರರು ಖಂಡಿತಾ ಬರುತ್ತಾರೆ ಎನಿಸುತ್ತದೆಯೇ?

**ಮಧೂಲಿಕಾ:** ಖಂಡಿತ ಬರುತ್ತಾರೆ. ನನಗೆ ಅವರ ಶಕ್ತಿ ಸಾಮರ್ಥ್ಯದಲ್ಲಿ ಕೊಟ್ಟ ಮಾತಿನಲ್ಲಿ ಪೂರ್ಣ ಭರವಸೆಯಿದೆ! (ಎನ್ನುತ್ತಿರುವಷ್ಟರಲ್ಲಿ ಹೆಜ್ಜೆ ಸಪ್ಪಳ ಕೇಳಿಸುತ್ತದೆ.) ನಳಿನಿಕಾ ಮಧೂಲಿಕಾ ಇಬ್ಬರೂ ತಿರುಗಿ ನೋಡುತ್ತಾರೆ. ಆಶ್ಚರ್ಯದಿಂದ ಒಟ್ಟಿಗೆ.

**ಇಬ್ಬರೂ :** ಅರೆ! ನೆನೆದವರ ಮನದಲ್ಲಿಯೇ ಎಂಬಂತೆ, ರಾಜಕುಮಾರರೇ ಪ್ರತ್ಯಕ್ಷರಾದರಲ್ಲ!!

**ಅವಿಮಾರಕ:** (ಪ್ರವೇಶಿಸಿ) ಸುದತಿಯರೇ, ಇದೋ ಈ ಸೇವಕ ನಿಮ್ಮ ಸಖಿಯ ಸೇವೆಗೆ ಸಿದ್ಧನಾಗಿ ಬಂದಿದ್ದಾನೆ.

**ಮಧೂಲಿಕಾ:** ಬನ್ನಿ ರಾಜಕುಮಾರರೇ, ತಮಗೆ ಸ್ವಾಗತ (ಗೆಲುವಿನಿಂದ)

**ಅವಿಮಾರಕ:** ದಯವಿಟ್ಟು ನನ್ನನ್ನು ರಾಜಕುಮಾರ ಎನ್ನಬೇಡಿ. ನಾನು ಯಾವ ಸೀಮೆಯ ರಾಜಕುಮಾರ?...... ಎಲ್ಲಿ ನಿಮ್ಮ ಗೆಳತಿ ನನ್ನ ಪ್ರಾಣೇಶ್ವರಿ (ಎಂದು ಸುತ್ತಲೂ ನೋಡುವನು)

**ನಳಿನಿಕಾ :** ನಿಮ್ಮನ್ನು ರಾಜಕುಮಾರೆಂದು ಕರೆಯದೆ ಮತ್ತೇನು ಕರೆಯುವುದು? ನಮಗೆ ನಿಮ್ಮನ್ನು ಹೀಗೆ ಕರೆಯುವುದೇ ಸಮಂಜಸವೆನಿಸುವುದು. ನೀವು ಯಾವ ದೇಶದ ರಾಜಕುಮಾರನಲ್ಲವೆಂದು ಹೇಳಿದರೂ, ನಮ್ಮ ಗೆಳತಿಯ ಪ್ರಣಯ ಸಾಮ್ರಾಜ್ಯದ ರಾಜಕುಮಾರನೆಂಬುದಂತೂ ಸುಳ್ಳಲ್ಲವಲ್ಲ!! ನಾವು ನಿಮ್ಮನ್ನು ಹಾಗೆಂದು ಕರೆದುದು ಇದೇ ಅರ್ಥದಲ್ಲಿ!!

**ಅವಿಮಾರಕ:** ಅಬ್ಬಬ್ಬ! ನೀವು ಬಲುಗಟ್ಟಿಗರಿದ್ದೀರಿ. ನೀವೇ ಹೀಗಿದ್ದ ಮೇಲೆ ನಿಮ್ಮ ಆ ಗೆಳತಿ ಇನ್ನು ಹೇಗಿರಬೇಕು. ನೆನೆಸಿಕೊಂಡರೇನೇ ನಡುಕ ಹುಟ್ಟುತ್ತೆ!

**ಮಧೂಲಿಕಾ:** ನಳಿನಿಕಾ, ರಾಜಕುಮಾರರ ವೇಳೆಯನ್ನು ಹಾಳು ಮಾಡುವುದು ಬೇಡ. ಅವರ ಒಡವೆಯನ್ನು ಅವರಿಗೆ ಒಪ್ಪಿಸಿ ನಾವಿಲ್ಲಿಂದ ಜಾರಿಕೊಳ್ಳೋಣ ಈ ಪ್ರವೇಶಕ್ಕೆ. ಪ್ರದೇಶದ ಪರಿಸರಕ್ಕೆ ಯಾರೂ ಬಾರದಂತೆ ನಾವು ಎಚ್ಚರಿಕೆ ವಹಿಸಬೇಕಾಗಿದೆ. ನಡೆ ಹೋಗೋಣ.... ರಾಜಕುಮಾರರೇ ನಮ್ಮ ಗೆಳತಿ... ಇಗೋ ಈ ಮರದಡಿಯಲ್ಲಿ ಮೈಮರೆತು ನಿಮ್ಮ ಕನಸು ಕಾಣುತ್ತಿದ್ದಾಳೆ. (ಎಂದು ಕುರಂಗಿ ಮಲಗಿದ ಕಡೆ ಬೆರಳು ತೋರುತ್ತಾರೆ. ಅವಿಮಾರಕ ಆ ಕಡೆಗೆ ದೃಷ್ಟಿಹಾಯಿಸಿ ಮತ್ತೆ ಮೆಲ್ಲನೆ ಬಳಿಗೆ ಸಾರುತ್ತಾನೆ. ಅವಳನ್ನು ತದೇಕ ಚಿತ್ತದಿಂದ ಗಮನಿಸುತ್ತಾನೆ)

**ನಲಿನಿಕಾ :** ಬಾ ಮಧು. ಇನ್ನು ನಮ್ಮ ಕೆಲಸ ಮುಗಿಯಿತು. ಕಾತರ ಕಳವಳಗಳಿಂದ ಪರಿತಿಸುತ್ತಿದ್ದ. ಈ ಪ್ರಣಯ ಪಕ್ಷಿಗಳನ್ನು ಒಂದೆಡೆಗೆ ಸೇರಿಸಿದ್ದಾಯಿತು. ಇನ್ನು ಅವರವರ ಪಾಡು ಅವರಿಗೆ! (ಎಂದು ಮಧುವನ್ನು ಕೈ ಹಿಡಿದು ಎಳೆದುಕೊಂಡು ಹೋಗುತ್ತಾಳೆ)

**ಅವಿಮಾರಕ:** (ಭಾವಪರವಶತೆಯಿಂದ ಅವಳನ್ನೇ ನೋಡುತ್ತಾ) ಆಹಾ! ಎಂಥ ಲಾವಣ್ಯ! ಈ ಅನುಪಮ ಸೌಂದರ್ಯ ಪುತ್ಥಳಿಯನ್ನು ಸೃಷ್ಟಿಸಿದ ಆ ಬ್ರಹ್ಮದೇವನನ್ನು ಎಷ್ಟು ಕೊಂಡಾಡಿದರೂ ಸಾಲದು. ಚಂದ್ರಿಕೆಯೇ ಮೈ ಪಡೆದು ಮಲಗಿರುವಂತಿದೆ. ಕಪ್ಪು ಕರುಳಿನ ನಡುವೆ ರಾರಾಜಿಸುತ್ತಿರುವ ಈ ಮುಖ ದುಂಬಿಗಳಿಂದ ಮುತ್ತು ಪಡೆಯುತ್ತಿರುವ ಕಮಲದಂತಿದೆ. ನೀಳವಾಗಿ ಮೈಚಾಚಿ ಮಲಗಿರುವ ಇವಳ ಬಾಹು ಬಳ್ಳಿಗಳು, ಉಬ್ಬಿದೆದೆ ಶಿಖರಗಳು. ಮೊಗ್ಗೆ ನಾಸಿಕ ಇಂದ್ರ ಧನುವಿನಂತಿರುವ ಹುಬ್ಬುಗಳು!..... ಓ ದೇವರೇ ದೇವರೇ...... ರತಿಯ ಅಪರಾವತಾರವೇ ಇವಳಾಗಿರಬಹುದೇ! ನೋಡ ನೋಡುತ್ತಿದ್ದಂತೆ ನನ್ನೆದೆಯ ವೇಗದ ಬಡಿತಗಳು ಎಲ್ಲಿ ಎಚ್ಚರಿಸಿ ಬಿಡುತ್ತವೋ ಎನ್ನುವ ಭೀತಿ ನನಗಾಗುತ್ತಿದೆ. ಮುಚ್ಚಿ ಮಲಗಿರುವ ಚೆಲುವಿನ ಮುದ್ದೆಯನ್ನು ಅಪ್ಪಿ ಮುದ್ದಾಡಲು ಮೈಮನಗಳು ತಹ ತಹಿಸುತ್ತಿವೆ. ನನಗೆ ದೊರೆತಿರುವ ಸಂತೋಷಾಧಿಕ್ಯದಿಂದ ಮೂರ್ಛೆ ಬೀಳುವಂತಾಗಿದೆ. ಇವಳನ್ನು ಎಬ್ಬಿಸಿ ಬಿಡಲೇ ಹೇಗೆ!..... ಅಯ್ಯೋ ಬೇಡ ಬೇಡ..... ಇನ್ನೂ ನನ್ನೆರಡು ಕಣ್ಣುಗಳು ಈ ಸೌಂದರ್ಯ ದೇವತೆಯ ಸೌಂದರ್ಯಾನುಭೂತಿಯನ್ನು ಪಡೆದು ತಣಿದಿಲ್ಲ. ನನ್ನ ತುಡಿವ ಮನಸ್ಸು ಇನ್ನೂ ಹದಕ್ಕೆ ಬಂದಿಲ್ಲ. ಪ್ರೇಮ ಶರಧಿಯ ದಂಡೆಗಳ ದರ್ಶನವಷ್ಟೇ ಸಾಲದು. ಅದರ ಆಳ

ವಿಸ್ತಾರಗಳ ಅನುಭವವನ್ನು ಪಡೆದಲ್ಲದೆ ಬದುಕಿಗೆ ಅರ್ಥವಿಲ್ಲ. ಬದುಕಿಯೂ ಸಾರ್ಥಕವಿಲ್ಲ (ಪ್ರಕಟ) ದೇವತೆಗಳೇ ನಿಮ್ಮ ಈ ಕೃಪೆಗಾಗಿ ನನ್ನ ಅನಂತ ವಂದನೆಗಳು. ಆದರೆ ಈ ಅಮೂಲ್ಯ ರತ್ನವು ದರ್ಶನ ಮಾತ್ರಕ್ಕಷ್ಟೇ ಅಲ್ಲದೆ ನನ್ನೆದೆಯ ಪದಕವಾಗಿ ಶಾಶ್ವತವಾಗಿ ನನ್ನೊಂದಿಗೆ ಇರುವಂತೆ ಅನುಗ್ರಹಿಸು (ಎಂದು ಹೇಳುತ್ತಿರುವಾಗ ಕುರಂಗಿ ನಿದ್ದೆಯಲ್ಲಿ ಬಡಬಡಿಸುತ್ತಾಳೆ.)

**ಕುರಂಗಿ :** (ಬಡಬಡಿಕೆ) ನೀವೆಷ್ಟು ನಿರ್ದಯರು. ಈ ಅಭಾಗ್ಯಳ ಪ್ರೀತಿಯು ನಿಮ್ಮನ್ನು ಕರಗಿಸಲಿಲ್ಲವೇ? ನಿಮ್ಮ ಮಧುರಾಲಿಂಗನ ಸ್ಪರ್ಶವಿಲ್ಲದೆ ಜೀವನವೊಂದು ಮರುಭೂಮಿಯಾಗಿದೆ. ನಿಮ್ಮ ಪ್ರೀತಿಯಮೃತ ಸಿಂಚನದಿಂದ ನಗುವ ನಂದನವಾಗಿಸಬಾರದೇ?.... ಏನು ನಗುತ್ತಿದ್ದೀರಿ! ಏಕೆ ನನ್ನ ಭಾವನೆಗಳಿಗೆ ಅರ್ಥವಿಲ್ಲವೇ?.... ನನ್ನ ಮಾತುಗಳು ಕೇವಲ ಅಸಂಬದ್ಧ ಪ್ರಲಾಪವೆನಿಸುತ್ತಿದ್ದೆಯೇ?... ಬೇಡ....ಬೇಡ.... ಇನ್ನು ನನ್ನಿಂದ ಸಹಿಸಿಕೊಳ್ಳಲು ಸಾಧ್ಯವಿಲ್ಲ... ಬನ್ನಿ ನಿಮ್ಮ ಪ್ರೇಮ ಸಂಜೀವಿನಿಯಿಂದ ನನ್ನನ್ನು ಬದುಕಿಸಿ.... ನನ್ನನ್ನು ಬದುಕಿಸಿ... ನಿಲ್ಲಿ...... ನಿಲ್ಲಿ.... ನನ್ನನ್ನು ತೊರೆದು ಎಲ್ಲಿಗೆ ಹೊರಟಿರಿ?.... ಇಗೋ ನಾನೂ ಬಂದೆ.... ನಾನೂ ಬಂದೆ (ಎಂದೂ ಕೈಚಾಚಿ ನಿದ್ದೆಯಿಂದ ಗಾಭರಿಗೊಂಡು ಏಳುತ್ತಾಳೆ. ಎದುರಿಗೆ ನಿಂತ ಅವಿಮಾರಕನ ಕೈಯಲ್ಲಿ ಕೈ ಇರುವುದನ್ನು ನೋಡಿ ಹೌಹಾರಿ ಛಂಗನೆ ಮಲಗಿದ್ದ ಎಡೆಯಿಂದ ಎದ್ದು ನಿಲ್ಲುತ್ತಾಳೆ.) ನಳಿನಿಕಾ, ಮಧೂಲಿಕಾ.... ಏನೇ ಇದು?.... ಯಾರೇ ಈತ! (ಎಂದು ಸುತ್ತಲೂ ನೋಡುತ್ತಾಳೆ)

**ಅವಿಮಾರಕ:** ಸುಂದರಿ. ಗಾಭರಿ ಬೇಡ. ನಾನು...... ನಾನು..... ನನ್ನ ಗುರುತು ಹತ್ತಲಿಲ್ಲವೇ? ನೀವು ಕನವರಿಸುತ್ತಿದ್ದ ನಿಮ್ಮ ಪ್ರಣಯರಾಜ. ನೀವು ಹಂಬಲಿಸುತ್ತಿದ್ದ ಸಂಜೀವಿನಿಯನ್ನು ನಿಮಗಾಗಿ ತಂದಿದ್ದೇನೆ..... ಬೇಡವೆನ್ನುವಿರೇನು?

**ಕುರಂಗಿ :** (ನಾಚಿಕೆಯಿಂದ) ಛಿ! ಛಿ! ನೀವು ಬಂದದ್ದೇ ತಿಳಿಯಲಿಲ್ಲ. ಅಷ್ಟಕ್ಕೂ ಈ ಇಬ್ಬರು ದುಷ್ಟೆಯರು ಎಲ್ಲಿ ಹಾಳಾಗಿ ಹೋದರು.

**ಅವಿಮಾರಕ:** ಅವರ ಮೇಲೆ ಸಿಟ್ಟುಗೊಳ್ಳಬೇಡಿ ರಾಜಕುಮಾರಿ. ಇಂತಹ ಅಮೃತಘಳಿಗೆಗಾಗಿ ಅವರೆಷ್ಟು ಶ್ರಮಿಸಿದ್ದಾರೆ. ಗೊತ್ತೇನು? ನಮ್ಮ ಏಕಾಂತಕ್ಕೆ ಭಂಗಬರಬಾರದೆಂದು ಜಾಣ ನೆಪಗಳನ್ನು ಹೇಳಿ ಇಲ್ಲಿಂದ ಮರೆಯಾದರು... ಬನ್ನಿ ರಾಜಕುಮಾರಿ ತಣ್ಣನೆಯ ಈ ಸುಂದರ ರಾತ್ರಿಯಲ್ಲಿ ಕಾಮನಬಿಲ್ಲು ಕನಸುಗಳನ್ನು ಹೆಣೆಯೋಣ. ಮೈಮರೆತು ಮುಗಿಲ ವಿಹಂಗಮಗಳಾಗಿ ನಕ್ಷತ್ರಲೋಕಗಳನ್ನು ಸುತ್ತಿ ಬರೋಣ... ಇಂದಿಗೆ ನಮ್ಮ ಕಷ್ಟಗಳು ಪರಿಹಾರವಾದವು.

ಕುರಂಗಿ : ಕ್ಷಮಿಸಬೇಕು. ಕೂಡಲೇ ಗುರುತು ಹತ್ತಲಿಲ್ಲ. ಅಪರಾಧ ಮನ್ನಿಸಬೇಕು.

ಅವಿಮಾರಕ: ಸಾಕು ಸಾಕು! ಪ್ರೇಮಿಗಳ ನಡುವೆ ಅಪರಾಧ... ಕ್ಷಮೆ ಇತ್ಯಾದಿಗಳು ಬರಬಾರದು. ಹಾಗೆ ನೋಡಿದರೆ ಇಬ್ಬರೂ ಅಪರಾಧಿಗಳೇ. ಅಪರಾಧ ಶಿಕ್ಷೆಯನ್ನು ಇಬ್ಬರೂ ಹಂಚಿಕೊಳ್ಳೋಣ.

ಕುರಂಗಿ : ನನ್ನ ಅಸಂಬದ್ಧ ಪ್ರಲಾಪವನ್ನು ನೀವು ಕೇಳಿಸಿಕೊಳ್ಳಲಿಲ್ಲ ತಾನೇ?

ಅವಿಮಾರಕ: ಆಪ್ತವೆನಿಸುವ ಮಾತುಗಳು ಅಸಂಬದ್ಧವಾಗಿದ್ದರೇನಂತೆ.... ಎಷ್ಟು ಬೇಕಾದರೂ ಕೇಳಿಸಿಕೊಳ್ಳುತ್ತೇನೆ.

ನಳಿನಿಕಾ : (ಅವಿತುಕೊಂಡ ಎಡೆಯಿಂದ ಬಂದು) (ನಗುತ್ತಾ) ತಾವೇನೂ ಅಂಥಾದ್ದು ಮಾತಾಡಲಿಲ್ಲ ರಾಜಕುಮಾರಿ.

ಕುರಂಗಿ : ಅಬ್ಬಬ್ಬಾ ಇನ್ನೂ ನೀವಿಲ್ಲೇ ಇದ್ದೀರಾ? ಬೆನ್ನುಬಿದ್ದ ಬೇತರಗಳಂತೆ!

ಮಧೂಲಿಕಾ: ಸಿಟ್ಟಾಗಬೇಡಿ. ನಿಮ್ಮ ಆತುರ ನಮಗೆ ಅರ್ಥವಾಗುತ್ತದೆ. ನಳಿನಿಕಾ ವಿಚಾರ ನಿಮಗೆ ಗೊತ್ತಿರುವುದೇ ತಾನೇ? ನಾವಿನ್ನು ಬರುತ್ತೇವೆ. ಶುಭರಾತ್ರಿ..... ಮಧುರಾತ್ರಿ.... ನಡೆಯೇ ನಳಿನಿಕಾ..... ನಿನ್ನ ತುಂಟತನ ಯಾವಾಗಲೂ ಇದ್ದದ್ದೆ! ನಾವು ತಡಮಾಡಿದಷ್ಟೂ ಹೊತ್ತು ಕಳೆದು ಹೋಗಿ ಸಿಕ್ಕಿರುವ ಅವಕಾಶ ಜಾರಿ ಹೋದೀತು.

ನಳಿನಿಕಾ : ಆಯ್ತು ತಾಯಿ (ವ್ಯಂಗ್ಯ) ನೀನು ಬಹಳ ಸಾಚಾ, ನಾನೊಬ್ಬಳೇ ನಿಮಗೆ ಆಡಿಕೊಳ್ಳಲಿಕ್ಕೆ!! ಇರಲಿ ಗೆಳತಿಯರಿಗಲ್ಲದೆ ಆಡಿಕೊಳ್ಳುವ ಹಕ್ಕು ಯಾರಿಗಿದ್ದೀತು! ಬರುತ್ತೇವೆ.... ಸಖಿ.... ರಾಜಕುಮಾರರೇ ನಮಸ್ಕಾರ (ನಿಷ್ಕ್ರಮಿಸಲು ಉದ್ಯುಕ್ತರಾಗುತ್ತಾರೆ)

ಅವಿಮಾರಕ: ಯುವತಿಯರೇ ನಿಮಗೆ ನನ್ನ ಧನ್ಯವಾದಗಳು! ಯಾವ ಜನ್ಮದ ಪುಣ್ಯವೋ ನನ್ನ ಜೀವನಾಭಿಲಾಶೆ ನನಗೆ ಲಭಿಸುವಂತೆ ಸಹಕರಿಸಿದ್ದೀರಿ. ನಿಮ್ಮುಪಕಾರಕ್ಕೆ ನಾನು ಋಣಿ. (ಮಧೂಲಿಕಾ, ನಳಿನಿಕಾ ಇಬ್ಬರೂ ಹೊರಡುತ್ತಾರೆ). ( ಕುರಂಗಿ ಮೌನವಾಗಿ ತಲಬಾಗಿ ಕೂತಿದ್ದಾಳೆ.)

ಅವಿಮಾರಕ: ಪ್ರಿಯೇ ಇನ್ನೂ ನಾಚಿಕೆಯ ಮುಸುಕನ್ನು ಸರಿಸಿ.... ನಿನ್ನ ಚಂದ್ರಮುಖ ದರ್ಶನ ಭಾಗ್ಯವನ್ನು ಕರುಣಿಸು. ಅಪತ್ತುಗಳನ್ನು ಹಾಯುತ್ತಾ ನಿನ್ನ ಪ್ರೇಮಸಾಕ್ಷಾತ್ಕಾರಕ್ಕಾಗಿ ತಪಿಸಿ ಬಂದಿದ್ದೇನೆ. ನನ್ನೊಲಿವಿನ ಪುಷ್ಪಾಂಜಲಿಯನ್ನು ಸ್ವೀಕರಿಸಿ ಅನುಗ್ರಹಿಸು. (ಭಕ್ತನಂತೆ ಮೊಳಕಾಲೂರಿ ಪ್ರಾರ್ಥಿಸುತ್ತಾನೆ)

ಕುರಂಗಿ : ಹೀಗೆ ಅತಿವಿನಯವನ್ನು ತೋರಿ ನನ್ನನ್ನು ನಾಚಿಸಬೇಡಿ. ಸಣ್ಣವಳಾಗಿಸಬೇಡಿ. ನಾನು ನಿಮ್ಮ ಆರಾಧಕಳು. ದಾಸಿ. ನನ್ನ ಪ್ರಾಣಾಂತಿಕ ವೇದನೆಗೆ

ಪರಿಹಾರವೇ ಇಲ್ಲವೆಂದು ನಿರಾಶೆ, ಹತಾಶೆಗಳಿಂದಿದ್ದು, ಮರಣವೇ ಶರಣೆನ್ನುವ ನಿಲುವಿಗೆ ತಲುಪಿದ್ದ ನನಗೆ ಇಂದು ನಿಮ್ಮ ಅನುಗ್ರಹ ದರ್ಶನಗಳಿಂದ ಕೃತಾರ್ಥಳೆನಿಸಿದೆ. ನನ್ನ ವಿವಾಹದ ಪ್ರಯತ್ನಗಳು ತೀವ್ರಗತಿಯಲ್ಲಿ ನಡೆಯುತ್ತಿವೆ. ಒಂದು ವೇಳೆ ತಮ್ಮಾಗಮನ ಪೂರ್ವದಲ್ಲಿಯೇ ವಿವಾಹ ನಿಷ್ಕರ್ಷೆಯಾಗಿ ಬಿಟ್ಟಿದ್ದರೆ ಒಂದು ದೊಡ್ಡ ಅನಾಹುತವೇ ನಡೆದು ಹೋಗುತ್ತಿತ್ತು. ಭಗ್ನ ಪ್ರಣಯಿಗಳಾಗಿ, ಹಿರಿಯರ ಮಾತನ್ನು ಮೀರಲಾರದೆ, ತಮ್ಮನ್ನು ಮರೆಯಲೂ ಆಗದೆ ನಾನು ಸಾಯುತ್ತಿದ್ದೆ. ನಿಮ್ಮನ್ನೆಲ್ಲಾ ಸಾವಿಗೆ ದೂಡುತ್ತಿದ್ದೆ.

**ಅವಿಮಾರಕ:** ಪ್ರಿಯೆ ಸದ್ಯಕ್ಕೆ ಹಾಗೇನೂ ಆಗಲಿಲ್ಲವಲ್ಲ. ಆಗದಿದ್ದನ್ನು ಆಗಿದಿದ್ದರೆ! ಎಂದು ಆಲೋಚಿಸಿ ಮನಸ್ಸಿನ ನೆಮ್ಮದಿಯನ್ನು ಕಳೆದುಕೊಂಡು ಅಮೂಲ್ಯವಾದ ಮಧುರ ಕ್ಷಣಗಳನ್ನು ಆಸ್ವಾದಿಸದೆ ಹಾಳು ಚೆಲ್ಲುವುದು ಮೂರ್ಖರ ಲಕ್ಷಣ. ಬಾ ಪ್ರಿಯೆ.... ನಿನ್ನ ಅಧೀರತೆಯನ್ನು ಮರೆತು ನಿನ್ನ ನಳಿತೋಳುಗಳಿಂದ ನನ್ನನ್ನು ಬಳಸಿ ಅಗ್ನಿಸ್ನಾನಾನಂತರದ ಶೀತಲ ಸಿಂಚನವನ್ನು ಮಾಡು.

**ಮಧೂಲಿಕಾ:** ರಾಜಕುಮಾರಿ, ಶಯ್ಯಾಲಂಕಾರ ಪೂರ್ತಿಗೊಂಡಿದೆ. ರಾತ್ರಿ ಕಳೆಯಲು ಹೆಚ್ಚುಕಾಲ ಉಳಿದಿಲ್ಲ. ತಾವಿಬ್ಬರೂ ತ್ವರೆ ಗೊಳ್ಳಬೇಕು. (ಅವಿಮಾರಕನಿಗೆ) ತಾವು ಅಲ್ಲಿಗೆ ದಯ ಮಾಡಿಸೋಣವಾಗಲಿ.

**ಅವಿಮಾರಕ:** (ಕುರಂಗಿಗೆ) ರಾಜಕುಮಾರಿ..... ಇನ್ನು ಹೊರಡೋಣವೇ.

**ಕುರಂಗಿ :** ತಮ್ಮಿಚ್ಛೆ ಸ್ವಾಮಿ.

**ಅವಿಮಾರಕ:** ಸ್ವಾಮಿ, ಅಪ್ಪಣೆ ಮುಂತಾದವುಗಳನ್ನು ಬಳಸಿ ಮರ್ಯಾದೆಯ ಮೂಲಕ ನನ್ನನ್ನು ದೂರಮಾಡಬೇಡಿ.

**ಕುರಂಗಿ :** (ನಾಚಿ) ಹಾಗಾದರೆ ತಮ್ಮನ್ನು ಹೇಗೆಂದು ಸಂಬೋಧಿಸಲಿ?

**ಅವಿಮಾರಕ:** ಇದ್ದೇ ಇದೆಯಲ್ಲ!! (ನಗುತ್ತಾ) ಹೃದಯೇಶ್ವರ! ಪ್ರಾಣೇಶ್ವರ.... ಪ್ರಾಣಕಾಂತ.... ಇತ್ಯಾದಿ ಇತ್ಯಾದಿ.... ಏನೇ ಆದರೂ ಸರಿ!

**ಕುರಂಗಿ :** ಅನುಗ್ರಹಿಹೀತಳಾದೆ.

**ಮಧೂಲಿಕಾ:** ಅಬ್ಬ! ತ್ವರೆ ಮಾಡಿ.... ಎಣ್ಣೆ ಬಂದಾಗ ಕಣ್ಣು ಮುಚ್ಚಿಕೊಂಡರೆಂಬಂತೆ ಆಗದಿರಲಿ! (ಎಂದು ದಾರಿ ತೋರಿಸುವಳು.... ನಿಷ್ಕ್ರಮಿಸುವಳು)

○○

# ಅಂಕ – ೨

## ದೃಶ್ಯ – ೧

### (ಒಂದು ವರುಷದ ಅಂತರ)

(ಬೆಳಗಿನ ಹೊತ್ತು, ಪ್ರಾತಃಕಾರ್ಯಗಳಲ್ಲಿ ತೊಡಗಿ ಓಡಾಡುತ್ತಿರುವುದರಿಂದ ಎಲ್ಲೆಲ್ಲೂ ಅರಮನೆಯಲ್ಲೂ ಗುಜುಗುಜು ಗಲಿಬಿಲಿ. ರಾಜಕುಮಾರಿಯ ಅಂತಃಪುರದ ಕೆಲಸದಲ್ಲಿರುವ ಇಬ್ಬರು ಸೇವಕಿಯರು ಕೈಯಲ್ಲಿ ಒಂದು ಬುಟ್ಟಿಯನ್ನು ಹಿಡಿದು ಆತುರಾತುರದಿಂದ ರಾಜಕುಮಾರಿಯ ಶಯ್ಯಾಗೃಹದತ್ತ ಸರಿಯುತ್ತಿದ್ದಾರೆ. ಅವರಿಗೆ ಸರಿಯಾಗಿ ಎದುರಿಗೆ ನಳಿನಿಕಾ ಬರುತ್ತಾಳೆ. ಬಂದವಳೇ ವಿಲಾಸಿನಿಯನ್ನು ನಿಲ್ಲಿಸಿ)

ನಳಿನಿಕಾ : ಏಯ್ ವಿಲಾಸಿನಿ, ಇಷ್ಟೊಂದು ಆತುರವಾಗಿ ಹೀಗೇಕೆ ಓಡುತ್ತಿದ್ದೀಯ? ಆ ಬುಟ್ಟಿಯಲ್ಲಿ ಏನಿದೆ?

ವಿಲಾಸಿನಿ : ನಳಿನಿಕಾ. ಆಗಲೇ ಸೂರ್ಯ ನೆತ್ತಿಗೇರಿದ್ದಾನೆ. ರಾಜಕುಮಾರಿಯ ಶಯ್ಯಾಗೃಹದ ಬಾಗಿಲೇ ತೆಗೆದಿಲ್ಲ. ಆಕೆಯನ್ನು ಎಬ್ಬಿಸಿ ಸಿಂಗರಿಸಬೇಕು. ಇನ್ನೂ ಆಕೆ ಎದ್ದು ಸ್ನಾನಾಹ್ನಿಕಗಳನ್ನು ಮುಗಿಸಿ ಅಲಂಕಾರ ಮುಗಿಸುವುದು ಯಾವಾಗ? ಮಹಾರಾಣಿಯವರು ರಾಜಕುಮಾರಿಯನ್ನು ತಮ್ಮ ಸಂಗಡ ಮಧುಕೇಶ್ವರ ಮಂದಿರಕ್ಕೆ ಕರೆದೊಯ್ಯುವವರಿದ್ದಾರೆ.

ನಳಿನಿಕಾ : ಅದೆಲ್ಲಾ ಇರಲಿ ರಾಜಕುಮಾರಿಗೆ ಸದ್ಯಕ್ಕೆ ಯಾವ ಅಲಂಕಾರವು ಬೇಕಿಲ್ಲ. ಆಕೆಗೆ ಮೈಸ್ವಸ್ಥವಿಲ್ಲ. ಇನ್ನು ಮೇಲೆ ಹೀಗೆಲ್ಲಾ ಹೂವು ಗೀವು ಅಂತ ಬಂದು ಎಬ್ಬಿಸಿ ಅವರಿಗೆ ತೊಂದರೆ ಕೊಡಬೇಡ.

ವಿಲಾಸಿನಿ : ಇದ್ಯಾಕೆ ನಳಿನಿಕಾ ಹೀಗೆಲ್ಲಾ ಒರಟಾಗಿ ಮಾತಾಡುತ್ತಿ? ನಾನೇನು ನನಗಾಗಿ ಬಂದೆನೇ? ಮಹಾರಾಣಿಯವರ ಆಜ್ಞೆಯನ್ನಷ್ಟೇ ಪಾಲಿಸುತ್ತಿದ್ದೇನೆ. ನನ್ನ ಮೇಲೆ ಸಿಟ್ಟಾದರೆ ನಾನೇನು ಮಾಡಲಿ?.... ಈಗ ನಾನು ಮಹಾರಾಣಿಯವರಿಗೆ ಏನೆಂದು ತಿಳಿಸಲಿ?

ನಳಿನಿಕಾ : ಅದರ ವಿಚಾರವೆಲ್ಲಾ ನನಗೆ ಬಿಟ್ಟುಬಿಡು. ಆದರೆ ನೀನು ಮಾತ್ರ ಕುರಂಗಿಯ ಅಸ್ವಸ್ಥೆಯ ಬಗ್ಗೆ ಯಾರಲ್ಲಿಯಾದರೂ ಬಾಯಿ ಬಿಟ್ಟೀಯೇ?

ಜೋಕೆ!.... ಅಲ್ಲದೆ ರಾಜಕುಮಾರಿಗೆ ಇನ್ನು ಹೂವು – ಗೀವು ಏನೂ ಬೇಕಿಲ್ಲ... ತಿಳಿಯಿತಾ?

**ವಿಲಾಸಿನಿ** : ವಿಚಿತ್ರವಾಗಿ ಮಾತಾಡುತ್ತಿದ್ದಿಯಲ್ಲೇ ನಳಿನಿಕಾ! ರಾಜಕುಮಾರಿಗೆ ಏನಾದರೂ (ಶಂಕೆ ವ್ಯಕ್ತಪಡಿಸುವಳು)

**ನಳಿನಿಕಾ** : ಛಿ! ಛಿ! ಅಂತಾ ಅನುಮಾನಗಳಿಗೆ ಅವಕಾಶವೇ ಇಲ್ಲ. ನಾ ಹೇಳಿದ್ದು ಇಷ್ಟೇ! ನಮ್ಮ ರಾಜಕುಮಾರಿಯೇ ಒಂದು ಸುಂದರ ಹೂವಾಗಿರುವಾಗ ಅವಳಿಗೆ ಬೇರೆ ಹೂಗಳ ಅಗತ್ಯವಾದರೂ ಯಾಕೆ ಬೇಕು... ಎಂದೆ. ಅವಳಿಂದ ಹೂವಿಗೆ ಸಿಂಗಾರವೇ ಹೊರತು ಹೂವಿಂದ ಅವಳಿಗೆಂತಹ ಸಿಂಗಾರ!!

**ವಿಲಾಸಿನಿ** : (ಅರ್ಥವಾದಂತೆ) ಓ ಹಾಗೋ... ನೀನು ಮಾತಿನಲ್ಲಿ ಬಲುಜಾಣೆ. ನನಗೆ ಇದೆಲ್ಲಾ ಹೊಳೆಯುವುದೇ ಇಲ್ಲ.... ಆಮೇಲೆ ಇನ್ನೊಂದು ವಿಷಯ... (ಎಂದು ಹತ್ತಿರ ಬಂದು ಗುಟ್ಟಾಗಿ ಏನನ್ನೋ ಹೇಳುವಳು)

**ನಳಿನಿಕಾ** : ಬಾಯ್ಮುಚ್ಚು ಯಾರ ಯಾರನ್ನೋ ರಾಜಕುಮಾರಿಯ ಗಂಡ ಮಾಡಲು ಹೊರಟಿದ್ದೀಯಲ್ಲ. ಅವಳಿಗೆ ಕಾಮದೇವನೇ ಗಂಡ. ಆಗಲೇ ಅವನನ್ನು ವರಿಸಿಯಾಗಿದೆ.

**ವಿಲಾಸಿನಿ** : (ಹೌಹಾರಿ) ಹಾಂ! ಏನಂದೆ ರಾಜಕುಮಾರಿ ಆಗಲೇ ಗಂಡನನ್ನು ವರಿಸಿಬಿಟ್ಟಿದ್ದಾಳೆಯೇ?...... ನೀನು ಹೇಳ್ತಿರೋದು ನಿಜವೇನೇ.... ನಳಿನಿ?

**ನಳಿನಿಕಾ** : ಅಯ್ಯೊ..... ಪೆದ್ದು!..... ಕಾಮದೇವನನ್ನು ಅಂದರೆ..... ಕಾಮದೇವನೇ ಅಲ್ಲ..... ಕಾಮದೇವನಂತಹವನನ್ನು ಅಂತ ಅರ್ಥ.... ಮನಸ್ಸಿನಲ್ಲಿ ಕಾಮದೇವನಂತಹ ಯುವಕನನ್ನು ಕಲ್ಪಿಸಿಕೊಂಡು ವರಿಸಿದ್ದಾಳೆ ಅಂದೆ.... ನೀನೊಂದು ಕೆಲಸ ಮಾಡು.... ಹೇಗೂ ರಾಜಕುಮಾರಿಯನ್ನು ನೋಡಲು ನಾನು ಹೋಗುವವಳಿದ್ದೇನೆ. ನಾನೇ ಈ ಹೂವಿನ ಬುಟ್ಟಿಯನ್ನು ಕೊಂಡೊಯ್ದು ಅವಳ ಪರಿಸ್ಥಿತಿ ಹೇಗಿದೆ ಅಂತ ನೋಡಿದ ಮೇಲೆ ಯಾವುದನ್ನೂ ನಿನಗೆ ತಿಳಿಸುತ್ತೇನೆ. ಬೇರೆ ಕೆಲಸವೇನಾದರೆ ಇದ್ದರೆ ನೀನು ನೋಡ್ಕೊ ಹೋಗು. ಇಲ್ಲಿ ನಿನ್ನ ಪ್ರಿಯನೊಬ್ಬ ಇದ್ದಾನಲ್ಲ! ಕೃಶಸೇನ!! (ವೃಷಸೇನ ಎಂಬುದಕ್ಕೆ ಬದಲಾಗಿ ಕೀಟಲೆಗಾಗಿ) ಅವನೊಟ್ಟಿಗೆ ಸರಸವಾಡಿ ಬಾ.

**ವಿಲಾಸಿನಿ** : ನಳಿನೀ.... ಕೃಶಸೇನ.... ಕೇಶಸೇನ ಎಂದು ನನ್ನನ್ನು ಯಾಕೆ ಗೋಳಾಡಿಸುತ್ತಿ? ಎಷ್ಟು ಸಲ ನಿನಗೆ ತಿದ್ದಿ ಹೇಳಬೇಕು ಅವನು 'ವೃಷಸೇನ' ಅಂತ ......... ನಿನಗೆ ಸಮಯ ಸಂದರ್ಭ ಒಂದೂ ಗೊತ್ತಾಗೋದೇ ಇಲ್ಲ. ಯಾವಾಗಲೂ ಚೇಷ್ಟೆಯೇ!!

ನಳಿನಿಕಾ : ಇನ್ನೇನು ಯಾವಾಗಲೂ ಗಡಿಗೆಮೋರೆ ಹಾಕಿಕೊಂಡು ಪ್ರಪಂಚಾನೇ ತಲೆ ಮೇಲೆ ಬಿದ್ದಿದೆ ಅಂತ ಅಳ್ತಾ ಕೂರಬೇಕೇನು?

ವಿಲಾಸಿನಿ : ಅವಮ್ಮಾ ತಾಯಿ.... ನಿನಗೆ ಬಾಯಿಕೊಟ್ಟು ನಿನ್ನನ್ನು ಗೆಲ್ಲೋದು ನಮಗಂತೂ ಸಾಧ್ಯವಿಲ್ಲ.... ನಾನಿನ್ನು ಬರ್ತೇನೆ.

ನಳಿನಿಕಾ : (ನಗು) ಹೋಗು ಹೋಗು... ಕೃಶಸೇನ ಕಾದಿರಬೇಕು.

ವಿಲಾಸಿನಿ : (ಬುಟ್ಟಿಯನ್ನು ಅವಳ ಕೈಗೆ ಕೊಡುತ್ತಾ) ತಗೋ ಹಾಗಾದರೆ ಬಹಳ ಉಪಕಾರವಾಯ್ತು. ಮಹಾರಾಣಿಯವರಿಗೆ ಉತ್ತರ ಕೊಡೋ ಹೊಣೆ ಮಾತ್ರ ನಿಂದು (ಎಂದು ಗೆಲುವಿನಿಂದ ಹೋಗುವಳು)

ನಳಿನಿಕಾ : (ನಿರಾಳವಾಗಿ) ಸದ್ಯ ಇಲ್ಲಿಂದ ಕದಲಿದಳು....... ಅಂತೂ ಇಂತೂ ರಾಜಕುಮಾರಿಯ ಗಾಂಧರ್ವ ವಿವಾಹವಾಗಿ ಒಂದು ವರ್ಷ ಕಳೆದು ಹೋಯಿತು. ಮಹಾರಾಜರಿಗೆ ಇಲ್ಲಿಯವರೆಗೆ ಸುಳಿವು ಸಿಕ್ಕಿಲ್ಲ ನಿಜ. ಆದರೆ ಕದ್ದು ಕದ್ದು ನಡೆಯುತ್ತಿರುವ ಈ ವ್ಯವಹಾರ ಎಲ್ಲಿವರೆಗೆ ಮರೆಯಾಗಿರಲು ಸಾಧ್ಯ? ಒಂದಲ್ಲ ಒಂದು ದಿನ 'ಅಳಿಯನ ಕುರುಡು ಬೆಳಗಾದ ಮೇಲೆ' ಅನ್ನೋ ಹಾಗೆ ತಿಳಿದೇ ತಿಳಿಯುತ್ತೆ! ಸುದ್ದಿ ಸಿಡಿಯೋಕೆ, ಕಂಪು ಹರಡೋಕೆ ಎಷ್ಟು ಹೊತ್ತು ಬೇಕು! ಯಾರ ಅಡ್ಡಿ ಬೇಕು? ಇನ್ನೆಷ್ಟು ದಿನ ಹೆದರಿ ಹೆದರಿ ಬದುಕಬೇಕೋ... ದೇವರೇ ಬಲ್ಲ. ನಮಗಂತೂ ದಿನಾ ಜನನಾ ಮರಣಾ! ಅಪಾಯದ ಗಂಟೆಯನ್ನು ಬೆನ್ನಿಗಿಟ್ಟುಕೊಂಡೇ ಓಡಾಡುತ್ತಿದ್ದೇವೆ. ಯಾವ ಕ್ಷಣ ಗುಟ್ಟು ರಟ್ಟಾಗುತ್ತದೆಯೋ ಅದೇ ಕ್ಷಣ ನಮ್ಮ ತಲೆಗಳು ಹಾರಿ ಹೋಗುತ್ತವೆ.... ಇರಲಿ ನಮಗೆ ನಮ್ಮ ಬದುಕಿಗಿಂತ ಹೆಚ್ಚಾಗಿ ನಮ್ಮ ಗೆಳತಿ ಕುರಂಗಿಯ ಸುಖವೇ ಮುಖ್ಯ. ಅವಳ ಆ ಸುಖ ಸಂತೋಷಗಳ ಮುಂದೆ ನಮ್ಮ ಬದುಕಿನ ಬೆಲೆ ಏನಿದೆ?.... ಅವಳಿಗಾಗಿ ಆತ್ಮತ್ಯಾಗದ ಅದೃಷ್ಟವಾದರೂ ನಮ್ಮ ಪಾಲಿಗೆ ಲಭಿಸಿದೆ ಎಂದು ಸಂತೋಷಪಡುತ್ತೇವೆ. (ಅಷ್ಟರಲ್ಲಿ ಹೊರಗಡೆ ಗಲಭೆಯಾಗುತ್ತದೆ ಕಳ್ಳ.... ಕಳ್ಳ....... ಹಿಡಿದುಕೊಳ್ಳಿ...... ಎಷ್ಟು ಧೈರ್ಯ!..... ಸಿಗಲಿ ಬಡ್ಡೀ ಮಗ...... ಅವನ ಚರ್ಮ ಸುಲಿಸಿ ಶೂಲಕ್ಕೆ ಏರಿಸಿ ಪಾಠ ಕಲಿಸೋಣ..... ಎನ್ನುವ ಮಾತುಗಳು........ ರಕ್ಷಣಾ ಭಟರ ಗಲಿಬಿಲಿಯ ಓಡಾಟದ ಸದ್ದು....ಆಯುಧಗಳ ಸದ್ದು) (ಬೆಚ್ಚಿದ ನಳಿನಿ) ಅಯ್ಯೋ ದೇವರೇ ಮುಗೀತು ಕತೆ.... ನಾಳೆ ಎರಗುವ ಹದ್ದಿನ ಹೆದರಿಕೆ ಇವತ್ತೇ ಸಾಕ್ಷಾತ್ಕರಿಸಿತಲ್ಲ.... ಹೇಗಾದರೂ ತಲೆತಪ್ಪಿಸಿಕೊಂಡು ಓಡಿ ರಾಜಕುಮಾರಿಯನ್ನು ಎಚ್ಚರಿಸಬೇಕು ಎಂದು ಓಡುತ್ತಿರುವಷ್ಟರಲ್ಲಿ ಹೆದರಿ ಹೆದರಿ ಕಳ್ಳ ಹೆಜ್ಜೆಗಳಲ್ಲಿ ಹಿಂದು ಹಿಂದಕ್ಕೆ ಬರುತ್ತಿರುವ ಮಧೂಲಿಕಾಗೆ ನಳಿನಿಕಾ ಢಿಕ್ಕಿ

ಪೊಡೆಯುತ್ತಾಳೆ. ತಕ್ಷಣವೇ ಬೆಚ್ಚಿ ಅಯ್ಯೋಪ್ಪಾ ಎಂದು ಚೀರಿ ತಿರುಗಿ ನೋಡುತ್ತಾಳೆ. ಮರುಕ್ಷಣವೇ 'ನಳಿನಿಕಾ' ಎಂದು ತಿಳಿದ ಮೇಲೆ ದೀರ್ಘ ನಿಶ್ವಾಸದೊಂದಿಗೆ, ಅಮ್ಮಯ್ಯ.... ನೀನೇನಾ! ಯಾರೋ ಅಂತ ಹೆದರಿ ಪ್ರಾಣವೇ ಹೊರಟು ಹೋದಂತಿತ್ತು.

**ನಳಿನಿಕಾ :** ಮಧೂ..... ಏನೇ ಅದು ಹೊರಗೆ ಗಲಾಟೆ?

**ಮಧೂಲಿಕಾ:** ಸತ್ತೆವು ನಳಿನಿಕಾ ಮಹಾರಾಜರಿಗೆ ಹೇಗೋ ಸಂಶಯ ಬಂದಿದೆ. ಸದ್ಯಕ್ಕಂತೂ ಕುರಂಗಿ, ಅವಿಮಾರಕ ಯಾರ ಕಣ್ಣಿಗೂ ಬೀಳದಂತೆ ತಪ್ಪಿಸಿಕೊಂಡರು. ಆದರೆ ಇವತ್ತಲ್ಲ ನಾಳೆಯಾದರೂ ಮಹಾರಾಜರಿಗೆ ಇಲ್ಲಿವರೆಗೆ ನಡೆದಿರೋ ವಿಚಾರ ತಿಳಿದರೆ ನಾವು ಮುಖ ತೋರಿಸುವ ಹಾಗಿಲ್ಲ. ನಾವು ಮಾಡಿರುವ ಮಾಡುತ್ತಿರುವ ಕೆಲಸಕ್ಕೆ ಖಂಡಿತವಾಗಿಯೂ ಮಹಾರಾಜರು ಕ್ಷಮಿಸುವುದಿಲ್ಲ. ಈಗೇನು ಮಾಡುವುದೋ ನನಗೆ ಅರ್ಥವಾಗುತ್ತಿಲ್ಲ. ಮಹಾರಾಣಿಯವರಿಗೆ ಮುಖ ತೋರಿಸುವಂತಿಲ್ಲ. ಅವರೆಲ್ಲರ ಕಣ್ಣು ತಪ್ಪಿಸಿ ನಾವು ಹೀಗೆಲ್ಲಾ ರಾಜಕುಮಾರಿಗೆ ಸಹಕರಿಸಿದ್ದು ಮಹಾಪರಾಧವಾಗಿದೆ ಎನಿಸುತ್ತಿದೆ.

**ನಳಿನಿಕಾ :** ಮಧೂ...... ನೀನೇನೂ ಹೆದರಬೇಡ ದೇವರಿದ್ದಾನೆ. ನಾವು ಮಾಡಿದ್ದು ಒಳ್ಳೆಯ ಉದ್ದೇಶದಿಂದಲೇ. ಆದ್ದರಿಂದ ಫಲಾಫಲವೂ ಒಳ್ಳೆಯದೇ ಆಗುವುದೆಂಬ ಭರವಸೆ ನನಗಿದೆ. ಈಗ ಹೇಗಾದರಾಗಲಿ. ಎಲ್ಲಕ್ಕೂ ನಾವು ಸಿದ್ಧವಾಗಿರೋಣ. ಆದರೆ ನನಗಿರುವ ಚಿಂತೆಯೆಲ್ಲ ಅವರಿಬ್ಬರದೇ! ...... ಗುಟ್ಟಾಗಿ ಮದುವೆಯೇನೋ ಆಗಿಬಿಟ್ಟಿದ್ದಾರೆ ಆದರೆ ಜಯವರ್ಮನಿಗೆ ಕೊಡುವ ತೀರ್ಮಾನವಂತೂ ಮಾಡಿದ್ದಾಗಿದೆ. ಪಾಪ ಸೌವೀರ ರಾಜಕುಮಾರನಿಗೆಂದು ಮೀಸಲಾಗಿದ್ದ ಕುರಂಗಿಯನ್ನು ಈತನಿಗೆ ನಿಶ್ಚಯಿಸಿದ್ದು, ನಿಜವಾಗಿಯೂ ದುರದೃಷ್ಟ..... ಆದರೆ ಅವರೂ ಏನು ಮಾಡಿಯಾರು? ಮಹಾರಾಜರು ಪಾಪ ಪ್ರಯತ್ನಿಸಿ ಪ್ರಪಂಚವೆಲ್ಲ ಹುಡುಕಿಸಿದರೂ ಅವರ ಸುಳಿವೇ ಸಿಗಲಿಲ್ಲ... ಹೆಣ್ಣು ಮಕ್ಕಳನ್ನು ಎಷ್ಟು ಕಾಲವಂತ ಹೀಗೆ ಉಳಿಸಿಕೊಂಡಿರಲು ಸಾಧ್ಯ? ರಾಜ ಪರಿವಾರವೇ ಪತ್ತೆಯಾಗಿಲ್ಲ. ಮಹಾರಾಣಿಯವರಿಗೂ ತಮ್ಮ ಸೋದರನ ಚಿಂತೆ ಬಹಳವಾಗಿದೆ. ಏನು ವಿಧಿವಶವೋ, ಕಾಲವಶವೋ!! ಯಾರಿಗೆ ಯಾವಾಗ ಏನು ಬರುತ್ತದೆಯೋ ನಮ್ಮಂತಹ ಅಲ್ಪರಿಗೆ ತಿಳಿಯುವುದಾದರೂ ಹೇಗೆ? ಸೋದರಿಕೆಯಲ್ಲೇ ನೆಚ್ಚಿಕೆಯಿಟ್ಟುಕೊಂಡಿದ್ದ ಅವರಿಗೆ ಎಂತಹ ಆಘಾತ ಆಗಿರಬಹುದೆಂಬ ಕಲ್ಪನೆ ಬಹುಶಃ ನಿನಗಿಲ್ಲ. ಯಃಕಶ್ಚಿತರಾದ ನಮ್ಮಂಥವರ ಲೆಕ್ಕಾಚಾರಗಳೆಲ್ಲ ಹೇಗೆ ಅಸ್ತವ್ಯಸ್ತವಾಗುತ್ತವೆ...... ನೋಡಿದೆಯಾ?

**ಮಧೂಲಿಕಾ:** ನಳಿನಿಕಾ.... ನಳಿನಿಕಾ..... ನಿನ್ನ ವೇದಾಂತದ ಮಾತುಗಳಿಗೆ ಈಗ ಸಮಯವಲ್ಲ. ಅಪಿಮಾರಕನನ್ನೂ ಪತ್ತೆ ಹಚ್ಚಿ ರಾಜಕುಮಾರಿಯನ್ನು ಅವರೊಂದಿಗೆ ಕಳಿಸಿಕೊಡುವ ಏರ್ಪಾಡು ಮಾಡಬೇಕಾಗಿದೆ. ಆದಷ್ಟೂ ಬೇಗ ಬಹಳ ಜಾಗರೂಕತೆಯಿಂದ ಈ ಕೆಲಸ ಮಾಡಿ ಮುಗಿಸಬೇಕಾಗಿದೆ. ನೀನು ಮೊದಲು ಹೊರಡು. (ಕರೆದುಕೊಂಡು ಹೋಗುವಳು).

೦೦

# ದೃಶ್ಯ – ೨

(ಅವಿಮಾರಕ ಅವಿಶ್ರಾಂತನಾಗಿದ್ದಾನೆ. ಅವನ ಮನಸ್ಸಿನ ಉದ್ವಿಗ್ನತೆಯನ್ನೇ ಬಿಂಬಿಸುವಂತಿದೆ, ಅವನ ಸುತ್ತಲಿನ ನಿಸರ್ಗ. ಬೇಸಿಗೆಯ ಸಂಜೆ. ಗಾಳಿಯ ಸುಳಿವಿಲ್ಲ. ಹಕ್ಕಿಗಳ ಇಂಚರವಿಲ್ಲ. ಗಂಭೀರಮೌನ. ನಿರ್ಜೀವ ಮರಗಿಡ ಬಳ್ಳಿಗಳು. ದೂರಕ್ಕಷ್ಟು ಒಂದು ಬೆಟ್ಟದ ಕೋಡು ಕಾಣುತ್ತಿದೆ. ಅವಿಮಾರಕ ಚಡಪಡಿಕೆಯಲ್ಲಿಯೇ ಶತಪಥಿಸುತ್ತಿದ್ದಾನೆ. ದೈನ್ಯವಾಗಿ ಶೂನ್ಯ ಆಕಾಶದತ್ತ ಮೊಗವನ್ನು ಮಾಡಿ ತನ್ನಲ್ಲಿ ತಾನು ಮಾತನಾಡಿಕೊಳ್ಳುತ್ತಾನೆ)

**ಅವಿಮಾರಕ:** ಓ ದೇವರೇ! ಹೀಗೇಕೆ ಅನ್ಯಾಯ ಮಾಡಿದೆ? ಪ್ರೇಮಾರ್ತ ಹೃದಯಗಳಿಗೆ ಅಮೃತಸೇಚನದ ಒಂದು ಅಲ್ಪ ಅವಕಾಶವನ್ನೂ ಕಸಿದುಕೊಂಡೆಯಲ್ಲ! ನಿಜವಾಗಿಯೂ ನೀನು ನಿರ್ದಯಿ. ಅವಳ ಅನುಪಮ ಸೌಂದರ್ಯದ ಬಂಧಿಯಾದ ಈ ಮನಸ್ಸು ದಿಕ್ಕು ತಪ್ಪಿ ಜೀವನದ ಅರ್ಥವನ್ನೇ ಕಳೆದುಕೊಂಡಿರುವಾಗ, ಆ ಬಡಪಾಯಿ ಹೆಣ್ಣಿನ ಸ್ಥಿತಿಯೇನು? ನಶ್ವರವಾದ ಈ ಭೌತಿಕ ದೇಹಕ್ಕೆ ಒಗದಬಹುದಾಗಿದ್ದ ಅಪಾಯಗಳಿಂದ ನಾನೇನೋ ತಪ್ಪಿಸಿಕೊಂಡು ಬಂದೆ. ಆದರೆ ಕುರಂಗಿ.... ಕುರಂಗಿ..... ನನ್ನ ಪ್ರಾಣಕಾಂತೆ..... ಹೃದಯೇಶ್ವರಿ.... ಪರಿವಾರದವರ –ಪ್ರಜೆಗಳ ಅವಹೇಳನ... ತಂದೆ ತಾಯಿಗಳ ಕೋಪಾನಲ.... ಗೆಳತಿಯರ ಕಟಕಿ... ಇವುಗಳಿಂದ ಒದಗುವ ದುಃಖ ದುಮ್ಮಾನ ನಾಚಿಕೆಗಳನ್ನು ಸಹಿಸಿಕೊಂಡು ಹೇಗೆ ತಾನೇ ಬದುಕಬಲ್ಲಳು? ಅವಳನ್ನು ಸೇರಲೇಬೇಕೆಂಬ ನನ್ನ ಕಾಮಾತುರತೆಯ ಅವಿವೇಕ ದೃಷ್ಟಿಗೆ, ಮುಂದಿನ ಅಪಾಯಗಳು... ಆತಂಕಗಳು ಹೊಳೆಯಲೇ ಇಲ್ಲವಲ್ಲ!! ನನ್ನ ಭಾಗ್ಯಕ್ಕೆ ಅವಳಿಂದ ದೊರೆತ ಪ್ರೀತಿ, ಶಾಂತಿ, ಸಮಾಧಾನಗಳಿಗೆ ಚಿರಂತನವಾದ ವಿಯೋಗಮೂಲ ನೋವು......... ಅಪಮಾನಗಳೇ ನಾನು ನೀಡುವ ಬಳುವಳಿಯಾಗಿದೆ. ಧಿಕ್ಕಾರ! ಧಿಕ್ಕಾರ!........ ಇಂತಹ ಪಾಪಿಜನ್ಮದ

ಹೊರೆ ಹೊತ್ತು ಬದುಕುವುದಕ್ಕಿಂತ ಆತ್ಮಾರ್ಪಣ ಮಾಡಿಕೊಂಡು. ಅವಳ ಮೇಲಿನ ನನ್ನ ಪ್ರೇಮವನ್ನು ಅಮರಗೊಳಿಸುತ್ತೇನೆ. ಜೀವಂತವಾಗಿದ್ದು ಅವಳ ಮೇಲೆ ಎರಗುವ ಸಂಕಷ್ಟಗಳನ್ನು ನೋಡಿ ನೋಡಿ ಕ್ಷಣಕ್ಷಣಕ್ಕೂ ಸಾಯುವುದಕ್ಕಿಂತ ಸತ್ತು ಅಮರ ಚೇತನ ರೂಪದಲ್ಲಿ ಅವಳ ರಕ್ಷಣೆಗೆ ಕಟಿಬದ್ಧನಾಗುತ್ತೇನೆ. ಇದೇ ನಾನು ಅವಳ ಅಮೂಲ್ಯ ಪ್ರೇಮ ತ್ಯಾಗಗಳಿಗೆ ಸಲ್ಲಿಸಬಹುದಾದ ಕಾಣಿಕೆ. ಅಸ್ಪೃಶ್ಯರಂತೆ ಅಜ್ಞಾತದಲ್ಲಿ ಬದುಕುತ್ತಿರುವ ನೋವಿಗೂ ಒಂದು ಮುಕ್ತಾಯ ಒದಗುತ್ತದೆ. ದಿನದಿನಕ್ಕೂ ಕ್ಷಣಕ್ಷಣಕ್ಕೂ ಕಾಳ್ಗಿಚ್ಚಿನಂತೆ ಪ್ರಜ್ವಲಿಸುತ್ತಾ ಒಳಗೊಳಗೇ ಹೃದಯವನ್ನೆಲ್ಲಾ ಭಸ್ಮ ಮಾಡುತ್ತಿರುವ ಈ ಪ್ರೇಮಾಗ್ನಿಗೂ ತಡೆವುಂಟಾಗುತ್ತದೆ. ಒಳಹೊರಗಿನ ಧಗೆ ಬದುಕನ್ನು ಅಸಹನೀಯವಾಗಿಸಿದೆ. ಗಿರಿ. ವನ. ಕಂದರಗಳೆಲ್ಲವೂ ಎಳೆಯ ಮಕ್ಕಳಂತೆ ದಾಹ ದಾಹವೆಂದು ಕರುಳುಕಿತ್ತು. ಬರುವಂತೆ ಆರ್ತವಾಗಿ ಅಳುತ್ತಿವೆ.... ನನ್ನೊಲವೇ...... ನನ್ನ ಕನಸೇ.... ನನ್ನೆದೆಯುಸಿರೇ..... ನನ್ನ ಕಣ್ಣ ಬೆಳಕೇ..... ವಿಯೋಗದ ಈ ದಾವಾನಲವನ್ನು ಹೇಗೆ ಭರಿಸಲಿ?.... ನೀ ಇಲ್ಲದೆ ನಾನು ಬದುಕಲಾರೆ..... ರಾಜಕುಮಾರಿ.... ಇದೋ ಇಂದಿಗೆ ನನ್ನ ಈ ಜನ್ಮದ ಕೊನೆ...... ಮುಂದಿನ ಜನ್ಮದಲ್ಲಿಯಾದರೂ ವಿಯೋಗ ರಹಿತವಾದ ಅನ್ಯೋನ್ಯ ದಾಂಪತ್ಯದ ಸೌಭಾಗ್ಯ ನಮ್ಮದಾಗಲಿ...... ಕ್ಷಮಿಸು ರಾಜಕುಮಾರಿ..... ನಿನ್ನ ವಿಚಾರದಲ್ಲಿ ನಾನು ಅಸಮರ್ಥ. ಅಸಫಲ ಪ್ರೇಮಿಯಾದೆ.... ಓ ಗಿರಿವನಗಳೇ..... ಮಲಯಾನಿಲವೇ ಮೇಘ ಮಿತ್ರರೇ......ಸೂರ್ಯ ದೇವತೆಗಳೇ.... ಯಕ್ಷ ಕಿನ್ನರರೇ.... ಜಗತ್ತನ್ನು ತುಂಬಿರುವ ಸಮಸ್ತ ಪವಿತ್ರ ಚೇತನಗಳೇ..... ಬನ್ನಿ ಬನ್ನಿ. ನನ್ನ ಮತ್ತು ಕುರಂಗಿಯ ಅಮರ ಪ್ರೇಮಕ್ಕೆ ನೀವೇ ಸಾಕ್ಷಿ..... ನನ್ನ ಅಂತರ್ಯದ ನಿಗೂಢ ಪ್ರೇಮ ಸಂದೇಶವನ್ನು ನನ್ನೊಲವಳಿಗೆ ಕೊಂಡೊಯ್ಯಿರಿ..... ನನ್ನ ಕಡೆಯ ವಿದಾಯವನ್ನು, ನನ್ನ ಕ್ಷಮೆಯ ಪ್ರಾರ್ಥನೆಯನ್ನೂ ಅವಳಿಗೆ ತೇಲಿ ಹೋಗಿ ತಿಳಿಸಿ.... ನಿಮಗೆ ನನ್ನ ಅನಂತಾನಂತ ಧನ್ಯವಾದಗಳು.... (ಎಂದು ರಂಗದ ಎಡಭಾಗದಿಂದ ನಿರ್ಗಮಿಸುತ್ತಾನೆ. ಕ್ಷಣ ಹೊತ್ತಿನಲ್ಲಿ ಬಲದ ಭಾಗದಿಂದ ಪ್ರವೇಶಿಸಿ ಬಂದು ಸರೋವರದ ಬಳಿ ಸ್ನಾನ ಪ್ರಾರ್ಥನೆಗಳನ್ನು ಮುಗಿಸುತ್ತಾನೆ. ಅದೇ ಸಮಯಕ್ಕೆ ಸೌದಾಮಿನಿ ವಿದ್ಯಾಧರರೆಂಬ ಯಕ್ಷ ದಂಪತಿಗಳು ರೆಕ್ಕೆಗಳನ್ನು ಆಡಿಸುತ್ತಾ ಪ್ರವೇಶಿಸುವರು.)

**ವಿದ್ಯಾಧರ :** (ಇಳಿದೂ ಸುತ್ತಲೂ ನೋಡುತ್ತಾ) ಪ್ರಿಯೆ, ಸೌದಾಮಿನಿ ಈ ಸೃಷ್ಟಿ ಎಷ್ಟು ಮನೋಹರವಾಗಿದೆ! ಹಿಮಾಲಯ. ಮಾನಸ ಸರೋವರ, ಮಂದಸಗಿರಿ. ಗಂಧವನ, ಚಂದ್ರಗಿರಿ. ಗಂಭೀರ ಮೌನದ ಈ ಕಣಿವೆ. ಕಂದರಗಳು....

ಓಹ್..... ಇವುಗಳ ಮುಂದೆ ನಮ್ಮ ಅಲಕಾವತಿಯೂ ತೀರಾ ಸಪ್ಪೆ ಎನಿಸುತ್ತದೆ. ಆಕಾಶವೆತ್ತರದಿಂದ ನೋಡಿದ ನಮಗೆ ಬೆಟ್ಟಗಳು ಮರಿಯಾನೆಗಳಂತೆ, ಈ ಭೂಮಿಯನ್ನು ತುಂಬಿರುವ ಅಚ್ಚ ಹಸಿರುಪಚ್ಚೆ ಕಂಬಳಿಯಂತೆ, ಸಮುದ್ರಗಳು ಕಿರು ಸರೋವರಗಳಂತೆ. ನದಿ, ಕಂದರಗಳು, ತೆಳ್ಳನೆಯ ಗೆರೆಗಳಂತೆ ಅಚ್ಚ ಬಿಳುಪಿನ ಈ ಅರಮನೆಗಳೆಲ್ಲ ಸ್ವಚ್ಛ ಮಂಜಿನ ಹನಿಗಳಂತೆ ಎಷ್ಟು ಸುಂದರವಾಗಿ ಕಾಣುತ್ತಿವೆಯಲ್ಲ! ಇನ್ನೊಮ್ಮೆ ಹಾರಿ ಹಾರಿ ತೇಲಿ ಪರ್ಯಟಿಸಿ ಬರೋಣವೇ?

**ಸೌದಾಮಿನಿ:** ಇಲ್ಲ.... ಇಲ್ಲ..... ಈಗ ಬೇಡ..... ಸ್ವಲ್ಪ ವಿಶ್ರಾಂತಿಯ ನಂತರವೇ ಮುಂದಿನ ಆಲೋಚನೆ..... (ಎಂದು ದೀರ್ಘಶ್ವಾಸವನ್ನು ಎಳೆದು ಕೆಳಗೆ ಕುಳಿತುಕೊಳ್ಳುತ್ತಾನೆ) ಪ್ರಿಯ ಬಹಳ ಬಾಯಾರಿಕೆಯಾಗಿದೆ.... ಇಲ್ಲಿಯೇ ಎಲ್ಲಿಯಾದರೂ ಅಮೃತ ಸರೋವರಗಳಿದ್ದಲ್ಲಿ ಹೋಗಿ ಒಂದಿಷ್ಟು ಜಲಾಮೃತವನ್ನು ತಂದು ಕೊಡುವೆಯಾ?

**ವಿದ್ಯಾಧರ :** ಆಯಿತು ಪ್ರಿಯೆ.... ಇಲ್ಲಿ ನೀನು ವಿಶ್ರಮಿಸು.... ಈಗಲೇ ಹೋಗಿ ಜಲಸ್ಥಾನವನ್ನು ಹುಡುಕಿ ಜಲವನ್ನು ತಂದು ಕೊಡುತ್ತೇನೆ. ಮಾನಸ ಸರೋವರವೇ ಮೂಲೆ ಮೂಲೆಗಳಲ್ಲೂ ಮಧುರ ನಿನಾದದಿಂದ ಹರಿಯುತ್ತಿರುತ್ತದೆ. ಈ ಕ್ಷಣವೇ ಹೋಗಿ ಬರುತ್ತೇನೆ.... (ಎಂದು ನಡಿಗೆಯಲ್ಲಿಯೇ ಹೊರಡುತ್ತಾನೆ.).... ನೀರಿಗಾಗಿ ಹುಡುಕುವಂತೆ ಅಭಿನಯಿಸಿ ರಂಗದ ಮೇಲೆಲ್ಲಾ ಬಂದು ಸುತ್ತಾಡಿ ಬರುತ್ತಾನೆ.... ನಂತರ ಯಾವುದೋ ಒಂದು ನೀರಿನ ತಾಣ ಕಂಡಂತೆ ಮುಖಭಾವ. ಸೌದಾಮಿನಿ ಮೈ ಮುರಿದು ಆಕಾಶದತ್ತ ಮುಖಮಾಡಿ ಏನನ್ನೋ ಸಂತೋಷವನ್ನು ಅನುಭವಿಸುತ್ತಿರುವಂತೆ ಕಾಣುತ್ತಾಳೆ. ಹಾಗೆಯೇ ಕುಸುಮಿತ ವೃಕ್ಷ ಲತೆಗಳನ್ನು ನೋಡಿ ಮುಖವರಳಿಸಿ ಎದ್ದು ಅವುಗಳ ಬಳಿ ಓಡಾಡಿ ಹೂ ಕೀಳುವ ನಾಟ್ಯಾಭಿನಯ:ವನ್ನು ಮಾಡುತ್ತಾಳೆ.... ವಿದ್ಯಾಧರ ನೀರನ್ನರಸುತ್ತಾ ಅವಿಮಾರಕನಿರುವ ಸರೋವರದ ಬಳಿ ಬರುತ್ತಾನೆ. ಅವಿಮಾರಕ ಚಿಂತಾಕ್ರಾಂತನಾಗಿ ನಿಂತು ಕೈ ಮುಗಿದು ಸರೋವರವನ್ನೇ ತದೇಕ ಚಿತ್ತದಿಂದ ನೋಡುತ್ತಾ.... "ಕೊನೆಯ ಕ್ಷಣಗಳಲ್ಲಿ ನನ್ನೊಡಲ ಬೇಗೆಯನ್ನು ನಿನ್ನ ಶೀತಲ ಸ್ಪರ್ಶದಿಂದ ತಣಿಸಲಿರುವ ಸರೋವರವೇ, ಇದೋ ನಿನಗೆ ನಮಸ್ಕಾರ.... ನಿನ್ನ ಸ್ನೇಹಗರ್ಭದಲ್ಲಿ ನನ್ನನ್ನು ಇರಿಸಿಕೊಂಡು ಚಿರ ಶಾಂತಿಯನ್ನು ದಯಪಾಲಿಸು" (ಎಂದು ಧುಮುಕಲು ಅಣಿಯಾಗುತ್ತಾನೆ. ಅಷ್ಟರಲ್ಲಿ ಗಾಭರಿಯ ದನಿಯಲ್ಲಿ)

**ವಿದ್ಯಾಧರ :** ಅಹೋ ಮಿತ್ರ ನಿಲ್ಲು ನಿಲ್ಲು.... ಇದೆಂತಹ ಸಾಹಸಕ್ಕೆ ಹೊರಟಿರುವೆ (ಎಂದು ಧಾವಿಸಿ ಬರುವನು)

**ಅವಿಮಾರಕ:** (ದನಿಬಂದ ಕಡೆಗೆ ತಲೆ ಎತ್ತಿ ನೋಡಿ) ಇದೇನಾಶ್ಚರ್ಯ ಯಾರದು ಕೊರಳು?... ಯಾರಲ್ಲಿ?.... ನಿರ್ಜನವಾದ ದಟ್ಟವನ ಪ್ರಾಂತದಲ್ಲಿ ಅಕಸ್ಮಾತ್ತಾಗಿ ಅವತರಿಸಿರುವ ಈತ ಯಾರೋ ದೇವಪುರುಷನಂತೆ ತೋರುತ್ತಿದೆ.... ಸಾಮಾನ್ಯ ಮನುಷ್ಯನಿಗಂತೂ ಇಲ್ಲಿ ಬರಲು ಸಾಧ್ಯವೇ? ಇಲ್ಲ.... ಇಲ್ಲ ಇದು ಸುಮ್ಮನೆ ನನ್ನ ಭ್ರಮೆ..... ಬಡಬಡಿಕೆ ಇರಬೇಕು (ಮತ್ತೊಮ್ಮೆ ಧುಮುಕಬೇಕೆನ್ನುವಾಗ ವಿದ್ಯಾಧರನ ಕೈ ಅವಿಮಾರಕವನ್ನು ಸ್ಪರ್ಶಿಸುತ್ತದೆ)

**ವಿದ್ಯಾಧರ :** ಹೀಗೇಕೆ ಮಾತನಾಡುವಿ ಮಿತ್ರ, ಇಷ್ಟೊಂದು ಬೇಸರ ಹತಾಶೆಗಳಿಗೆ ಕಾರಣವಾದರೂ ಏನೆಂದು ಹೇಳಬಾರದೆ? ದೇವಲೋಕ ಬೇಸರವಾಯಿತೆಂದು ಮನುಜಲೋಕಕ್ಕೆ ಬಂದೆಯಾ? ಅಥವಾ ಮಂತ್ರಮರೆತೋ ಶಾಪಕ್ಕೆ ಗುರಿಯಾಗಿಯೋ ಮರಳಿ ದೇವಲೋಕಕ್ಕೆ ಹೋಗಲಾರದ ಅಸಹಾಯಕತೆಯಿಂದ ಅಳುತ್ತಿದ್ದೀಯಾ?

**ಅವಿಮಾರಕ:** ದೇವಲೋಕ!! ಹೂಂ! ದೇವಲೋಕ (ವ್ಯಂಗ್ಯನಗೆ) ಮನುಷ್ಯ ಲೋಕವೇ ನನ್ನ ಪಾಲಿಗೆ ವಂಚಿತವಾಗಿರುವಾಗ ದೇವಲೋಕದ ಕನಸೂ ಸಾಧ್ಯವಿಲ್ಲ. ನಾನು ದೇವಲೋಕದವನೆಂಬ ನಿನ್ನ ಈ ಭ್ರಮೆಗೆ ನಾನು ಅಳಬೇಕೋ ನಗಬೇಕೋ! ನೀನಾರೋ ದೇವ ಪುರುಷನಿರಬೇಕು. ಸಾವಿನಿಂದ ತಪ್ಪಿಸಿ ನನಗೆ ಉಪಕಾರ ಮಾಡಬೇಕೆಂದು ಎಣಿಸಿರುವೆಯಾದರೆ ಅದು ಸಾಧ್ಯವಿಲ್ಲ. ನಿನ್ನ ದಾರಿಗೆ ನೀನು ಹೋಗು. ನನ್ನನ್ನು ತಡೆಯಬೇಡ.

**ವಿದ್ಯಾಧರ :** ಸಮಾಧಾನ ತಂದುಕೋ ಮಿತ್ರ. ನೀನೂ ಒಬ್ಬ ನಮ್ಮಂತಹ ಯಕ್ಷನಿರಬೇಕೆಂದು ಭಾವಿಸಿರುವ ನನಗೆ ನಿನ್ನ ಬಾಯಲ್ಲಿ ಬರುತ್ತಿರುವ 'ಸಾವು' ಎಂಬ ಪದದ ಅರ್ಥ ಹೊಳೆಯುತ್ತಿಲ್ಲ, ದಯವಿಟ್ಟು ವಿವರಿಸು. ಕ್ಷಣಕ್ಷಣಕ್ಕೆ ನನ್ನ ಕುತೂಹಲ ಹೆಚ್ಚುತ್ತಿದೆ. ನನ್ನ ಕೈಲಿ ಸಾಧ್ಯವಾದುದೆಲ್ಲವನ್ನೂ ಮಾಡುತ್ತೇನೆ. ಯಾರಾದರೂ ಋಷಿಗಳಿಂದ ಶಾಪಗ್ರಸ್ತನಾಗಿರುವೆಯಾ.... ಹೇಗೆ?

**ಅವಿಮಾರಕ:** ನೀನಾರೋ ನನಗೆ ತಿಳಿಯದಾದರೂ 'ಮಿತ್ರ' ಎಂದು ಕರೆದು ಮಿತ್ರತ್ವವನ್ನು ಗಳಿಸಿಕೊಂಡೆ. ನೀನು ಭಾವಿಸಿರುವಂತೆ ನಾನು ಯಕ್ಷನೂ ಅಲ್ಲ ಗಂಧರ್ವನೂ ಅಲ್ಲ. ದೇವರಂತೂ ಅಲ್ಲವೇ ಅಲ್ಲ. ನಾನೊಬ್ಬ ಹತಭಾಗ್ಯ ಮಾನವ. ದೈವಹತನಾಗಿ ಅಳಲುತ್ತಾ ಬಳಲುತ್ತಾ ಸಾವೇ ಕಡೆಯ ಪರಿಹಾರವೆಂದು ಭಾವಿಸಿ ಹೊರಟಿರುವ ಅಲ್ಪ ಜೀವಿ....

ಸೌವೀರ ರಾಜನ ಪುತ್ರನಾದ ಅವಿಮಾರಕ.... ಕಾರಣಾಂತರಗಳಿಂದ– ಶತ್ರುಗಳ ದಾಂದಲೆಯಿಂದ ತತ್ತರಿಸಿ ಅಜ್ಞಾತವಾಗಿ ಶಾಪಗ್ರಸ್ತನಂತೆ ಬಾಳುತ್ತಿರುವ ಅದೃಷ್ಟಹೀನ.

**ವಿದ್ಯಾಧರ :** ಮಿತ್ರ ನನ್ನಲ್ಲಿ ಅಸತ್ಯವನ್ನು ನುಡಿಯುತ್ತಿಲ್ಲ ತಾನೇ!! ಸಾಮಾನ್ಯ ಮನುಷ್ಯನಿಗೆ ಇಷ್ಟೊಂದು ಕಾಂತಿಯುಕ್ತ ದೇಹವಿರಲು ಹೇಗೆ ತಾನೇ ಸಾಧ್ಯ! ಶಾಪಗ್ರಸ್ತದೇವನೇ ನೀನಾಗಿರಬೇಕು. ನನ್ನಿಂದ ಏನನ್ನೋ ಮರೆಮಾಚುತ್ತಿರುವೆ! (ಸಂದೇಹ)

**ಅವಿಮಾರಕ:** ಸಾವಿನ ಹೊಸ್ತಿಲಲ್ಲಿ ನಿಂತಿರುವ ನಾನ್ಯಾಕೆ ನಿನಗೆ ಅನೃತವನ್ನಾಡಲಿ. ನಾನು ಹೇಳಿದ್ದೆಲ್ಲವೂ ನೂರಕ್ಕೆ ನೂರು ಪಾಲು ಸತ್ಯ ದೇವ ಪುರುಷ.

**ವಿದ್ಯಾಧರ :** ಇರಲಿ ನೀನು ಹೇಳುವುದು ನಿಜವೆಂಬುದನ್ನು ನನ್ನ ದಿವ್ಯಶಕ್ತಿಯಿಂದ ತಿಳಿಯುವೆ. (ಎಂದು ಶೂನ್ಯದಲ್ಲಿ ಕೈ ಆಡಿಸಿ ಒಂದು ದಿಕ್ಕಿನತ್ತ ನಿಶ್ಚಲ ದೃಷ್ಟಿನೆಡುವನು. ಫಳಕ್ಕನೆ ಮಿಂಚು ಕಾಣಿಸಿಕೊಳ್ಳುವುದು. ಮತ್ತೆ ಕೆಲವು ಕ್ಷಣ ತೇಜಃ ಪುಂಜವೊಂದು ಕವಿಯುವುದು. ಆ ಒಂದು ಕಡೆ ಹೊರತು ಮಿಕ್ಕೆಲ್ಲದರ ಮೇಲೆ ಕತ್ತಲು. ಯಾವುದೂ ಕಾಣಿಸಿಕೊಳ್ಳಬಾರದು. ಯಕ್ಷನ ಮೇಲೆ ಮಾತ್ರವೇ ಮಂದೆ ಬೆಳಕು ಬಿದ್ದಿರಬೇಕು)

**ವಿದ್ಯಾಧರ :** (ದಿವ್ಯಜ್ಞಾನದಿಂದ ಅರಿತು, ಸ್ವಗತ) ಹೌದು ಈತ ಹೇಳಿದ್ದೆಲ್ಲವೂ ಸತ್ಯ. ಆದರೆ ಒಂದು ಮಾತ್ರ, ಪಾಪ! ಅವನಿಗೆ ತಿಳಿದಿಲ್ಲ. ತಾನು ಅಗ್ನಿಜಾತನೆಂಬುದರ ಅರಿವೂ ಇದ್ದಂತಿಲ್ಲ. ಕುಂತಿಭೋಜನ ಮಗಳಾದ ಕುರಂಗಿಯ ಪ್ರೀತಿಯಿಂದಲೇ ಬದುಕುತ್ತಿದ್ದವನು. ಈಗ ರಹಸ್ಯ ಬಯಲಾದುದರಿಂದ ಅರಮನೆಗೆ ಹೋಗುವಂತಿಲ್ಲ. ಅರಮನೆಗೆ ಹೋಗದೆ ಕುರಂಗಿಯನ್ನು ಕಾಣುವಂತಿಲ್ಲ. ಇದೇ ಈತನ ಸಮಸ್ಯೆ! ಅವಳನ್ನು ಕಾಣದೆ, ಅವಳ ಪ್ರೀತಿಯ ಸವಿಗಾಣದೆ ಬದುಕಲಾರ. ಅದಕ್ಕಾಗಿಯೇ ಈ ರೀತಿಯ ಆತ್ಮಘಾತಕ್ಕೆ ಎಳಸಿದ್ದಾನೆ..... ಈತನ ಬಗ್ಗೆ ನನಗೆ ಯಾವುದೋ ಒಂದು ಬಗೆಯ ಅವ್ಯಾಜ ಪ್ರೇಮ ಮೂಡಿದೆ. ಈತನಿಗೆ ನಾನು ಹೇಗಾದರೂ ಸಹಾಯ ಮಾಡಲೇಬೇಕು. ಪ್ರೀತಿಸುವ ವ್ಯಕ್ತಿಗಳಿಂದ ಆಗಲಿ ಜೀವಿಸುವವರ ನೋವಿನ ಸ್ವರೂಪ ಎಷ್ಟು ಭಯಂಕರವಾದುದೋ.... ನಾನು ನನ್ನ ಅನುಭವದಿಂದಲೇ ಬಲ್ಲೆ. (ಪ್ರಕಾಶ) ಮಿತ್ರ ಅವಿಮಾರಕ ಸ್ನೇಹಿತರೊಂದಿಗೆ ಸಂಕೋಚ ಮುಚ್ಚುಮರೆ ಸಲ್ಲದು. ನನ್ನಿಂದ ಬಚ್ಚಿಡಬೇಕೆಂದು ಬಯಸಿದ ಸಂಗತಿಗಳೆಲ್ಲವೂ ನನ್ನ ದಿವ್ಯದೃಷ್ಟಿಗೆ ಬಿಚ್ಚಿಕೊಂಡಿವೆ.

**ಅವಿಮಾರಕ:** ಕ್ಷಮಿಸು ಮಿತ್ರ, ನಿನಗೆ ಹೇಳದೆ ಮರೆಸಬೇಕೆಂದಾಗಲಿ, ನೀನಾವನೋ ದೂರದವನಿರಬೇಕೆಂಬ ಭಾವನೆಯಿಂದಾಗಲಿ ನಾನು ಹೇಳ

ಬಾರದೆಂದುಕೊಳ್ಳಲಿಲ್ಲ. ನನ್ನ ದುಃಖದ ಕತೆ ಹೇಳಿ ನಿನ್ನ ಮನಸ್ಸಂತೋಷವನ್ನು ನಷ್ಟಗೊಳಿಸಲು ಇಷ್ಟಪಡಲಿಲ್ಲ..... ಅಷ್ಟೇ ಮಿತ್ರ! ಖಂಡಿತಾ ಅನ್ಯಥಾ ಭಾವಿಸಬೇಡ.

**ವಿದ್ಯಾಧರ :** ನಾವಿಬ್ಬರೂ ಸ್ನೇಹಿತರೆಂದ ಮೇಲೆ, ಕಷ್ಟಗಳಲ್ಲಿ ಒಬ್ಬರಿಗೊಬ್ಬರು ಪರಸ್ಪರ ನೆರವಾಗಬೇಕಲ್ಲದೆ, ಒಬ್ಬರಿಂದ ಒಬ್ಬರು ತಮ್ಮ ನೋವುಗಳನ್ನು ಮರೆಮಾಚಬಾರದು. ಇದೇ ನಿಜವಾದ ಸ್ನೇಹಧರ್ಮ... ನೀನು ಆತ್ಮಹತ್ಯೆಗೆ ಎಣಿಸಿದೆಯಲ್ಲವೇ?.....

**ಅವಿಮಾರಕ:** (ನಾಚಿಕೆ ಸಂಕೋಚಗಳಿಂದ) ಹೌದು ಮಿತ್ರ.

**ವಿದ್ಯಾಧರ :** ಸಾವನ್ನು ಬಯಸುವವರು ಶೂರರೂ ಅಲ್ಲ; ಧೀರರೂ ಅಲ್ಲ. ಸಾಧಿಸಲಾಗದ ಅಸಮರ್ಥರು, ಹೇಡಿಗಳು ಆದವರು ಮಾತ್ರವೇ ಇಂತಹ ಹೇಯ ಕೆಲಸಕ್ಕೆ ಆಲೋಚಿಸುತ್ತಾರೆ. ಅಂಥಾದ್ದರಲ್ಲಿ..... ನೀನು.... ನಿನ್ನಂತಹ ಅಲೌಕಿಕ, ಅನುಪಮ ಶಕ್ತಿ, ಸಾಮರ್ಥ್ಯಗಳಿರುವ ಮಹಾವೀರ, ಮಹಾಪುರುಷ ಇಂತಹ ಆಲೋಚನೆಯು ಸುಳಿಗೆ ಬಿದ್ದುದು ಪರಮಾಶ್ಚರ್ಯ. ನಿನಗೆ ನನ್ನ ವ್ಯಕ್ತಿತ್ವ ಸಾಮರ್ಥ್ಯಗಳಲ್ಲೇ ನಂಬಿಕೆಯಿಲ್ಲ. ಒಮ್ಮೆ ನಿನ್ನ ಅಂತರಂಗವನ್ನು ತಡಕಿನೋಡು. ನಿನ್ನ ಒಳಗಣ್ಣನ್ನು ತೆರೆದುನೋಡು. ಆಗ ನಿನಗೇ ನಿನ್ನ ಸಾಮರ್ಥ್ಯದ ವಿಶ್ವರೂಪ ಗೋಚರಿಸುತ್ತದೆ.

**ಅವಿಮಾರಕ:** ಮತ್ತೇನು ಮಾಡಲಿ ಮಿತ್ರ. ಇದಕ್ಕಿಂತ ನನಗೆ ಬೇರೆ ದಾರಿಯೇ ತೋರಲಿಲ್ಲ. ಕುರಂಗಿಯನ್ನು ಕಾಣದೆ ಒಂದು ಕ್ಷಣವೂ ಬದುಕಿರಲಾರೆ. ಬಾಯಿಬಿಟ್ಟು ಯಾರಲ್ಲಿಯೂ ಹೇಳಿಕೊಳ್ಳಲಾರೆ. ಕುಂತೀ ಭೋಜರಿಗೆ ಹೇಗೋ ವಿಷಯ ತಿಳಿದು ಬಿಟ್ಟಿದೆ. ದುರ್ಭೇದ್ಯ ಕೋಟೆ ಕಾವಲನ್ನು ದಾಟಿ ಅಂತಃಪುರ ಪ್ರವೇಶ ಸಾಧ್ಯವಿಲ್ಲ. ಹೀಗಿರುವಾಗ ನಾನೆಂತು ಜೀವದಿಂದಿರಲಿ? ಕುರಂಗಿಯ ವೇದನೆಯನ್ನು ಊಹಿಸಿಕೊಂಡೆ ನನ್ನೆದೆ ನಡುಗುತ್ತದೆ. ಅವಳಿದನ್ನು ಹೇಗೆ ತಾನೇ ಭರಿಸಿಯಾಳು. (ಎಂದು ಅತೀವ ನೋವಿನಿಂದ ನುಡಿಯುವನು)

**ವಿದ್ಯಾಧರ :** ಇನ್ನು ಚಿಂತೆಗೆ ಅವಕಾಶವಿಲ್ಲ ಬಿಡು ಗೆಳೆಯಾ. ಇಂದಿನಿಂದ ಮುತ್ತಿರುವ ಅನಿಷ್ಟಗಳು ದೂರವಾಗಿ ನಿನಗೆ ಒಳ್ಳೆಯದಾಗುತ್ತದೆ. ಶೀಘ್ರದಲ್ಲಿಯೇ ಶುಭ ಪರಂಪರೆಗಳು ನಿನ್ನ ಬೆನ್ನಿಗೆ ಬರುತ್ತೆ. ಮತ್ತೆಂದೂ ಸಾಯುವ ಯೋಚನೆ ಸುಳಿಯದಿರಲಿ. ಸ್ನೇಹಿತನ ಗುರಿಯ ಸಾಧನೆಗಾಗಿ ಈ ವಿಷ್ವಾಂಗುಲೀಯಕವನ್ನು ನೀಡುತ್ತಿದ್ದೇನೆ. ತೆಗೆದುಕೋ. ಇದನ್ನು

ಜೋಪಾನವಾಗಿ ನಿನ್ನಲ್ಲಿ ಇರಿಸಿಕೋ. ಈ ಅಂಗುಲೀಯಕವನ್ನು ಎಡಗಣ್ಣಿಗೆ ಒತ್ತಿಕೊಂಡರೆ ಅದೃಶ್ಯ ರೂಪವನ್ನು ಪಡೆಯುತ್ತೀಯೆ, ಬಲಗಣ್ಣನಿಗೆ ಒತ್ತಿಕೊಂಡರೆ ಮೊದಲಿನ ರೂಪ ಬರುತ್ತದೆ. ನೋಡು ಹೀಗೆ.... (ಎಂದು ಅದೃಶ್ಯವಾಗುತ್ತಾನೆ) (ಅವಿಮಾರಕ ದಿಗ್ಭ್ರಮೆಯಿಂದ ಎಲ್ಲಿ ಹೋದನೆಂದು ಸುತ್ತಲೂ ನೋಡುತ್ತಾನೆ) .... ಮಿತ್ರಾ..... ನಾನೆಲ್ಲಿದ್ದೇನೆಂದು ಹೇಳಬಲ್ಲೆಯಾ?

**ಅವಿಮಾರಕ:** (ಸಂಭ್ರಮಾಶ್ಚರ್ಯಗಳಿಂದ) ಭಲೇ ಮಿತ್ರ ಇದರ ಇಂದ್ರಜಾಲಿಕ ಶಕ್ತಿಗೆ ಮೆಚ್ಚಿದೆ. ಬಾ ಮೊದಲಿನಂತೆ ಕಾಣಿಸಿಕೋ (ವಿದ್ಯಾಧರ ಪ್ರತ್ಯಕ್ಷನಾಗುವನು ಉಂಗುರವನ್ನು ಅವಿಮಾರಕನ ಬೆರಳಿಗೆ ತೊಡಿಸುವನು).

**ವಿದ್ಯಾಧರ :** ಇಲ್ಲ ಮಿತ್ರ. ಹಾಗೆಲ್ಲ ಹೇಳಬೇಡ. ನಿನಗಿಂತಲೂ ನಾನು ನಿನ್ನಲ್ಲಿ ಹೆಚ್ಚಿಗೆ ಕೃತಜ್ಞನಾಗಿದ್ದೇನೆ. ಏಕೆಂದು ಬಲ್ಲೆಯಾ? ಇಂತಹ ಅಮೂಲ್ಯವಾದ ವಸ್ತುವನ್ನು ಸ್ವತಃ ಸಂಗ್ರಹಿಸಿ ಸ್ವಾರ್ಥಕ್ಕಾಗಿ ಉಪಯೋಗಿಸಿಕೊಳ್ಳುವುದಕ್ಕಿಂತಲೂ ಸಾವಿರಪಾಲು ಸಂತೋಷ ಅದರ ಅಗತ್ಯ ಅತ್ಯಧಿಕವಾಗಿ ಇರುವವರಿಗೆ ನೀಡಿ ಪ್ರಯೋಜನ ಪಡೆಯುವಂತೆ ಮಾಡುವುದರಲ್ಲಿದೆ. ನನ್ನ ಈ ಮಾತಿನ ಸತ್ಯ ಅನುಭವಿಸಿದವರಿಗೇ ಅರ್ಥವಾಗುವುದು.

**ಅವಿಮಾರಕ:** ನಿನ್ನ ಈ ನಿಸ್ವಾರ್ಥತೆ, ಉದಾತ್ತತೆಗಳಿಗೆ ನಾನು ಮೂಕನಾಗಿದ್ದೇನೆ. ಆದರೆ ಒಂದು ಸಂಶಯ! ದಿವ್ಯ ಪುರುಷನಾದ ನಿನಗೆ ದಿವ್ಯಶಕ್ತಿಗಳು ಕೆಲಸ ಮಾಡುವಂತೆ ನನ್ನಂತಹ ಮನುಷ್ಯರಿಗೆ ಕೆಲಸ ಮಾಡಬಲ್ಲವೆ!.... ಯಾಕೋ ನನಗೆ ಸ್ವಲ್ಪ ಅನುಮಾನ!!

**ವಿದ್ಯಾಧರ :** ಅನುಮಾನವಿದ್ದಲ್ಲಿ ಪರೀಕ್ಷಿಸಿ ನೋಡಿಯೇ ಬಿಡು.

**ಅವಿಮಾರಕ:** (ಉಂಗುರವನ್ನು ಎಡಗಣ್ಣಿಗೆ ಒತ್ತಿಕೊಂಡು) ಮಿತ್ರ ನಾನು ನಿನಗೆ ಕಾಣಿಸುತ್ತಿದ್ದೇನೆಯೇ?

**ವಿದ್ಯಾಧರ :** ಕಾಣದಂತೆ ಅದೃಶ್ಯರೂಪವನ್ನು ಗಳಿಸಿಕೊಡುವುದೇ ಇದರ ಕೆಲಸವಾಗಿರುವಾಗ, ನೀ ಕಾಣುವುದು ಹೇಗೆ ಸಾಧ್ಯ?

**ಅವಿಮಾರಕ:** (ಪ್ರತ್ಯಕ್ಷನಾಗಿ) ದೈವಾನುಗ್ರಹವಿದ್ದಲ್ಲಿ ಅಸಂಭವನೀಯವಾದ್ದೆಲ್ಲವೂ ಹೇಗೆ ಸಂಭವನೀಯವಾಗಬಲ್ಲವು ಎಂಬುದಕ್ಕೆ ನನಗೆ ಅನಿರೀಕ್ಷಿತವಾಗಿ ದೊರೆತ ಈ ಮಿತ್ರನ ಅನುಪಮ ಮಿತ್ರ ಲಾಭವೇ ಸಾಕ್ಷಿ. ಕುರಂಗಿ ಮತ್ತು ನನ್ನ ಪ್ರೀತಿ ದೈವಲಿಖಿತವೇ ಇರಬೇಕು. ಇದನ್ನು ಯಾವ ಪ್ರಚಂಡ ಶಕ್ತಿಯೂ ತಡೆಯಲಾರದೆಂಬ ಭಾವನೆ ಮೂಡುತ್ತಿದೆ. ಅಕಾರಣವಾಗಿ ಚಿರದುಃಖಕ್ಕೆ ಬಲಿಯಾಗುತ್ತಿದ್ದ ನಮ್ಮಿಬ್ಬರನ್ನೂ ದೈವವಾಗಿ ಬಂದು ಕಾಪಾಡಿದೆ.

ನಿನ್ನ ಋಣ ಸದಾ ನನ್ನ ಮೇಲಿರುತ್ತದೆ. ಇದಕ್ಕೆ ಪ್ರತಿಯಾಗಿ ನಾನೇನು ನೀಡಲಿ ಮಿತ್ರ?

**ವಿದ್ಯಾಧರ :** ಸ್ನೇಹದಲ್ಲಿ ಉಪಕಾರ ಪ್ರತ್ಯುಪಕಾರದ ಮಾತುಗಳು ಬರಲೇಬಾರದು. ಸಜ್ಜನನಾದವನು ಯಾವನೂ ಪ್ರತಿಫಲಾಪೇಕ್ಷೆಯಿಂದ ಏನನ್ನೂ ಮಾಡುವುದಿಲ್ಲ. ಪ್ರತ್ಯುಪಕಾರದ ಮಾತನಾಡಿ ನನ್ನನ್ನು ಸಂಕೋಚಗೊಳಿಸಬೇಡ. ನಿನ್ನ ಮತ್ತು ಕುರಂಗಿಯ ಶೀಘ್ರ ಸಮಾಗಮವೇ ನನಗೆ ನೀನು ನೀಡುವ ಉಡುಗೊರೆ. ಬರುತ್ತೇನೆ. ಬಹಳ ತಡವಾಯಿತು. ದಣಿದು ಬಾಯಾರಿದ ಪ್ರಿಯೆಯನ್ನು ದಣಿವಾರಿಸಿಕೊಳ್ಳಲು ಬಿಟ್ಟು ನೀರನ್ನು ಅರಸುತ್ತಾ ಇಲ್ಲಿಗೆ ಬಂದೆ. ನನ್ನ ಅದೃಷ್ಟ, ಸಜ್ಜನ ಸಾಹಸಿ ಮಿತ್ರನ ಲಾಭ ಲಭಿಸಿತು... ಎಂದು ಹೇಳುತ್ತಿರುವಂತೆಯೇ "ಪ್ರಿಯತಮಾ.... ಓ ಪ್ರಿಯತಮಾ...... ಎಲ್ಲಿರುವಿ ಎಂದು ಕೂಗುತ್ತಾ ಬರುತ್ತಿರುವ ಸೌದಾಮಿನಿ ತನ್ನ ಪ್ರಿಯನೊಂದಿಗೆ ನಿಂತ ಇನ್ನೊಬ್ಬ ಪುರುಷನನ್ನು ನೋಡಿ ಸಂದೇಹಿಸುತ್ತಲೇ ಮೆಲ್ಲನೆ ಯಕ್ಷನ ಬದಿಗೆ ಬಂದು ನಿಲ್ಲುವಳು.

**ವಿದ್ಯಾಧರ :** ಬಾ ಪ್ರಿಯೆ... ಹತ್ತಿರ ಬಾ..... ಅನುಮಾನ ಸಂಕೋಚಗಳು ಬೇಡ. ಈತ ಅನಾಯಾಸವಾಗಿ, ಅನಿರೀಕ್ಷಿತವಾಗಿ ನನ್ನ ಪಾಲಿಗೆ ದೊರೆತ ಪರಮಮಿತ್ರ, ಈತನಿಗೆ ಅಭಿವಂದಿಸು. ಕಾಂತಾ ವಿರಹದಿಂದ ದಗ್ಧ ಪ್ರಾಣನಾದ ಈತನ ವಿಚಾರವನ್ನು ನಮ್ಮ ಪ್ರಯಾಣ ಸಮಯದಲ್ಲಿ ಸವಿರಸ್ತಾರವಾಗಿ ತಿಳಿಸುತ್ತೇನೆ. (ಎನ್ನಲು ಸೌದಾಮಿನಿ ಕೈ ಜೋಡಿಸಿ)

**ಸೌದಾಮಿನಿ:** ತಮ್ಮ ಪ್ರಾಣ ಮಿತ್ರನ ಪ್ರಿಯ ಸತಿ ಸೌದಾಮಿನಿಯ ಅಭಿವಂದನೆಗಳು.

**ಅವಿಮಾರಕ:** (ಸ್ವಗತ) ಆಹಾ! ಸಜ್ಜನರ ರೀತಿಯೇ ರೀತಿ! (ಪ್ರತಿವಂದಿಸುತ್ತ) ಮಿತ್ರ ಪ್ರಾಣೆಯಾದ ತಮ್ಮ ದರ್ಶನ ಭಾಗ್ಯದಿಂದ ಕೃತಾರ್ಥನಾದೆ. ಅದೃಷ್ಟವೆನ್ನುವುದು ಒಮ್ಮೆ ಬರಲು ಪ್ರಾರಂಭವಾದರೆ ಆಕಾಶದ ಗರ್ಭ ಸೀಳಿಕೊಂಡು ಉದುರುತ್ತದೆ...... ತಮ್ಮಿಬ್ಬರ ಅನ್ಯೋನ್ಯ ದಾಂಪತ್ಯ ಚಿರಾಯುವಾಗಲಿ!!

**ವಿದ್ಯಾಧರ :** ನಿನ್ನ ಉದಾತ್ತ ಹೃದಯ, ಸೌಜನ್ಯಗಳಿಗೆ ನಾವಿಬ್ಬರೂ ಮಂತ್ರಮುಗ್ಧರಾಗಿದ್ದೇವೆ. ನಿನ್ನ ಪ್ರೇಯಸಿಯನ್ನು ಕಂಡಾಗಲೆಲ್ಲ ಈ ಮಿತ್ರನನನ್ನು ಮರೆತು ಬಿಡಬೇಡ (ನಗುವನು) ಅಲ್ಪ ಸಮಯದಲ್ಲೇ ಅಗಲಿಕೆಯನ್ನು ಭರಿಸಲಾಗದ ದುಃಖದ ಅನುಭವವಾಗುತ್ತಿರುವಾಗ ನಿಮ್ಮಿಬ್ಬರ ವಿರಹ ವ್ಯಥೆಯು ಎಂಥಾದ್ದೆಂಬುದನ್ನು ಊಹಿಸಬಲ್ಲೆ. ನಿನಗೆ ಮಂಗಳ ಸಮಾಗಮವೊದಗಲಿ. ನಿನಗೆ ಅಗತ್ಯವೆನಿಸಿದಾಗಲೆಲ್ಲ ನಿನ್ನ ಬಳಿ ಉಪಸ್ಥಿತನಾಗುತ್ತೇನೆ. ಶೀಘ್ರದಲ್ಲಿಯೇ ಭೇಟಿಯಾಗೋಣ.... ಬರೋಣವೆ! ಮಿತ್ರ! (ಸೌದಾಮಿನಿಗೆ)

ಬಾ ಸೌದಾಮಿನಿ.... ಈಗಲೇ ತಡವಾಯಿತು. ಇನ್ನೂ ಸಾಕಷ್ಟು ದೂರ ಕ್ರಮಿಸಬೇಕಾಗಿದೆ.... (ಎಂದು ರೆಕ್ಕೆ ಬಿಚ್ಚಿ ಹಾರುವಂತೆ ನಟಿಸುತ್ತಾನೆ)

(ಹಿನ್ನಲೆಯಲ್ಲಿ ಗೆಳೆಯಾ.... ಅವಿಮಾರಕ..... ಅವಿಮಾರಕ.... ಎಂದು ಕೂಗುವ ಸದ್ದು ಕೇಳಿ ಬರುತ್ತದೆ. ಯಕ್ಷನು ಹೋದ ದಿಕ್ಕಿನತ್ತಲೇ ನೋಡುತ್ತಿದ್ದ ಅವಿಮಾರಕನಿಗೆ ಕೂಗು ಕೇಳಿ ಬರುವುದು. ಕೂಗು ಕೇಳಿ ಬಂದ ದಿಕ್ಕಿನತ್ತಲೇ ಆಲಿಸಿ)

**ಅವಿಮಾರಕ:** ಅರೆ! ಇದು ವಿದೂಷಕ ಸಂತುಷ್ಟನ ದನಿಯಿದ್ದಂತೆ ಇದೆ!..... ನನ್ನನ್ನು ಹಿಂಬಾಲಿಸಿ ಇಲ್ಲಿಗೂ ಬಂದಂತಿದೆ. ಹುಂ! ನಿಜವಾದ ಗೆಳೆಯಾ.... ನನ್ನ ಕಷ್ಟ ಸುಖಗಳಲ್ಲೆಲ್ಲ ಅವನಲ್ಲದೆ ಇನ್ನಾರು ತಾನೇ ನನ್ನ ಜೊತೆಗಿದ್ದರು.... ನೆರಳಿನಂತೆ ನನ್ನನ್ನು ಎಡಬಿಡದೆ ಹಿಂಬಾಲಿಸುತ್ತಿದ್ದವನ ಕಣ್ಣು ತಪ್ಪಿಸಿ ಸಾಯುವ ಆಲೋಚನೆಯಿಂದ ಇಷ್ಟು ದೂರ ಬಂದೆ. ನನ್ನ ವಿಚಾರ ತಿಳಿದರೆ ಖಂಡಿತವಾಗಿಯೂ ಒಂದರೆಕ್ಷಣವೂ ನನ್ನ ಬಿಟ್ಟು ಕದಲುವುದಿಲ್ಲವೆಂದು ತಿಳಿದು ಗಾಢ ನಿದ್ರೆಯಲ್ಲಿ ಇದ್ದುದನ್ನೇ ಕಾದಿದ್ದು ಸಮಯ ನೋಡಿ ಕಣ್ತಪ್ಪಿಸಿ ಬಂದೆ..... ಆದರೆ.... ಆದರೆ.... ಈಗ ನೋಡಿದರೆ!..... ಇಲ್ಲಿಗೂ ಪ್ರತ್ಯಕ್ಷನಾದಂತೆ ಕಾಣಿಸುತ್ತಿದೆ. (ನೋಡಿ) ಹೌದು ಅವನೇ.... ಅವನೇ.... ನನ್ನ ವಿಶ್ವಾಸ ಸುಳ್ಳಾಗದು.... ಇರಲಿ... ಹೇಗಿದ್ದರೂ ಈ ಕಡೆಯೇ ಬರುತ್ತಿದ್ದಾನೆ..... ಕೂಡಲೇ ಅವನಿಗೆ ಕಾಣಿಸಿಕೊಳ್ಳದೆ ಒಂದಿಷ್ಟು ವಿನೋದಿಸುವ.... (ಎಂದು ಅದೃಶ್ಯನಾಗುವನು)

**ವಿದೂಷಕ :** (ಪ್ರವೇಶಿಸಿ) ಗೆಳೆಯಾ ಅವಿಮಾರಕ.... ಎಲ್ಲಿ ಹೋದೆ... ಏನು ಗ್ರಹಚಾರವೋ ಏನೋ.... ಕಷ್ಟಗಳ ಮೇಲೆ ಕಷ್ಟಗಳು... ಎಲ್ಲಾ ಪ್ರಾರಬ್ಧ. ಸೌವೀರ ರಾಜನ ಪರಿವಾರಕ್ಕೆ ಇಂತಹ ಅನಿಷ್ಟಗಳು ಬರಬಾರದಿತ್ತು. ಅನೇಕ ವರ್ಷಗಳು ಮಕ್ಕಳಿಲ್ಲದೆ ಹಲುಬಿ ಹಂಬಲಿಸಿದರು. ಕೊನೆಗೆ ರಾಜನ ಪುಣ್ಯವೋ ಎಂಬಂತೆ ಅವಿಮಾರಕನಂತಹ ಅದ್ಭುತ ಮಗ ಲಭಿಸಿದ.... ಆದರೆ ಸಂತೋಷ ಕೊನೆ ತನಕ ಉಳಿಯಿತೇ? ಈಗ ಇವನು ಕಣ್ಮರೆಯಾಗಿ ಅರಸ ಮೊದಲಿನಂತೆಯೇ ದುಃಖಿಯಾಗಿರುವ ಹಣೆ ಬರಹ! ಕುಂತೀಭೋಜನ ಭಟರ ಕೈಯಿಂದ ತಪ್ಪಿಸಿಕೊಂಡನೆಂದೇನೋ ಜನ ಆಡಿಕೊಳ್ಳುತ್ತಿದ್ದಾರೆ. ಆದರೆ ಅವನನ್ನು ಪ್ರತ್ಯಕ್ಷವಾಗಿ ನೋಡದ ಹೊರತು ನನ್ನ ಮನಸ್ಸಿಗೆ ಸಮಾಧಾನವಾಗಲಾರದು. ಅವನಿಗಾಗಿ ಭೂವ್ಯಾಕಾಶಗಳನ್ನೆಲ್ಲಾ ಸುತ್ತಾಡಿ ಬರುತ್ತೇನೆ. ಪಾತಾಳದಾಳದಲ್ಲಿ ಹುದುಗಿದ್ದರೂ ಹುಡುಕಿ ನೋಡುತ್ತೇನೆ. ಅವನಿಗಾಗಿ ಮುಂದಿನ ಜನ್ಮಕ್ಕೂ ಸಿದ್ಧ... ಇರಲಿ ಇಷ್ಟೆಲ್ಲಾ ಮಾಡುವುದಕ್ಕೆ ಸ್ವಲ್ಪ ಶಕ್ತಿ ಬೇಕು... ಇಲ್ಲಿಯೇ ವಿಶ್ರಮಿಸುತ್ತೇನೆ. (ಎಂದು ಮರದ ನೆರಳಿನಲ್ಲಿ ಮಲಗುತ್ತಾನೆ)

**ಅವಿಮಾರಕ:** (ಕಾಣಿಸಿಕೊಂಡು) ಪಾಪ! ನನಗಾಗಿ ಹಂಬಲಿಸುವುದನ್ನು ನೋಡಿದರೆ ಬಹಳ ವ್ಯಥೆಯಾಗುತ್ತದೆ. ಕಾಣಿಸಿಕೊಳ್ಳದೇ ಇದ್ದ ಪಕ್ಷದಲ್ಲಿ ನನಗಾಗಿ ಅಲೆದಾಡಿ ಅಲೆದಾಡಿ ಪ್ರಾಣ ಬಿಡುವುದಂತೂ ಖಂಡಿತ. ಹಾಗೇನಾದರೂ ಆದ ಪಕ್ಷದಲ್ಲಿ ಬ್ರಹ್ಮ ಹತ್ಯಾ ದೋಷ ನನ್ನ ತಲೆಗೆ ತಪ್ಪಿದ್ದಲ್ಲ. ಇದಕ್ಕೆ ಅವಕಾಶಕೂಡದು. ನಿಜವಾಗಿಯೂ ನನ್ನ ಪ್ರಿಯ ಮಿತ್ರನೇ ಹೌದು!! (ಗೆಲುವಿನಿಂದ) ಮಾತಿನಲ್ಲಿ ಜಾಣ... ಮನಸ್ಸಿನಲ್ಲಿ ಪ್ರೀತಿ ವಾತ್ಸಲ್ಯ.... ಸದಾ ಉಲ್ಲಾಸ, ಉತ್ಸಾಹ ಚುರುಕುಮಾತುಗಳಿಂದ ನನ್ನ ಮನಸ್ಸಿಗೆ ಆಹ್ಲಾದವನ್ನೀಯುತ್ತಲೇ ಇರುತ್ತಾನೆ. ನನ್ನೆಲ್ಲ ಕ್ಷಣಗಳಲ್ಲೂ ನನ್ನನ್ನೇ ಹಿಂಬಾಲಿಸುವ ಈ ಮಿತ್ರನನ್ನು ಬೇರೆ ಮಾಡಲು ಸಾಧ್ಯವೇ ಇಲ್ಲ. ನಾವಿಬ್ಬರೂ ಉಸಿರೊಂದು ಜೀವವೆರಡು ಇದ್ದಂತೆ! ಇಂತಹ ಪ್ರಿಯ ಮಿತ್ರನ ಆಲಿಂಗನಸೌಖ್ಯದಲ್ಲದೆ ಮನಸ್ಸಿಗೆ ಶಾಂತಿಯಿಲ್ಲ (ಎಂದು ಹತ್ತಿರ ಹೋಗಿ ಮಲಗಿದವನನ್ನೆಬ್ಬಿಸಿ) ಬಾ ಮಿತ್ರ, ಬಾ ಆದಷ್ಟು ಬೇಗ ನನ್ನನ್ನು ಆಲಂಗಿಸು. (ಎಂದು ಆಲಂಗಿಸುತ್ತಾನೆ)

**ಸಂತುಷ್ಟ :** (ಎಚ್ಚೆತ್ತು ಗಾಭರಿಗೊಂಡು) ಅಯ್ಯೋಮ್ಮ.... ಯಾರದು... (ಎಂದು ಕಣ್ಣುಜ್ಜಿ ನೋಡಲು ಆಶ್ಚರ್ಯ ಅನುಮಾನಗಳಿಂದ)... ಏನು ಅವಿಮಾರಕನೇ... ಇರಲಾರದು. ನನ್ನ ಕಣ್ಣು ನನ್ನನ್ನು ಮೋಸಗೊಳಿಸುತ್ತಿಲ್ಲ ತಾನೇ?.... ಯಾವುದನ್ನು ಹುಡುಕುತ್ತಾ ಹೊರಟೆನೋ ಅದೇ ಕಾಲಿಗೆ ತೊಡರಿಕೊಂಡಂತೆ, ನಾನರಸಿ ಹೊರಟ ನನ್ನ ಮಿತ್ರನೇ ನನಗೆ ಎದುರಾದನೇ!!..... ಕೇಳಿಯೇ ಬಿಡೋಣ...ನಿಜವೋ ಕನಸೋ....ತಿಳಿದೇ ಹೋಗುತ್ತದೆ.... ಮಿತ್ರ.... ಅವಿಮಾರಕ.... ನನ್ನ ಪ್ರಿಯ ಗೆಳೆಯ... ನೀನೇ ತಾನೇ?.... ಅಲ್ಲಯ್ಯ ಈ ಬಡ ಬ್ರಾಹ್ಮಣನನ್ನು ಹೀಗೆ ಗೋಳಾಡಿಸಬಹುದೇ? ಇಷ್ಟು ಹೊತ್ತು? ಎಲ್ಲಿ ಮರೆಯಾಗಿದ್ದೆ? ನಿನಗಾಗಿ ಜಗತ್ತನ್ನೆಲ್ಲಾ ಜಾಲಾಡಿ ಬಂದಿದ್ದೇನೆ. ನಿನಗೆ ಸರಿಯಾಗಿ ಪಾಠ ಕಲಿಸಲೇ ಬೇಕು ತಾಳು... ನಿನ್ನ ಮೇಲುದದ ತುದಿಯನ್ನು ನನ್ನ ಬೆರಳಿಗೆ ಕಟ್ಟಿಕೊಳ್ಳುತ್ತೇನೆ. ಆಗಲಾದರೂ ಈ ಗೆಳೆಯನನ್ನು ಬಿಟ್ಟು ಹೋಗುವುದಿಲ್ಲ (ಎಂದು ಬೆರಳಿಗೆ ತುದಿಯನ್ನು ಕಟ್ಟಿಕೊಳ್ಳುವನು)

**ಅವಿಮಾರಕ:** ಗೆಳೆಯಾ.... ಗೆಳೆಯಾ.... ಕ್ಷಮಿಸು ನನ್ನಿಂದ ಅಪರಾಧವಾಯಿತು. ಇನ್ನು ಮೇಲೆ ನಿನ್ನ ಜೊತೆ ಬಿಡುವುದೇ ಇಲ್ಲ (ಎಂದು ಹೇಳುತ್ತಿದ್ದಂತೆ ಅದೃಶ್ಯ ರೂಪನಾಗುತ್ತಾನೆ)

**ವಿದೂಷಕ :** (ಸ್ವಗತ) ಅರೆ! ಎಲ್ಲಿ ಮಾಯವಾದನಪ್ಪ. ಬಟ್ಟೆ ತುದಿ ಬೆರಳಿಗಿದೆ. ಆದರೆ ಅವನೇ ಕಾಣುತ್ತಿಲ್ಲ. ಇದೇನಾಶ್ಚರ್ಯ! ನಿಜವಾಗಿಯೂ ಅವನು ನನ್ನ ಗೆಳೆಯ ಅವಿಮಾರಕನೋ ಅಥವಾ ಅವಿಮಾರಕನ ವೇಷದಲ್ಲಿನ ಕಾಮರೂಪಿ ರಾಕ್ಷಸನೋ... ಅಯ್ಯಯ್ಯೋ..... ರಾಕ್ಷಸನೇ ಆದಲ್ಲಿ.....

ದೇವರೇ ಗತಿ! ದೇವರೇ.... ದೇವರೇ ಈ ಬಡ ಬ್ರಾಹ್ಮಣನ ಮೇಲೆ ಕರುಣೆಯಿಡು. ಅವಿಮಾರಕ.... ಗೆಳೆಯಾ.... ನೀನು ಕಂಡದ್ದು ನಿಜವೇ ಆದರೆ ನನ್ನನ್ನು ಕಾಡದೆ ಪ್ರತ್ಯಕ್ಷನಾಗು..... ನಿನ್ನ ದಮ್ಮಯ್ಯ ಅಂತೀನಿ (ಹೆದರಿ ಕಣ್ಮುಚ್ಚಿಕೊಂಡು ಬೇಡುವನು)

**ಅವಿಮಾರಕ:** ಸಂತುಷ್ಟ! ಸಂತುಷ್ಟ...... ಇಗೋ ನಾನು ಬಂದೆ. ನಿನ್ನ ಗೆಳೆಯ. ನಿನಗೇನೂ ಭಯಬೇಡ. ನಾನು ನಿಜವಾಗಿಯೂ ಬಂದಿದ್ದೇನೆ. ಎಲ್ಲಿ ಕಣ್ತೆರೆದು ನೋಡು.

**ಸಂತುಷ್ಟ :** ದೇವರಾಣೆಗೂ ನೀನು ರಾಕ್ಷಸನಲ್ಲ ತಾನೇ (ಕಣ್ಮುಚ್ಚಿಕೊಂಡೇ ಇರುವನು)

**ಅವಿಮಾರಕ:** ಖಂಡಿತಾ ಅಲ್ಲ. ತಗೋ ನನ್ನ ಕೈ ಸ್ಪರ್ಶ ಮಾಡು. (ಎಂದು ಕೈಯನ್ನು ಚಾಚುವನು. ವಿದೂಷಕ ಅದನ್ನು ಭದ್ರವಾಗಿ ಹಿಡಿದು)

**ಸಂತುಷ್ಟ :** (ಉತ್ಸಾಹದಿಂದ ಜಿಗಿದೆದ್ದು) ಹಾಂ! ಈಗ ಸಿಕ್ಕಿ ಬಿದ್ದೆ. ಇನ್ನೆಲ್ಲಿ ತಪ್ಪಿಸಿಕೊಳ್ಳುತ್ತೀ!.... ಏನಯ್ಯಾ ನನ್ನ ಜೊತೆಗೇ ನಿನ್ನ ಪರಿಹಾಸವೋ! ಹುಡುಗಾಟವೋ? ನಿನ್ನ ತಂದೆ ತಾಯಿ ಬಂಧು ಮಿತ್ರರು ಯಾರಾರೂ ನಿನಗೆ ನೆನಪಾಗಲಿಲ್ಲವೇ? ಇದ್ದಕ್ಕಿದ್ದಂತೆ ಎಲ್ಲರನ್ನು ಬಿಟ್ಟು ಹೀಗೆ ಪಲಾಯನ ಮಾಡೋದೇ? ಯಾರೂ ಬೇಡವಾದರೆ ಬೇಡ. ಆದರೆ ಕುರಂಗಿಯ ವಿಚಾರವನ್ನೇ ಮರೆಯುವುದು ನಿನಗೆ ನ್ಯಾಯವೇನಯ್ಯ? ನಿನ್ನನ್ನೇ ನಂಬಿಕೊಂಡು ನಿನ್ನಲ್ಲೇ ಪ್ರಾಣ ಇಟ್ಟುಕೊಂಡಿರುವವಳನ್ನು ನಡು ನೀರಿನಲ್ಲಿ ಕೈ ಬಿಟ್ಟು ನಿನ್ನ ಕ್ಷೇಮವನ್ನೇ ಯೋಚಿಸುವುದು ಯಾವ ಧರ್ಮ?

**ಅವಿಮಾರಕ:** (ನೋವಿನಿಂದ) ಏನೆಂದೆ ಮಿತ್ರ? ನಾನು... ನನ್ನ ಕ್ಷೇಮವನ್ನು ಮಾತ್ರವೇ ಯೋಚಿಸಿದೆನೇ? ನಿನ್ನ ಗೆಳೆಯನ ವಿಚಾರವಾಗಿ ಹೀಗೆ ತಪ್ಪು ಭಾವಿಸುವುದು ನಿನಗೆ ಮಾತ್ರ ಸರಿಯೇ? ಕುರಂಗಿಯ ಕ್ಷಣದ ಅಗಲಿಕೆಯನ್ನು ಸಹಿಸಲಾಗದ ನಾನು ಅವಳಿಂದ ದೂರವಿದ್ದು ಪ್ರಾಣದೊಂದಿಗೆ ಇರುತ್ತೇನೆಂಬ ಕಲ್ಪನೆಯಾದರೂ ನಿನಗೆ ಹೇಗೆ ಬಂತು?

**ಸಂತುಷ್ಟ :** ಮತ್ತೆ ನೀನು ಸಾಯಲು ಪ್ರಯತ್ನಿಸಿದೆಯಾ? (ಶಂಕೆಯಿಂದ)

**ಅವಿಮಾರಕ:** ಹೌದು. ಆದರೆ ವಿಧಿ ನನ್ನನ್ನು ಸಾಯಬಿಡಲಿಲ್ಲ. ನನ್ನ ಪೂರ್ವಜನ್ಮದ ಪುಣ್ಯದ ಫಲವೋ ಎಂಬಂತೆ ದೇವಪುರುಷನಂತಹ ಯಕ್ಷನೊಬ್ಬನು ನನ್ನನ್ನು ಸಾವಿನಿಂದ ಪಾರುಗಾಣಿಸಿದ್ದೇ ಅಲ್ಲದೆ, ಊಹೆಗೂ ನಿಲುಕದ ಉಪಕಾರ ಭಾರವನ್ನು ಹೊರಿಸಿ ಸಚ್ಚರಿತ್ರನಾದವನು ಲೋಕದಲ್ಲಿ ಹೇಗಿರಬೇಕೆಂಬುದನ್ನು ತೋರಿಸಿಕೊಟ್ಟು ಪುಣ್ಯವಂತನಾದ. ಎಂದೆಂದಿಗೂ ಕುರಂಗಿಯ ಸಹವಾಸದಿಂದ ವಂಚಿತನಾಗಲು ಸಾಧ್ಯವೇ ಇಲ್ಲದ ಒಂದು ಉಡುಗೊರೆ ಕೊಟ್ಟ.

**ಸಂತುಷ್ಟ :** (ಆಶ್ಚರ್ಯ, ಅನುಮಾನ) ಅದೆಂತಹ ಅದ್ಭುತವಿರಬೇಕಪ್ಪ!! ಕುರಂಗಿಯಿಂದ ಎಂದೆಂದಿಗೂ ವಂಚಿತನಾಗದಂತೆ ಮಾಡುವ ಆ ಮಹಿಮೆಯುಳ್ಳದ್ದಾದರೂ ಏನು?

**ಅವಿಮಾರಕ:** ಅದೊಂದು ಮಂತ್ರದುಂಗುರ. ಇನ್ನು ಮುಂದೆ ಯಾರ ಭಯವೂ ಇಲ್ಲದೆ ನನ್ನ ಈ ಉಂಗುರ ಪ್ರಭಾವದಿಂದ ನಿರಾತಂಕವಾಗಿ ಕುರಂಗಿಯಲ್ಲಿಗೆ ಹೋಗಿ ಬರಬಹುದು.

**ಸಂತುಷ್ಟ :** ಹೂಂ! (ಮೆಚ್ಚಿ) ಮಂತ್ರದುಂಗುರ!! ಏನಯ್ಯ ಈ ಗೆಳೆಯನನ್ನು ಮೂರ್ಖನೆಂದು ತಿಳಿದೆಯಾ? ಮಂತ್ರದುಂಗುರವನ್ನು ಕೊಡುವಷ್ಟು ದೊಡ್ಡವನೇನು ಆ ನಿನ್ನ ಯಕ್ಷ ಗೆಳೆಯಾ? ಸುಮ್ಮನೆ ಕತೆಕಟ್ಟಬೇಡ. ನೀನು ಹೇಳುವ ಮಾತುಗಳಲ್ಲಿ ನನಗೆ ನಂಬಿಕೆ ಬರುತ್ತಿಲ್ಲ.

**ಅವಿಮಾರಕ:** (ತಿಳಿಸುವಂತೆ) ಸರಿ ಹಾಗಾದರೆ, ಈಗ ನೀನೇ ನೋಡುವಿಯಂತೆ ಅದರ ಪವಾಡಾನಾ? ಹಾಗೆಯೇ ನೋಡುತ್ತಿರು. ನಾನು ನಿನಗೆ ಕಾಣಿಸದಂತೆ ಏನೇನು ಮಾಡುತ್ತೀನಿ. (ಎಂದು ಅದೃಶ್ಯನಾಗುವನು. ನಾಲ್ಕಾರು ಕಡೆಗಳಿಂದ ಸಂತುಷ್ಟನ ಹೆಸರನ್ನು ಕರೆಮ, ಸಂತುಷ್ಟನನ್ನು ದಿಗ್ಭ್ರಮೆಗೊಳಿಸುವನು)

**ಸಂತುಷ್ಟ :** (ದನಿ ಕೇಳಿ ಬಂದ ಕಡೆಯಲ್ಲೆಲ್ಲ ಅಲೆದಾಡಿ, ಸುಸ್ತಾಗಿ) ಸಾಕು ಗೆಳೆಯಾ ಸಾಕು... ಬಾ ಒಪ್ಪಿದೆ ನಿನ್ನ ಉಂಗುರ ಮಹಿಮೆಯನ್ನು. ಆದಷ್ಟು ಬೇಗ ಇಲ್ಲಿಂದ ಹೊರಟು ಪಾಪ ರಾಜಕುಮಾರಿಯ ಅವಸ್ಥೆ ಏನಾಗಿದೆಯೋ ನೋಡಬೇಕಾಗಿದೆ.

**ಅವಿಮಾರಕ:** (ಪ್ರತ್ಯಕ್ಷನಾಗಿ) ಗೆಳೆಯಾ.... ಗೆಳೆಯಾ.... ಕುರಂಗಿಯ ಹೆಸರನ್ನು ನೆನಪಿಸಿ., ನನ್ನ ನೋವಿನ ಕಟ್ಟೆಯೊಡೆದೆ. ಹೌದು ಹೌದು.... ನನ್ನ ಪ್ರಾಣೇಶ್ವರಿಯನ್ನು ಈ ಕ್ಷಣ ಕಾಣಬೇಕು. ಇಲ್ಲದಿದ್ದಲ್ಲಿ ಮನಸ್ಸಿನ ವ್ಯಾಕುಲಕ್ಕೆ ನಿಲುಗಡೆಯಿಲ್ಲ.

**ಸಂತುಷ್ಟ :** ನಿನ್ನ ಉಂಗುರ ನನ್ನನ್ನೂ ಅದೃಶ್ಯಗೊಳಿಸುತ್ತದೆಯೋ ಹೇಗೆ?

**ಅವಿಮಾರಕ:** ಅದೆಲ್ಲ ಆಮೇಲಿರಲಿ. ಮೊದಲು ಇಲ್ಲಿಂದ ಹೊರಡೋಣ.

**ಸಂತುಷ್ಟ :** ನಿನ್ನಿಷ್ಟದಂತೆಯೇ ಆಗಲಿ..... ಸದ್ಯ ನೀನು ನನಗೆ ಮರಳಿ ದೊರೆತೆಯಲ್ಲ, ಜನ್ಮ ಸಾರ್ಥಕವಾಯಿತು.

**ಅವಿಮಾರಕ:** ಗೆಳೆಯಾ ನಗರದ ಚೌಕದವರೆಗೆ, ನಿನ್ನೊಟ್ಟಿಗೆ ಬರುತ್ತೇನೆ. ನಂತರ ನೀನು ನೇರವಾಗಿ ಮನೆಯ ದಾರಿ ಹಿಡಿ. ನಾನು ಅದೃಶ್ಯ ರೂಪದಲ್ಲಿ ಕುರಂಗಿಯ ಗುಪ್ತ ಸ್ಥಾನವನ್ನು ಹುಡುಕಿ ಪತ್ತೆ ಹಚ್ಚುತ್ತೇನೆ (ಹೊರಡುವರು).

೦೦

## ದೃಶ್ಯ – ೩

(ನಳಿನಿಕಾ ಮತ್ತು ಕುರಂಗಿಯವರು ಗಾಢವಾದ ಚಿಂತೆಯ ಮುಖಭಾವದಿಂದ ಪ್ರವೇಶಿಸುವರು.)

**ನಳಿನಿಕಾ** : ರಾಜಕುಮಾರಿ ಇಷ್ಟು ಗಾಢವಾದ ಚಿಂತೆಗೆ ಅವಕಾಶವಿಲ್ಲ.

**ಕುರಂಗಿ** : ಅದು ಹೇಗೆ ಚಿಂತೆಗೆ ಅವಕಾಶವಿಲ್ಲಾಂತೀಯಾ ನಳಿನಿಕಾ. ನನಗಂತೂ ಪ್ರಾಣವೇ ಹಾರಿಹೋದಷ್ಟು ಭಯವಾಗುತ್ತಿದೆ. ನಿನ್ನಿನ ಸಂಗತಿಯಿಂದಂತೂ ನನಗೆ ದಿಕ್ಕೇ ತೋರುತ್ತಿಲ್ಲ. ಅವನೇನಾದರೂ ಭಟರ ಕೈಗೆ ಸಿಕ್ಕಿ ಬಿದ್ದಿದ್ದರೆ!!..... ಅಬ್ಬ ಯೋಚಿಸಿದರೇ ಮೈ ನಡುಗುತ್ತಿದೆ.... ಅಲ್ಲಿಂದ ತಪ್ಪಿಸಿಕೊಂಡೇನೋ ಹೋಗಿರಬಹುದು. ಆದರೆ ಈಗ ಅವನು ಎಲ್ಲಿರುವನೋ ಹೇಗಿರುವನೋ! ನನ್ನನ್ನು ತೊರೆದು ಒಂದು ಕ್ಷಣವಾದರೂ ಇರಲಾರದ ಪರಿಸ್ಥಿತಿಯಲ್ಲಿ ಅವನ ವಿಚಾರವಾಗಿ ಅನಿಷ್ಟ ಶಂಕೆಗಳೇ ಮೂಡುತ್ತಿವೆ. ಪ್ರತ್ಯಕ್ಷವಾಗಿ ಅವನನ್ನು ನೋಡದ ಹೊರತು, ಹೃದಯ ಕಳವಳಿಸಿ ಹೋಗಿದೆ. ಹೊತೆಗೆ ರಾಜಧಾನಿಯಲ್ಲೆಲ್ಲಾ ಏನೋ ವದಂತಿಗಳು ನನ್ನ ವಿಚಾರದವಾಗಿ ಹಬ್ಬುತ್ತಿವೆಯಂತೆ.

**ನಳಿನಿಕಾ** : ಇಲ್ಲದ್ದನ್ನು ಊಹಿಸಿಕೊಂಡು ವಿನಾಕಾರಣ ಕಳವಳಿಸುತ್ತಿದ್ದೀರಿ. ರಾಜಕುಮಾರರು ಸುರಕ್ಷಿತವಾಗಿರುತ್ತಾರೆ. ಅಲ್ಲದೆ ಹೇಗಾದರೂ ನಿಮ್ಮನ್ನು ಕಾಣಲು ಬಂದೇ ಬರುತ್ತಾರೆ. ಇನ್ನು ಊರಿನವರ ವದಂತಿಗಳ ಬಗ್ಗೆ ನೀವೇಕೆ ತಲೆ ಕೆಡಿಸಿಕೊಳ್ಳುತ್ತೀರಿ. ಬಾಯಿಗೆ ಬಂದದ್ದನ್ನು ಆಡಿಕೊಳ್ಳುವುದೇ ಜನರ ಸ್ವಭಾವ.

**ಕುರಂಗಿ** : ಅಷ್ಟೇ ಅಲ್ಲ. ಅರಮನೆಯ ಆಳು ಕಾಳುಗಳೆಲ್ಲ ನನ್ನ ಬಗ್ಗೆ ಏನೋ ಒಂದು ಬಗೆಯ ಅನುಮಾನ ದೃಷ್ಟಿಯಿಂದ ನೋಡುತ್ತಾರೆ. ಅವರ ಸಖಿಯರ ನೋಟವೇ ವಿಚಿತ್ರವೆನಿಸುತ್ತದೆ. ಅವರ ನಡವಳಿಕೆಯೂ

ಹಾಗೆ! ಕಾರಣವಿಲ್ಲದೆ ಬಂದು ಮಾತನಾಡುತ್ತಾರೆ; ಮುಸಿ ಮುಸಿ ನಗುತ್ತಾರೆ. ಆರೋಗ್ಯದ ಬಗ್ಗೆ ವಿಚಾರಿಸುತ್ತಾರೆ. ಸಲುಗೆಯಿದ್ದವರು ಹತ್ತಿರ ಬಂದು ಪ್ರಣಯ, ವಿರಹ ಕತೆಗಳನ್ನು ಹೇಳುತ್ತಾರೆ. ವಿರಹ ಗೀತೆಗಳನ್ನು ಹಾಡಿಸುತ್ತಾರೆ. ನನಗಂತೂ ಸಾಕು ಸಾಕಾಗಿ ಹೋಗಿದೆ.

**ನಳಿನಿಕಾ** : ರಾಜಕುಮಾರಿ ನಿಮ್ಮ ಮೈ ಮನಗಳು ಸ್ವಸ್ಥವಾಗಬೇಕಾದರೆ. ಒಂದೆರಡು ತಾಸು ಅರಮನೆಯ ಮಾಳಿಗೆಯ ಮೇಲೆ ಸುತ್ತಾಡಿ ಬರುವ. ಸುತ್ತಲಿನ ಸೌಂದರ್ಯ ದರ್ಶನವೂ ಆದೀತು. ತಣ್ಣನೆಯ ಗಾಳಿಯಿಂದ ಕೆಳಗಿನ ವಿರಹಾನಲವೂ ತಂಪಾದೀತು.

**ಕುರಂಗಿ** : (ಹುಸಿ ಮುನಿಸಿನಿಂದ) ನೋಡಿದೆಯಾ ನೋಡಿದೆಯಾ ನೀನು ಚೇಷ್ಟೆಗೆ ಆರಂಭಿಸಿದೆ. ವಿರಹದ ಮಾತಿನಿಂದ ನನ್ನನ್ನೇಕೆ ಉರಿಸುತ್ತೀ?

**ನಳಿನಿಕಾ** : ಓ ರಾಜಕುಮಾರಿ. ಸುಮ್ಮನೆ ವಿನೋದಕ್ಕಾಗಿ ಹಾಗೆಂದೆ. ನಿಮ್ಮ ನೋವಿನಲ್ಲಿ ನನಗೆ ಸಂತೋಷವಾಗಲು ಸಾಧ್ಯವೇ? ಬಾ.... ಬೇಗ (ಎಂದು ಹೊರಟು ಮಾಳಿಗೆ ಮೇಲೆ ಕಾಣಿಸಿಕೊಳ್ಳುವರು)

ರಾಜಕುಮಾರಿ, ಎಷ್ಟು ಅದ್ಭುತ ರೋಮಾಂಚಕಾರಿಯಾಗಿದೆ ಇಲ್ಲಿನ ಸೌಂದರ್ಯ ನೋಡು ಬಾ ಹದವಾಗಿ ಮಿದುವಾಗಿ ಉದುರುತ್ತಿರುವ ಮಳೆ ತುಂತುರಿನ ಶೀತಲತೆಯನ್ನು ಅನುಭವಿಸು ಬಾ. ಇಂತಹ ಮಧುರ ಕ್ಷಣಗಳಲ್ಲಿ ನಿನ್ನ ಒಲವನಿದ್ದಿದ್ದರೆ, ಸ್ವರ್ಗಕ್ಕೆ ಖಂಡಿತವಾಗಿಯೂ ಕಿಚ್ಚು ಹಚ್ಚಬೇಕೆನಿಸುತ್ತಿತ್ತು.

**ಕುರಂಗಿ** : (ನಿಟ್ಟುಸಿರು) ಹಾ! ಪ್ರಾಣಕಾಂತ! ನನ್ನಿಂದಾಗಿ ಏನೆಲ್ಲ ಕಷ್ಟಗಳನ್ನು ಅನುಭವಿಸುತ್ತಿರುವೆಯೋ ದೇವರೆಂದಿಗೆ ನಮ್ಮಿಬ್ಬರನ್ನೂ ಒಟ್ಟಿಗೆ ಸೇರಿಸುವನೋ!.... ಈ ವಿರಹಾಗ್ನಿಗೆ ಖಂಡಿತವಾಗಿಯೂ ಬೆಂದು ಬೂದಿಯಾಗುತ್ತೇನೆ.

**ನಳಿನಿಕಾ** : (ನಗುತ್ತಾ) ಬೆಂದು ಬೂದಿಯಾಗುವವರೆಗೆ ಅವಕಾಶ ಕೊಡುವುದಿಲ್ಲ ಸಖಿ ವಿಲಾಸಿನೀ, ವಿನೋದಿನೀ.... ಬೇಗ ಬನ್ನಿ, ರಾಜಕುಮಾರಿಯನ್ನು ಈ ಚಂದ್ರಶಿಲೆಯ ಮೇಲೆ ಮಲಗಿಸಿ ಚಂದನವನ್ನು ಲೇಪಿಸಿ.

**ಕುರಂಗಿ** : ನಳಿನಿಕಾ. ಇದೆಲ್ಲಾ ಏನು? ಯಾವಾಗಲಿಂದ ಈ ಸಂಚು!!

**ನಳಿನಿಕಾ** : ಸಂಚೇನು ಬಂತು ಸಖಿ. ನಿನ್ನ ಸುಖ ಸಂತೋಷವೇ ನಮ್ಮ ಪಾಲಿನ ಅದೃಷ್ಟ. ನಿನ್ನ ಯೋಗಕ್ಷೇಮವೇ ನಮ್ಮ ಜೀವನಧರ್ಮ.

**ಕುರಂಗಿ** : (ತುಂಬಿ ಬಂದು) ನಳಿನಿಕಾ.... ನಳಿನಿಕಾ.... ನಿಮ್ಮಂತಹ ಗೆಳತಿಯರಿರುವುದರಿಂದಲೇ ನಾನು ಅಪಾಯ ಮುಕ್ತಳಾಗಿ ಇಲ್ಲಿಯವರೆಗೆ

ಉಳಿಯಲು ಸಾಧ್ಯವಾಗಿದೆ. ಇಲ್ಲವಾದಲ್ಲೆಂದೋ ಗುಟ್ಟು ಬಯಲಾಗಿ, ನನ್ನ ತಲೆಯೇ ಹಾರಿ ಹೋಗುತ್ತಿತ್ತು.

ನಳಿನಿಕಾ : ಅಷ್ಟು ಸುಲಭವಾಗಿ ನಿಮ್ಮನ್ನು ಬಿಟ್ಟು ಕೊಡುತ್ತೇವೆಯೇ?

ಕುರಂಗಿ : ಏನೋ ನಳಿನಿಕಾ.... ನಮ್ಮಿಬ್ಬರ ಈ ಪ್ರಣಯ ಸಾಹಸ ಎಲ್ಲಿಗೆ ತಲುಪುವುದೋ ಏನೋ! ಕ್ಷಣ ಕ್ಷಣಕ್ಕೂ ಭಯ ತಲ್ಲಣಗಳು ನನ್ನನ್ನು ಹಿಂಡಿ ಹಿಪ್ಪೆ ಮಾಡಿವೆ.

(ಅಷ್ಟರಲ್ಲಿ ಮತ್ತೊಬ್ಬ ಸಖಿ ಆತುರಾತುರವಾಗಿ ಬಂದರು)

ಸಖಿ : ರಾಜಕುಮಾರಿ ರಾಜಕುಮಾರಿ..... ಯಾರೋ ಒಬ್ಬ ಬಡ ಬ್ರಾಹ್ಮಣನು ತಮ್ಮನ್ನು ಕಂಡು ಆಶೀರ್ವಚನ ನೀಡಬೇಕೆಂದು ಕೋರುತ್ತಿದ್ದಾನೆ. ಅವನನ್ನು ಇಲ್ಲಿಗೆ ಕರೆತರಲೇ?

ಕುರಂಗಿ : ಏನೆಂದೆ ಬಡ ಬ್ರಾಹ್ಮಣನೇ? ಬಡ ಬ್ರಾಹ್ಮಣ ಇದ್ದಕ್ಕಿದ್ದಂತೆ ಇಲ್ಲಿಗೇಕೆ ಬರಬೇಕು?

ನಳಿನಿಕಾ : ರಾಜಕುಮಾರಿ ಇವಳಿಗೆ ವಿಷಯ ಸರಿಯಾಗಿ ತಿಳಿಯಲಾಗದು. ನಾನು ಹೋಗಿ ಯಾರೆಂದು ವಿಚಾರಿಸಿಕೊಂಡು ಬರುತ್ತೇನೆ.... (ಬಂದ ಸಖಿಗೆ) ನೀ ಹೋಗು ಮುಂದಿನದನ್ನು ನಾನು ನೋಡಿಕೊಳ್ಳುತ್ತೇನೆ. (ಹೊರಡುವಳು. ಅವಳ ಹಿಂದಿನಿಂದಲೇ ತಾನೂ ಹೊರಟು ಒಂದೆರಡು ಕ್ಷಣಗಳ ನಂತರ ಹಿಂತಿರುಗಿ ಬಂದು ಕುರಂಗಿಯ ಕಿವಿಯಲ್ಲಿ ಗುಟ್ಟಾಗಿ ಏನನ್ನೋ ಹೇಳುವಳು. ಅದನ್ನು ಕೇಳುತ್ತಿದ್ದಂತೆ ಅವಳ ಮುಖ ಅರಳುವುದು)

ಕುರಂಗಿ : ನೀನು ಹೇಳುತ್ತಿರುವುದು ಸುಳ್ಳಲ್ಲ ತಾನೇ?.... (ತನಗೆ ಚಂದನ ಲೇಪ ಮಾಡುತ್ತಿದ್ದವರ ಕಡೆ ತಿರುಗಿ) ಸ್ವಲ್ಪ ವಿಶ್ರಾಂತಿ, ಏಕಾಂತತೆ ಬೇಕಾಗಿದೆ. ನೀವೆಲ್ಲ ಇಲ್ಲಿಂದ ಹೊರಡಿ. ನಳಿನಿಕಾ ನೀ ಹೇಳಿದ ಆ ಬಡ ಬ್ರಾಹ್ಮಣನನ್ನು ಇಲ್ಲಿಗೇ ಕರೆದು ತಾ.

ನಳಿನಿಕಾ : ಆಯ್ತು ಸಖಿ. (ಹೊರಟು ಸಂತುಷ್ಟನನ್ನು ಜೊತೆಗೆ ಕರದು ತರುವಳು.)

ಸಂತುಷ್ಟ : ರಾಜಕುಮಾರಿಗೆ ಸನ್ಮಂಗಳವುಂಟಾಗಲಿ. ನಾನು ಸಂತುಷ್ಟ, ಅವಿಮಾರಕನ ಆಪ್ತ ಗೆಳೆಯ.

ಕುರಂಗಿ : (ಕುಳಿತಲ್ಲಿಂದ ಜಿಗಿದು) ಏನು..... ತಾವು ನನ್ನ ಪ್ರಾಣೇಶ್ವರನ ಗೆಳೆಯರೆ? ನಿಮ್ಮ ಗೆಳೆಯರು ಈಗ ಎಲ್ಲಿರುವರು? ನನ್ನನ್ನು ಎಂದಾದರೂ ನೆನಪಿಸಿ ಕೊಳ್ಳುವರೇನು? ಅವರು ನನ್ನನ್ನು ಕಾಣಲು ಬರುವುದಿಲ್ಲವೆ? ನನ್ನ ಬಗ್ಗೆ ಇಷ್ಟೊಂದು ನಿರ್ದಯತೆಯೇ? (ಎಂದು ಒಂದೇ ಸಮನೆ ಬಡಬಡಿಸುತ್ತಾ ಹೋಗುತ್ತಾಳೆ).

**ಸಂತುಷ್ಟ** : ರಾಜಕುಮಾರಿ ಇಷ್ಟೊಂದು ಉದ್ವಿಗ್ನರಾಗಬೇಡಿ. ನಿಮ್ಮ ಸ್ವಾಮಿಯ ಸಂದೇಶ ಹೊತ್ತೇ ಬಂದಿದ್ದೀನಿ. ನಿಮ್ಮ ಆತುರ ಕಾತುರಗಳನ್ನು ತಡೆದುಕೊಳ್ಳಿ. ಅವರಿಗಾಗಿ ಹಂಬಲಿಸುವ ಅಗತ್ಯವಿಲ್ಲ. ಈಗಾಗಲೇ ಅವರು ನಿಮ್ಮ ಬಳಿ ಇದ್ದಾರೆ.

**ಕುರಂಗಿ** : ನೀವೇನು ಹೇಳುತ್ತಿದ್ದೀರಿ ಬ್ರಾಹ್ಮಣೋತ್ತಮ. ಆರ್ತರನ್ನು ಅಸಹಾಯಕರನ್ನು ಕಂಡರೆ ನಿಮಗೂ ಅಸಡ್ಡೆಯೇ? ನಮ್ಮೊಂದಿಗೆ ನಿಮಗೂ ಪರಿಹಾಸವೇ? (ಎಂದು ನೊಂದುಕೊಳ್ಳುವಳು)

**ನಳಿನಿಕಾ** : ಅಯ್ಯಾ ಬ್ರಾಹ್ಮಣ ಶ್ರೇಷ್ಠ, ನೊಂದವರನ್ನು ಇನ್ನಷ್ಟು ನೋಯಿಸದೆ ನಿಜ ಏನೆಂದು ಹೇಳಿ.

**ಸಂತುಷ್ಟ** : ನನ್ನಾಣೆಗೂ, ನನ್ನ ಜನಿವಾರದಾಣೆಗೂ ನಾನು ನಿಜವನ್ನೇ ಹೇಳುತ್ತಿದ್ದೇನೆ. ಈಗಾಗಲೇ ಗೆಳೆಯ ನಿಮ್ಮ ಬದಿಯಲ್ಲಿಯೇ ಇದ್ದಾನೆ... ಓ ಗೆಳೆಯಾ ಅವಿಮಾರಕ... ಸಾಕು ಮಾಡಯ್ಯ ನಿನ್ನ ಪರಿಹಾಸ. ಹೀಗೆ ನೀನು ಇವರನ್ನು ಇನ್ನೂ ಕಾಡಿಸುತ್ತಿದ್ದರೆ, ಇವರು ನನ್ನನ್ನು ಇಲ್ಲಿಂದ ಎತ್ತಿ ಒಗೆದು ಬಿಟ್ಟಾರು.

**ಕುರಂಗಿ** : ನಳಿನಿಕಾ.... ಇದೇನು ವಿಚಿತ್ರ ವರ್ತನೆ. ಈ ಬ್ರಾಹ್ಮಣನೋ ಗೆಳೆಯನೊಂದಿಗೆ ಮಾತನಾಡುತ್ತಿದ್ದಾನೆ. ಆದರೆ ಆತ ಮಾತ್ರ ಕಾಣಿಸುತ್ತಿಲ್ಲ. ಇಲ್ಲಿ ಏನಾದರೂ ಇಂದ್ರಜಾಲ ನಡೆಯುತ್ತಿದೆಯೋ ಹೇಗೆ?

**ಧ್ವನಿ** : ಪ್ರಿಯೆ, ಕುರಂಗಿ, ಅನವಶ್ಯಕವಾಗಿ ಈ ಬ್ರಾಹ್ಮಣನನ್ನು ಸಿಟ್ಟಾಗಿ ಸಂದೇಹಿಸಬೇಡ. ನೋಡು ನಿನ್ನ ವಾಮಭಾಗದಲ್ಲಿ ಕುಳಿತು ನಿನ್ನ ಚಂದ್ರಾನನದ ಕಾಂತಿ ದರ್ಶನ ಭಾಗ್ಯವನ್ನು ಅನುಭವಿಸುತ್ತಿದ್ದೇನೆ. ಅರುಣ ಕಿಸಲಯ ಕೋಮಲಾಧರ ಚುಂಬನಕ್ಕಾಗಿ ಪರಿತಪಿಸುತ್ತಿದ್ದೇನೆ.

**ಕುರಂಗಿ** : ಪ್ರಿಯತಮ–ಪ್ರಾಣೇಶ್ವರ... ಅದೃಶ್ಯ ರೂಪದಲ್ಲಿದ್ದು ಕಾಡುವುದನ್ನು ಬಿಟ್ಟು, ಪ್ರತ್ಯಕ್ಷವಾಗಿ ಕಾಣಿಸಬಾರದೇ?

**ಅವಿಮಾರಕ**: ಆಯ್ತು ಪ್ರಿಯೆ. ಇನ್ನು ಹಿಂಸಿಸುವುದು ತರವಲ್ಲ. ಇದೋ ನೋಡು ಮನದಣಿಯೆ ನೋಡು (ಎಂದು ಪ್ರತ್ಯಕ್ಷನಾಗುವನು)

**ಸಂತುಷ್ಟ** : ಅಯ್ಯಾ ಗೆಳೆಯಾ... ಸಾಕು ಸಾಕು ನಿನ್ನ ಈ ಸಹವಾಸ. ಬೆಕ್ಕಿಗೆ ಚೆಲ್ಲಾಟ, ಇಲಿಗೆ ಪ್ರಾಣ ಸಂಕಟ ಅನ್ನೋ ಹಾಗೆ, ನೀನು ಮಾಡುತ್ತಿರುವ ಕೀಟಲೆ ನನ್ನ ಕುತ್ತಿಗೆಗೇ ಬರುವುದರಲ್ಲಿತ್ತು.

**ಅವಿಮಾರಕ**: ಕೋಪ ಮಾಡಿಕೊಳ್ಳಬೇಡಯ್ಯಾ. ನನ್ನ ಮನದನ್ನೆಯ ವರ್ಣನೆ ಕೇಳಿ ಸಂದೇಹಿತನಾಗಿದ್ದ ನಿನಗೆ ಅವಳ ಪ್ರತ್ಯಕ್ಷ ದರ್ಶನ ಮಾಡಿಸೋಣವೆಂದೇ

ನಿನ್ನನ್ನು ಕರೆತಂದೆ. ನೋಡಿದೆಯಾ ಗೆಳೆಯಾ ನನ್ನೊಲುಮೆಯ ಬೆಳಕಾದ ಕುರಂಗಿ ಹೇಗೆ ವಿರಹ ತಪ್ತಳಾಗಿ, ನಿರಾಲಂಕೃತೆಯಾಗಿ ಚಂದನಲೇಪ ಪಡೆಯುತ್ತಿದ್ದಾಳೇ!.... ಆಹಾ ಅದ್ಭುತ ಸಹಜ ಸೌಂದರ್ಯದ ಈ ಪ್ರಭಾ ಪುಂಜವನ್ನು ಊಹಿಸಿಕೊಳ್ಳಲೂ ಆಗದಲ್ಲವೇ? ಇದೇ ಗೆಳೆಯಾ ಇದೇ.... ನನ್ನನ್ನು ಮಂತ್ರ ಮುಗ್ಧನನ್ನಾಗಿ ಮಾಡಿದ್ದು. ಇವಳೇ ಒಂದು ಶೃಂಗಾರ ಕಾವ್ಯ.

**ಸಂತುಷ್ಟ** : ಒಪ್ಪಿದೆ ಗೆಳೆಯಾ ಒಪ್ಪಿದೆ. ನೀನೇ ಜಗತ್ತಿನಲ್ಲೆಲ್ಲಾ ಅನುಪಮ ಸುಂದರನೆಂದು ಹೆಮ್ಮೆ ಬೀಗುತ್ತಿದ್ದೆ. ಈಗ ಗೊತ್ತಾಯಿತಾ ಈಕೆಯ ಸಹಜ, ನಿರಾಲಂಕೃತ ಸೌಂದರ್ಯದ ಮುಂದೆ ನಿನ್ನದು ಎಷ್ಟು ಸಪ್ಪೆ ಎಂದು. ನಿನ್ನ ವಿರಹದಲ್ಲಿ ದೇಹ ಸ್ವಲ್ಪ ಬಡವಾಗಿದೆ ಎನಿಸಿದರೂ ಶರತ ಚಂದ್ರನಂತೆ ನನ್ನ ಕಣ್ಣುಗಳಿಗೆ ಗೆಲುವಿನ ತಂಪನ್ನಂತೂ ನೀಡುತ್ತಿದೆ.

**ಅವಿಮಾರಕ**: ಸಂತುಷ್ಟ ಈಚೀಚೆಗೆ ನೀನು ಬಹಳ ಬುದ್ಧಿವಂತನಾಗುತ್ತಿದ್ದೀಯಾ. ಹೇಗೆ ಬೇಕಾದರೆ ಹಾಗೆ ಮಾತುಗಳನ್ನು ತಿರುಚುತ್ತೀಯೆ., ವಂದಿ ಮಾಗಧ ಕೆಲಸಕ್ಕೆ ಎಂದಿನಿಂದ ತೊಡಗಿದೆ? ತಮಾಷೆ ಮಾಡಬೇಡ. ನಂಗೊತ್ತು. ನನ್ನ ನಿನ್ನ ಸ್ನೇಹದ ಸಲುಗೆ ನನ್ನನ್ನು ಹಾಸ್ಯ ಮಾಡಲು ಅಧಿಕಾರ ನೀಡಿದೆ. ಆದರೆ ಅಪರಿಚಿತರ ಮುಂದೆ ಹೀಗೆ ಮಾನಗಳೆಯುವುದೇ ಹೋಗಯ್ಯಾ ಹೋಗು.... ನಿನ್ನ ಸ್ನೇಹವೇ ಬೇಡ.

**ನಳಿನಿಕಾ** : ಬ್ರಾಹ್ಮಣ ಶ್ರೇಷ್ಠ. ನಮ್ಮ ನಮ್ಮಲ್ಲೇ ಈ ಸಿಟ್ಟು ಸೆಡುವು ಹಾಸ ಪರಿಹಾಸಗಳೇಕೆ. ವಿರಹೋನ್ಮತ್ತ ಹೃದಯಗಳು ಈಗ ಪರಸ್ಪರ ಸಂಧಿಸಿವೆ. ಅವರ ಪಾಡಿಗೆ ಅವರನ್ನು ಬಿಟ್ಟು ನಾವು ಹೋಗೋಣ... (ಕುರಂಗಿಯ ಕಡೆ ತಿರುಗಿ) ಸಖಿ... ನಾವಿನ್ನು ಬರುತ್ತೇವೆ. ಎಚ್ಚರಿಕೆ. ಇಲ್ಲಿ ಬಹಳ ಹೊತ್ತು ಇರಬೇಡಿ. ತಮ್ಮ ಅಂತಃಪುರದ ಶಯ್ಯಾಗೃಹದಲ್ಲಿ ಎಲ್ಲವನ್ನೂ ಸಜ್ಜುಗೊಳಿಸಿರುತ್ತೇನೆ. ಹೇಗಿದ್ದರೂ ಈಗ ಮೊದಲಿನ ಭಯವಿಲ್ಲ. ಅವಿಮಾರಕ ರಾಜಕುಮಾರರು ಅದೃಶ್ಯರೂಪ ಪಡೆಯಬಲ್ಲವರಾದುದರಿಂದ ನಿರಾತಂಕವಾಗಿ ತಮ್ಮೊಟ್ಟಿಗೆ ಕಳೆಯಬಹುದು.... ನಿಮಗೆ ಸುಖವಾಗಲಿ ಬರುತ್ತೇವೆ. (ಎಂದು ಸಂತುಷ್ಟ ನಳಿನಿಕಾರು ಅಲ್ಲಿಂದ ಹೊರಡುತ್ತಾರೆ.)

(ಕಂಚುಕಿಯ ಪ್ರವೇಶ. ಅವಿಮಾರಕ ಹೆಜ್ಜೆ ಸಪ್ಪಳ ಕೇಳಿಸುತ್ತಿದ್ದಂತೆ ಅದೃಶ್ಯನಾಗುವನು)

**ಕಂಚುಕಿ** : (ಪ್ರವೇಶಿಸಿ) ರಾಜುಕುಮಾರಿಗೆ ಜಯವಾಗಲಿ.... ನಿಮ್ಮ ತಾಯಿ ನಿಮ್ಮ ಆರೋಗ್ಯದ ಬಗ್ಗೆ ತುಂಬಾ ಕಳವಳಗೊಂಡಿದ್ದಾರೆ. ಈಗ ತಮ್ಮ ಆರೋಗ್ಯದ ಬಗ್ಗೆ ವಿಚಾರಿಸಿ ಬರಲು ತಿಳಿಸಿದ್ದಾರೆ. ಹಾಗೆಯೇ ಈ ಔಷಧವನ್ನು ತಮಗೆ ನೀಡಲು ಹೇಳಿದ್ದಾರೆ.

**ಕುರಂಗಿ** : ಕಂಚುಕಿ, ನಮ್ಮ ತಾಯಿಯವರಿಗೆ, ನನ್ನ ಆರೋಗ್ಯದ ಬಗ್ಗೆ ಆತಂಕ ಬೇಡವೆಂದು ಹೇಳು. ಈಚೆಗೆ ಸ್ವಲ್ಪ ಸ್ವಸ್ಥಳಾಗುತ್ತಿದ್ದೇನೆ. ನನಗೆ ಬೇಕಾದ ಸಂಜೀವಿನಿ ನನಗೆ ದೊರೆತಿರುವುದರಿಂದ ಮತ್ತೇನೂ ಕಳವಳಬೇಡ. ನೀ ತಂದಿರುವ ಆ ಔಷಧಿಯನ್ನು ಇತ್ತ ಈ ಜಗುಲಿಯ ಮೇಲಿಡು. ನೀನು ಹೋಗು. ಹಾಗೆಯೇ ಒಂದೆರಡು ಗಂಟೆಗಳ ಕಾಲ ಯಾರೂ ಇಲ್ಲಿಗೆ ಬಂದು ನನ್ನನ್ನು ಭಂಗ ಗೊಳಿಸುವುದು ಬೇಡವೆಂದು ಎಚ್ಚರಿಕೆ ಹೇಳು. ನನಗೆ ಪೂರ್ಣ ವಿಶ್ರಾಂತಿ ಬೇಕಾಗಿದೆ. ತಿಳಿಯಿತೆ?

**ಕಂಚುಕಿ** : ಅಪ್ಪಣೆ ರಾಜಕುಮಾರಿ (ವಿನಯದಿಂದ ತಲೆಬಾಗಿ ನಿರ್ಗಮಿಸುತ್ತಾಳೆ)

**ಕುರಂಗಿ** : ಸ್ವಾಮಿ ಎಲ್ಲಿದ್ದೀರಿ. ಕಾಣಿಸಿಕೊಳ್ಳಿ. (ಕಾಣಿಸಿಕೊಳ್ಳುವನು) ಪ್ರಿಯತಮ... ನಾನು ಎಷ್ಟೊಂದು ಹೆದರಿಬಿಟ್ಟಿದ್ದೆ. ಭಟರ ಕೈಗೆ ಸಿಕ್ಕಿಬಿದ್ದು ಶೂಲಕ್ಕೆ ಏರಿಸುವಂತಾದರೆ– ಎಂದು ನನ್ನ ಪ್ರಾಣವೇ ಹಾರಿಹೋಗಿತ್ತು. ಇಲ್ಲಿಂದ ತಪ್ಪಿಸಿಕೊಂಡು ಹೋಗಿ ಏನೆಲ್ಲ ಪರದಾಟವಾಯಿತೋ ಏನೋ! ಮತ್ತೆ ನೀವು ನನಗೆ ದೊರೆಯಲಾರಿರೆಂದೇ ಭಾವಿಸಿದ್ದೆ. ನಿಮ್ಮನ್ನು ಬಿಟ್ಟು ಬದುಕಲಾರದೆ, ಬೇರೆಯವರೊಂದಿಗೆ ವಿವಾಹವಾಗಿ ದಾಂಪತ್ಯವನ್ನು ಒಪ್ಪಿಕೊಳ್ಳಲಾರದೆ ನನ್ನ ಸ್ಥಿತಿ ಏನಾಗುವುದೋ ಎಂದು ಕಳವಳಿಸಿದ್ದೆ. ಸದ್ಯ ದೇವರು ದೊಡ್ಡವನು. ನೀವು ನನಗೆ ಲಭಿಸಿದಿರಿ. ಇನ್ನು ಏನೇ ಅಪಾಯಗಳು ಎದುರಾದರೂ, ಅನಿಷ್ಟಗಳು ಸಂಭವಿಸಿದರೂ ಭಯವಿಲ್ಲ. ಬದುಕು ಸಾವುಗಳೆರಡರಲ್ಲೂ ನಮ್ಮನ್ನು ಜಗತ್ತೇ ಎದುರಾದರೂ ಅಗಲಿಸಲಾರದು.

**ಅವಿಮಾರಕ**: ಪ್ರಾಮಾಣಿಕ ಪ್ರೀತಿಗಿರುವ ಶಕ್ತಿಯ ಮುಂದೆ ಯಾರಿಂದಲೂ ಏನು ಆಗುವುದಿಲ್ಲ. ಪ್ರಚಂಡ ಪ್ರವಾಹವನ್ನು ಎದುರಿಸಬಲ್ಲೆವು ಪ್ರಿಯೆ.

**ಕುರಂಗಿ** : ಹೃದಯೇಶ್ವರ ಇಷ್ಟು ಭದ್ರ ಕಾವಲನ್ನು ದಾಟಿಕೊಂಡು ಇಲ್ಲಿಗೆ ಹೇಗೆ ಬಂದಿರಿ?

**ಅವಿಮಾರಕ**: ಈಗಾಗಲೇ ನಿನಗೆ ತಿಳಿದಿರುವಂತೆ, ನನಗೆ ಅದೃಶ್ಯರೂಪ ಧರಿಸುವ ಅನುಪಮ ಶಕ್ತಿ ದೊರೆತಿದೆ. ಆದ್ದರಿಂದ ಎಂತಹ ಭದ್ರ ಕಾವಲಿದ್ದರೂ ನಿರಾಯಾಸವಾಗಿ ಎಲ್ಲಿಗೆ ಬೇಕೆಂದರೆ ಅಲ್ಲಿಗೆ ಹೋಗಿ ಬರಬಲ್ಲೆ. ಯಾರಿಂದಲೂ ನನಗೆ ನಿರ್ಬಂಧಗಳಿಲ್ಲ.

**ಕುರಂಗಿ** : ಇಂತಹ ಅಮೋಘ ಶಕ್ತಿ ನಿಮಗೆ ದೊರೆಕೊಂಡುದಾದರೂ ಹೇಗೆ ಸ್ವಾಮಿ?

**ಅವಿಮಾರಕ**: (ತೇಲಿಸಿ) ಓ ಅದೊಂದು ದೊಡ್ಡ ಕತೆ. ಆದರೂ ಹೇಳುತ್ತೇನೆ. ನಿನ್ನಲ್ಲೇನು ರಹಸ್ಯ. ಕೆಲವು ದಿನಗಳ ಹಿಂದೆ ನನ್ನನ್ನು ಕಾಣಲು ಬಂದು ಭಟರ

ಕೈಗೆ ಸಿಕ್ಕಿ ಬೀಳುವ ಅಪಾಯದಿಂದ ಹೇಗೋ ತಪ್ಪಿಸಿಕೊಂಡು ಹೋದೆ. ಆದರೆ ಮತ್ತೆ ಇಂತಹ ಸಾಹಸ ಮಾಡುವುದಕ್ಕೆ ಅವಕಾಶವೇ ದೊರೆಯಲಾರದೆಂದು ನಿನ್ನನ್ನು ಇನ್ನು ಕಾಣುವುದು ಸಾಧ್ಯವೇ ಇಲ್ಲವೆಂದು ಭಾಸವಾಗಿ, ಭಗ್ನಗೊಂಡ ಮನಸ್ಸನ್ನು ಸಂತಯಿಸಲಾಗದೆ ಆತ್ಮಹತ್ಯೆಗೆ ಅಣಿಯಾದೆ. ಆದರೆ ಅದೇನು ಅದೃಷ್ಟವೋ ಸಾವೂ ನನ್ನಿಂದ ದೂರ ಸಿಡಿದು ಹೋದದ್ದೇ ಅಲ್ಲದೆ, ನನ್ನ ಸ್ಥಿತಿಗೆ ಮರುಗಿದ ವಿದ್ಯಾಧರನೆಂಬ ಯಕ್ಷದಂಪತಿಗಳ ಸ್ನೇಹ ಸಹಾನುಭೂತಿಗೆ ಪಾತ್ರನಾದೆ. ನನ್ನ ಸ್ಥಿತಿಯನ್ನರಿತ ವಿದ್ಯಾಧರ, ಸ್ನೇಹಿತನ ಸಹಾಯಕ್ಕೆಂದು ವಿಶಾಲ ಹೃದಯದಿಂದ ಈ ಮಹಿಮೆಯುಳ್ಳ ಉಂಗುರವನ್ನು ಕೊಟ್ಟ. ಇದನ್ನು ಧರಿಸಿ ಅದೃಶ್ಯ ರೂಪವನ್ನು ಬಯಸಿದಾಗಲೆಲ್ಲ ಪಡೆಯಬಹುದು ಎಂದು ತಿಳಿಸಿದ. ಇದರ ಸಹಾಯದಿಂದಲೇ ಈಗ ನಿನ್ನ ಮುಂದೆ ನಿಲ್ಲಲು ಸಾಧ್ಯವಾಗಿದೆ.

**ಕುರಂಗಿ :** (ಉಲ್ಲಾಸ ಸಂಭ್ರಮಗಳಿಂದ ಸ್ವಗತ) ಓ ಹೃದಯವೇ ಒಡೆದು ಹೋಗಬೇಡ. ಈ ಕ್ಷಣದಲ್ಲಿ ಸಂತೋಷಾತಿರೇಕವನ್ನು ನನ್ನಿಂದ ಸಹಿಸಲಾಗುತ್ತಿಲ್ಲ. (ಪ್ರಕಟ) ಹೇ ಪ್ರಿಯ... ಇಂದಿನ ನನ್ನ ಅದೃಷ್ಟಕ್ಕೆ ನಾನು ಮೂಕಳಾಗಿದ್ದೇನೆ. ಸಪ್ತಮ ಸ್ವರ್ಗದಲ್ಲಿ ಸಂಚರಿಸುತ್ತಿರುವಂತಿದೆ.

**ಅವಿಮಾರಕ :** ಕುರಂಗಿ... ಕುರಂಗಿ... ನಿನ್ನ ಕುಂದದ ಪ್ರೀತಿಗೆ ಪಾತ್ರನಾದ ನಾನು ನಿಜವಾಗಿಯೂ ಕೃತಾರ್ಥನಾದೆ.

**ನಳನಿಕಾ :** (ಪ್ರವೇಶಿಸಿ) ರಾಜಕುಮಾರಿ ಕ್ಷಮಿಸಬೇಕು. ಎಲ್ಲವನ್ನೂ ಅಣಿಗೊಳಿಸಿ ಬಂದಿದ್ದೇನೆ. ತಾವು ತ್ವರೆ ಮಾಡಿ. ಇಲ್ಲಿಯೇ ಇದ್ದರೆ ಯಾರಾದರೂ ಬಂದಾರು.

**ಕುರಂಗಿ :** ನಳಿನಿಕಾ... ನಿನ್ನಷ್ಟು ಜಾಣೆ, ಸಖಿ ಮತ್ತೊಬ್ಬರಿಲ್ಲ... ನಿನ್ನ ಸಹಾಯಕ್ಕೆ ನಾನು ಸದಾ ಋಣಿ... ಎಚ್ಚರಿಕೆಯಿರಲಿ. ಮಹಾರಾಜರು ಅಥವಾ ಮಹಾರಾಣಿಯವರು ನನ್ನನ್ನು ಅರಸುತ್ತಾ ಬಂದಲ್ಲಿ, ನನ್ನನ್ನು ಎಚ್ಚರಿಸು.

**ಅವಿಮಾರಕ :** ಹಾಗೆಯೇ ನನ್ನ ಗೆಳೆಯ ಸಂತುಷ್ಟನು ನನ್ನನ್ನು ಕಾಣಲು ಬರುತ್ತಾನೆ. ನಾ ಬರುವವರೆಗೆ ಅವನನ್ನು ಹೇಗಾದರೂ ಮಾತಿನಲ್ಲಿ ನಿಲ್ಲಿಸಿಕೊ.

**ನಳಿನಿಕಾ :** ಅಪ್ಪಣೆ... ರಾಜಕುಮಾರ (ಹೋಗುವಳು)

**ಕುರಂಗಿ :** ಹೊರಡೋಣವೇ ರಾಜಕುಮಾರರೇ?

**ಅವಿಮಾರಕ :** ಇದೇನಿದು ಪ್ರಿಯೆ... ಈ ಹೊಸ ಬಗೆಯ ಸಂಬೋಧನೆ??

**ಕುರಂಗಿ :** ರಾಜಕುಮಾರರಾದವರನ್ನು ರಾಜಕುಮಾರರೆಂದು ಕರೆಯುವುದರಲ್ಲಿ ಆಶ್ಚರ್ಯವೇನಿದೆ?

**ಅವಿಮಾರಕ** : ಏನು... ನಾನು... ನಾನು ರಾಜಕುಮಾರನೇ!! ಯಾರೋ ನಿನ್ನನ್ನು ತಮಾಶೆ ಮಾಡಲು ಹಾಗೆ ತಿಳಿಸಿರಬೇಕು. ನನ್ನನ್ನು ನೋಡಿದರೆ ರಾಜಕುಮಾರನೆಂದೆನಿಸುವುದೇ?... ಇಲ್ಲ ಇಲ್ಲ..... ನಾನು ರಾಜಕುಮಾರನಲ್ಲ.... ನಾನೊಬ್ಬ ಸಾಮಾನ್ಯ ಮನುಷ್ಯ!!.... ಇರಲಿ. ಆ ಚರ್ಚೆ ಈಗ ಬೇಡ ಕುರಂಗಿ... ಅಪರೂಪಕ್ಕೆ ದೊರೆತ ಈ ಅಮೂಲ್ಯ ಕ್ಷಣಗಳನ್ನು ಹಾಳುಗೆಡುವುದು ಬೇಡ. ಬಾ ಸಖಿ ನನ್ನನ್ನು ಆಲಂಗಿಸು... ಬೆಂದ ಹೃದಯಗಳಿಗೆ ಅಮೃತ ವರ್ಷದ ಅನುಭವವಾಗಲಿ.

**ಕುರಂಗಿ** : (ದಾರಿ ತೋರುತ್ತಾ) ಹೀಗೆ... ಹೀಗೆ... ಬರೋಣವಾಗಲಿ (ಎಂದು ಕೈ ಹಿಡಿದು ಕರೆದೊಯ್ಯುತ್ತಾ ಮೆಟ್ಟಿಲು ಇಳಿಯುವರು). (ಸ್ವಲ್ಪ ಹೊತ್ತು ಮೌನ.... ಕ್ಷೀಣವಾಗಿ ಸಂಗೀತ ಕೇಳಿ ಬರುವುದು.... ಮತ್ತೆ ನೀರವತೆ)

(ನೀರವ ಮೌನವನ್ನು ಸೀಳಿಕೊಂಡು ಗೆಳೆಯಾ... ಓ ಗೆಳೆಯಾ ಎಂದು ಕೂಗುತ್ತಿರುವ ಸಂತುಷ್ಟನ ಕೊರಳು ಕೇಳಿ ಬರುವುದು. ಒಂದು ಬದಿಯಿಂದ ಸಂತುಷ್ಟ ಮತ್ತೊಂದು ಬದಿಯಿಂದ ನಳಿನಿಕಾ ಪ್ರವೇಶಿಸುವರು)

**ಸಂತುಷ್ಟ** : ಓ ನಳಿನಿಕಾ.... ಇದೇನು ಈ ಕಡೆ? ನನ್ನ ಗೆಳೆಯ ಅವಿಮಾರಕನನ್ನು ಕಂಡೆಯಾ ಹೇಗೆ?

**ನಳಿನಿಕಾ** : ಅಯ್ಯಾ ಮಹಾನುಭಾವ (ಗಾಬರಿಯಿಂದ) ಸ್ವಲ್ಪ ಸುಮ್ಮನಿರಯ್ಯ. ನಿನ್ನ ದಮ್ಮಯ್ಯ ಅಂತೀನಿ. ಗಂಟಲು ಹರಿದುಕೊಂಡು ನಮ್ಮನ್ನೆಲ್ಲಾ ನೇಣುಗಂಬಕ್ಕೇರಿಸಬೇಕೆಂದುಕೊಂಡಿದ್ದೀಯಾ ಹೇಗೆ?

**ಸಂತುಷ್ಟ** : ನಳಿನಿಕಾ... ನನ್ನನ್ನೇಕೆ ದೂರುತ್ತಿರುವಿ? ನಾನೇನು ನಿಮಗೆ ಪ್ರಮಾದ ತಂದೊಡ್ಡಿದ್ದೇನೆ. ನನ್ನ ಗೆಳೆಯನನ್ನು ಹುಡುಕಿಕೊಂಡು ಬಂದದ್ದು ತಪ್ಪಾಯಿತೇ?

**ನಳಿನಿಕಾ** : ಅಯ್ಯಾ! ನಿನ್ನ ಗೆಳೆಯನನ್ನು ಹುಡುಕುವುದು ತಪ್ಪಲ್ಲ. ಒಪ್ಪಿಕೊಳ್ಳುತ್ತೇನೆ. ಆದರೆ ಇಷ್ಟು ಜೋರಾಗಿ ಅವರ ಹೆಸರು ಹಿಡಿದು ಕೂಗಬೇಡ. ಎಲ್ಲರಿಗೂ ಕೇಳಿಸೀತು. ನೀನೇ ಹೇಳು. ನಿನ್ನಿಂದಾಗಿ ನಿನ್ನ ಗೆಳೆಯ ಮತ್ತೊಮ್ಮೆ ಅಪಾಯಕ್ಕೆ ಸಿಲುಕುವುದು ನಿನಗಿಷ್ಟವೇನು?

**ಸಂತುಷ್ಟ** : ಛೆ! ಛೆ! ಕನಸಿನಲ್ಲಿಯೂ ನನ್ನ ಗೆಳೆಯನಿಗೆ ತೊಂದರೆ ಬರುವುದನ್ನು ಸಹಿಸಲಾರೆ.

**ನಳಿನಿಕಾ** : ಮತ್ತೆ ಹಾಗಿದ್ದ ಮೇಲೆ ಸ್ವಲ್ಪ ಎಚ್ಚರಿಕೆಯಿಂದ ವರ್ತಿಸಬೇಕಲ್ಲವೇ? ನಿನ್ನ ಈ ಕೂಗಿನಿಂದ ಯಾರಾದರೂ ಎಚ್ಚೆತ್ತು ಓಡಿ ಬಂದರೆ..... ರಾಜಕುಮಾರಿಗೆ – ನಮಗೆ ಗ್ರಹಚಾರ ತಪ್ಪಿದ್ದಲ್ಲ... ಅದೂ ರಾಜಕುಮಾರಿ ನಿನ್ನ ಗೆಳೆಯನೊಂದಿಗೆ ಇರುವ ಕ್ಷಣಗಳಲ್ಲಿ ಅಪಾಯ ಇನ್ನೂ ಹೆಚ್ಚು.

**ಸಂತುಷ್ಟ** : ಅಪರಾಧವಾಯಿತು ನಳಿನಿಕಾ. ಒಂದು ಕ್ಷಣ ಎಲ್ಲವನ್ನೂ ಮರೆತು ಬಿಟ್ಟಿದ್ದೆ. ಸದಾ ನಾನವರ ಕ್ಷೇಮಾಭಿಲಾಷೆಯೇ ಹೊರತಾಗಿ ಅವರಿಗೆ ತೊಂದರೆಗಳನ್ನು ಬಯಸುವುದಿಲ್ಲ.

**ನಳಿನಿಕಾ** : (ಸಂತೋಷಗೊಂಡು) ಸರಿ ಹಾಗಾದರೆ ಬಾ. ನಮ್ಮ ರಾಜಕುಮಾರಿಗೆ ನಿನ್ನ ಬಗ್ಗೆ ಬಹಳ ಮೆಚ್ಚುಗೆಯಿದೆ. ನೀನು ಬರುವುದು ಅವಳಿಗೆ ಗೊತ್ತಿಲ್ಲ. ನೀನು ಬಂದರೆ ನಿನ್ನನ್ನು ಸತ್ಕರಿಸಬೇಕೆಂದು ನಿರ್ದೇಶಿಸಿದ್ದಾರೆ. ಅವರ ಪಾಡಿಗೆ ಅವರನ್ನು ಬಿಟ್ಟು ಹೋಗೋಣ (ಹೊರಡುವರು).

(ಹೆಜ್ಜೆ ಹಾಕುತ್ತಲೇ ಸಂತುಷ್ಟ ನಳಿನಿಕಾಗೆ)

**ಸಂತುಷ್ಟ** : ಹೂಂ! ಈಗ ತಿಳಿಯಿತೇ ನಮ್ಮ ದೊಡ್ಡಸ್ತಿಕೆ ಏನೂಂತ! ಈ ಬ್ರಾಹ್ಮಣನೆಂದರೆ ಸಾಮಾನ್ಯನೇ.... ನೋಡಿದೆಯಾ ರಾಜಕುಮಾರಿಗೆ ನಮ್ಮ ಮೇಲೆ ಎಷ್ಟೊಂದು ಗೌರವವಿದೆ... ನಡಿ ನಡಿ ರಾಜಕುಮಾರಿಯ ಅಪ್ಪಣೆ ಪಾಲಿಸಲು ಹೊರಡೋಣ... ಆದರೆ ಒಂದು ಷರತ್ತು.... ಈ ಬ್ರಾಹ್ಮಣನು ಆತಿಥ್ಯ ಸ್ವೀಕರಿಸಲು ಕೇವಲ ಭೋಜನ ಮಾತ್ರ ಸಾಲದು.... ಅದರೊಟ್ಟಿಗೆ ಅಮೂಲ್ಯವಾದುದನ್ನೇನಾದರೂ ದಕ್ಷಿಣೆಯಾಗಿ ನೀಡಬೇಕು. ಇಲ್ಲವಾದಲ್ಲಿ ಹಸಿದ ಬ್ರಾಹ್ಮಣನ ಶಾಪಕ್ಕೆ ಗುರಿಯಾಗಬೇಕು... ನೋಡು... ನಿನ್ನಿಷ್ಟ...

**ನಳಿನಿಕಾ** : ಆಗಬಹುದು ಮಹಾತ್ಮಾ (ವ್ಯಂಗ್ಯ) ಮೊದಲು ಇಲ್ಲಿಂದ ಹೊರಡೋಣ.

**ಸಂತುಷ್ಟ** : ಸರಿ ಹಾಗಾದರೆ, ರಾಜಕುಮಾರಿಗೂ ಒಂದು ಮಾತು ಹೇಳಿ ಸ್ವಸ್ತಿ ವಾಚನ ನುಡಿದು ಒಂದೆರಡು ನಿಮಿಷಗಳಲ್ಲಿ ಬಂದು ಬಿಡುತ್ತೇನೆ.

**ನಳಿನಿಕಾ** : (ಹೌಹಾರಿ) ಹಾಂ! ಅಯ್ಯಯ್ಯೋ.... ನಿಮ್ಮ ದಮ್ಮಯ್ಯ. ಈಗ ಅವಳನ್ನು ಕಾಣುವುದು ಬೇಡ. ಮಹಾರಾಜರ ಕಟ್ಟಪ್ಪಣೆಯಾಗಿದೆ. ಯಾವೊಂದು ಗಂಡು ಪಿಳ್ಳೆ ಸುಳಿದಾಡಿದರೂ ಅಪಾಯದ ಘಂಟೆ ಬಾರಿಸುತ್ತದೆ.

**ಸಂತುಷ್ಟ** : ಹಾಗೋ.... ಹಾಗಾದರೆ.... ನಡಿ... ನನಗೂ ತಡೆಯಲಾಗದ ಹಸಿವು.

**ನಳಿನಿಕಾ** : (ಸ್ವಗತ) ಅಬ್ಬಬ್ಬ.... ಈ ಹೊಟ್ಟೆಬಾಕ ಬ್ರಾಹ್ಮಣನಿಗೆ ಊಟಕ್ಕೆ ಹೊತ್ತೂ ಗೊತ್ತೂ ಒಂದು ಇಲ್ಲ. ಏನಾದರಾಗಲಿ ಇಲ್ಲಿಂದ ಈ ಪಿಶಾಚಿಯನ್ನು ಸಾಗ ಹಾಕಿದರೆ ಸಾಕಾಗಿದೆ. (ಪ್ರಕಟ) ತ್ವರೆ ಮಾಡು ಬ್ರಾಹ್ಮಣೋತ್ತಮ, ಮಾಡಿದ ಅಡುಗೆಯೆಲ್ಲ ಆರಿ ತಂಗಳಾದೀತು.

**ಸಂತುಷ್ಟ** : ಹೌದು... ಹೌದು.... ನೀ ಹೇಳುವುದು ಸರಿ. ನಾನೇ ಬೇಗ ಹೆಜ್ಜೆ ಹಾಕುತ್ತೇನೆ. (ಎಂದು ಆತುರಾತುರ ಹೆಜ್ಜೆ ಹಾಕಿ ಸಾಗುತ್ತಾನೆ).

೦೦

# ದೃಶ್ಯ – ೪

(ಕುರಂಗಿಯ ಚಿತ್ರಶಾಲೆ. ಮಣಿ ಖಚಿತವಾದ ತೂಗುಯ್ಯಾಲೆಯಲ್ಲಿ ಕುಳಿತು ನಿಧಾನವಾಗಿ ತೂಗುತ್ತಿದ್ದಾಳೆ. ಮುಖದಲ್ಲಿ ದುಃಖ, ದುಗುಡ, ಆತಂಕಭಾವ ಹತ್ತಿರದಲ್ಲಿಯೇ ನಳಿನಿಕಾ ಕುರಂಗಿಗೆ ಗಾಳಿ ಹಾಕುತ್ತಾ ನಿಂತಿದ್ದಾಳೆ.)

**ಕುರಂಗಿ** : (ನಿಟ್ಟುಸಿರಿಡುತ್ತಾ) ನಳಿನಿಕಾ.... ಈಗೇನು ಮಾಡುವುದು?.... ನಮ್ಮ ಹಣೆ ಬಡಿಹವೆ ಹಣೆ ಬರಹ! ಇಷ್ಟು ದಿವಸ ಹೇಗೋ ನನ್ನ ತಂದೆ ತಾಯಿಯರ ಕಣ್ಣು ತಪ್ಪಿಸಿ ಆತನ ಸಹವಾಸ ಮಾಡಿದ್ದಾಯಿತು. ಈಗ ನೋಡಿದರೆ ಸಮಸ್ಯೆ ಕುತ್ತಿಗೆಗೆ ಬಂದಿದೆ. ಇದರಿಂದ ಪಾರಾಗುವುದು ಹೇಗೆ? ಏನಾದರೂ ಉಪಾಯ ಯೋಚಿಸಬೇಕಲ್ಲ.

**ನಳಿನಿಕಾ** : (ಗಾಬರಿಯಿಂದ) ಸಖಿ... ಇಷ್ಟೇ ಅಲ್ಲ. ಇನ್ನೂ ಒಂದು ಸುದ್ದಿ ಗೊತ್ತಿದೆಯೇ?

**ಕುರಂಗಿ** : (ಬೆಚ್ಚಿ ಬಿದ್ದು) ಮತ್ತೇನು ಸುದ್ದಿ ತಂದೆಯೇ... ಮೊದಲೇ ಹೆದರಿದವನ ಮೇಲೆ ಕಪ್ಪೆ ಎಸೆದ ಹಾಗೆ!... ಈಗ ಬಂದಿರುವ ಸುದ್ದಿಗಳಿಂದಲೇ ಪ್ರಾಣ ಹಾರಿ ಹೋಗುತ್ತಿದೆ. ಸಾಲದ್ದಕ್ಕೆ ನೀನು ಬೇರೆ ಮತ್ತೇನನ್ನೋ ಹೇಳುವಂತಿದೆ... ಒಂದು ವೇಳೆ... ಸೌವೀರ ಮಹಾರಾಜನ ಪ್ರಿಯ ಪುತ್ರ ವಿಷ್ಣುಸೇನನು ಪತ್ತೆಯಾದನೋ ಹೇಗೆ?

**ನಳಿನಿಕಾ** : ಮಹಾರಾಜರು ದೇಶದ ಮೂಲೆ ಮೂಲೆಗಳನ್ನೆಲ್ಲಾ ಶೋಧಿಸಲು ಹೇಳಿರುವರು. ಆದರೂ ಅವರ ಕುಟುಂಬದ ಒಬ್ಬ ವ್ಯಕ್ತಿಯೂ ಇನ್ನೂ ಪತ್ತೆಯಾಗಿಲ್ಲ.

**ಕುರಂಗಿ** : ಅಮ್ಮಯ್ಯ.... ಹೆದರಿಸಿ ಬಿಟ್ಟೆಯಲ್ಲೆ..... ಅವರೆಂದೆಂದಿಗೂ ದೊರೆಯದಿರಲೆಂದು ದೇವರಿಗೆ ಹರಕೆ ಹೊರುತ್ತೇನೆ. ನಾನು ಪ್ರೀತಿಸುತ್ತಿರುವವನ ಹೆಸರು ಕುಲ ಗೋತ್ರಗಳು ಒಂದೂ ನನಗೆ ತಿಳಿದಿಲ್ಲ. ತಿಳಿಯುವ ಬಯಕೆಯೂ

ಇಲ್ಲ. ಪವಿತ್ರ ಪ್ರೇಮಕ್ಕೆ ಜಾತಿ, ಕುಲ, ಗೋತ್ರಗಳ ಮಡಿವಂತಿಕೆಯೇಕೆ? ಆದರೆ ಒಂದು ವೇಳೆ ಮಹಾರಾಜರ ಗಮನಕ್ಕೆ ನಮ್ಮಿಬ್ಬರ ಪ್ರೀತಿಯ ವಿಚಾರ ಬಂದಲ್ಲಿ ನನ್ನ ಮೇಲೆ ಎಷ್ಟೇ ಮಗಳೆಂಬ ಅಭಿಮಾನವಿದ್ದರೂ ಊರು. ಕೇರಿ, ಕುಲ ಗೋತ್ರಗಳು ತಿಳಿಯದವನಿಗೆ ಖಂಡಿತ ನನ್ನನ್ನು ಕೊಡಲು ಒಪ್ಪುವುದಿಲ್ಲ.

**ನಳಿನಿಕಾ** : ಅಷ್ಟು ಸುಲಭವಾಗಿ ಸಮಸ್ಯೆ ಬಗೆ ಹರಿಯಲಾರದು. ಶತಾಯಗತಾಯ ನಿಮ್ಮ ಮದುವೆ ನಡೆಯುವುದಾದರೆ ಸೌವೀರದ ಯುವರಾಜನೊಂದಿಗೇ. ಮಹಾರಾಣಿಯವರಂತೂ ಪಟ್ಟು ಹಿಡಿದಿದ್ದಾರೆ. ಎರಡು ರಾಜವಂಶಗಳು ಈ ಬಂಧುತ್ವದಿಂದ ಮತ್ತಷ್ಟು ಬಲಗೊಂಡು ನೆಮ್ಮದಿಯಿಂದ ರಾಜ್ಯಭಾರ ಸಾಗುವುದೆಂಬ ಬಲವಾದ ನಂಬಿಕೆ. ಜೊತೆಗೆ ಸೋದರಿಕೆಯ ನಂಟು ಬೇರೆ!

**ಕುರಂಗಿ** : ಏನಾದರೇನಂತೆ. ಆತನಂತೂ ಈ ಜನ್ಮದಲ್ಲಿ ಕಾಣಿಸಿಕೊಳ್ಳಲಾರ. ನನ್ನಂತರಂಗವೆ ನನಗೆ ಅದನ್ನು ಹೇಳುತ್ತಿದೆ. ನನ್ನ ಮತ್ತು ನನ್ನ ಪ್ರಿಯತಮನ ಸಂಬಂಧ ಜನ್ಮ ಜನ್ಮಾಂತರದ್ದು. ನೀನೇ ನೋಡುತ್ತಿರು.

**ನಳಿನಿಕಾ** : ಒಂದು ವೇಳೆ ಯುವರಾಜರು ಸಿಕ್ಕಿ ಬಿಟ್ಟರೆ ಮಾಡುವುದೇನು? ನಿಮ್ಮ ಗಾಂಧರ್ವ ವಿವಾಹದ ಸುದ್ದಿ ಬಯಲಾದರೆ ಪರಿಣಾಮಗಳೇನಾಗುವುವೋ... ಊಹಿಸಲೂ ಸಾಧ್ಯವಿಲ್ಲ.... ಇದಕ್ಕೆಲ್ಲಾ ಒಂದೇ ದಾರಿ.

**ಕುರಂಗಿ** : (ಕುತೂಹಲದಿಂದ) ಯಾವುದದು ದಾರಿ ಹೇಳೇ ಬೇಗ.

**ನಳಿನಿಕಾ** : ಈ ಸಲ ಆತ ಬಂದಾಗ ಆತನ ಹುಟ್ಟು ಪೂರ್ವೋತ್ತರಗಳನ್ನು ಹೇಗಾದರೂ ಮಾಡಿ ಉಪಾಯಾಂತರದಿಂದ ವಿಚಾರಿಸಿ ತಿಳಿದುಕೋ. ಒಂದು ಪಕ್ಷಕ್ಕೆ ರಾಜವಂಶದವನೇ ಆದಲ್ಲಿ ಪ್ರಭುಗಳು ಸ್ವತಃ ನಿಮ್ಮ ವಿವಾಹಕ್ಕೆ ಒಪ್ಪಿಗೆಯನ್ನು ಕೊಡಲೂಬಹುದು. ರಾಜವಂಶದವನಲ್ಲದ ಪಕ್ಷದಲ್ಲಿ ಅವನೊಟ್ಟಿಗೆ ಯಾರಿಗೂ ತಿಳಿಯದಂತೆ ಓಡಿ ಹೋಗು. ಉಳಿದಿರುವುದು ಇವೆರಡೇ ದಾರಿಗಳು!!

**ಕುರಂಗಿ** : ನನ್ನ ಅನುಮಾನದ ಪ್ರಕಾರ ಆತ ಖಂಡಿತವಾಗಿಯೂ ರಾಜಪುರುಷನೇ. ದೇವತೆಗಳನ್ನೇ ಧಿಕ್ಕರಿಸುವ ಸೌಂದರ್ಯ. ವಿಶಾಲ ವಕ್ಷಸ್ಥಳ. ಆನೆಯ ಸೊಂಡಿಲಿನಂತಹ ವೀರಬಾಹುಗಳು. ಮಿಂಚನ್ನೇ ಹೀಗಳೆವ ಕಣ್ಣ ಹೊಳಪು. ನಯನ ಮನೋಹರವಾದ ಭ್ರೂವಿಲಾಸ. ಅಲೆ ಅಲೆಯ ದಟ್ಟ ಕೂದಲು... ಓಹ್ ವಿವರಿಸುತ್ತಾ ಹೋದಲ್ಲಿ ಈ ಸರ್ವಾಂಗ ಸುಂದರನ ವರ್ಣನೆಗೆ ಈ ನಾಲಗೆ ಸಾಲದೆನಿಸುತ್ತದೆ. ಈ ಜನ್ಮವೂ ಸಾಲದೆನಿಸುತ್ತದೆ.

**ನಳಿನಿಕಾ** : ನೀನು ಹೇಳುವುದೆಲ್ಲಾ ಸರಿಯೇ, ಯಾವ ಹೆಣ್ಣೇ ಆದರೂ ಅಂತಹ ಸುಂದರ ಪುರುಷನಿಗೆ ಪ್ರಥಮ ದರ್ಶನದಲ್ಲಿಯೇ ಸೋತು ಶರಣಾಗುವುದಲ್ಲಿ ಆಶ್ಚರ್ಯವಿಲ್ಲ. ಮೂರು ಲೋಕಗಳಲ್ಲಿಯೂ ಇಂತಹ ಸುಂದರ ಪುರುಷ, ವಜ್ರದೇಹಿಯುವಕ ದೊರೆಯಲಾರ..... ನಿಜ.... ಆದರೆ ಕುಂತಿಭೋಜರ ಅಳಿಯನಾಗಲು ಇವಿಷ್ಟೇ ಸಾಲವಲ್ಲ........ ಉತ್ತಮ ಕುಲವಂಶಗಳೂ ಅಗತ್ಯವಲ್ಲವೇ?

**ಕುರಂಗಿ** : ನಳಿನಿಕಾ... ಇಷ್ಟು ದೂರ ಮುಂದುವರೆಯಲು ಸಹಕರಿಸಿ ಈಗ ಇದ್ದಕ್ಕಿದ್ದಂತೆ, ವಂಶ, ಕುಲ ಅಂತ ದೊಡ್ಡದಾಗಿ ಮಾತನಾಡಲು ಆರಂಭಿಸಿ ಬಿಟ್ಟೆಯಲ್ಲ. ಮೊದಲಿನಲ್ಲಿಯೇ ಈ ಬಗೆಯ ಶಂಕೆಗಳನ್ನೊಡ್ಡಿ ನನ್ನನ್ನು ತಡೆದಿದ್ದರೆ ಇವತ್ತು ಈ ಸಮಸ್ಯೆಯೇ ಇರುತ್ತಿರಲಿಲ್ಲ.

**ನಳಿನಿಕಾ** : ನೀನು ಹೇಳುವುದು, ನೀನು ತರ್ಕಿಸುವುದೂ ಎಲ್ಲ ಸರಿ. ಆದರೆ ಆಗ ನಿನ್ನ ಸ್ಥಿತಿಯನ್ನು ನೋಡಿ ಗಾಭರಿಗೊಂಡು ನಿನ್ನ ಸುಖ, ಸಂತೋಷವನ್ನಷ್ಟೇ ಬಯಸಿದ್ದರಿಂದ ನಾವು ಸಾಹಸ ಮಾಡಿದೆವು.... ಈಗಲೂ ನಿನಗೆ ಬಂದ ಅನುಮಾನವೇ ನನ್ನಲ್ಲೂ ಹೆಚ್ಚುತ್ತಿದೆ... ರಾಜವಂಶದವನೇ ಆಗಿದ್ದು, ಏನನ್ನೋ ಮರೆಮಾಚುತ್ತಿರುವಂತೆ ಅನಿಸುತ್ತಿದೆ. ಏನಾದರೂ, ಯಾವುದಾದರೂ ರಾಜಕೀಯ ಉದ್ದೇಶಗಳಿಗಾಗಿ ಹೀಗೆ ವೇಷಾಂತರದಲ್ಲಿ ಇರುವರೇನೋ ಎನಿಸುತ್ತಿದೆ.

**ಕುರಂಗಿ** : ಅಬ್ಬ! ನಳಿನಿಕಾ. ನಿನ್ನ ಈ ಆಲೋಚನೆಗಳು ಸತ್ಯವೇ ಆದಲ್ಲಿ... ಓಹ್.... ನಿನಗೆ ಕನಕಾಭಿಷೇಕವನ್ನೇ ಮಾಡಿ ಬಿಡುತ್ತೇನೆ.... ಎಷ್ಟೋ ಸಲ ನಾನು ಸೂಕ್ಷ್ಮವಾಗಿ ಪ್ರಯತ್ನಿಸಿ ನೋಡಿದೆ. ಆದರೆ ಅದೇನೇನೋ ನೆಪಗಳನ್ನು ಒಡ್ಡಿ ಕಾಲ ಬಂದಾಗ ತಿಳಿಸುತ್ತೇನೆಂದು ತಳ್ಳಿ ಹಾಕುತ್ತಾನೆ.... ಏನಾದರಾಗಲಿ ನಾನಂತೂ ಗಾಂಧರ್ವ ವಿಧಿಯಿಂದ ವರಿಸಿಬಿಟ್ಟಿದ್ದೇನೆ.

(ವಸುಮಿತ್ರೆಯ ಪ್ರವೇಶ)

**ವಸುಮಿತ್ರೆ** : ರಾಜಕುಮಾರಿಗೆ ಜಯವಾಗಲಿ.

**ಕುರಂಗಿ** : ಏನು ವಸು ಇಲ್ಲಿಗೆ ಬಂದೆ. ನಮಗೆ ತಂದೆಯವರಿಂದ ಏನಾದರೂ ಸಂದೇಶವಿದೆಯೇ?

**ವಸುಮಿತ್ರೆ** : ರಾಜಕುಮಾರಿ, ರಾಜಮಾತೆಯವರು ತಮ್ಮನ್ನು ಈಗಲೇ ಅವರ ಕೋಣೆಗೆ ಬರಲು ಹೇಳಿದ್ದಾರೆ. ಬನಾರಸದಿಂದ ರಾಜಪರಿವಾರ ಬಂದಿದೆ.

**ನಳಿನಿಕಾ** : ಬನಾರಸದಿಂದ ರಾಜಪರಿವಾರ!.... ಅಂದರೆ ಜಯವರ್ಮರೂ ಬಂದಿದ್ದಾರೇನು?

**ಕುರಂಗಿ** : (ಅನುಮಾನಿಸುತ್ತಾ)... ವಸುಮಿತ್ರೆ.... ಜಯವರ್ಮರು ಬಂದಿರುವ ಕಾರಣವೇನಾದರೂ ತಿಳಿದಿದೆಯೇ?

**ವಸುಮಿತ್ರೆ** : ಕಾರಣ ಗೊತ್ತಿಲ್ಲವಾದರೂ, ಕುಂತಿಭೋಜ ಮಹಾರಾಜರು ಯಾವುದೋ ತುರ್ತು ಕೆಲಸದ ಮೇಲೆ ಕರೆ ಕಳುಹಿಸಿದ್ದಾರಂತೆ.

**ಕುರಂಗಿ** : ನಳಿನಿಕಾ ಇದರಲ್ಲೇನೋ ನಿಗೂಢವಿದೆ. ನೀನು ಹೋಗಿ ಉಪಾಯಾಂತರದಿಂದ ತಿಳಿದು ಬರುವೆಯಾ? ವಿಷ್ಣು ಸೇನ ಯುವರಾಜರು ಅವರ ತಂದೆ ತಾಯಿಗಳು ಪತ್ತೆಯಾಗದಿರಲು ಕಡೆಯ ನಿರ್ಣಯವೆಂದು ಈ ರಾಜಪರಿವಾರವನ್ನು ಕರೆಸಿರಬಹುದೇನೋ ಎನಿಸುತ್ತಿದೆ.

**ನಳಿನಿಕಾ** : ಇದ್ದರೂ ಇದ್ದೀತು. (ಏಕಾಂತವಾಗಿ, ಪಕ್ಕಕ್ಕೆ ತಿರುಗಿ) ಆದರೆ ನೀನು. ಅವರೊಂದಿಗೆ ಈಗಾಗಲೇ ವಿವಾಹವಾಗಿರುವೆಯಲ್ಲ. ಈಗೇನಾಗುವುದು?

**ಕುರಂಗಿ** : ಸದ್ಯಕ್ಕೆ ಸುಮ್ಮನಿರು ನಳೀನಿಕಾ (ಗುಟ್ಟಾಗಿ) ಈ ಒಂದು ದಿನ ಕಾಯೋಣ ಇಲ್ಲವಾದಲ್ಲಿ ನೀ ಕೊಟ್ಟ ಸಲಹೆಯಂತೆ ಎಲ್ಲರ ಕಣ್ಣು ತಪ್ಪಿಸಿ ಪಲಾಯನ ಮಾಡಿಬಿಡೋಣ. (ಪರಾರಿಯಾಗಿ ಬಿಡೋಣ) ಈಗ ಉಳಿದಿರುವುದು ಅದೊಂದೇ ದಾರಿ.... ವಸುಮಿತ್ರೆ ಈಗ ನೀನು ಹೋಗು. ಸ್ವಲ್ಪ ಹೊತ್ತಿನಲ್ಲಿಯೇ ತಾಯಿಯವರ ಬಳಿಗೆ ಬರುತ್ತೇನೆಂದು ಹೇಳು.

**ವಸುಮಿತ್ರೆ** : ಅಪ್ಪಣೆ ರಾಜಕುಮಾರಿ (ಹೋಗುವಳು)

**ಕುರಂಗಿ** : ತ್ವರೆ ಮಾಡು ನಳಿನಿಕಾ. ಇಲ್ಲವಾದಲ್ಲಿ ನಮ್ಮ ತಲೆದಂಡ ತಪ್ಪಿದ್ದಲ್ಲ. (ದುಃಖಿಸುತ್ತಾ) ಓ ದೈವವೇ.... ಎಂತಹ ಸಂದಿಗ್ದ!!.... ಮನಃಪೂರ್ತಿಯಾಗಿ ಪ್ರೀತಿಸಿ, ವರಿಸಿರುವ ಈತನನ್ನು ಮರೆತು ಮತ್ತೊಬ್ಬನನ್ನು ವಿವಾಹವಾಗಲು ಸಾಧ್ಯವೇ. ದಿನದಿನಕ್ಕೆ ಆತನ ಬಗೆಗಿನ ಪ್ರೀತಿ ಉಕ್ಕುವ ಸಮುದ್ರದಂತೆ ವೃದ್ಧಿಸುತ್ತಲೇ ಇದೆ. ಅದೇನು ನನ್ನ ಹಣೆ ಬರಹವೋ ಕಾಣೆ.... ಜ್ಯೋತಿಷ್ಯವೆಂದಾದರೂ ಸುಳ್ಳಾಗಬಹುದೇ? ನನ್ನ ವಿಚಾರದಲ್ಲಿಯಂತೂ ಜ್ಯೋತಿಷಿಗಳು ತಂದೆಯವರಲ್ಲಿ ಅದ್ಭುತವಾದ ರೀತಿಯಲ್ಲಿ ಭವಿಷ್ಯ ನುಡಿದಿದ್ದಾರೆ. ಸರ್ವಲಕ್ಷಣ ಸಂಪನ್ನನೂ, ಭೂಲೋಕದ ಇಂದ್ರನಂತಿರುವವನು. ಅಪರಮನ್ಮಥನಂತಹವನು, ವರಪ್ರಸಾದಿಯಾದ ಸಕಲ ಗುಣಯುಕ್ತ, ಉತ್ತಮ ಕುಲೋತ್ತುಂಗನಾದ ರಾಜಕುವರನನ್ನೇ ವರಿಸುತ್ತಾಳೆಂದು ವಿವರಿಸುತ್ತಾರೆ. ಆದರೆ ಕುಲ, ಗೋತ್ರಗಳೇ ಇಲ್ಲದ ಅಪರಿಚಿತ ಸುಂದರ ಪುರುಷನನ್ನಷ್ಟೇ ಒಲಿದು ವರಿಸಿದ್ದೇವೆ. 'ಗ್ರಹಗತಿಗಳು' ಅದ್ಭುತವಾಗಿವೆ. ಕೇವಲ ಒಂದೆರಡು

ದಿನಗಳು ತೊಂದರೆಯಾಗಬಹುದು ಅಷ್ಟೇ.... ನೀವು ಬಯಸಿದ ರಾಜಕುಮಾರನನ್ನೇ ವರಿಸುತ್ತಾಳೆ. ಇದು ಖಂಡಿತ. ನನ್ನ ಈ ಮಾತು ತಪ್ಪಿದ್ದಲ್ಲಿ ಇನ್ನು ಮುಂದೆ ಭವಿಷ್ಯವನ್ನೇ ನುಡಿಯುವುದಿಲ್ಲ' ಎನ್ನುತ್ತಾರೆ. ಯಾವುದನ್ನು ನಂಬುವುದು ಯಾರನ್ನು ನಂಬುವುದು?... ನನಗೆ ಧಿಕ್ಕೇ ತೋಚುತ್ತಿಲ್ಲ. ವಿಧಿಯೇ ನನ್ನ ಮನೋಕಾಮನೆಯನ್ನು ಸಾರ್ಥಕಗೊಳಿಸು. ನನ್ನ ಪ್ರೀತಿ ಪರಿಶುದ್ಧವಾದಲ್ಲಿ ಆತನೇ ನನ್ನ ಪಾಲಿನ ದೈವವಾಗಲಿ... ಇಲ್ಲವಾದಲ್ಲಿ ಸಾವೇ ನನಗೆ ಶರಣು.

**ನಳಿನಿಕಾ** : ಗೆಳತಿ... ಇಷ್ಟಕ್ಕೆಲ್ಲಾ ಅಧೀರಳಾದರೆ ಹೇಗೆ? ಎಲ್ಲವೂ ಒಳ್ಳೆಯದೇ ಆಗುವುದು. ಸುಮ್ಮನೆ ದುಃಖಿಸಬೇಡ... ರಾಜಕುಮಾರಿ ನಾನು ನಿಮಗೊಂದು ಉಪಾಯ ಹೇಳುತ್ತೇನೆ.... ನೀವು ಪ್ರೀತಿಸುವ ಆ ಯುವಕನ ಗೆಳೆಯ ಸಂತುಷ್ಟ ಅದೇ ಆ ಹೊಟ್ಟೆಬಾಕ ಬ್ರಾಹ್ಮಣ ಇದ್ದಾನಲ್ಲ. ಮೆಲ್ಲನೆ ಹೇಗಾದರೂ ಉಪಾಯಾಂತರದಿಂದ ಇಲ್ಲಿಗೆ ಎಳೆದು ತಂದು ಮಾತನಾಡಿಸಿ ತಿಂಡಿ ತಿನಿಸುಗಳ ಆಮಿಷವೊಡ್ಡಿ ಉಬ್ಬಿಸಿ ಮರುಳಗೊಳಿಸಿ ಪ್ರೀತಿಯಿಂದ ಉಣಬಡಿಸುತ್ತಾ ಒಂದೊಂದೇ ಭಕ್ಷ್ಯ ನೀಡುವುದರೊಂದಿಗೆ ಒಂದೊಂದೇ ವಿವರಗಳನ್ನು ಮೆಲ್ಲಗೆ ಹೊರಗೆಡವಿಸಬಹುದು. ಊಟದ ಉನ್ಮತ್ತತೆಯಲ್ಲಿ ಗುಟ್ಟುಗಳೆಲ್ಲಾ ಹೊರ ಬಂದು ಬಿಡುತ್ತವೆ. ಈ ಆಲೋಚನೆ ಖಂಡಿತ ಸಫಲವಾಗುತ್ತೆ ಅಂತ ಅನ್ನಿಸುತ್ತೆ. ಇವತ್ತೇ ಹೋಗಿ ಹೇಗಾದರೂ ಮಾಡಿ ಈ ಬ್ರಾಹ್ಮಣನನ್ನು ಕಂಡು ಮಾತನಾಡಿಸಿ ಬರುತ್ತೇನೆ.

**ಕುರಂಗಿ** : ಆತನಿಂದ ನಿಜವಾಗಿಯೂ ನಮಗೆ ಬೇಕಾದ ವಿವರಗಳು ಸಿಗಬಹುದು ಎನಿಸುವುದೇ ನಳಿನಿಕಾ? (ಅನುಮಾನ)

**ನಳಿನಿಕಾ** : ಖಂಡಿತವಾಗಿಯೂ ನೀನು ನೆಮ್ಮದಿಯಾಗಿರು.

**ಕುರಂಗಿ** : ಸರಿ ಹಾಗಾದರೆ ನೀನು ಆತನಲ್ಲಿಗೆ ಹೋಗು. ತಾಯಿಯವರನ್ನು ಕಾಣಲು ನಾನು ಹೋಗುತ್ತೇನೆ. ಹಿರಿಯರ ಮಾತನ್ನು ನಿರ್ಲಕ್ಷಿಸಬಾರದಲ್ಲ... ಆದರೆ ಒಂದೇ ಚಿಂತೆ... ಅಲ್ಲಿಗೆ ಹೋದ ಮೇಲೆ ಏನೇನನ್ನು ಎದುರಿಸಬೇಕಾಗುವುದೋ-ಎಂದು

**ನಳಿನಿಕಾ** : ಬಾ ರಾಜಕುಮಾರಿ. ನಿನ್ನೊಂದಿಗೆ ಅಲ್ಲಿಯವರೆಗೆ ಬರುತ್ತೇನೆ. ಹಾಗೆಯೇ ಮಧೂಲಿಕಾಗೂ ವಿಷಯ ತಿಳಿಸಿ ಅವಳನ್ನೂ ಜೊತೆಗೆ ಕರದೊಯ್ಯುತ್ತೇನೆ. (ಹೋಗುವರು.)

○○

## ಅಂಕ – ೩

# ದೃಶ್ಯ – ೧

(ಕುಂತಿಭೋಜನ ಸಭೆ. ಮಂತ್ರಿ ಕೌಂಡಿನ್ಯ ಮತ್ತು ಅಂತಃಪುರದ ಮೇಲ್ವಿಚಾರಣಾ ಮಂತ್ರಿ ಭೂತಿಕಾ ಆಸೀನರಾಗಿದ್ದಾರೆ. ಕುಂತಿಭೋಜನ ಮುಖದ ಮೇಲೆ ಚಿಂತೆಯ ಗೆರೆಗಳು ಸ್ಪಷ್ಟವಾಗಿ ಕಾಣುತ್ತಿವೆ.)

**ಕುಂತಿಭೋಜ:** ಮಹಾಮಂತ್ರಿಗಳೇ ನಮ್ಮ ಕಡೆಯ ಪ್ರಯತ್ನವೂ ಸಫಲವಾಗಲಿಲ್ಲವೆಂದಾಯಿತು. ಇನ್ನು ಉಳಿದಿರುವುದು ಜಯವರ್ಮರಿಗೇ ನಮ್ಮ ಮಗಳನ್ನು ಧಾರೆ ಎರೆದು ಕೊಡುವುದೇ ನಿಶ್ಚಿತವಾದಂತಾಯಿತು.

(ಜಯದ ಎಂಬ ಪ್ರತಿಹಾರಿಯ ಪ್ರವೇಶ)

**ಜಯದ :** (ಪ್ರವೇಶಿಸಿ) ಮಹಾಪ್ರಭುಗಳಿಗೆ ಜಯವಾಗಲಿ.... ಸೌವೀರ ದೇಶದಿಂದ ಸಂದೇಶವಾಹಕರೊಬ್ಬರು ತಮ್ಮನ್ನು ಕಾಣಲು ಅಪ್ಪಣೆ ಬೇಡುತ್ತಿದ್ದಾರೆ.

**ಕುಂತಿಭೋಜ:** (ಆಶ್ಚರ್ಯದಿಂದ) ಏನೆಂದೆ ಪ್ರತಿಹಾರಿ? ಸೌವೀರದೇಶವೆಂದೆಯಾ? ಹೆಸರನ್ನು ಸರಿಯಾಗಿ ಕೇಳಿಸಿಕೊಂಡೆ ತಾನೇ?

**ಜಯದಾ :** ಖಂಡಿತವಾಗಿಯೂ ಪ್ರಭು. ತಮಗೆ ಅನುಮಾನವೇ ಬೇಡ.

**ಕುಂತಿಭೋಜ:** (ಉತ್ಸಾಹ ಕಾತುರತೆಯಿಂದ) ಹಾಗಾದರೆ ತಡಮಾಡದೆ, ಕೂಡಲೇ ಗೌರವದಿಂದ ಕರೆದು ತಾ.

**ಜಯದಾ :** ಅಪ್ಪಣೆ ಪ್ರಭು. (ಎಂದು ಹೊರಟು ಕ್ಷಣಾರ್ಧದಲ್ಲಿ ಸಂದೇಶವಾಹಕನ ಜೊತೆಗೆ ಮರಳುತ್ತಾನೆ.)

**ಸಂ.ವಾಹಕ:** (ತಲೆಬಾಗಿಸಿ ನಮಸ್ಕರಿಸಿ) ವೈರಾಂತ್ಯದೇಶದ ಅನುಪಮಗುಣ ಶೀಲರಾದ ಮಹಾಪ್ರಭು ಕುಂತಿಭೋಜರಿಗೆ, ಸೌವೀರದ ಮಹಾಮಂತ್ರಿಗಳ ವಿಜ್ಞಾಪನೆ... (ಎಂದು ಹೇಳುತ್ತಿರುವಷ್ಟರಲ್ಲಿಯೇ)

**ಕುಂತೀಭೋಜ:** (ಆತುರಪಡಿಸುತ್ತಾ) ಹೇಳು ಹೇಳು ವಿಜ್ಞಾಪನೆ ಎಲ್ಲಾ ಒತ್ತಟ್ಟಿಗಿರಲಿ. ನೇರವಾಗಿ ವಿಷಯ ಏನೆಂದು ತಿಳಿಸು. ಕೇಳಲು ಮನಸ್ಸು ತುಡಿಯುತ್ತಿದೆ.

**ಸಂ.ವಾಹಕ:** ಪ್ರಭು ಸೌವೀರದ ಮಹಾರಾಜರು ತಮ್ಮ ರಾಜ್ಯದಲ್ಲಿಯೇ ಸಕುಟುಂಬ ಸಪರಿವಾರ ಸಮೇತ ಆಜ್ಞಾತವಾಸದಲ್ಲಿ ಇರುವರೆಂದು ಗುಪ್ತಚಾರರಿಂದ ತಿಳಿದು ಬಂದಿದೆ ಎಂಬ ಸಂಗತಿಯನ್ನು ತಮ್ಮಲ್ಲಿ ಅರಿಕೆ ಮಾಡಲು ಹೇಳಿದರು. ಜೊತೆಗೆ ಈ ರಾಯಸವನ್ನು ಕಳಿಸಿಕೊಟ್ಟಿದ್ದಾರೆ. ದಯಪಿಟ್ಟು ಒಪ್ಪಿಸಿಕೊಳ್ಳಬೇಕು. (ಎಂದು ನಡುವಿಗೆ ಸಿಕ್ಕಿಸಿಕೊಂಡಿದ್ದ ಪತ್ರದ ಸುರುಳಿಯನ್ನು ಭೋಜರ ಕೈಗೆ ನೀಡುವನು. ಕುಂತೀಭೋಜ್ಯರು ಅದನ್ನು ಕೌಂಡಿನ್ಯ ಮಂತ್ರಿಗಳ ಕೈಗೆ ಓದುವಂತೆ ಸನ್ನೆ ಮಾಡಿ ನೀಡುವರು) (ಕೌಂಡಿನ್ಯರು ಪತ್ರದ ಸುರುಳಿಯನ್ನು ಬಿಡಿಸಿ ಓದುವರು.)

**ಕೌಂಡಿನ್ಯ :** ಮಹಾಪ್ರಭು. ಈತ ಹೇಳಿದ್ದನ್ನೇ ಇದರಲ್ಲಿ ನಮೂದಿಸಿದ್ದಾರೆ. ಜೊತೆಗೆ ಆಜ್ಞಾತವಾಸದಲ್ಲಿ ವೇಷಾಂತರದಲ್ಲಿ, ಇರುವುದರ ವಿಚಾರವಾಗಿ ಕೆಲವು ಸುಳುಹುಗಳನ್ನು ನೀಡಿ, ಅವರನ್ನು ಆದಷ್ಟು ಬೇಗ ಹುಡುಕಿಸಬೇಕೆಂದು ಸವಿನಯವಾಗಿ ಪ್ರಾರ್ಥಿಸಿದ್ದಾರೆ. ಜೊತೆಗೆ ನಮ್ಮೆಲ್ಲರಿಗೂ ತಮ್ಮ ಗೌರವವನ್ನು ತಿಳಿಸಿದ್ದಾರೆ. ಆದಷ್ಟು ಬೇಗ ಎರಡೂ ರಾಜಕುಟುಂಬಗಳು ಬೀಗರಾಗಿ ಬೆಸೆಯಬೇಕೆಂತಲೂ ಹಾರೈಸಿದ್ದಾರೆ.

**ಕುಂತಿಭೋಜ:** ಮಹಾಮಂತ್ರಿಗಳ ಈ ವಿಷಯುವನ್ನು ಕೇಳಿ ನನಗೆ ಹಾಲು ಜೇನುಂಡಾಯಿತು. ಈ ಸಂಭ್ರಮದ ಸುದ್ದಿ ನನಗೆ ಅರಗಿಸಿಕೊಳ್ಳುವುದೇ ಅಸಾಧ್ಯವೆನಿಸಿದೆ. (ಸಂದೇಶ ವಾಹಕನ ಕಡೆಗೆ ತಿರುಗಿ) ನಿಮ್ಮ ಮಹಾಮಂತ್ರಿಗಳಿಗೆ ತಿಳಿಸು..... ಅವರನ್ನು ಪತ್ತೆ ಹಚ್ಚಲು ಈ ಕ್ಷಣದಿಂದಲೇ ಪ್ರಯತ್ನಿಸುತ್ತೇವೆಂದು. ಹಾಗೆಯೇ ಅವರಿಗೆ ನಮ್ಮ ಗೌರವಪೂರ್ವಕ ಕೃತಜ್ಞತೆಗಳನ್ನು ತಿಳಿಸು.... ಅಯ್ಯಾ. ಇಂತಹ ಸಂತೋಷದ ಸುದ್ದಿ ತಂದು ಬಹಳ ಉಪಕಾರ ಮಾಡಿದ ನಿನಗೆ.... ತಗೋ ನಮ್ಮಲ್ಪ ಕಾಣಿಕೆ. (ಎಂದು ಕೊರಳಿನ ಹಾರ ತೆಗೆದುಕೊಡುವನು. ಸಂದೇಶವಾಹಕ ಅದನ್ನು ಸ್ವೀಕರಿಸಿ ಕಣ್ಣೊತ್ತಿಕೊಂಡು) ........ ಧನ್ಯನಾದೆ ಪ್ರಭು... ಇನ್ನು ನನಗೆ ಅಪ್ಪಣೆಯೇ ಪ್ರಭು?

**ಕುಂತಿಭೋಜ:** ಹೋಗಿ ಬಾ...... ಒಳ್ಳೆಯದಾಗಲಿ. ಹಾಗೆಯೇ ನಮ್ಮರಮನೆಯ ಆತಿಥ್ಯವನ್ನು ಸ್ವೀಕರಿಸಿ ವಿಶ್ರಾಂತಿ ಪಡೆದು ಹೋಗು? (ಸಂದೇಶವಾಹಕನ ನಿರ್ಗಮನ)

**ಕುಂತೀಭೋಜ:** (ಭೂತಿಕಾರ ಕಡೆ ತಿರುಗಿ) ಮಂತ್ರಿಗಳೇ ನೋಡಿ. ಈ ಪತ್ರದಲ್ಲಿ ಸೂಚಿಸಿರುವ ಕೆಲವು ಸುಳುಹುಗಳನ್ನು ಗಮನದಲ್ಲಿರಿಸಿಕೊಂಡು ಮತ್ತೊಮ್ಮೆ ಗುಪ್ತಚಾರರನ್ನು ಕಳುಹಿಸಿ ಬಹಳ ಜಾಗರೂಕತೆಯಿಂದ ಹುಡುಕಿಸಿ. ನಮ್ಮ ಅದೃಷ್ಟಕ್ಕೆ ಮಹಾರಾಜ ದೊರೆತರೂ ದೊರೆಯಬಹುದು.

**ಭೂತಿಕಾ :** ಅಪ್ಪಣೆ ಪ್ರಭು. ಸಮಯ ಕೂಡಿ ಬಂದರೆ ನಮ್ಮ ಪ್ರಯತ್ನವಿಲ್ಲದೆಯೇ ನಾವು ಬಯಸುವುದೆಲ್ಲವೂ ಅನಾಯಾಸವಾಗಿ ಇದ್ದಲ್ಲಿಗೆ ಎದುರಾಗಿ ಬಂದು ಬೀಳುವುದೂ. ನಾವು ಹುಡುಕುತ್ತಿರುವವರು ನಮ್ಮ ನಡುವಿನಿಂದಲೇ ಎದ್ದು ಬಂದು ಕಾಣಿಸಿಕೊಳ್ಳಲೂ ಬಹುದು. ವಿಧಿ ಎಲ್ಲಕ್ಕಿಂತ ದೊಡ್ಡದು. ಅದರ ಅದ್ಭುತವಾದ ಆಟಗಳ ಮುಂದೆ ನಮ್ಮದೇನಿದೆ?.... ಬೆಟ್ಟದಂತೆ ಎರಗುವ ಕಷ್ಟಗಳೆಲ್ಲ ಮಂಜಿನಂತೆ ಕರಗಿ ಹೋಗಬಹುದು.... ನನಗೆ ಎಲ್ಲವೂ ಕೂಡಿ ಬಂದು ಒಳ್ಳೆಯ ಪರಿಣಾಮಗಳೇ ಕಾದಿರಬೇಕೆಂದು ಅಂತರಾತ್ಮಕ್ಕೆ ಹೊಳೆಯುತ್ತಿದೆ.

**ಕುಂತಿಭೋಜ:** ಭೂತಿಕಾ ಮಂತ್ರಿಗಳೇ. ನಿಮ್ಮ ಮನಸ್ಸಿಗೆ ಹೊಳೆದದ್ದು ನಿಜವೇ ಆಗಿ ಸಾಕ್ಷಾತ್ಕರಿಸಿದರೆ ನಮಗಿಂತ ಬೇರೆ ಸುಖಿಗಳು ಇರಬಲ್ಲರೇ? ಸೌವೀರ ಮಹಾರಾಜರು ನಮ್ಮ ಆಪ್ತ ಗೆಳೆಯರೂ ಹೌದು; ಬಂಧುಗಳೂ ಹೌದು.... ಅವರ ಪ್ರಿಯ ಪುತ್ರರಾದ ವಿಷ್ಣುಸೇನ ಯುವರಾಜರು ದೊರೆತರೆ. ನಮ್ಮ ರಾಜಕುವಾರಿ ಕುರಂಗಿಯನ್ನು ಅವರಿಗೆ ಧಾರೆಯೆರೆದು ನಮ್ಮ ಬಂಧುತ್ವವನ್ನು ಮತ್ತಷ್ಟು ಬಲಪಡಿಸಬೇಕೆಂಬುದು ನಮ್ಮ ಆಸೆ; ನಮ್ಮ ಸ್ವಾರ್ಥ.... ಆತನಿಗಿಂತ ತಕ್ಕವರ ನಮ್ಮ ಪುತ್ರಿಗೆ ಹುಟ್ಟಿಯೇ ಇಲ್ಲವೆನಿಸುತ್ತದೆ.

**ಕೌಂಡಿನ್ಯ :** ಪ್ರಭು. ಇನ್ನು ಕಳವಳಕ್ಕೆ ಕಾರಣವೇ ಇಲ್ಲ. ಸದ್ಯದಲ್ಲಿಯೇ? ನಿಮ್ಮ ಮನೋರಥಗಳೆಲ್ಲ ಫಲಪ್ರದವಾಗುವುವು. ಭೂತಿಕಾರಿಗೆ ಅನಿಸಿದಂತೆಯೇ ನನಗೂ ಅನಿಸುತ್ತಿದೆ. ತಮಗೆ ಪ್ರಿಯಬಂಧು ದರ್ಶನವಾಗುವುದರಲ್ಲಿ ಸಂದೇಹವೇ ಇಲ್ಲ ಪ್ರಭು. ಸೌವೀರ ಮಹಾರಾಜರನ್ನು ಇಂದು ಸ್ವಪ್ನದರ್ಶನ ಮಾಡಿದೆ. ನನ್ನ ಸ್ವಪ್ನ ಸುಳ್ಳಾಗದು. ನನ್ನ ಮಾತನ್ನು ನಂಬಿ. (ಎಂದು ವಾಕ್ಯವನ್ನು ಪೂರೈಸುವಷ್ಟರಲ್ಲಿ ಕಂಚುಕಿಯ ಪ್ರವೇಶ.)

**ಕಂಚುಕಿ :** ಮಹಾಪ್ರಭುಗಳಿಗೆ ಜಯವಾಗಲಿ. ಆಗಂತುಕ ವ್ಯಕ್ತಿಯೊಬ್ಬರು ತಮ್ಮ ದರ್ಶನಾಭಿಲಾಷಿಯಾಗಿದ್ದಾರೆ

**ಕುಂ.ಭೋ :** (ಅರ್ಥಪೂರ್ಣವಾಗಿ ಕೌಂಡಿನ್ಯರ ಕಡೆ ನೋಡುತ್ತ) ಆಗಂತುಕ ವ್ಯಕ್ತಿಯಂತೆ! ಯಾರಿರಬಹುದೋ ದೇವರೇ ಆ ಆಗಂತುಕ ವ್ಯಕ್ತಿ ಪ್ರಿಯಬಂಧುವೇ ಆಗಿರಲಿ (ಕಂಚುಕಿಗೆ) ಹೋಗು ತಡಮಾಡದೆ ಕರೆದು ತಾ...

(ಕಂಚುಕಿಯೊಡನೆ ಆಗಂತುಕನ ಪ್ರವೇಶ)

**ಕಂಚುಕಿ :** ಪ್ರಭು ಇವರೇ ಆ ಆಗಂತುಕ ವ್ಯಕ್ತಿ. ತಮ್ಮನ್ನು ಕಾಣಬಯಸಿದವರು.

**ಆಗಂತುಕ :** (ಸವಿನಯವಾಗಿ ಕೈ ಜೋಡಿಸಿ) ಕುಂತೀ ಭೋಜ ಮಹಾರಾಜರಿಗೆ ಆಪ್ತಗೆಳೆಯನ ಅಭಿವಂದನೆಗಳು.

**ಕುಂ.ಭೋಜ:** (ಒಂದು ಕ್ಷಣದಿಗ್ಭ್ರಮೆಯಿಂದ ನೋಡುತ್ತಾ ಇದ್ದು) (ಗೆಳೆಯಾ!....ಆಗಂತುಕನನ್ನು ಹಿಡಿಯಿಂದ ಮುಡಿಯವರೆಗೆ ಮತ್ತೊಮ್ಮೆ ಪರಿಶೀಲಿಸುತ್ತಿದ್ದಂತೆ ಮುಖದಲ್ಲಿ ನೋವು ಮೂಡುವುದು) ಗೆಳೆಯಾ... ಓ ನನ್ನ ಪ್ರಿಯ ಗೆಳೆಯಾ!.... ಪ್ರಿಯ ಬಂಧು!..... ನನ್ನ ಕಣ್ಣುಗಳು ನನಗೆ ಮೋಸಮಾಡುತ್ತಿಲ್ಲ ತಾನೇ?.... ನಾನು ಕಾಣುತ್ತಿರುವುದು ನಿಜವಾದಲ್ಲಿ.... ಧನ್ಯನಾದೆ.... ಧನ್ಯನಾದೆ... ಬಾ ಗೆಳೆಯಾ ಇನ್ನೂ ಅಲ್ಲೇಕೆ ನಿಂತಿರುವೆ? ನನ್ನನ್ನು ಆಲಂಗಿಸಿ ನನ್ನ ಮನೋವೇದನೆಯನ್ನು ದೂರವಾಡು. ಬಾ ಇಲ್ಲಿಯೆ ನನ್ನ ಸಿಂಹಾಸನದಲ್ಲಿ ಆಸೀನನಾಗು.

**ಸೌವೀರದರಸ:** ಬೇಡ ಗೆಳೆಯಾ.... ಅದಕ್ಕೆ ನಾನಿನ್ನೂ ಯೋಗ್ಯನಲ್ಲ...ಕಾಲವೂ ಒದಗಿ ಬಂದಿಲ್ಲ. ವಿಧಿ ಹತನಾದ ನಾನು ನಿನ್ನ ಸಿಂಹಾಸನದ ಸೌಭಾಗ್ಯವನ್ನು ಕೆಡಿಸಲಾರೆ.

**ಕುಂ.ಭೋಜ:** ಸಂತೋಷದ ಕ್ಷಣಗಳಲ್ಲಿ ಇದೆಂತಹ ನಿರಾಶೆಯ ಮಾತುಗಳು? ಯಾರ ವಿಧಿ.... ಯಾರನ್ನು ಕೆಡಿಸುವುದು? ಸುಮ್ಮನೆ ಬಾ ನಮ್ಮ ಸ್ನೇಹ ಎಂದೆಂದಿಗೂ ಮುರಿಯದಂತೆ ಮುಂದುವರೆಯಲಿ. ನಿನ್ನನ್ನು ಇನ್ನು ಕವಿದಿರುವ ದುಗುಡವಾದರೂ ಎಂಥಾದ್ದು. ಗೆಳೆಯನೊಂದಿಗೆ ಹೇಳಿಕೊಳ್ಳಬಾರದೇ? (ಸ್ವಲ್ಪ ಹೊತ್ತು ನೀರವತೆ) (ಸೌವೀರದರಸನ ಕಣ್ಣಂಚಿನಲ್ಲಿ ಕಂಬನಿಯ ಸಾಲು!)..... ಅರರೇ!.... ಇದೇನಿದು ಕಂಬನಿ! ಛೀ! ಛೀ! ಸೌವೀರದೇಶದರಸನಿಗೆ ಕಂಬನಿ ಶೋಭೆಯಲ್ಲ!

**ಸೌವೀರದರಸ:** ಇಲ್ಲ ಮಿತ್ರ. ನಿನ್ನ ಪುನರ್ದರ್ಶನದಿಂದ ಹತ್ತಿಕ್ಕಲಾಗದ ಆನಂದವೇನೋ ಆಗಿದೆ...... ಆದರೆ..... ಪುತ್ರ ಪ್ರೀತಿಗಿಂತ ಜಗತ್ತಿನಲ್ಲಿ ಮತ್ತೊಂದು ಇಲ್ಲ? ಮಗನಿಗಾಗಿ ಅದುಮಿಟ್ಟು ಕೊಂಡ ಕಂಬನಿಯ ಕಡಲಿನ ಕಟ್ಟೆ ಆಪ್ತ ಬಂದು ದರ್ಶನದಿಂದ ಒಡೆದುಕೊಂಡು ಹೊರಗೆ ಬಂದಿದೆ ಅಷ್ಟೆ!

**ಕುಂ.ಭೋಜ:** (ಸಂದೇಹಿಸುತ್ತಾ) ಮಗ.... ದುಃಖ ಇದೆಲ್ಲಾ ಏನು? ಮಿತ್ರ ನಿನ್ನ ಮಾತುಗಳೆಲ್ಲಾ ಅರ್ಥವಾಗದ ಒಗಟುಗಳಂತಿವೆ.

**ಭೂತಿಕಾ :** ಅದೇ ಪ್ರಭು ಒಂದು ವರ್ಷದಿಂದ ಮಗನ ವಿಯೋಗ ಭಾರದಿಂದ ಕುಸಿದು ಹೋಗಿದ್ದಾರೆ.

**ಕುಂ.ಭೋಜ:** (ಅನುಮಾನದಿಂದ) ಅಂದರೆ..... ಇದೆಲ್ಲಾ ನಿಮಗೆ ಮೊದಲೇ ತಿಳಿದಿತ್ತು?

**ಭೂತಿಕಾ :** (ಅಪರಾಧಿ ಭಾವದಿಂದ) ಪ್ರಭುಗಳು ಅಪರಾಧವನ್ನು ಮನ್ನಿಸಬೇಕು. ವಿವಶತೆಗೆ ಒಳಗಾಗಿ, ಕೆಲವು ಕಾರಣಾಂತರಗಳಿಂದ ಅಗತ್ಯವಾಗಿ ನಿಮ್ಮಿಂದ ಮರೆಮಾಚಿ ಇಡಲೇಬೇಕಾಯಿತಲ್ಲದೆ ತಾವು ಅನ್ಯಥಾ ಭಾವಿಸಬಾರದು.

**ಕೌಂಡಿನ್ಯ :** ಪ್ರಭು ಈ ಅಪರಾಧದಲ್ಲಿ ನನ್ನದೂ ಭಾಗವಿದೆ. ನನ್ನ ಆದೇಶದಂತೆಯೇ ಭೂತಿಕಾರವರು ಈ ವಿವರಗಳನ್ನೆಲ್ಲಾ ನಿಮ್ಮಿಂದ ಮರೆಮಾಚಿ ಇಟ್ಟಿದ್ದರು. ಕಾಲ ಬಂದಾಗ ಎಲ್ಲವನ್ನೂ ತಿಳಿಸೋಣವೆಂದು ಸುಮ್ಮನಿದ್ದೆವು. ಆದರೆ ಇದೀಗ ಸ್ವಲ್ಪ ಮುಂಚಿತವಾಗಿಯೇ ತಮ್ಮ ಗಮನಕ್ಕೆ ಬಂದಿದೆ. ಆದ್ದರಿಂದ ಅವರೊಂದಿಗೆ ತಾವು ನನ್ನನ್ನೂ ಕ್ಷಮಿಸಬೇಕು.

**ಕುಂ.ಭೋಜ:** ಕ್ಷಮಿಸುವುದೇನಿದೆ... ಇದರಲ್ಲಿ ನನ್ನ ಒಳಿತನ್ನು ಊಹಿಸಿ, ನನ್ನ ಒಳ್ಳೆಯದಕ್ಕೆಂದೇ ನೀವು ಹೀಗೆ ಮಾಡಿರುತ್ತೀರಿ. ನಿಮ್ಮಲ್ಲಿ ನನಗೆ ವಿಶ್ವಾಸವಿದೆ... (ಸೌವೀರದರಸರಿಗೆ) ಹೇಳು ಗೆಳೆಯಾ..... ಮಗನ ವಿಚಾರವಾಗಿ ಏನೋ ಹೇಳುತ್ತಿದೆಯಲ್ಲ.... ಸವಿವರವಾಗಿ ತಿಳಿಸು. ನನ್ನ ಕೈಲಾದ ಸಹಾಯ ಮಾಡಿ ನಿನ್ನ ಮಗನನ್ನು ಹುಡುಕಿಸೋಣ.

**ಸೌವೀರದರಸ:** ನಿನಗೇ ಗೊತ್ತಿದೆ ಜಗತ್ತಿನಲ್ಲಿ ಮಗನ ಮೇಲಿನ ಮಮತೆ ಅಪಾರವಾದದ್ದು. ನನ್ನ ಆ ಬಲಶಾಲಿ ಸುಂದರ ಪುತ್ರನ ನೆನಪಾಗುತ್ತಿದೆ..... ಓಹ್ ಅವಿವಾರಕ.... ನನ್ನ ಪ್ರೀಯಪುತ್ರ ಈ ಮಧುರ ಸಮಾಗಮದ ಕ್ಷಣಗಳಲ್ಲಿ ಅವನೂ ಇಲ್ಲಿ, ನನ್ನೊಡನೆ ಇದ್ದಿದ್ದರೆ..... ಜಗತ್ತಿನಲ್ಲಿ ನನ್ನಭಾಗ್ಯವನ್ನು ಎಲ್ಲರೂ ಕರುಬುವಂತಾಗುತ್ತಿತ್ತು... ನನ್ನ ಪ್ರಿಯ ಆತ್ಮಜನನನ್ನು ನಿನ್ನ ಕಾಲಿಗೆರಗಿಸಿ ಆಶೀರ್ವಾದ ಮಾಡುವಂತೆ ಬೇಡುತ್ತಿದ್ದೆ.

**ಭೂತಿಕಾ :** (ಸ್ವಗತ) ಮಗನ ನೆನಪಿನಿಂದ ಬೇರೆಡೆಗೆ ಮರಳಿಸಬೇಕು ಪ್ರಭುಗಳನ್ನು ಇಲ್ಲದಿದ್ದರೆ ಇದೇ ಚಿಂತೆಯಲ್ಲಿ ಭೂಮಿಗಿಳಿದು ಹೋಗುತ್ತಾರೆ.

(ಪ್ರಕಟ) ಪ್ರಭುಗಳೇ, ತಮಗೊದಗಿದ ಭಯಂಕರ ಸಂಕಷ್ಟಗಳಿಂದ ತಾವು ಪಾರಾದದ್ದು ಹೇಗೆ? ನಮ್ಮ ಪ್ರಭುಗಳು ಮಹಾರಾಣಿಯವರು ತಮ್ಮ ವಿಚಾರವಾಗಿ ಬಹಳ ಕಳವಳಗೊಂಡಿದ್ದರು.

**ಕುಂ.ಭೋಜ:** ಅಯ್ಯೋ ನನ್ನ ಬುದ್ಧಿಗೆ!.... ಗೆಳೆಯನನ್ನು ಏನೊಂದು ವಿಚಾರಿಸಲೇ ಇಲ್ಲವಲ್ಲ!

**ಸೌವೀರದರಸ:** ಪರವಾಗಿಲ್ಲ ಬಿಡು ಗೆಳೆಯಾ! ವಿಚಾರಿಸುವುದಕ್ಕೆ ಉಳಿದಿರುವುದಾದರೂ ಏನು? ಸೋಲು, ಅವಮಾನ, ಒಂದಾದ ಮೇಲೊಂದರಂತೆ ಎರಗಿ

ಬಂದ ಆಘಾತಗಳು! ಅಲೆದಾಟ... ಅಜ್ಞಾತವಾಸ... ಒಂದೇ ಎರಡೇ!! ಅದನ್ನೆಲ್ಲಾ ಕೇಳಿ ನಿನ್ನ ಸಂತೋಷಕ್ಕೆ ಸಂಚಕಾರ ತಂದುಕೊಳ್ಳಬೇಡ.

**ಕುಂ.ಭೋಜ:** ಅದೇನು ಮಿತ್ರ! ಹಾಗೆಂದರೇನು? ನಿಜವಾದ ಸ್ನೇಹಿತರ ಸತ್ವ ಪರೀಕ್ಷೆಯಾಗುವುದು ಸಂಕಟ ಸಮಯದಲ್ಲಿ ತಾನೇ?

**ಸೌವಿರದರಸ:** ನಿನ್ನ ಮಂತ್ರಿಗಳನ್ನೇ ವಿಚಾರಿಸು. ಅವರು ನಮ್ಮ ಬಗ್ಗೆ ಸಾದ್ಯಂತವಾಗಿ. ಈ ಕ್ಷಣದವರೆಗೆ ಎಲ್ಲವನ್ನೂ ಬಲ್ಲರು.

**ಭೂತಿಕಾ :** ಹೌದು ಪ್ರಭು.... ಮಾಡಬಾರದ ತಪ್ಪಿಗೆ ಶಿಕ್ಷೆ ವಿಧಿಸುವ ಋಷಿಗಳಿರುವುದು ನಿಜವಾಗಿಯೂ ಶೋಚನೀಯ. ಚಂಡಭಾರ್ಗವ ಋಷಿಗಳ ಶಿಷ್ಯರಲ್ಲಿ ಒಬ್ಬನನ್ನು ಹುಲಿ ಕಾಡಿನಲ್ಲಿ ಕೊಂದು ಹಾಕಿತು.

**ಕುಂತಿಭೋಜ:** (ಆಶ್ಚರಿಯಿಂದ) ಹುಲಿಯಿಂದ ಶಿಷ್ಯ ಸತ್ತರೆ ಮಹಾರಾಜರಿಗೇಕೆ ಶಾಪ! ವಿಚಿತ್ರವಾಗಿದೆಯಲ್ಲ!!

**ಸೌವೀರದರಸ:** ಅದೇ ನನ್ನ ದೌರ್ಭಾಗ್ಯ! ಕಾಕತಾಳೀಯವೆಂಬಂತೆ ಅದೇ ದಿನ ನಾನು ಬೇಟೆಗೆಂದು ಕಾಡಿಗೆ ಹೋಗಿದ್ದೆ. ಹುಲಿ ಆತನ ಮೇಲೆ ಹಾರಿ ಬಿದ್ದಾಗ ಆತ ಚೀತ್ಕರಿಸಿದ ಸದ್ದು ಕೇಳಿ ಅಲ್ಲಿಗೆ ನಾನು ಧಾವಿಸಿದೆ. ಆದರೆ ಶಿಷ್ಯನ ಸಾವಿನಿಂದ ಉದ್ವಿಗ್ನರಾಗಿದ್ದ ಋಷಿಗಳಿಗೆ ಬಿಲ್ಲುಬಾಣ ಹಿಡಿದು ನಿಂತಿದ್ದ ನಾನೇ ಅಪರಾಧಿಯಂತೆ ತೋರಿದ್ದರಿಂದ ಸಿಡಿದೆದ್ದರು. ಸಂಯಮದ ಕಟ್ಟೆಯೊಡೆದು ಶಾಪದ ತೀಕ್ಷ್ಣ ಬಾಣವೊಂದು ಬಂದು ನನ್ನ ಮೇಲೆ ಎರಗಿ ಬಿತ್ತು.

**ಕುಂ.ಭೋಜ:** ಹಾಗಾದರೆ ಮತ್ತೆ ನೀನೇನು ಮಾಡಿದೆ?

**ಸೌವೀರದರಸ:** ಕ್ಷಮಿಸು ಗೆಳೆಯ..... ನಾನೂ ಕೇವಲ ಮನುಷ್ಯನೇ ಅಲ್ಲವೇ. ಮುನಿಗಳ ಬಾಯಿಂದ ಹೊರಟ ಶಾಪ ಅವಾಚ್ಯ ಶಬ್ಧಗಳು ನನ್ನನ್ನು ರೇಗಿಸಿತು. ನನ್ನ ರಕ್ತ ಕುದಿಯಿತು. ಸಹನೆ ಸತ್ತು ಹೋಯಿತು. ನಾನೂ ಆವೇಶದಲ್ಲಿ ಬಾಯಿಂದ ಬಂದದ್ದನ್ನು ಬಡಬಡಿಸಿದೆ. “ಮುನಿವರ್ಯ..... ನಿಜವಾದ ಅಪರಾಧಿಯಾರೆಂದು ಪರೀಕ್ಷಿಸದೆ ಹೀಗೆ ಸಂಯಮ ಕಳೆದುಕೊಂಡು ಇಂದ್ರಿಯ ನಿಗ್ರಹಿಗಳೆನಿಸುವ ನೀವೇ ಹೀಗೆ ಅವಾಚ್ಯ ಮಾತುಗಳನ್ನಾಡಿ ಶಾಪದ ಬಿರು ನುಡಿದರೆ ನಿಮಗೆ ಏನೆಂದು ಕರೆಯಬೇಕು. ನಿಗ್ರಹ ರಹಿತ, ಕೊಳೆತ ಮನಸ್ಸಿನ ಕ್ರೋಧ ಮುದಿ ಋಷಿಯೆಂಬುದೇ ನಿಮಗೆ ಅನ್ವರ್ಥ ಹೆಸರು; ಮೊದಲು ಮನೋನಿಗ್ರಹವನ್ನು ರೂಢಿಸಿಕೊಳ್ಳಿ’ ಎಂದೆ.

**ಕುಂ.ಭೋಜ:** (ದುಃಖದಿಂದ) ಇದನ್ನೆಲ್ಲಾ ಅವರಿಗೆ ಹೇಳಬಾರದಿತ್ತು. ಮಹಾಮಹಿಮಾವಂತರು ಏನು ಬೇಕಾದರೂ ಮಾಡಬಲ್ಲರು.

**ಸೌವೀರದರಸ:** ಅದಲ್ಲೆವೂ ಸರಿಯೇ. ಆದರೆ ಉಪ್ಪು, ಹುಳಿ ತಿಂದು ಬೆಳೆಸಿದ ದೇಹ. ಸಿಟ್ಟು, ಸೆಡುವು, ರೋಷ ಆವೇಶಗಳೆಲ್ಲವೂ ಅನಾಯಾಸವಾಗಿ ಆಲೋಚನೆಗಿಂತ ಮೊದಲೇ ಸಿದ್ಧವಾಗಿರುತ್ತವೆ...... ಎರಗುವುದಕ್ಕೆ!! ನನ್ನ ನಿಷ್ಠುರ ಮಾತುಗಳಿಂದ ಕೆಂಡ ಮಂಡಲನಾಗಿ....ನೀನು, ನಿನ್ನ ಹೆಂಡತಿ ಮಗ ಎಲ್ಲರೂ ಜಾತಿಭ್ರಷ್ಟರಾಗಿ, ದೇಶಾಂತರಿಗಳಾಗಿ ಬದುಕಿರಿ' ಎಂದು ಕ್ರೂರವಾಗಿ ಶಪಿಸಿದ.

**ಕುಂ.ಭೋಜ:** (ನಿಟ್ಟುಸಿರಿಡುತ್ತಾ) (ಸ್ವಗತ) ಹೂಂ! ಎಷ್ಟು ಸಣ್ಣ ಮಾತು ಎಂತಹ ಭಯಂಕರ ಪರಿಣಾಮದತ್ತ ದೂಡಿದೆ! ಎಲ್ಲವೂ ವಿಧಿ ವಿಲಾಸ!!

**ಕೌಂಡಿನ್ಯ :** ಮಹಾಪ್ರಭು... ಏನೋ ಇವರ ಅದೃಷ್ಟ... ಸುಟ್ಟು ಭಸ್ಮವಾಗಲು ಶಪಿಸದೆ ಕೇವಲ ಜಾತಿ ಭ್ರಷ್ಟತೆಯ ಶಾಪವನ್ನಷ್ಟೇ ಕೊಟ್ಟರಲ್ಲ!! ಇದಕ್ಕೆ ಇವರಲ್ಲಿ ಯಾರದೋ ಒಬ್ಬರ ಗ್ರಹಬಲವೇ ಕಾರಣವಿರಬೇಕು.

**ಕುಂ.ಭೋಜ:** ಆಮೇಲೆ ಏನಾಯಿತು ಮಿತ್ರ?

**ಭೂತಿಕಾ :** ಸಮಾಧಾನಗೊಂಡ ಮೇಲೆ ಮುನಿಯ ಮುನಿಸು ಕರಗಿರಬೇಕು ಅಷ್ಟೇ ತಾನೇ!!

**ಸೌವೀರದರಸ:** ಸರಿಯಾಗಿ ಊಹಿಸಿದೆ... ನಾನು ಸ್ವಲ್ಪ ಹೊತ್ತಾದ ಮೇಲೆ ಮನಸ್ಸನ್ನು ಹದಕ್ಕೆ ತಂದುಕೊಂಡು ಆತನನ್ನು ಪ್ರಾರ್ಥಿಸಿದೆ...ಶಾಪ ಪರಿಹಾರಕ್ಕೆ ಅಂಗಲಾಚಿದೆ.... ಅದೃಷ್ಟ!.... ಆತ ಕರಗಿದ.... ಒಂದು ವರುಷ ಅಜ್ಞಾತವಾಸದಲ್ಲಿದ್ದರೆ.... ಶಾಪ ಪರಿಹಾರವಾಗುವುದೆಂದು ಪ್ರತಿನುಡಿದರು... ಆಮೇಲೆ ನಗುನಗುತ್ತಲೆ.... ಹುಲಿಯಿಂದ ಸಾವಿಗೀಡಾಗಿ ತಮ್ಮ ಶಿಷ್ಯನನ್ನು ಹೆಸರಿಡಿದು ಕೂಗಿದ ಕೂಡಲೇ ಎದ್ದು ಬಂದು ಗುರುಗಳಿಗೆ ನಮಸ್ಕರಿಸಿ ಅವರ ಹಿಂದೆ ಹೋದ.... ನಾನು ಅದಕ್ಕಾಗಿ ಅವರ ಪವಾಡವನ್ನು ನೋಡುತ್ತಲೇ ನಿಂತುಬಿಟ್ಟೆ. ಮುನಿಗಳ ಮಹಿಮೆಗೆ ನಿದರ್ಶನವಿದೆಂದು ತೀರ್ಮಾನಿಸಿದೆ.

**ಕುಂ.ಭೋಜ:** ಅದಕ್ಕೆ ಹೇಳಿದ್ದು, ಮಹಾತ್ಮರ ಮನಸ್ಸು ಬೆಣ್ಣೆಯಂತೆ ಎಂದು.

**ಕೌಂಡಿನ್ಯ :** ಕಷ್ಟಗಳು ಬಂದರೆ ಬೆನ್ನಲ್ಲಿ ಒಂದು ಸಾಲು ಹಿಡಿದು ಬರುತ್ತವೆ. ಆದರೆ ನಾವು ಮನುಷ್ಯ ಮಾತ್ರರು. ಬಂದವುಗಳನ್ನು ಎದುರಿಸಿ ನಿವಾರಿಸಿಕೊಳ್ಳಬೇಕೇ ಹೊರತು. ಕಷ್ಟಗಳೇ ಬಾರದಂತೆ ತಡೆಯುವ ಶಕ್ತಿಯನ್ನುಳ್ಳವರಂತೂ ಅಲ್ಲವಲ್ಲ! ಆದದ್ದಾಯಿತು. ಕವಿದ ಮೋಡಗಳು ಸರಿದು ಬದುಕಿನಾಕಾಶದಲ್ಲಿ ಬೆಳಕು ಮೂಡಿದೆ. ಅಷ್ಟು ಸಾಕು.

**ಸೌವೀರದರಸ:** ಎಲ್ಲವೂ ಸರಿಯಾಯಿತು. ಕಳೆದ ನನ್ನ ಮಗ ನನಗೆ ಸಿಕ್ಕಿಬಿಟ್ಟರೆ.... ಇನ್ನೊಂದರ ಆಸೆ ನನಗಿಲ್ಲ. ರಾಜ್ಯಭಾರ ಯಾವುದೂ ಬೇಡ. ಸಂಸಾರದೊಂದಿಗೆ ಸರಳ ಜೀವನ ನಡೆಸುತ್ತಾ ಉಳಿದ ದಿನಗಳನ್ನು ಸವೆಸಿ ಬಿಡುತ್ತೇನೆ.

**ಕುಂ.ಭೋಜ:** ಮಿತ್ರ, ನಿನ್ನ ಮಗ ವಿಷ್ಣುಸೇನ ಖಂಡಿತವಾಗಿ ದೊರೆಯುತ್ತಾನೆ.... ಆದರೆ ಅವನಿಗೆ 'ಅವಿಮಾರಕ' ಎಂದೆಯೆಲ್ಲ... ಅದು ಹೇಗೆ ಆ ಹೆಸರು ಬಂತಯ್ಯ!?

**ಕೌಂಡಿನ್ಯ :** ಅದನ್ನು ನಾನು ಹೇಳುತ್ತೇನೆ ಪ್ರಭು. ಯುವರಾಜರ ಸಾಹಸವನ್ನು ಕೊಂಡಾಡಲು ಅವಕಾಶಗಳಿಸಿಕೊಳ್ಳುವ ನಮ್ಮ ನಾಲಗೆಂಯು ಚಪಲವಾದರೂ ತೀರುತ್ತದೆ..... ಪ್ರಭು ಒಮ್ಮೆ ಧೂಮಕೇತು ಹೆಸರಿನ ರಾಕ್ಷಸನೊಬ್ಬ ಸೌವೀರ ರಾಜ್ಯದ ಮೇಲೆ ಬಿದ್ದು ಪ್ರಜೆಗಳಲ್ಲಿ ಹಾಹಾಕಾರ ಉಂಟುಮಾಡಿದ. ಪ್ರಾಣದ ಮೇಲಿನ ಆಸೆಯಿಂದ ಜನ ಮನೆ ಮಠ ಬಿಟ್ಟು ದಿಕ್ಕಾಪಾಲಾಗಿ ಓಡಿಹೋದರು. ಪ್ರಭುಗಳು ಭಯ, ಆತಂಕ ಅಸಹಾಯಕತೆಯಿಂದ ನಿಷ್ಕ್ರಿಯರಾಗಿ ನಿಂತು ಬಿಟ್ಟರು. ಆ ರಾಕ್ಷಸನನ್ನು ಎದುರಿಸಲು ಯಾರಿಗೂ ಧೈರ್ಯವೂ ಇರಲಿಲ್ಲ. ಎದುರಿಸಲು ಒಂದು ನರಪಿಳ್ಳೆಯೂ ಊರಿನಲ್ಲಿ ಉಳಿಯಲಿಲ್ಲ. ಆದರೆ ಇದ್ಯಾವುದರ ಗಮನವೇ ಇಲ್ಲದೇ ನಿರಾತಂಕವಾಗಿ ತನ್ನೋರಗೆಯುವರೊಡನೆ ಆಟದಲ್ಲಿ ಮಗ್ನನಾಗಿದ್ದ ರಾಜಕುಮಾರ ಯಾವುದೋ ಮಾಯದಲ್ಲಿ ತನಗೆ ಕಾವಲಿದ್ದವರ ಕಣ್ಣು ತಪ್ಪಿಸಿ ಹೋಗಿ ರಾಕ್ಷಸನ ಮೇಲೆ ಬಿದ್ದು ಆಟದ ಗೊಂಬೆಯೊಡನೆ ಸೆಣಸುವಂತೆ ರಾಕ್ಷಸನೊಡನೆ ಸೆಣಸಾಡಿದ. ಕಡೆಗೆ ಮೇಕೆ ರೂಪಧರಿಸಿ ಮಾಯಾದಾಟಕ್ಕೆ ಇಳಿದ. ಸಣ್ಣ ಬಾಲಕ ಆ ಮೇಕೆಯನ್ನು ಲೀಲಾಜಾಲವಾಗಿ ಹಿಡಿದೆತ್ತಿ ಗಿರ್ರನೆ ತಿರುಗಿಸಿ ನೆಲಕ್ಕೆ ಒಗೆದು ಸಾಯಿಸಿದ. ಅಂದಿನಿಂದಲೆ ಅವನಿಗೆ 'ಅವಿಮಾರಕ' ಎಂಬುದು ಅನ್ವರ್ಥನಾಮವಾಯಿತು. ಆ ಬಾಲಕನಿಗೆ ತಾನು ಮಾಡಿದ ಸಾಹಸವೇನೆಂದೇ ತಿಳಿಯದ ಮುಗ್ಧ ವಯಸ್ಸು!!

**ಕುಂ.ಭೋಜ:** ಭಲಾ ಭಲಾ... ಇಂತಹ ಅಪರೂಪದ ಸಾಹಸಿ... ಪುತ್ರನನ್ನು ಪಡೆಯುವುದೂ ಒಂದು ಮಹಾಭಾಗ್ಯವೇ ಸರಿ. ಮಿತ್ರ .... ನಿಜವಾಗಿಯೂ ನೀನೊಬ್ಬ ಧನ್ಯಪುರುಷ.

**ಸೌವೀರದರಸ:** ಧನ್ಯತೆಯ ಮಾತು ಹಾಗಿರಲಿ. ಈಗ ನಾನು ಬಂದದ್ದು ನಿನ್ನ ನೆರವನ್ನು ಪಡೆಯಲು. ನಿನಗೆ ಬೇಕಾದಷ್ಟು ಗುಪ್ತಚರರಿದ್ದಾರೆ.... ಅವರನ್ನು ದೇಶದ ಎಲ್ಲಡೆಗೆ ಕಳುಹಿಸಿ ನನ್ನ ಪುತ್ರನನ್ನು ನನಗೆ ದಯಪಾಲಿಸು. ಇದಕ್ಕಿಂತ ಹೆಚ್ಚಿನ ಸಹಾಯವನ್ನೇನೂ ನಿನ್ನಿಂದ ಅಪೇಕ್ಷಿಸಲಾರೆ.

**ಕೌಂಡಿನ್ಯ :** ಪ್ರಭುಗಳು ಕ್ಷಮಿಸಬೇಕು. ಈಗಾಗಲೇ ಮಹಾರಾಜರ ಅಪ್ಪಣೆಯ ಮೇರೆಗೆ ಯುವರಾಜರನ್ನು ಹುಡುಕಿಸುವ ಪ್ರಯತ್ನಗಳು ನಡೆದಿವೆ. ಮನುಷ್ಯ ಮಾತ್ರರಿಂದ ಸಾಧ್ಯವಾಗಬಹುದಾದ ಎಲ್ಲ ಎಡೆಗಳಿಗೂ ಕಳಿಸಿಯಾಗಿದೆ. ರಾಜಕುಮಾರರು ಇಷ್ಟಾದರೂ ಕಣ್ಣಿಗೆ ಬಿದ್ದಿಲ್ಲವೆಂದ ಮೇಲೆ ಯಾವುದೋ ಮಂತ್ರಶಕ್ತಿಯನ್ನು ವಶಮಾಡಿಕೊಂಡು ನಮ್ಮಿಂದ ಅದೃಶ್ಯರಾಗಿರಬೇಕು.

(ಮಾತು ಮುಂದುವರೆಯುತ್ತಿದ್ದಂತೆಯೇ ಜೋರಾಗಿ ಗಾಳಿ ಬೀಸುವುದು. ಜಗ್ಗನೆ ಬೆಳಕು ಮೂಡಿ ಮರೆಯಾಗುವುದು. ಎಲ್ಲರೂ ಈ ಆಕಸ್ಮಿಕ ಪರಿವರ್ತನೆಗೆ ದಿಗ್ಭ್ರಾಂತರಾಗಿದ್ದಾರೆ.)

**ಕುಂ.ಭೋಜ:** (ಭಯ. ತಲ್ಲಣಗಳಿಂದ) ಮಂತ್ರಿಗಳೇ ಇದೇನಿದು ವೈಪರೀತ್ಯ?.... ನಮ್ಮ ಮಾತಿಗೂ ಪ್ರಕೃತಿಯ ವಿಪರೀತಕ್ಕೂ ಎಲ್ಲಿಯ ಸಂಬಂಧ..... ನನಗೆ ಗಾಭರಿಯಾಗುತ್ತಿದೆ. ಏನು ಅನಾಹುತವಾಗುವುದೋ ಎಂದು ಎದೆ ತಲ್ಲಣಿಸುತ್ತಿದೆ.

**ಸೌವೀರದರಸ:** (ನೊಂದು) ಮಿತ್ರ... ನಾನು ಬಂದಗಳಿಗೆ! ಅನಿಷ್ಟವಾಗಿ ನಾನಿಲ್ಲಿ ನಿಂದೆನೇನೋ ಎಂದು ಭಯವಾಗುತ್ತಿದೆ.

**ಕುಂ.ಭೋಜ:** ಛೇ! ಛೇ! ಬಿಡು ಗೆಳೆಯ.... ಆತ್ಮನಿಂದೆ ನಿನ್ನಂತಹವನಿಗೆ ನಿಜವಾಗಿಯೂ ಸಲ್ಲದು. ದೈವಶಕ್ತಿಯ ರಹಸ್ಯಗಳನ್ನು ಅರಿಯಲು ನಾವು ಅಸಮರ್ಥರು. ಆದದ್ದಾಗಲೀ ಒಳ್ಳೆಯದಕ್ಕೋ ಕೆಟ್ಟದಕ್ಕೂ ನಾವು ಸಿದ್ಧರಾಗಿ ನಿಲ್ಲಬೇಕಷ್ಟೇ?

**ಅಶರೀರವಾಣಿ :** ಹೇ ರಾಜನ್, ಚಿಂತೆ ಕಳವಳಗಳಿಗೆ ಇನ್ನು ಕಾರಣವಿಲ್ಲ. ದೈವಭೀತಿಗೆ ಇನ್ನು ಎಡೆಯಿಲ್ಲ. ನಿಮಗೆಲ್ಲರಿಗೂ ಶುಭೋದಯವಾಗಲಿದೆ.

**ಸೌವೀರದರಸ:** ಯಾರದೋ ವಾಣಿ. ನಮಗೆ ಆಪ್ತರಂತೆ ತೋರುತ್ತಿದೆ. ಹೇ ದೈವವೇ ಅಲ್ಪರಾದ ನಮ್ಮ ಅರಿವಿಗೆ ಅಸಾಧ್ಯವಾದ ನಿನ್ನ ಶಕ್ತಿಯನ್ನು ಪ್ರತ್ಯಕ್ಷ ರೂಪದಲ್ಲಿ ಪ್ರಕಟಗೊಂಡು ನಮ್ಮ ಸಂದೇಹಾಶ್ಚರ್ಯಗಳನ್ನು ದೂರಮಾಡು.

(ಒಂದು ಕ್ಷಣ ಸ್ತಬ್ಧತೆ. ದಟ್ಟವಾದ ಕಾಂತಿಯ ಮೋಡ ಕ್ರಮೇಣ ಮನುಷ್ಯಾಕಾರವನ್ನು ತಾಳುತ್ತದೆ. ವಿದ್ಯಾಧರನು ಕಾಣಿಸಿಕೊಳ್ಳುತ್ತಾನೆ.)

**ಕುಂ.ಭೋಜ:** ದೇವಪುರುಷ ನಮ್ಮನ್ನು ಅನುಗ್ರಹಿಸಲೆಂದೇ ಬಂದ ನಿನಗೆ ನಮ್ಮೆಲ್ಲರ ಅಭಿವಂದನೆಗಳು. ನಮ್ಮ ಮೇಲೆ ಕರುಣೆ ತೋರಿ ನಿನ್ನ ಪರಿಚಯವನ್ನು ತಿಳಿಸುವಂತಹವನಾಗು.

**ಸೌವೀರದರಸ :** ಹೌದು ದೇವ ಪುರುಷ..... ಅದೇ ನಮ್ಮೆಲ್ಲರ ಪ್ರಾರ್ಥನೆ.

**ವಿದ್ಯಾಧರ :** ಹೇ ರಾಜನ್.... ನಾನೊಬ್ಬ ವಿದ್ಯಾಧರ ಹೆಸರಿನ ಗಂಧರ್ವ. ಆಗಾಗ ನಾನು ಗಂಧಮಾದನ ಪರ್ವತದೆಡೆಗೆ ವಿಹಾರಕ್ಕೆಂದು ಹೋಗುತ್ತಿರುತ್ತೇನೆ. ಅಂತೆಯೇ ಇಂದೂ ನಾನು ಹೋಗುತ್ತಿರುವಾಗ ತಮ್ಮ ವ್ಯಥೆಯ ಕತೆ ಕೇಳಿಸಿತು. ತಾವು ನನ್ನ ಪ್ರಿಯ ಮಿತ್ರನಾದ ಅವಿಮಾರಕನಿಗೆ ಸಂಬಂಧಿಸಿದವರೆಂದು ತಿಳಿದುಕೊಂಡೆ. ನನ್ನಿಂದೇನಾದರೂ ಸಹಾಯವಾಗಬಹುದೇನೋ ಎಂದು ಊಹಿಸಿ ಇಲ್ಲಿಗೆ ಬಂದೆ. ದಯವಿಟ್ಟು ತಿಳಿಸಿ. ಯಾವರೀತಿ ತಮಗೆ ಸಹಕರಿಸಲಿ.

**ಕು.ಭೋಜ:** ಧನ್ಯರಾದೆವು ಗಂಧರ್ವರಾಜ. ನಾನು ಕುಂತೀಭೋಜ. ವೈರಾಂತ್ಯರಾಜ್ಯದ ದೊರೆ. ಈತನೇ ನನ್ನ ಪ್ರಿಯ ಬಂಧು; ಪ್ರಿಯಮಿತ್ರ ಅಲ್ಲದೆ ನಿನ್ನ ಪ್ರಿಯಮಿತ್ರ ಅವಿಮಾರಕ ಯುವರಾಜರ ತಂದೆ, ಸೌವೀರದೇಶದ ಅರಸರು. ಇಂದಿಗೆ ಶಾಪ ವಿಮುಕ್ತನಾಗಿ ಸಂತೋಷ ಪಡಬೇಕಾಗಿದ್ದ ಸಂದರ್ಭದಲ್ಲಿ ಪುತ್ರ ವಿಯೋಗದಿಂದ ದುಃಖಿಸುತ್ತಿದ್ದಾರೆ. ಜಗತ್ತೆಲ್ಲ ಜಾಲಾಡಿದರೂ ಆತನ ಸುಳಿವೇ ಸಿಗುತ್ತಿಲ್ಲ.

**ವಿದ್ಯಾಧರ :** (ನಕ್ಕು) ಅರಮನೆಯಲ್ಲೇ ಅವಿತಿಟ್ಟುಕೊಂಡು ಊರೆಲ್ಲ ಹುಡುಕಿದರೆ ಹೇಗೆ ತಾನೇ ದೊರೆತಾನು? ನೀವೇನೂ ದುಃಖಿಸಬೇಕಾದ್ದಿಲ್ಲ. ನನ್ನ ಗೆಳೆಯ ಅವಿಮಾರಕ ಸಂತೋಷವಾಗಿ ಜೀವಂತವಾಗಿ ನಿಮ್ಮೆಲ್ಲ ಕನಸುಗಳನ್ನೂ ಪೂರೈಸುತ್ತಿದ್ದಾನೆ.

**ಕು.ಭೋಜ:** ಸೌವೀರದರಸ (ಒಟ್ಟಿಗೆ) ಅರಮನೆಯಲ್ಲಿಯೇ ಅವಿತುಕೊಂಡು...!! ದೇವಪುರುಷ.... ನೊಂದವರೊಂದಿಗೆ ಪರಿಹಾಸವಲ್ಲ ತಾನೇ?

**ವಿದ್ಯಾಧರ :** ಖಂಡಿತವಾಗಿಯೂ ಇದು ಪರಿಹಾಸವಲ್ಲ. ತಾವೆಲ್ಲರೂ ಏನನ್ನು ಬಯಸಿದ್ದೀರೋ, ಯಾರೊಂದಿಗೆ ಯಾರ ವಿವಾಹವನ್ನು ಯೋಚಿಸಿದ್ದೀರೋ ಅವೆಲ್ಲವೂ ದೈವಯೋಗದಿಂದ ಆಗಲೇ ನಿಮ್ಮ ಗಮನಕ್ಕೆ ಬಾರದಂತೆಯೇ ನಡೆದು ಹೋಗಿದೆ. ಒಬ್ಬರಿಗೊಬ್ಬರ ಪೂರ್ಣ ವಿಚಾರ ತಿಳಿಯದಂತೆಯೇ ಪರಸ್ಪರ ಅನುರಾಗದಿಂದ ಗಾಂಧರ್ವ ವಿಧಿಯಿಂದ ವರಿಸಿದ್ದಾರೆ. ದಾಂಪತ್ಯ 'ಸುಖ ಸಂತೋಷಗಳಲ್ಲಿ ಜಗತ್ತನ್ನೇ ಮರೆತು ನಿರಾಳವಾಗಿದ್ದಾರೆ.

**ಕುಂತಿಭೋಜ:** (ಸ್ವಗತ) ಆಶ್ಚರ್ಯ!.... (ಪ್ರಕಟ) ಅಲ್ಲ ಒಂದು ಗಂಡು ಇರುವೆಯೂ ಸುಳಿಯಲಾಗದಂತೆ ಭದ್ರ ಕಾವಲಿರುವಾಗ ಹೇಗೆ ತಾನೇ ಅಂತಃಪುರ ಪ್ರವೇಶ ಸಾಧ್ಯವಾಯಿತು?

**ವಿದ್ಯಾಧರ :** ರಾಜನ್ ಅವಿಮಾರಕನ ವಿಚಾರ ತಮಗೆ ತಿಳಿಯದ್ದಲ್ಲ. ಒಮ್ಮೆ ಸಾಹಸ ಮಾಡಿ, ಧೈರ್ಯ ಚಾಣಾಕ್ಷತೆಗಳಿಂದ ಒಮ್ಮೆ ಅಂತಃಪುರ ಪ್ರವೇಶಿಸಿದ.

ನಂತರ ನಾನು ನೀಡಿದ ಅಂಗುಲೀಯಕದ ನೆರವಿನಿಂದ ಅದೃಶ್ಯ ರೂಪದಿಂದ ನಿರಾತಂಕವಾಗಿ ತನ್ನ ಪ್ರಣಯ ಸಾಹಸವನ್ನು ಮುಂದುವರೆಸಿದ.

**ಸೌವೀರದರಸ:** ಇದೆಲ್ಲ ತಮಗೆ ಹೇಗೆ ತಿಳಿಯಿತು?

**ವಿದ್ಯಾಧರ :** ನಿಮಗೆ ತಿಳಿದಿರಬಹುದು. ಒಮ್ಮೆ ನಿಮ್ಮ ಮಗಳನ್ನು (ಕುಂತಿಭೋಜನಿಗೆ) ಮದಿಸಿದ ಆನೆಯಿಂದ ಒಬ್ಬ ಸಾಹಸಿ ಯುವಕ ರಕ್ಷಿಸಿದ. ತನ್ನನ್ನು ರಕ್ಷಿಸಿ ಆ ಯುವಕನ ರೂಪ ಲಾವಣ್ಯ ಸಾಹಸಗಳಿಗೆ ಮಂತ್ರ ಮುಗ್ಧಳಾದ ಆಕೆ ತನ್ನ ಸಖಿಯರ ನೆರವಿನಿಂದ ಪ್ರೇಮಾಭಿರಾಸಕ್ಕೆ ಕಳಿಸಿ ಯಶಸ್ವಿಯಾಗಿ ಆ ಯುವಕನನ್ನು ಗೆದ್ದು ಆತನ ಮನಸ್ಸನ್ನು ಸೂರೆಗೊಂಡಳು. ಪ್ರೀತಿ, ಪ್ರಣಯಗಳು ಕಡೆಗೆ ವಿವಾಹದಲ್ಲಿ ಮುಗಿಯಿತು. ಕಳ್ಳನಂತೆ ಕದ್ದು ಪ್ರವೇಶಿಸುತ್ತಿದ್ದ ಗೆಳೆಯ ಒಮ್ಮೆ ಅಕಸ್ಮಾತ್ತಾಗಿ ಸಿಕ್ಕಿ ಬೀಳುವುದರಲ್ಲಿದ್ದು ಹೇಗೋ ಗಂಡಾಂತರದಿಂದ ಪಾರಾಗಿ, ಇನ್ನು ಮುಂದೆ ರಾಜಕುಮಾರಿಯನ್ನು ಸಂಧಿಸಲು ಸಾಧ್ಯವೇ ಇಲ್ಲವೆಂಬ ಭಾವನೆ ಬಲಿತು, ಹತಾಶೆ, ನಿರಾಶೆಗಳಿಂದ, ಭಗ್ನ ಮನಸ್ಕನಾಗಿ, ಪ್ರಾಣದ ಮೇಲೆ ವಿರಕ್ತಿ ಹುಟ್ಟಿ ಆತ್ಮಹತ್ಯೆಗೆ ಪ್ರಯತ್ನಿಸುತ್ತಿದ್ದ ಕ್ಷಣಗಳಲ್ಲಿ ಆತನ ಅಂತರಂಗದ ಅಳಲ ಮೊರೆ ನನ್ನನ್ನು ತಟ್ಟಿತು. ಇಳಿದು ವಿಚಾರಿಸಿದಾಗ ಸತ್ಯ ತಿಳಿಯದಿರಲು, ನನ್ನ ದಿವ್ಯ ದೃಷ್ಟಿಯಿಂದ ಸಮಸ್ತವನ್ನೂ ಅರಿತು ಆತನ ನೆರವಿಗಿರಲೆಂದು ಮಂತ್ರದುಂಗುರವನ್ನು ಕೊಟ್ಟೆ. ಇನ್ನೂ ಸ್ವಲ್ಪ ಸಮಾಧಾನಪಡಿಸಿ ಕೇಳಿದಾಗ, ನಮ್ಮ ಸ್ನೇಹದ ಸ್ಪಷ್ಟ ಕಲ್ಪನೆಯಾದಾಗ ಇನ್ನಷ್ಟು ಮನಬಿಚ್ಚಿ ಮಾತನಾಡಿದ. ಅವರಿಗೆರಗಿದ ಶಾಪ, ರಾಜ ಭ್ರಷ್ಟತೆ, ಅಜ್ಞಾತವಾಸ...... ಕುರಂಗಿಯ ಪ್ರಥಮ ಸಂದರ್ಶನ, ಪ್ರೇಮ, ಪ್ರೀತಿ ಇತ್ಯಾದಿ ಇತ್ಯಾದಿ ಎಲ್ಲವನ್ನೂ ಹೇಳಿಕೊಂಡ. ಕುರಂಗಿಯ ಮೇಲಿನ ಪ್ರೇಮಾಧಿಕ್ಯ ಮತ್ತು ಕಾರಣಾಂತರದಿಂದ ಅವಳನ್ನು ತಲುಪುವುದು ಅಸಾಧ್ಯವೆನಿಸಿದಾಗ ತಾನು ಆತ್ಮಹತ್ಯೆಗೆ ಆಲೋಚಿಸಿದ್ದನ್ನು ತಿಳಿಸಿದ. ನಾನು ಅವನನ್ನು ಸಮಾಧಾನ ಪಡಿಸಿ, ಉಂಗುರದ ನೆರವಿನಿಂದ ಕುರಂಗಿಯನ್ನು ನಿರಾತಂಕವಾಗಿ ತಲುಪಿ ಅವಳೊಂದಿಗೆ ಪ್ರಣಯ ಸುಖದಲ್ಲಿ ಇರುವಂತೆ ಆಶಿಸಿದೆ.

**ಕುಂತೀಭೋಜ:** ಹುಂ! (ನಿಟ್ಟುಸಿರು) ದೈವದಾದೇಶ ಇಂತಿರಲು ನಾವೇನು ಮಾಡಲು ಸಾಧ್ಯ?.... ಆದರೆ ಕುರಂಗಿಯನ್ನು ಜಯವರ್ಮನಿಗೆ ಧಾರೆ ಎರೆದು ಕೊಡುತ್ತೇವೆಂದು ನೀಡಿದ ವಚನದ ಗತಿ ಏನಾಗಬೇಕು? ಸುದರ್ಶನೆಗೆ ಈ ವಿಚಾರ ತಿಳಿಸುವ ಬಗೆ ಹೇಳಿ? ತನ್ನ ಮಗನ ಮದುವೆಯ

ಸಂತೋಷದಲ್ಲಿ ಮೈ ಮರೆತಿರುವ ಆಕೆಗೆ ಇದು ತಿಳಿದರೆ ಅವಳೇನೆಂದುಕೊಂಡಾಳು?

**ಸೌವೀರದರಸ:** ಮಿತ್ರ ನಿಧಾನವಾಗಿ ಇದರ ಬಗ್ಗೆ ಆಲೋಚಿಸೋಣ. ಸದ್ಯಕ್ಕೆ ನಮ್ಮ ಪ್ರಿಯಪುತ್ರ ಜೀವಂತವಾಗಿದ್ದಾನೆಂಬ ಸುದ್ದಿಯೇ ನಮಗೊಂದು ಸಂತೋಷ ತಂದಿದೆ. (ವಿದ್ಯಾಧರನೆಡೆಗೆ ತಿರುಗಿ) ಪೂಜ್ಯರೇ ತಮ್ಮ ಅನುಗ್ರಹ, ಪ್ರೀತಿ, ವಿಶ್ವಾಸಗಳಿಂದಾಗಿ ಇಂದು ನನಗೆ ಕಳೆದುಕೊಂಡ ಅಮೂಲ್ಯ ನಿಧಿ ದೊರಕಿದಂತಾಗಿದೆ. ತಮ್ಮೀ ಋಣವನ್ನು ಹೇಗೆ ತೀರಿಸಿಕೊಳ್ಳುವುದೆಂಬುದೇ ತಿಳಿಯದಾಗಿದೆ.

**ವಿದ್ಯಾಧರ :** ಇಷ್ಟೊಂದು ದೀನರಾಗಬೇಕಾದ ಅವಶ್ಯಕತೆಯಿಲ್ಲ. ಇದರಲ್ಲಿ ನನ್ನದೂ ಸ್ವಾರ್ಥವಿದೆ. ನನಗೂ ಒಬ್ಬ ಪರಾಕ್ರಮಿ, ದೈವಾಂಶ ಸಂಭೂತ, ಸಜ್ಜನ ಮಿತ್ರನು ದೊರೆತದ್ದು ಸಾಮಾನ್ಯ ವಿಷಯವೇನಲ್ಲ!

**ಕುಂ.ಭೋ.:** ಎಂತಹ ಮಾತನಾಡಿದಿರಿ! (ಹೆಮ್ಮೆ) ಅದಕ್ಕೇ ಹೇಳುವುದು, ಸಜ್ಜನರಾದವರಿಗೆ ಮಾತ್ರವೇ ಸಜ್ಜನಿಕೆಯ ಸ್ವರೂಪ ತಿಳಿಯಲು ಸಾಧ್ಯ ಎನ್ನುವುದು. ಉದಾರ ವ್ಯಕ್ತಿಗಳು, ಮಹಾನರೂ ಆಗಿರುವುದರಿಂದಲೇ ನೀವು ಮಾಡಿದ ಇಷ್ಟು ದೊಡ್ಡ ಉಪಕಾರವನ್ನು ಸಾಮಾನ್ಯ ವಿಷಯದಂತೆ ಭಾವಿಸುತ್ತಿದ್ದೀರಿ. ಇರಲಿ. ಇಂದು ಇಲ್ಲಿಯೇ ಇದ್ದು ನಮ್ಮ ಆತಿಥ್ಯವನ್ನು ಸ್ವೀಕರಿಸುವ ಕೃಪೆ ಮಾಡಬೇಕು.

**ವಿದ್ಯಾಧರ :** ಹೇ. ರಾಜನೇ, ತಮ್ಮ ಆಹ್ವಾನಕ್ಕೆ ನಾನು ಸಂತುಷ್ಟನೇನೋ ಹೌದು. ಆದರೆ ನನಗೆ ಬಹಳ ಅವಸರದ ಕೆಲಸವಿದೆ. ಕಾಲ ವಿಳಂಬಕ್ಕೆ ಅವಕಾಶವಿಲ್ಲ... ಇನ್ನೊಮ್ಮೆ, ಅವಿಮಾರಕನ ವಿವಾಹ ಮಹೋತ್ಸವಕ್ಕೆ ತಪ್ಪದೆ ಬರುತ್ತೇನೆ.... ತಮಗೆಲ್ಲರಿಗೂ ಮಂಗಳವಾಗಲಿ... (ಕತ್ತಲು.... ಕೇವಲ ಯಕ್ಷನ ಮೇಲೆ ತೀಕ್ಷ್ಣ ಬೆಳಕು.... ಮಂದಕತ್ತಲು.... ಮತ್ತೆ ಬೆಳಕು.... ಯಕ್ಷ ಕ್ರಮೇಣ ಅದೃಶ್ಯನಾಗಬೇಕು)

**ಭೂತಿಕಾ :** ಲೋಕದಲ್ಲಿ ಎಂತೆಂತಹ ಮಹಾನುಭಾವರು, ಮಹೋಪಕಾರಿಗಳಿದ್ದಾರೆ!!

**ಕುಂ.ಭೋ :** ಹೌದು ಮಂತ್ರಿಗಳೆ ನಿಮ್ಮ ಮಾತು ನಿಜ. ಇಂದು ನಮ್ಮ ಬದುಕಿನಲ್ಲಿ ಎಂದೆಂದಿಗೂ ನಿರೀಕ್ಷಿಸಲಾಗದಷ್ಟು ಪರ್ವವೊಂದು ಆಗಮಿಸಿದೆ. ಋಣವೆನ್ನುವುದು ಹೇಗೆ ಒಬ್ಬೊಬ್ಬರನ್ನೂ ತಮಗರಿವಿಲ್ಲದಂತೆಯೇ ಪರಸ್ಪರ ಬಂಧಿಸಿದೆ ನೋಡಿ!!

**ಕೌಂಡಿನ್ಯ :** ಮಹಾಪ್ರಭು. ಒಟ್ಟಿನಲ್ಲಿ ಎಲ್ಲವೂ ಸುಖಾಂತವಾಯಿತು. (ಭೂತಿಕಾರ ಕಡೆ ತಿರುಗಿ) ಮಂತ್ರಿಗಳೇ ತಾವು ಬೇಗ ಇಲ್ಲಿಂದ ಹೊರಟು ರಾಣಿವಾಸದ

ವ್ಯವಸ್ಥೆಯನ್ನು ಗಮನಿಸಿ. ಅಲ್ಲಿ ಏನು ನಡೆಯುತ್ತಿದೆಯೆಂಬುದನ್ನು ಜಾಗರೂಕತೆಯಿಂದ ಪರಿಶೀಲಿಸಿ ಮಹಾಪ್ರಭುಗಳಿಗೆ ವಿಷಯ ತಿಳಿಸಿ. (ಕುಂ.ಭೋಜನ ಕಡೆ ತಿರುಗಿ) ಆಗಬಹುದಲ್ಲವೇ ಪ್ರಭು?

**ಕುಂ.ಭೋ.:** (ನಗುತ್ತಾ) ನಿಮ್ಮ ಆಲೋಚನೆಗಳಲ್ಲಿ, ನಿಮ್ಮ ಆಡಳಿತ ವ್ಯವಸ್ಥೆಯಲ್ಲಿ, ಜವಾಬ್ದಾರಿಗಳ ನಿರ್ವಹಣೆಯಲ್ಲಿ ನಮಗೆ ಪೂರ್ಣ ಭರವಸೆಯಿದೆ. ನೀವು ಹೇಳಿದ್ದೇ ನೀತಿ, ನಡೆದದ್ದೇ ರೀತಿ.... ನಾವೂ ನಮ್ಮ ಹೆಂಗಸರನ್ನು ಕಂಡು ವಿಷಯ ತಿಳಿಸುತ್ತೇವೆ. ನಿಜವಾಗಿಯೂ ಅವರೂ ತುಂಬಾ ಆತಂಕದಿಂದಲೇ ಇದ್ದರು. ಇನ್ನಷ್ಟು ಕಾಯಿಸಿ ತಲ್ಲಣಗೊಳಿಸುವುದಕ್ಕಿಂತ ಈ ಸಂತಸದ ಸಂಗತಿಗಳನ್ನು ತಿಳಿಸಿ ಅವರ ದುಗುಡದ ಕಾರ್ಮೋಡಗಳನ್ನು ದೂರ ಮಾಡೋಣ. ಜೊತೆಗೆ ಮುಂದಿನ ಕ್ರಮದ ಬಗ್ಗೆ ಅವರೊಂದಿಗೆ ಪರಾಮರ್ಶಿಸಿ ಒಂದು ನಿರ್ಧಾರಕ್ಕೆ ಬರೋಣ..... (ಸಭೆಯನ್ನು ಉದ್ದೇಶಿಸಿ) ಗೌರವನೀಯರಾದ ಹಿರಿಯ ಕಿರಿಯ ಸಭಾಸದರೇ, ಇಂದು ಇಲ್ಲಿ ನಡೆದ ವಿದ್ಯಮಾನಗಳನ್ನೆಲ್ಲಾ ನೀವು ಬಲ್ಲಿರಿ.... ರಾಜಕುಟುಂಬದ ಸಮಸ್ಯೆಗಳು ಪ್ರಜೆಗಳಿಂದ ಮರೆಮಾಚಲೇಬೇಕೆಂಬುದೇನೂ ಇಲ್ಲ. ಏನೋ ದೇವರ ದಯೆ. ನಿಮಗೇ ಈಗ ತಿಳಿದುಬಂದಂತೆ ಎಲ್ಲ ಕಷ್ಟಗಳೂ ಸಮಸ್ಯೆಗಳೂ ಪರಿಹಾರಗೊಂಡಿವೆ. ನಮ್ಮ ಮಕ್ಕಳ ವಿವಾಹೋತ್ಸವವು ಇಷ್ಟರಲ್ಲೇ ನಡೆಯಲಿದೆ. ಸಮಸ್ತ ಪ್ರಜಾಕೋಟಿಗೆ ಇವರಲ್ಲಿ ಸ್ವಾಗತವಿದೆ.... ಈಗ ಸದ್ಯಕ್ಕೆ ಈ ಸಭೆಯನ್ನು ಮುಕ್ತಾಯಗೊಳಿಸಲು ತಮ್ಮೆಲ್ಲರ ಅಪ್ಪಣೆ ಕೋರುತ್ತೇವೆ.

**ಸಭಾಸದರು:** ಮಹಾಪ್ರಭುಗಳಿಗೆ ಜಯವಾಗಲಿ! (ಎಂದು ಜಯಘೋಷ ಮಾಡುವರು)

(ಪರದೆ ಬೀಳುವುದು)

OO

# ದೃಶ್ಯ – ೨

(ಅರಮನೆಯಲ್ಲಿನ ಒಂದು ಖಾಸಗಿ ಕೋಣೆ. ಕುಟುಂಬದ ಸದಸ್ಯರೆಲ್ಲರೂ ಸೇರಿದ್ದಾರೆ. ಸೌವೀರದೇಶದ ಅರಸ ದಂಪತಿಗಳು – ಕುಂತಿ ಭೋಜ ದಂಪತಿಗಳು ತಮ್ಮ ತಮ್ಮ ಆಸನಗಳಲ್ಲಿ ಮಂಡಿಸಿದ್ದಾರೆ. ಅವರೆಲ್ಲರೂ ಯಾರಮೋ ನಿರೀಕ್ಷೆಯಲ್ಲಿದ್ದಂತೆ ತೋರುತ್ತದೆ)

**ಸುಚೇತನಾ:** (ಕಳವಳದಿಂದ) ಪ್ರಭು, ಇಷ್ಟಕ್ಕೂ ನಾವೇಕೆ ಇಲ್ಲಿ ಸೇರಿದ್ದೇವೆ? ಯಾರ ನಿರೀಕ್ಷೆಯಲ್ಲಿದ್ದೇವೆ? ನಮ್ಮ ಪುತ್ರನ ಸುಳಿವೇನಾದರೂ ದೊರೆಯಿತೇ?

**ಸೌರವೀರದವರಸ:** ಮಹಾರಾಣಿ ಗಾಭರಿ ಬೇಡ. ನಿಮ್ಮ ಪ್ರಿಯಪುತ್ರರು ಕ್ಷಣಾರ್ಧದಲ್ಲಿ ಇಲ್ಲಿಗೆ ಬರುತ್ತಾರೆ.

**ಸುದರ್ಶನಾ:** ಇದೇನು... ಯಾಕೆ ಹೀಗೆ ಎಲ್ಲರೂ ಇಷ್ಟೊಂದು ಗಂಭೀರವಾಗಿ ಕುಳಿತಿದ್ದೀರಿ. ಕುರಂಗಿಯ ಮದುವೆಯ ಸಿದ್ಧತೆಗಳು ನಡೆಯಬೇಕಾದ ಸಮಯದಲ್ಲಿ ಹೀಗೆ ಎಲ್ಲರೂ ಯಾವುದೋ ಗಂಭೀರ ಸಮಸ್ಯೆಯನ್ನು ತಲೆಮೇಲೆ ಹೊತ್ತು ಕೂತಂತೆ ಕೂತಿದ್ದೀರಿ? ನನಗೊಂದೂ ಅರ್ಥವಾಗುತ್ತಿಲ್ಲ.

**ಕುಂ.ಭೋ :** ಸೋದರಿ, ಇಷ್ಟರಲ್ಲೇ ನಿನಗೊಂದು ಆಶ್ಚರ್ಯವೂ ಕಾದಿದೆ: ಆಘಾತವೂ ಕಾದಿದೆ... ಈಗಲೇ ಹೇಳುತ್ತಿದ್ದೇನೆ, ಎರಡಕ್ಕೂ ಸಿದ್ಧವಾಗಿರು.

**ಸುದರ್ಶನಾ:** ಅಣ್ಣಯ್ಯ, ನನಗಂತೂ ನಿಮ್ಮ ಮಾತಿನ ಒಗಟು ಅರ್ಥವಾಗುತ್ತಿಲ್ಲ. ನನಗೆ ತಿಳಿಯದೆ ಏನೋ ಪಿತೂರಿ ನಡೆದಿದೆ.

**ಸುಚೇತನಾ:** ತಂಗಿ ಹಾಗೆಲ್ಲ ಮಾತಾಡಬೇಡ. ನಿಜವಾದ ವಿಷಯ ತಿಳಿದರೆ ನಮಗಿಂತ ಹೆಚ್ಚಿಗೆ ಸಂತೋಷಪಡುವಳು ನೀನೆ.

**ಸುದರ್ಶನಾ:** ಅದೇನಂಥಾದ್ದು!

**ಕುಂ.ಭೋ :** ನೀವು ಅಕ್ಕ ತಂಗಿಯರೇ ಹೀಗೆ! ಪರಸ್ಪರ ಮಾತಿಗಿಳಿದು ಪಕ್ಕದವರ ಕಡೆ ಗಮನವೆ ಇರುವುದಿಲ್ಲ... ಹೌದಲ್ಲವೇ ಮಹಾದೇವಿ? (ನಗುವನು)

**ಮಹಾರಾಣಿ:** ನಿಮ್ಮ ಗಂಡಸರ ಮಾತುಗಳು.... ತಲೆಬುಡ ಹತ್ತುವುದಿಲ್ಲ.

**ಕುಂ.ಭೋ :** ನೋಡಿದೆಯಾ.... ನೋಡಿದೆಯಾ.... ನಿಮ್ಮ ಜಾತಿಯ ಪಕ್ಷಪಾತವನ್ನಂತೂ ಬಿಡುವುದೇ ಇಲ್ಲ.

**ಸುಚೇತನಾ:** ಪ್ರಭು ದಯಪಿಟ್ಟು ವಿಷಯ ಏನೆಂದು ತಿಳಿಸಿ. ನಮಗಂತೂ ಕುತೂಹಲ ತಡೆಯಲಾಗುವುದಿಲ್ಲ.

**ಸೌವೀರದರಸ:** ಸುಚೇತನಾ, ಜಾತಕ ಪಕ್ಷಿಗಳಂತೆ ಕಾದ ನಮ್ಮ ಕಣ್ಣುಗಳಿಗೀಗ ನಮ್ಮ ಪ್ರಿಯ ಪುತ್ರ ದರ್ಶನ ಲಾಭ ಒದಗಲಿದೆ.

**ಸುಚೇತನಾ:** (ಸಂಭ್ರಮದಿಂದ) ಪ್ರಭು, ನೀವು ಹೇಳುತ್ತಿರುವುದೇನು ನಿಜವೇ?

**ಸೌವೀರದರಸ:** ಎಂದಿಗಾದರೂ ನಿನ್ನಲ್ಲಿ ನಾನು ಸುಳ್ಳನ್ನು ಹೇಳಿದ್ದುಂಟೇ ಸುಚೇತನಾ?

**ಸುಚೇತನಾ:** ಕ್ಷಮಿಸಿ ಪ್ರಭು. ನನಗೆ ಈ ಅಮೃತ ಸದೃಶವಾದ ಸುದ್ದಿ ಕೇಳಿ, ಇದು ಸುಳ್ಳಾಗದಿರಲೆಂಬ ಒಳಗಿನ ಹಾರೈಕೆ ಹಾಗೆ ಮಾತನಾಡಿಸಿತು.

**ಸೌವೀರದರಸ:** ಪರವಾಗಿಲ್ಲ. ನಿನ್ನ ಆಂತರ್ಯದ ಭಾವನೆಗಳು ನನಗೆ ಅರ್ಥವಾಗುತ್ತದೆ.

(ಕೌಂಡಿನ್ಯ, ಭೂತಿಕಾ, ಅವಿಮಾರಕ – ಇವರುಗಳ ಪ್ರವೇಶ)

**ಕುಂತಿಭೋಜ:** (ಗೆಲುವಿನಿಂದ) ಬನ್ನಿ ಮಂತ್ರಿಗಳೇ.... ಬಾ ಕುಮಾರ.... ನಿಮ್ಮ ವಿಷಯವನ್ನೇ ಪ್ರಸ್ತಾಪ ಮಾಡುತ್ತಿದ್ದೆವು.

**ಕೌಂಡಿನ್ಯ ಮತ್ತು**

**ಭೂತಿಕಾ :** ಮಹಾಪ್ರಭುಗಳಿಗೆ ವಂದನೆಗಳು. ನಮ್ಮ ವಚನದಂತೆ ಬಹಳ ಜತನದಿಂದ ಯುವರಾಜರನ್ನು ತಂದು ತಮ್ಮ ಸಮಕ್ಷಮಕ್ಕೆ ಒಪ್ಪಿಸಿದ್ದೇವೆ.

**ಸೌವೀರದರಸ:** ಬಹಳ ಉಪಕಾರವಾಯಿತು. ಮಂತ್ರಿಗಳೇ (ಅವಿಮಾರಕನ ಕಡೆ ತಿರುಗಿ) ಬಾ ಕುಮಾರ. ಸಂಕೋಚದಿಂದ ದೂರ ನಿಲ್ಲಬೇಡ. ಇವರೇನೂ ಬೇರೆಯವರಲ್ಲ ನಿನ್ನ ಮಾವಂದಿರು ಅವರಿಗೆ ನಮಸ್ಕರಿಸು.

**ಅವಿಮಾರಕ:** (ತಲೆ ತಗ್ಗಿಸಿ ನಿಂತು) ಪ್ರಭುಗಳು ನನ್ನನ್ನು ಕ್ಷಮಿಸಬೇಕು. ನಿಮಗೆಲ್ಲರಿಗೂ ಮೋಸ ಮಾಡಿ, ಹಿರಿಯರನ್ನು ಧಿಕ್ಕರಿಸಿ ಸಲ್ಲದ ರೀತಿಯಲ್ಲಿ ನಡೆದುಕೊಂಡೆ. ನನ್ನ ತಪ್ಪಿಗಾಗಿ ನೀವು ನನಗೆ ಯಾವ ಶಿಕ್ಷೆಯನ್ನಾದರೂ ವಿಧಿಸಬಹುದು.

**ಕುಂತೀಭೋಜ:** ಕ್ಷಮೆಯೇ...... ಅದು ಸಾಧ್ಯವೇ ಇಲ್ಲ. ನೀವು ಮಾಡಿದ ಅಪರಾಧ ಅಕ್ಷಮ್ಯವಾದುದು. ಚೋರತನದಿಂದ ಅಂತಃಪುರಕ್ಕೆ ನುಗ್ಗಿ ನಮ್ಮ ಬಾಳಿನ ಭಾಗ್ಯವನ್ನೇ ನಮ್ಮ ಕಣ್ಣಿನ ಬೆಳಕನ್ನೇ ದೋಚಬಹುದೇ?

ಎಂತಹ ಸಾಹಸ!! ಖಂಡಿತ ನಿಮಗೆ ಶಿಕ್ಷೆಯಾಗಲೇಬೇಕು. (ಕೈಯೆತ್ತಿ ಸದ್ದು ಮಾಡಿ) ಯಾರಲ್ಲಿ?..... (ಎನ್ನಲು ಸೇವಕರಿಬ್ಬರು ಬರುವರು)

**ಸೇವಕರು :** ಏನಪ್ಪಣೆ ಪ್ರಭು?

**ಕುಂ.ಭೋ :** ಕೂಡಲೇ ಇವರ ಸಹ ಅಪರಾಧಿಯಾಗಿರುವ ನಮ್ಮ ಮಗಳನ್ನು ಕರೆದು ತನ್ನಿ.

**ಸೇವಕರು :** ಅಪ್ಪಣೆ ಪ್ರಭು! (ಹೊರಡುವರು)

**ಸುಚೇತನಾ:** (ಹರ್ಷದಿಂದ) ಕುಮಾರ...... ಇದೇನು ಹೀಗೆ ಸೊರಗಿ ಹೋಗಿದ್ದಿ... ಇಷ್ಟು ಕಾಲ ಎಲ್ಲಿದ್ದಿ? ತಂದೆ ತಾಯಿಗಳು ನಿನಗೆ ಬೇಡವಾದರೆ?

**ಅವಿಮಾರಕ:** ತಾಯಿ.......... ಇದಕ್ಕೆಲ್ಲ ಶಾಪ ಕಾರಣವೆಂಬುದನ್ನು ಬಹುಶಃ ತಾವು ಮರೆತಿರಲಾರಿರಿ. ಹೆತ್ತ ತಾಯಿ ತಂದೆಯರನ್ನು ಎಂದಾದರೂ ಮರೆಯಲು ಸಾಧ್ಯವೇ?.... ಏನೋ ನಮ್ಮ ದುರಾದೃಷ್ಟ..... ನಾನು ಸಲ್ಲದ ಅಪರಾಧವನ್ನು ಮಾಡಿದೆ. ಪ್ರಭುಗಳು ಯಾವ ಶಿಕ್ಷೆಯನ್ನು ನೀಡಿದರೂ ನಾನು ಸಿದ್ಧನಾಗಿದ್ದೀನಿ.... (ತಂದೆಯ ಕಡೆ ತಿರುಗಿ) ಅಪ್ಪಾಜಿ, ಮತ್ತೊಮ್ಮೆ ನಿಮ್ಮ ಮನಸ್ಸಿಗೆ ನೋವುಂಟು ಮಾಡಲಿದ್ದೀನಿ.... ಮೊದ ಮೊದಲು ನಾನು ಪ್ರೀತಿಸಿದ ರಾಜಕುಮಾರಿ ಯಾರೆಂದು ತಿಳಿಯಲಿಲ್ಲ. ಆದರೆ ನಂತರ ಕ್ರಮೇಣ ನನಗೆ ಎಲ್ಲ ವಿಷಯಗಳು ತಿಳಿದವು. ಆದರೂ ನಾನು ಮಾತ್ರ ನಮ್ಮ ಅಜ್ಞಾತವಾಸದ ಕಾರಣದಿಂದ ಯಾರಿಗೂ ನನ್ನ ಪರಿಚಯವನ್ನು ಬಹಿರಂಗ ಮಾಡಲಿಲ್ಲ... ಆದರೂ ನಾನು ಹಿರಿಯರನ್ನು ವಂಚಿಸಿ, ಉಲ್ಲಂಘಿಸಿ, ಅಪ್ಪಣೆಯಿಲ್ಲದೆ ಉದ್ಧಟತನದ ಕೆಲಸ ಮಾಡಿದ್ದೀನಿ. ಪ್ರಭುಗಳು ಶಿಕ್ಷೆ ವಿಧಿಸಲಿ... ಆದರೆ ಕ್ಷಮಿಸಿದ್ದೇವೆಂದು ಒಂದು ಮಾತು ಹೇಳಲಿ ಸಾಕು.

**ಕುಂ.ಭೋ :** ಆತುರವೇಕೆ? ಇನ್ನೊಂದೆರಡು ಕ್ಷಣ ಕಾದಿರಿ. ನಿಮಗೆ ನಾವು ನೀಡುವ ಶಿಕ್ಷೆ ಎಷ್ಟು ಘೋರವಾದುದೋ ನಿಮಗೇ ತಿಳಿಯುತ್ತದೆ. (ಅಷ್ಟರಲ್ಲಿ ನಳಿನಿಕಾ, ಮಧೂಲಿಕಾ ಮತ್ತು ಕುರಂಗಿಯರ ಪ್ರವೇಶ)

**ಕುರಂಗಿ :** (ಕಂಬನಿಮುಂಬಿ) ಅಪ್ಪಾಜಿ, ನಿಮಗೆ ನನ್ನ ಗೌರವಪೂರ್ವಕ ನಮಸ್ಕಾರಗಳು. ಅಮ್ಮಾಜಿ ಮತ್ತು ಇಲ್ಲಿರುವ ಎಲ್ಲ ಪೂಜ್ಯರಿಗೆ ಹಿರಿಯರಿಗೆ ನನ್ನ ವಿನಯಗಳು. (ತಂದೆಯ ಕಡೆ) ಅಪ್ಪಾಜಿ ನಾನು ಅಪರಾಧಿ. ನನ್ನನ್ನು ತಾವು ಕ್ಷಮಿಸಬೇಕು. ನಮಗೆ ಕರೆ ಕಳುಹಿಸಿದ್ದೀರಿ. ಕಾರಣ ಸ್ಪಷ್ಟವಾಗಿ ತಿಳಿಯದಿದ್ದರೂ, ನಮ್ಮ ಅಪರಾಧ ಎಲ್ಲರಿಗೂ ಗೊತ್ತಾಗಿರುವ ವಿಷಯ ತಿಳಿಯಿತು.

ನಳಿನಿಕಾ

**ಮಧೂಲಿಕಾ:** ಮಹಾ ಪ್ರಭುಗಳಿಗೆ, ಪೂಜ್ಯರೆಲ್ಲರಿಗೆ ನಮ್ಮ ನಮಸ್ಕಾರ. ರಾಜಕುಮಾರಿಯವರದೇನೂ ತಪ್ಪಿಲ್ಲ. ಅವರಿಗಿಂತ ಹೆಚ್ಚಿನ ಅಪರಾಧಿಗಳು ನಾವು. ನಮ್ಮನ್ನು ಮೊದಲು ದಂಡಿಸಬೇಕು.

**ಕುಂ.ಭೋ :** (ಹುಸಿ ಮುನಿಸಿನಿಂದ) ಹೂಂ! ಹೂಂ! ಎಲ್ಲಾ ತಿಳೀತು. ಮಾಡುವುದೆಲ್ಲ ಮಾಡಿ ಈಗ ಅಪರಾಧ ಕ್ಷಮೆ ಕೇಳಿದರೆ ಹೇಗೆ? ನಾವೂ ನೋಡುತ್ತಿದ್ದೇವೆ. ಬರಬರುತ್ತಾ ಅಪರಾಧಿಗಳ ಸಂಖ್ಯೆ ಹೆಚ್ಚುತ್ತಲೇ ಇದೆ.

**ನಳಿನಿಕಾ, ಮಧೂಲಿಕಾ:** (ಅಪರಾಧ ಭಾವದಿಂದ) ಪ್ರಭೂ ಇಷ್ಟೆಲ್ಲಕ್ಕೂ ನಾವೇ ಕಾರಣ. ಅಂದು ಮಧುಕೇಶ್ವರ ದೇವಾಲಯದಲ್ಲಿ ತಮ್ಮನ್ನು ರಕ್ಷಿಸಿದ ಅಪರಿಚಿತನ ಶೌರ್ಯ ಸಾಹಸ ರೂಪ ಲಾವಣ್ಯಗಳಿಗೆ ಮೋಹಿತರಾದ ರಾಜಕುಮಾರಿಯವರು ಅವರನ್ನು ಮನಸ್ಸಿನಲ್ಲಿಯೇ ಅಭಿನಂದಿಸಿ ಅವರದೇ ಚಿಂತೆಯಲ್ಲಿ ದಿನದಿನಕ್ಕೆ ಸೊರಗಿ ಹೋಗುತ್ತಿದ್ದರು. ಅದೇ ಹೊತ್ತಿಗೆ ವಿಷಯ ತಿಳಿದ ತಾವೂ ಆ ಅಪರಿಚಿತ ಯುವಕನ ಪತ್ತೆಯಲ್ಲಿದ್ದೀರೆಂದು ತಿಳಿಯಿತು. ಬಹುಶಃ ನಿಮ್ಮ ಮೆಚ್ಚುಗೆಯೂ ಆತನ ಬಗ್ಗೆ ಇರಬಹುದೆಂದು ಭಾವಿಸಿ ರಾಜಕುಮಾರಿಯ ಪ್ರೇಮಕ್ಕೆ ನಾವು ಒತ್ತಾಸೆ ಕೊಟ್ಟೆವು; ಹುರಿದುಂಬಿಸಿದೆವು. ಆ ಯುವಕನನ್ನು ಊರೆಲ್ಲಾ ಹುಡುಕಾಡಿ ಉಪಾಯಾಂತರದಿಂದ ಪತ್ತೆ ಹಚ್ಚಿ ಇಬ್ಬರನ್ನೂ ಒಟ್ಟುಗೂಡಿಸಿದೆವು. ಮುಂದೆ ಆಗಬಹುದಾದ ಅನಾಹುತಗಳ ಕಲ್ಪನೆಗಳೇ ಇಲ್ಲದೆ ದುಡುಕುತನದಿಂದ ಮುಂದುವರೆದೆವು. ಇಷ್ಟೇ ಪ್ರಭು ಆದದ್ದು. ಜಯವರ್ಮರೊಂದಿಗೆ ವಿವಾಹದ ಮಾತುಕತೆಯ ಸುದ್ದಿ ಕೇಳಿದ ರಾಜಕುಮಾರಿಯವರು ತತ್ತರಿಸಿಹೋಗಿದ್ದಾರೆ. ಒಂದೇ ಸಮನೆ ಅಳುತ್ತಿದ್ದಾರೆ. ತಮ್ಮ ಪ್ರೀತಿ ಸಾರ್ಥಕವಾಗದಿದ್ದಲ್ಲಿ ಏನಾದರೂ ಅನಾಹುತಕ್ಕೆ ಎಳಸಲೂಬಹುದು ಪ್ರಭು.

**ಕುಂ.ಭೋ.:** ಏನು ನಮ್ಮ ಪುತ್ರಿಯವರು ಬಹಳ ಮುಂದುವರೆದಿದ್ದಾರೆ!!

**ಕುರಂಗಿ :** (ಬಿಕ್ಕಿ ಬಿಕ್ಕಿ ಅಳುತ್ತಾ) ಕ್ಷಮಿಸಿ ಅಪ್ಪಾಜಿ, ಮಹಾಪರಾಧವಾಯಿತು.

**ಕುಂ.ಭೋ :** (ಹುಸಿ ಕೋಪದಿಂದಲೇ) ಕ್ಷಮೆ!? ಸಾಧ್ಯವಿಲ್ಲ. ನಮಗೆ ಮಗಳಾದರೇನು? ಅಪರಾಧ ಅಪರಾಧವೇ! ಮಗಳೇ ಆಗಿರಲಿ ಬೇರೆಯವರೇ ಆಗಿರಲಿ! ಶಿಕ್ಷೆ ಮಾತ್ರ ತಪ್ಪಿದ್ದಲ್ಲ.

(ತಂದೆ ಮಗಳ ಈ ನಾಟಕವನ್ನು ಎಲ್ಲರೂ ನೋಡುತ್ತಾ ಮುಸಿ ಮುಸಿ ನಗುತ್ತಿದ್ದಾರೆ. ಆದರೆ ಅಪರಾಧಿಗಳೆಂದೇ ತಮ್ಮನ್ನು ಭಾವಿಸಿಕೊಂಡಿರುವ ಎಳೆಯರು ಮಾತ್ರ ಭಯಗ್ರಸ್ತರಂತೆ, ಅಸಹಾಯಕರಂತೆ ತಲೆ ತಗ್ಗಿಸಿ ನಿಂತಿದ್ದಾರೆ)

**ಕುರಂಗಿ** : (ತಾಯಿಯ ಕಡೆ ನೋಡಿ) ಅಮ್ಮಾಜಿ ನೀವಾದರೂ ಹೇಳಬಾರದೆ?

**ಮಹಾರಾಣಿ:** (ಮುಗುಳ್ನಗೆಯಿಂದ) ಹೌದು ಪ್ರಭು. ಅವರ ಅಪರಾಧವನ್ನು ಕ್ಷಮಿಸಿ ಬಿಡಿ.

**ಸೌವೀರದರಸ** :(ನಗುತ್ತಾ) ಗೆಳೆಯಾ ಇನ್ನು ಈ ಎಳೆಯರೊಂದಿಗೆ ಸಾಕು ಮಾಡು ನಿನ್ನ ಸರಸ. ಈಗಾಗಲೇ ಎದೆಯೊಡೆದು ಸಾಯುವಷ್ಟು ಗಾಭರಿಗೊಂಡಿದ್ದಾರೆ. ಹೆದರಿದವನ ಮೈಮೇಲೆ ಕಪ್ಪೆ ಎಸೆದು ಇನ್ನಷ್ಟು ಹೆದರುವಂತೆ ಮಾಡುವುದು ಬೇಡ.

**ಕುಂತೀಭೋಜ:** (ಗಟ್ಟಿಯಾಗಿ ನಕ್ಕು) ಬನ್ನಿ ಮಕ್ಕಳೇ ಬನ್ನಿ ನನ್ನ ಹತ್ತಿರ ಬನ್ನಿ. ಸುಮ್ಮನೆ ವಿನೋದಕ್ಕೆ ಹಾಗೆ ಹೆದರಿಸಿದೆ. ನಿಮ್ಮಿಬ್ಬರಿಗೆ ಅತ್ಯಂತ ಪ್ರಿಯವಾದ ಶಿಕ್ಷೆಯನ್ನೇ ನಾನು ಆಲೋಚಿಸಿದ್ದೇನೆ. (ಅವಿಮಾರಕನ ಕಡೆ ತಿರುಗಿ) ಬಾ ಕುಮಾರ.... ನಾನು ನಿನಗೆ ಪ್ರಭುವಲ್ಲ. ನಿನಗೆ ಮಾವ. ನನ್ನೆದೆಗೆ ತಂಪು ತರುವ ಕೆಲಸವನ್ನೇ ಮಾಡಿರುವಿ. ನಿಮಗರಿವಿಲ್ಲದೆಯೇ ನೀವು ಮಾಡಿದ ಕೆಲಸ ನಮಗೆ ಅನುಕೂಲವೇ ಆಗಿದೆ. ಈ ಕುರಂಗಿ, ನೀನು ಪ್ರೀತಿಸಿದ, ಆರಾಧಿಸಿದ, ಪ್ರಾಣದಾಸೆಯನ್ನು ಮೀರಿದ ಸಾಹಸಕ್ಕೂ ಕೈ ಹಚ್ಚಿದ.... ನಿನ್ನ ಪ್ರೀತಿ ಪಾತ್ರಳಾದವಳು ನನ್ನ ಜೇಷ್ಠ ಪುತ್ರಿ. ನಿನಗೆಂದೇ ಮೊದಲಿನಿಂದಲೂ ಮೀಸಲಾಗಿದ್ದವಳು. ಅರಿಯದೇ ಆದರೂ ಸೇರಬೇಕಾದವನನ್ನೇ ಸೇರಿದ್ದಾಳೆ. ನಮಗೆ ಬಹಳ ಆನಂದವಾಯಿತು.

**ಸುದರ್ಶನಾ :** ಇದೇನು ನೀವಾಡುತ್ತಿರುವದು? ರಾಜ ಕುಮಾರಿಯನ್ನು ನಮ್ಮ ಜಯವರ್ಮನಿಗಲ್ಲವೇ ನೀಡುತ್ತಿರುವುದು (ಆಶ್ಚರ್ಯ, ಅನುಮಾನ)

**ಕುಂ.ಭೋಜ:** ಜಯವರ್ಮನಾದರೇನು? ಅವಿಮಾರಕ ಅಥವಾ ವಿಷ್ಣುಸೇನನಾದರೇನು? ಎರಡೂ ಒಂದೇ ಅಲ್ಲವೇ?

**ಸುದರ್ಶನಾ:** ಅದು ಹೇಗಾಗುತ್ತದೆ ಅಣ್ಣಾವರೇ?

**ಸೌವೀರದರಸ** : ಹೌದು ಸುದರ್ಶನಾ ನಿಮ್ಮ ಅಣ್ಣನವರು ಹೇಳುವುದು ಸತ್ಯ. ವಿಷ್ಣುಸೇನನೂ ನಿನಗೆ ಮಗನ ಸಮಾನ ಎಂಬುದಷ್ಟೆ ಅಲ್ಲ, ಸ್ವತಃ ನಿನ್ನ ಮಗನೇ!!

**ಸುದರ್ಶನಾ:** ನನ್ನ ಮಗನೇ! ನೀವೇನೂ ಪರಿಹಾಸ ಮಾಡುತ್ತಿಲ್ಲವಲ್ಲ!! ನನಗಿರುವವನೊಬ್ಬನೇ ಮಗ ಜಯವರ್ಮ.

**ಸೌವೀರದರಸ:** ಅದೇ ನಿನಗೆ ಗೊತ್ತಿಲ್ಲದಿರುವುದು..... ನಿನಗೆ ಮರೆತಿರಬಹುದು. ನಿಮ್ಮಿಬ್ಬರು ಅಕ್ಕತಂಗಿಯರಿಗೂ ಒಂದೇ ದಿನ ಪ್ರಸವವಾಯಿತು. ಆದರೆ

ಸುಚೇತನಳು ಹೆತ್ತ ಮಗು ತೀರಿ ಹೋದದ್ದರಿಂದ, ಅಕ್ಕನ ಅಳಲನ್ನು ದೂರಮಾಡಲು ನಿನಗೆ ಹುಟ್ಟಿದ ಅವಳಿ ಮಕ್ಕಳಲ್ಲಿ ಒಬ್ಬನನ್ನು ಅವಳ ಪಕ್ಕದಲ್ಲಿ ಮಲಗಿಸಿ ನಿನಗೆ ಒಬ್ಬನೇ ಮಗನೆಂದು ಹೇಳಿತ್ತು. ಇಷ್ಟು ದಿನ ಈ ರಹಸ್ಯ ನಮ್ಮೊಂದಿಬ್ಬರಿಗೆ ಬಿಟ್ಟು ಯಾರಿಗೂ ತಿಳಿಸಿರಲಿಲ್ಲ. ನಿನ್ನ ಗಂಡ ಇದನ್ನು ಬಲ್ಲ. ಆತ ಬಂದ ಮೇಲೆ ಕೇಳಿ ನೋಡು. ಆಗ ತಂದು ಬೆಳಸಿದ ಆ ಮಗುವೇ ಇವನು. ಮಧ್ಯೆ ಏನೇನೋ ಕಷ್ಟಗಳು ಬಂದು ಎಲ್ಲೆಲ್ಲೋ ಚದುರಿ ಹೋಗಿ ಈಗ ದೈವಯೋಗದಿಂದ ಇಂದು ಒಟ್ಟಿಗೆ ಸೇರಿದ್ದೇವೆ. ಬಂಧು ಮಿತ್ರರೆಲ್ಲ ಹೀಗೆ ಸೇರಿರುವುದು ನಿಜವಾಗಿಯೂ ಅಪರೂಪದ ಸಂಗತಿ.

**ಸುದರ್ಶನಾ** : (ಸಂತೋಷದಿಂದ) ಭಾವನವರೇ, ಈ ವಿಚಿತ್ರ ಮತ್ತು ಆಶ್ಚರ್ಯದ ಸುದ್ದಿ ಹೇಳಿ ನನ್ನನ್ನು ಮೂಕಳನ್ನಾಗಿ ಮಾಡಿದ್ದೀರಿ. ಒಬ್ಬ ಮಗನ ಎಡೆಯಲ್ಲಿ ಇಬ್ಬಿಬ್ಬರು ಮಕ್ಕಳನ್ನು ಕೊಟ್ಟು ನನ್ನ ಭಾಗ್ಯವನ್ನು ಹೆಚ್ಚಿಸಿದ್ದೀರಿ. (ಅವಿಮಾರಕನ ಕಡೆ ಮುಖ ಮಾಡಿ) ಬಾ ಕುಮಾರ. ಈ ನಿನ್ನ ಅಗಲಿದ್ದ ತಾಯಿಯನ್ನು ಅಪ್ಪಿ ತಣಿಸು. (ಅವಿಮಾರಕ ಹತ್ತಿರ ಬಂದು ತಾಯಿಯ ಪಾದ ಮುಟ್ಟಿ ನಮಸ್ಕರಿಸುವನು)

**ಅವಿಮಾರಕ:** ಅಮ್ಮಾಜಿ! ಇದೇನಿದು ಒಂದರ ಮೇಲೊಂದರಂತೆ ವಿಚಿತ್ರಗಳನ್ನು ಕಾಣುತ್ತಿದ್ದೀನಿ. ಒಬ್ಬ ತಾಯಿಯ ಯೋಗದ ಜೊತೆಗೆ ಇಬ್ಬರು ತಾಯಂದಿರು!! ದೈವವೇ ನಿನ್ನ ಕರುಣೆಗೆ ಎಣೆಯಿಲ್ಲ. ನನ್ನ ಅದೃಷ್ಟವೋ ಅದೃಷ್ಟ!

**ಕುಂ.ಭೋ :** ಹಾಂ! ಹಾಂ!..... ನಿಲ್ಲಿ ನಿಲ್ಲಿ...... ಆ ಅದೃಷ್ಟದ ಅತಿರೇಕದಲ್ಲಿ ಈ ಅದೃಷ್ಟವನ್ನು ಮರೆತು ಬಿಟ್ಟೀರಿ. (ಎಂದು ಕುರಂಗಿಯನ್ನು ಹತ್ತಿರ ಕರೆದು ಅವಿಮಾರಕನ ಬಳಿಗೆ ಕರೆದೊಯ್ಯುವನು. ಅವಳತ್ತ ನೋಡುತ್ತಾ ಅವಿಮಾರಕ ಗೆಲುವಿನಿಂದ)

**ಅವಿಮಾರಕ** : ಅದನ್ನು ಹೇಗೆ ಮರೆಯಲಿ ಮಾವನವರೇ? ಈ ಅದೃಷ್ಟಕ್ಕಾಗಿಯೇ ಅಲ್ಲವೆ ಮಾಡಬಾರದ ಸಾಹಸಗಳನ್ನೆಲ್ಲಾ ಮಾಡಿ ನಿಮ್ಮ ಮುಂದೆ ಅಪರಾಧಿಯಂತೆ ನಿಂತುಕೊಳ್ಳಬೇಕಾಗಿ ಬಂದುದು!!

**ಕುಂಭೋ :** ಅಳಿಯಂದಿರು ಶೌರ್ಯದಲ್ಲೇ ಅಲ್ಲ ಮಾತಿನಲ್ಲೂ ಗಟ್ಟಿಗರೇ!

**ರಾಣಿ** : ಪ್ರಭು ಎಲ್ಲವನ್ನೂ ನೀವೇ ನಿರ್ಧರಿಸಿಬಿಟ್ಟರೆ ಹೇಗೆ! ಜಯವರ್ಮರಿಗೆ ಅವರ ತಂದೆಗೆ ಏನೆಂದು ಹೇಳುತ್ತೀರಿ? ಸುದರ್ಶನಾ ನಮ್ಮ ವಿಚಾರವಾಗಿ ಏನು ಆಲೋಚಿಸಬಹುದು?

**ಸುದರ್ಶನಾ:** (ಸಮಾಧಾನದಿಂದಲೇ) ಅತ್ತಿಗೆ ನೀವೇಕೆ ಬೇಸರ ಪಡುತ್ತೀರಿ. ಈಗ ತಾನೇ ನೋಡಿದಿರಲ್ಲ. ಬ್ರಹ್ಮ ರಹಸ್ಯಗಳೂ ಬಯಲಾದಂತೆ ನಿಮ್ಮ ಮಗ ನಮ್ಮ ಮಗನೂ ಹೌದೆಂಬುದು ತಿಳಿಯಿತಲ್ಲ. ಜಯವರ್ಮನಿಗೆ ನಾನು ಸಮಾಧಾನ ಹೇಳುತ್ತೇನೆ. ತನಗೊಬ್ಬ ಸೋದರನು ಇದ್ದಾನೆಂಬ ಸುದ್ದಿಯೇ ಸಾಕು. ಸಂತೋಷದಿಂದ ಹುಚ್ಚನನ್ನಾಗಿಸುತ್ತದೆ.

**ಕುಂ.ಭೋ :** ನೀವು ಯಾರೂ ಏನೂ ಗಾಭರಿ, ಚಿಂತೆಪಡಬೇಕಾಗಿಲ್ಲ. ನಮ್ಮ ಕುರಂಗಿಗಿಂತ ನಮಗೆ ಯಾವ ರೀತಿಯಿಂದಲೂ ಕಡಿಮೆಯಿಲ್ಲದ ನನ್ನ ಕಿರಿಯ ಮಗಳು ಸುಮಿತ್ರೆ ಇದ್ದಾಳಲ್ಲ.

**ಸೌವೀರದರಸ:** ಗೆಳೆಯಾ ನಿನ್ನ ಕಿರಿಯ ಮಗಳು!! ಇದು ಯಾವಾಗ? ಗುಟ್ಟುಗಳ ಸರಮಾಲೆ ಮುಗಿಯುವಂತೆಯೇ ಕಾಣುತ್ತಿಲ್ಲವಲ್ಲ.

**ಕುಂ.ಭೋಜ :** ಗೆಳೆಯಾ ಸುಮಿತ್ರ ನಮ್ಮ ತಮ್ಮನ ಮಗಳು. ಎಳೆಯ ಪ್ರಾಯದಲ್ಲೇ ತಾಯಿಯನ್ನು ಕಳೆದುಕೊಂಡು ಮಹಾರಾಣಿಯ ಮಡಿಲಲ್ಲಿ ಬೆಳೆದವಳು. ನನಗೆ ಕುರಂಗಿ ಬೇರೆಯಲ್ಲ; ಸುಮಿತ್ರೆ ಬೇರೆಯಲ್ಲ. ಜಯವರ್ಮರಿಗೆ ತೀರಾ ಅನುರೂಪವಾದ ಜೋಡಿ. ಇಬ್ಬರು ಮಕ್ಕಳು ಮದುವೆಯನ್ನೂ ಒಟ್ಟಿಗೆ ಮಾಡುವ.

**ಕೌಂಡಿನ್ಯ :** ಪ್ರಭು ಹಾಗಾದರೆ ಎಲ್ಲ ಸಮಸ್ಯೆಗಳಿಗೂ ಪರಿಹಾರ ದೊರೆತಂತೆ ಆಯಿತಲ್ಲ!! ಇನ್ನು ಆದಷ್ಟು ಬೇಗ ಮದುವೆಯ ಸಿದ್ಧತೆಗಳಿಗೆ ಅಣಿಯಾಗಬೇಕು. ಈ ಸಂತಸದ ಸುದ್ದಿಯನ್ನು ಪ್ರಜೆಗಳಿಗೆ ತಿಳಿಸಬೇಕು.

**ಸುಚೇತನಾ, ಸುದರ್ಶನಾ :** (ಮಹಾರಾಣಿಗೆ) ಅತ್ತಿಗೆ ನಮ್ಮನ್ನು ಈ ಕುಟುಂಬದೊಂದಿಗೆ ಬೆಸೆದುಕೊಂಡಿದ್ದಕ್ಕೆ ನಮ್ಮ ಕೃತಜ್ಞತೆಗಳು.

**ರಾಣಿ:** ಇದರಲ್ಲಿ 'ಕೃತಜ್ಞತೆ' ಎಂಬ ಪದಕ್ಕೆ ಅವಕಾಶವೇ ಇಲ್ಲ. ನಿಮ್ಮ ಮಕ್ಕಳು ನಮಗೆ ಅಳಿಯಂದಿರಾಗಿ ಬರುತ್ತಿರುವುದು ವಾಸ್ತವವಾಗಿ ನಮ್ಮ ಅದೃಷ್ಟ! ನಾವೇ ನಿಮಗೆ ಕೃತಜ್ಞತೆ ಹೇಳಬೇಕು.

**ಕೌಂಡಿನ್ಯ :** ಇದರಲ್ಲಿ ಒಟ್ಟಾರೆಯಾಗಿ ಎಲ್ಲರ ಅದೃಷ್ಟವೂ ಸೇರಿದೆ. ಆದಷ್ಟು ಬೇಗ ಈ ಮಂಗಳ ಕಾರ್ಯ ಮುಗಿಯಲಿ.... (ಅವಿಮಾರಕನ ಕಡೆ ತಿರುಗಿ) ತಾವೇನನ್ನುತ್ತೀರಿ ಯುವರಾಜರೇ?

**ಅವಿಮಾರಕ :** (ನಗುತ್ತಾ) ನಾನು ಹೇಳುವುದೇನಿದೆ? ಇನ್ನು ಹಿರಿಯರಾದ ನಿಮ್ಮ ಆದೇಶವನ್ನು ಶಿರಸಾವಹಿಸುವುದಷ್ಟೇ ನಮ್ಮ ಪಾಲಿನ ಕರ್ತವ್ಯ.

**ಕಂಚುಕಿ :** (ಪ್ರವೇಶ) ಪ್ರಭುಗಳು ಕ್ಷಮಿಸಬೇಕು.... ತೇಜಸ್ವಿಯಾದ ಮುನಿಗಳಿಬ್ಬರು ತಮ್ಮನ್ನು ಕಾಣಲು (ಅಪ್ಪಣೆ ಬೇಡಿದ್ದಾರೆ) ಬಯಸುತ್ತಾರೆ.

**ಸೌವೀರದರಸ:** (ಬೆಚ್ಚಿ) ಗೆಳೆಯಾ ಇದೇನಿದು? ಮಂಗಳದ ಮುಹೂರ್ತಗಳಲ್ಲಿ ಮುನಿಗಳ ಪ್ರವೇಶ!!.....ಮುನಿಗಳೆಂದರೆ ಏಕೋ ಏನೋ ನನ್ನೆದೆ ತಲ್ಲಣಿಸುತ್ತದೆ.

**ಕುಂ.ಭೋ :** ಭಯಕ್ಕೆ ಕಾರಣವಿಲ್ಲ ಮಿತ್ರ, ಅವರನ್ನು ಇಲ್ಲಿಗೆ ಬರಮಾಡಿಕೊಳ್ಳುವುದು ಉಚಿತವಲ್ಲ. ನಾವೆಲ್ಲರೂ ಹೋಗಿ ಅವರನ್ನು ಭಕ್ತಿ ಗೌರವಗಳಿಂದ ಎದುರುಗೊಂಡು ಅವರನ್ನು ಪೂಜಿಸಿ, ಸತ್ಕರಿಸಿ ಅವರ ಆಶೀರ್ವಾದ ಪಡೆಯುವುದೇ ಧರ್ಮ...... ಬನ್ನಿ ನಾವೆಲ್ಲರೂ ಅಲ್ಲಿಗೆ ಹೋಗೋಣ. ನನಗೇನೂ ಅವರ ಆಗಮನ ಶುಭ ಸೂಚನೆಯೆಂದೇ ಭಾಸವಾಗುತ್ತಿದೆ.

**ಸೌವೀರದರಸ :** ಸದ್ಯ ನಿನ್ನ ಆಲೋಚನೆಯೇ ನಿಜವಾಗಲಿ.... (ಎಲ್ಲರ ಕಡೆ ತಿರುಗಿ) ಬನ್ನಿ ಕೂಡಲೇ ಹೊರಡೋಣ. ತಡವಾಡಿ, ಅನುಗ್ರಹಕ್ಕೆ ಬದಲಾಗಿ ಆಗ್ರಹವನ್ನು ಗಳಿಸುವುದು ಬೇಡ. (ಅವಿಮಾರಕನಿಗೆ) ಕುಮಾರ ಮೊದಲು ನೀನು ಅವರನ್ನು ಸಂಪ್ರೀತಗೊಳಿಸಿ ಅವರ ಹರಕೆಯನ್ನು ಸಂಪಾದಿಸು.

(ಎಲ್ಲರೂ ಹೊರಡುವರು)

(ಪರದೆ ಬೀಳುವುದು)

೦೦

# ಪಾಂಚಾಲಿ, ಪಾದ್ರಿಯೊಬ್ಬನ ಕತೆ, ನಗರವಧು ಸಾಲವತಿ

## ಪ್ರಕಾಶಕರ ನುಡಿ

ಮಹಿಳಾ ಸಾಹಿತ್ಯದ ಅಧ್ಯಯನ ಪ್ರಕಾಶನಗಳಿಗೆ ಮೀಸಲಾದ ಸಂಸ್ಥೆಯಾಗಿ ಮೊದಲ ಹೆಜ್ಜೆಗಳನ್ನಿಡುತ್ತಲಿದೆ. "ಮಹಿಳಾ ಸಾಹಿತ್ಯಿಕಾ". ಕನ್ನಡದ ಎಲ್ಲ ಲೇಖಕಿಯರ ಎಲ್ಲ ಸಾಹಿತ್ಯ ಪ್ರಕಾರಗಳಿಗೆ ಧ್ವನಿಯಾಗುವ ಮಹದಾಕಾಂಕ್ಷೆಯನ್ನು ಹೊಂದಿದ ಈ ಸಂಸ್ಥೆ, ಲೇಖಕಿಯರ ಸಾಹಿತ್ಯವನ್ನು ಪ್ರಕಾಶಕಿಯರೇ ಪ್ರಕಟಿಸುವ ವಿನೂತನ ಯೋಜನೆಯನ್ನು ಹೊಂದಿದೆ. ಸ್ತ್ರೀವಾದಿ ಚಿಂತನೆ ಕ್ರಿಯಾರೂಪ ಸಾಧಿಸಲು ಇದು ಪ್ರಬಲಶಕ್ತಿಯಾಗಿ ಬೆಳೆಯುವ ಸಂಕಲ್ಪವನ್ನು ಹೊಂದಿದೆ.

"ಮಹಿಳಾ ಸಾಹಿತ್ಯಿಕಾ" ಮುಂಬರುವ ವರ್ಷಗಳಲ್ಲಿ ಮಹಿಳೆಯರಿಂದ ರಚಿತಗೊಂಡ ಸೃಜನ–ವಿಮರ್ಶನ–ಸಂಶೋಧನ–ಅನುವಾದ–ಪ್ರವಾಸ–ಆಕರ ಇತ್ಯಾದಿ ಎಲ್ಲಂದದ ಮೌಲಿಕ ಸಾಹಿತ್ಯವನ್ನು ಪ್ರಕಟಿಸುತ್ತದೆ. ಪ್ರಾರಂಭದಲ್ಲಿ ವರ್ಷಕ್ಕೆ ಸಾವಿರ ಪುಟಗಳಷ್ಟು ಸಾಹಿತ್ಯವನ್ನು ಪ್ರಕಟಿಸುವ, ನಂತರದ ಅವಧಿಯಲ್ಲಿ ಪುಟಸಂಖ್ಯೆಯನ್ನು, ಪುಸ್ತಕ ಸಂಖ್ಯೆಯನ್ನು ಹೆಚ್ಚಿಸುತ್ತ ಹೋಗುವ ಇಚ್ಛೆ ಸಂಸ್ಥೆಗಿದೆ.

'ಕಾವ್ಯೇಷು ನಾಟಕಂ ರಮ್ಯಂ' ಎಂಬ ಮಾತಿದ್ದರೂ ಕನ್ನಡದಲ್ಲಿ ನಾಟಕಗಳು ರಚನೆಗೊಂಡದ್ದು ಅಪರೂಪ. ಮಹಿಳೆಯರು ನಾಟಕ ರಚಿಸಿದ್ದು ಇನ್ನೂ ಅಪರೂಪ. ಇದಕ್ಕೆ ಕಾರಣ ನಾಟಕ ಎನ್ನುವುದು ಸೃಜನಶೀಲ ನಾಟಕಕಾರ, ಅದನ್ನು ಸಮರ್ಥವಾಗಿ ಅಭಿನಯಿಸಿ ತೋರಿಸಬಲ್ಲ ರಂಗನಟ, ನಾಟಕವನ್ನು ನೋಡಿ ಆಸ್ವಾದಿಸಬಲ್ಲ ಪ್ರೇಕ್ಷಕ ಇವರ ತ್ರಿವೇಣಿ ಸಂಗಮ. ನಾಟಕ ಯಶಸ್ವಿಯಾಗಬೇಕಾದರೆ ರಂಗಸಜ್ಜಿಕೆ, ರಂಗಪರಿಕರಗಳೂ ಅವಶ್ಯ. ರಂಗನಟರಿಗೆ ಮಾತ್ರ ನಾಟಕ ರಚಿಸುವ ಕಲೆ ಕರಗತವಾಗುವಂಥದು. ಹೀಗಾಗಿ ಕನ್ನಡ ಮಹಿಳಾ ಸಾಹಿತ್ಯಕ್ಕೆ ಇಂಥದೊಂದು ಕೊರತೆ ಉಂಟಾಗಿದೆ. ಈ ಕೊರತೆಯನ್ನು ನೀಗಿಸುವಲ್ಲಿ ನಾಟಕಕಾರ್ತಿಯೂ ರಂಗನಟಿಯೂ ಆಗಿರುವ ಡಾ. ವಿಜಯಾ ಸುಬ್ಬರಾಜ್ ಯಶಸ್ವಿಯಾಗಿದ್ದಾರೆ.

ಮಹಾಭಾರತದ ಕಥೆ ಆಧಾರಿತ ನಾಟಕ ಪಾಂಚಾಲಿ, ಗ್ರೇಸಿಯಾದ ಲೆದ್ದಾನ 'ಮದರ್' ಕಾದಂಬರಿಯ ರೂಪಾಂತರ 'ಪಾದ್ರಿಯೊಬ್ಬನ ಕಥೆ' ಮತ್ತು ಜಯಶಂಕರ್ ಪ್ರಸಾದರ ಕಥೆಯನ್ನಾಧರಿಸಿದ ರೂಪಂತರ 'ನಗರವಧು ಸಾಲವತಿ' ನಾಟಕಗಳನ್ನು ಬರೆದು ಸಾದರ ಪಡಿಸಿದ್ದಾರೆ.

ಸೃಜನಶೀಲ ಲೇಖಕಿಯಾದ ವಿಜಯಾ ಕಾದಂಬರಿ, ಕಥಾಸಂಕಲನ, ಕವನಸಂಕಲನಗಳನ್ನು ಈಗಾಗಲೇ ಹೊರತಂದಿದ್ದಾರೆ. ಪಂಜಾಬಿ ಕವಿತೆ ಮತ್ತು ಕತೆಗಳನ್ನು ಅನುವಾದಿಸಿ ಕನ್ನಡ ಸಾಹಿತ್ಯವನ್ನು ಸಮೃದ್ಧಗೊಳಿಸಿದ್ದಾರೆ. ಅವರಿಂದ ಇನ್ನೂ ಉತ್ತಮ ನಾಟಕಗಳು ಪ್ರಕಟಗೊಳ್ಳಲಿ ಎಂದು ಹಾರೈಸುತ್ತ, 'ಮಹಿಳಾ ಸಾಹಿತ್ಯಿಕಾ'ಕ್ಕೆ ತಮ್ಮ ನಾಟಕಗಳನ್ನು ಪ್ರಕಟಿಸಲು ಅನುಮತಿ ಇತ್ತುದಕ್ಕಾಗಿ ಅವರಿಗೆ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ.

'ಮಹಿಳಾ ಸಾಹಿತ್ಯಿಕಾ'ದ ಸಂಪೂರ್ಣ ರೂಪರೇಷೆಗಳನ್ನು ಹಾಕಿಕೊಟ್ಟು ಬೆನ್ನ ಹಿಂದೆ ಬೆಳಕಾಗಿ ನಿಂತವರು, ಸ್ಫೂರ್ತಿಯ ನೆಲೆಯಾದವರು ವಿದ್ಯಾ ಗುರುಗಳಾದ ಡಾ॥ ಎಂ.ಎಂ.ಕಲಬುರ್ಗಿಯವರು. ಅವರ ನಿರಂತರ ಪ್ರೇರಣೆ-ಚಾಲನೆಗಳೇ ನಮ್ಮನ್ನು ಮುನ್ನಡೆಸುತ್ತಲಿದೆ. "ಮಹಿಳಾ ಸಾಹಿತ್ಯಿಕಾ" ಪ್ರಕಾಶನ ಸಂಸ್ಥೆಗೆ ಸಾಹಿತ್ಯಿಕ ಸಲಹೆಗಾರರಾಗಿ ಸಹಕರಿಸಿದವರು ಡಾ. ವಿಜಯಾ ದಬ್ಬೆ, ಡಾ॥ ಮಧು ವೆಂಕಾರೆಡ್ಡಿ ಮತ್ತು ಡಾ॥ ವಿಜಯಶ್ರೀ ಸಬರದ ಅವರು. ಈ ಪ್ರಯತ್ನಕ್ಕೆ ಸದಾಕಾಲ ಬೆನ್ನುತಟ್ಟಿ ಪ್ರೋತ್ಸಾಹಿಸಿದವರು ಡಾ॥ ಚೆನ್ನಕ್ಕ ಎಲಿಗಾರ, ಡಾ॥ ಮಲ್ಲಿಕಾ ಘಂಟಿ, ಡಾ॥ ಹೇಮಾ ಪಟ್ಟಣಶೆಟ್ಟಿ ಹಾಗೂ ಕುಸುಮ ಕರಾಳೆ ಆದಿಯಾಗಿ ಸಮಾನ ಆಸಕ್ತಿಯ ಕನ್ನಡ ಲೇಖಕಿಯರು. ಇವರಿಗೆಲ್ಲ 'ಮಹಿಳಾ ಸಾಹಿತ್ಯಿಕಾ' ಕೃತಜ್ಞತೆಗಳನ್ನು ಅರ್ಪಿಸುತ್ತದೆ.

ಕೃತಿಯನ್ನು ಅಂದವಾಗಿ ಮುದ್ರಿಸಿದ 'ಸೋಮಗಿರಿ ಇಂಡಸ್ಟ್ರೀಜ್' ನ ಆಕಳವಾಡಿ ರವಿ-ಚಂದ್ರ ಸೋದರರನ್ನು, ಪ್ರಕಾಶನದ ಪ್ರಕಟನೆಗಳ ಮುಖ ಪುಟದ ಚೌಕಟ್ಟನ್ನು ಒದಗಿಸಿ, ಸಂಕೇತವನ್ನು ಚಿತ್ರಿಸಿದ ಕಲಾವಿದ ಗುರು ಅವರನ್ನು ಮಹಿಳಾ ಸಾಹಿತ್ಯಿಕಾ ಕೃತಜ್ಞತೆಯಿಂದ ಸ್ಮರಿಸುತ್ತದೆ.

ಕರ್ನಾಟಕದ ಹೆಮ್ಮೆಯ ಮಹಿಳಾ ಅಧ್ಯಯನ ಪ್ರಕಾಶನ ಸಂಸ್ಥೆಯಾಗಬೇಕೆಂದು ಬಯಸುವ 'ಮಹಿಳಾ ಸಾಹಿತ್ಯಿಕಾ' ನಾಡಿನ ಸಹೃದಯರೆಲ್ಲರ ಸಹಾಯ ಸಹಕಾರಗಳನ್ನು ಅಪೇಕ್ಷಿಸುತ್ತದೆ.

ಹುಬ್ಬಳ್ಳಿ **ಸಾಹಿತ್ಯಿಕ ನಿರ್ದೇಶಕಿ**

೨೯-೩-೧೯೯೮

# ನನ್ನ ನುಡಿ

ನಾಟಕ ನನ್ನ ಎಳೆತನದಿಂದಲೂ ನನಗೆ ಅಂಟಿಕೊಂಡ ಹುಚ್ಚು. ೨೦ ರ ದಶಕದಲ್ಲೇ ಗುಬ್ಬಿ ಕಂಪನಿಗೆ ಬಾಲ ಕಲಾವಿದನಾಗಿ ಸೇರಿದ ನನ್ನ ಚಿಕ್ಕಪ್ಪ ದಿ॥ ಸಿ.ಟಿ. ಶೇಷಾಚಲಂ ಅವರನ್ನು ಕುತೂಹಲದ ಮತ್ತು ಅಚ್ಚರಿಯ ಕಣ್ಣುಗಳಿಂದ ಗಮನಿಸುತ್ತ ಬಂದವಳು. ರಂಗದ ಮೇಲೆ ಅವರಂತೆಯೇ ಮುಖಕ್ಕೆ ಬಣ್ಣ ಬಳಿದುಕೊಂಡು ಅಭಿನಯಿಸಿ ಅವರನ್ನು ಮೀರಿಸಿದ ರೀತಿಯಲ್ಲಿ ಶಹಬಾಸ್‌ಗಿರಿಯನ್ನು ಪಡೆಯಬೇಕೆಂದು ಕನಸು ಕಟ್ಟಿಕೊಂಡವಳು. ತಂದೆ, ಚಿಕ್ಕಪ್ಪ ಸಿನಿಮಾ ನಾಟಕ ಕ್ಷೇತ್ರದೊಂದಿಗೆ ಬೆಸೆದುಕೊಂಡಿದ್ದರೂ ಸಂಪ್ರದಾಯಸ್ಥ ಕುಟುಂಬದಲ್ಲಿ ಹುಟ್ಟಿದ ನನಗೆ ರಂಗದ ಮೇಲೆ ಬರಲು ಮುಕ್ತವಾದ ಒಪ್ಪಿಗೆ ದೊರೆಯಲಿಲ್ಲ. ಆದರೆ ಶ್ರೀಮಂತ ಕಂಠಶ್ರೀ ಹೊಂದಿದ ಚಿಕ್ಕಪ್ಪ ನಾಟಕದಲ್ಲಿನ ಸಂಭಾಷಣೆಗಳನ್ನೂ, ರಂಗಗೀತೆಗಳನ್ನೂ ಸಾಕಷ್ಟು ಅಭ್ಯಾಸ ಮಾಡಿಸಿದ್ದರು. ಅಷ್ಟೇ ಸಾಕೆನಿಸಿ, ನಾವು ಮಕ್ಕಳು ಮನೆಯನ್ನೆ ರಂಗಭೂಮಿಯನ್ನಾಗಿ ಮಾಡಿಕೊಂಡು, ಸೀರೆಗಳನ್ನೇ ಪರದೆಗಳಾಗಿಸಿ, ಪೌಡರಿಗೆ ನೀರು ಹಾಕಿ ಅದನ್ನೇ ಮುಖಕ್ಕೆ ಬೇಸ್ ಮಾಡಿಕೊಂಡು ಕಾಗೆ ಬಂಗಾರದ ಪುಡಿಯನ್ನು ಮುಖಕ್ಕೆ ಹಚ್ಚಿಕೊಂಡು ಥಳ ಥಳ ಹೊಳೆಯುವಂತೆ ಕಾಣಿಸಿಕೊಂಡು. ನನಗೆ ಉರು ಹಚ್ಚಿಸಿದ್ದ ಸಂಭಾಷಣೆಗಳನ್ನೂ ಗೆಳೆಯ ಗೆಳತಿಯರಿಗೆ ಕಲಿಸಿ ನಾಟಕಗಳನ್ನು ಪ್ರದರ್ಶಿಸುವ ಚಟ ನನಗೆ ಹುಚ್ಚು ಹಿಡಿಸುವಷ್ಟರ ಮಟ್ಟಿಗೆ ಹತ್ತಿತ್ತು. ಅಂದಿನಿಂದ ಇಂದಿನವರೆಗೆ ನಾಟಕದಲ್ಲಿನ ನನ್ನ ಉತ್ಸಾಹ, ಆಸಕ್ತಿಗಳನ್ನು ಜೀವಂತವಾಗಿ ಇರಿಸಿಕೊಂಡು ಬಂದಿದ್ದೇನೆ. ಶಾಲಾ, ಕಾಲೇಜುಗಳಲ್ಲಿ ನಾಟಕಗಳಲ್ಲಿ ಭಾಗವಹಿಸುತ್ತ, ನಾಟಕಗಳನ್ನೂ ನನ್ನದೇ ಆದ ಲೆವಲ್‌ಗೆ ಬರೆಯುತ್ತ ನಿರ್ದೇಶಿಸುತ್ತ ಬಂದಿದ್ದೇನೆ. ಮನೆಯಲ್ಲಿನ ವಿರೋಧವನ್ನು ಮೆಟ್ಟಿ ಅಂತರ ಕಾಲೇಜು ನಾಟಕಗಳಲ್ಲಿ ಭಾಗವಹಿಸಿದ್ದೇನೆ. ಕೆಲವನ್ನು ನಿರ್ದೇಶಿಸಿದ್ದೇನೆ. ಕೆಲವು ನಾಟಕಗಳನ್ನು ಬೇರೆ ತಂಡಗಳಿಗೆ, ಬೇರೆ ಭಾಷೆಗಳಿಂದ ಭಾಷಾಂತರಿಸಿ ನೀಡಿದ್ದೇನೆ. ೭೦ ರ ದಶಕದಲ್ಲಿ ನನ್ನ ಅದೃಷ್ಟವೆಂಬಂತೆ ಅಂತರರಾಷ್ಟ್ರೀಯ ಖ್ಯಾತಿಯ ಮತ್ತು ರಂಗಭೂಮಿಯ ದೈತ್ಯಪ್ರತಿಭೆಯ ಶ್ರೀ ಬಿ.ವಿ.ಕಾರಂತರು, ಶ್ರೀ ಎಂ.ವಿ.ಕೃಷ್ಣಸ್ವಾಮಿ, ಪ್ರೊ. ಬಿ.ಸಿ.ಅವರ ನಿರ್ದೇಶನದಲ್ಲಿ ಗಿರೀಶ ಕಾರ್ನಾಡ, ಪಿ.ಲಂಕೇಶ್, ಶ್ರೀರಂಗರ ನಾಟಕಗಳಲ್ಲಿ ಅಭಿನಯಿಸುವ ಅವಕಾಶ ನನ್ನ ಪಾಲಿಗೆ ಬಂದು ನಾಟಕಗಳಲ್ಲಿನ ನನ್ನ ಆಸಕ್ತಿಗೆ ರೆಕ್ಕೆ ಮೂಡಿತು.

ಕಾವ್ಯ, ಕತೆ, ಕಾದಂಬರಿ ನನ್ನ ಅಭಿವ್ಯಕ್ತಿ ಮಾಧ್ಯಮವಾಗುವುದರ ಜೊತೆಗೆ ನಾಟಕಗಳ ರಚನೆಯೂ ನನ್ನ ಮೆಚ್ಚಿನ ಹವ್ಯಾಸವಾದರೂ. ನಾಟಕಗಳನ್ನು, ನಾಟಕ

ರೂಪಾಂತರ, ಭಾಷಾಂತರಗಳನ್ನು ಮಾಡಿದೆನಾದರೂ ಅವುಗಳನ್ನು ಪ್ರಕಟಿಸುವ ಅವಕಾಶ ನನಗೆ ದೊರೆಯಲಿಲ್ಲ. ಅವಕಾಶದ ನಿರೀಕ್ಷೆಯಲ್ಲಿದ್ದ ನನಗೆ ಶ್ರೀಮತಿ ಹನುಮಾಕ್ಷಿ ಗೋಗಿ ಅವರು ನನ್ನ ನಾಟಕಗಳನ್ನು ಪ್ರಕಟಿಸಲು ಮುಂದೆ ಬಂದಿರುವುದು ನಿಜವಾಗಿಯೂ ಸಂತೋಷವನ್ನು ತಂದಿದೆ.

ಕತೆ, ಕಾದಂಬರಿ, ಕಾವ್ಯ ಬರೆಯುವ ಮಹಿಳೆಯರು ಸಾಕಷ್ಟು ಸಂಖ್ಯೆಯಲ್ಲಿದ್ದಾರೆ. ಲೇಖಕಿಯರಿಂದ ಈ ಕ್ಷೇತ್ರಗಳು ಸಂಪನ್ನವಾಗಿವೆ. ಆದರೆ ನಾಟಕ, ಪ್ರಬಂಧ, ವಿಚಾರ ಸಾಹಿತ್ಯದ ದಿಕ್ಕಿನಲ್ಲಿ ಅವರ ಕೊಡುಗೆ ಅತಿವಿರಳ ಎಂಬ ಕಾರಣಕ್ಕಾಗಿ ನಾಟಕಗಳನ್ನೂ ಪ್ರೋತ್ಸಾಹಿಸುವ ದೃಷ್ಟಿಯಿಂದ ನನ್ನ ಮೂರು ನಾಟಕಗಳನ್ನು ಪ್ರಕಟಿಸಿ ಹೊರತರುತ್ತಿರುವುದು ಪ್ರಶಂಸಾರ್ಹವಾದ ಕೆಲಸವಾಗಿದೆ.

ಪ್ರಸ್ತುತ 'ಪಾಂಚಾಲಿ ಮತ್ತು ಇತರ ನಾಟಕಗಳು' ಸಂಕಲನದಲ್ಲಿ 'ಪಾಂಚಾಲಿ, ಪಾದ್ರಿಯೊಬ್ಬನ ಕತೆ, ನಗರವಧು ಸಾಲವತಿ' ಎಂಬ ಮೂರು ನಾಟಕಗಳಿವೆ.

ಮೊದಲನೆಯದಾದ 'ಪಾಂಚಾಲಿ' ನಾಟಕವನ್ನು ಗ್ರೀಕ್‌ನಾಟಕದ ಮಾದರಿಯ ಮೇಲೆ ರಚಿಸಲು ಪ್ರಯತ್ನಿಸಿದ್ದೇನೆ. ಮಹಾಭಾರತದಲ್ಲಿ ನಡೆದ ಸಂಗತಿಗಳಿಗೆ, ಸನ್ನಿವೇಶಗಳಿಗೆ ಪ್ರಮುಖ ಸ್ತ್ರೀ ಪಾತ್ರಗಳಾದ ಪಾಂಚಾಲಿ, ಗಾಂಧಾರಿ, ಕುಂತಿಯರು ಹೇಗೆ ಪ್ರತಿಕ್ರಿಯಿಸಿರಬಹುದು ಎಂಬುದನ್ನು ಕಾಣಿಸಿರುವುದರ ಜೊತೆಗೆ ಅವರ ಅಸಹಾಯಕತೆಗೆ ಅವರೇ ಸ್ಪಂದಿಸಿರಬಹುದಾದ ರೀತಿಯನ್ನೂ, ಪಾಂಚಾಲಿ ಕೀಚಕನ ದೌರ್ಜನ್ಯ, ದುರಾಕ್ರಮಣಗಳನ್ನು ಹೇಗೆ ತಾನೇ ಸ್ವತಃ ಎದುರಿಸಬಹುದೆಂಬುದನ್ನು ಕಾಣಿಸುವುದೇ ಈ ನಾಟಕದ ಪ್ರಮುಖ ಆಶಯವಾಗಿದೆ. ಸಂಕ್ಷಿಪ್ತವಾಗಿ ಹೇಳುವುದಾದರೆ ಮಹಾಭಾರತದ ಈ ಪ್ರಮುಖ ಸ್ತ್ರೀ ಪಾತ್ರಗಳ ಅಂತಸ್ಥ ಭಾವ ತುಮುಲಗಳನ್ನೂ ಅವರ ಎದೆಯಾಳದ ನಿಗೂಢ ನೋವು ನಲಿವುಗಳನ್ನೂ ಹೆಕ್ಕಿ ಹೊರಹೊಮ್ಮಿಸುವ ಪ್ರಯತ್ನವೇ ಈ ನಾಟಕವಾಗಿದೆ.

ಎರಡನೆಯ ನಾಟಕವಾದ 'ಪಾದ್ರಿಯೊಬ್ಬನ ಕತೆ' ನಾಟಕವನ್ನು ನೊಬೆಲ್ ಪ್ರಶಸ್ತಿ ಪಡೆದ ಇಟಾಲಿಯನ್ ಕಾದಂಬರಿಗಾರ್ತಿ ಗ್ರೇಸಿಯಾ ದ ಲೆದ್ದಾ ಅವರ ಮದರ್ ಕಾದಂಬರಿಯ ಕಥಾವಸ್ತುವನ್ನು ಆಧರಿಸಿ ರಚಿಸಿದ್ದೇನೆ. 'ಧರ್ಮ ಮತ್ತು ಕಾಮದ' ನಡುವಿನ ಸಂಘರ್ಷದ ರೀತಿ ನನ್ನನ್ನು ಬಹಳವಾಗಿ ತೂಗಿಸಿತು, ಕಲಸಿತು, ಮೆಚ್ಚಿಸಿತು. ಅದರ ನಾಟ್ಯೀಕರಣ ಅಥವಾ ನಾಟಕ ರೂಪಾಂತರ ಇನ್ನಷ್ಟು ಅದ್ಭುತವಾಗಿ ಕಾಣಬಹುದೆಂಬ ಲೆಕ್ಕಾಚಾರ, ಊಹೆ. ಚಿಂತನೆ ನನ್ನನ್ನು ಈ ಸಾಹಸಕ್ಕೆ ಪ್ರಚೋದಿಸಿತು. ಇದು ಮೂರು ನಾಲ್ಕು ಪ್ರಯೋಗಗಳನ್ನೂ ಕಂಡಿತು. ಅಂತರ ಕಾಲೇಜು ನಾಟಕ ಸ್ಪರ್ಧೆಯಲ್ಲಿ ಈ ನಾಟಕಕ್ಕೆ ಅತ್ಯುತ್ತಮ ನಾಟಕವೆಂದು ಕಂದಗಲ್ ಹನುಮಂತರಾವ್ ಪ್ರಶಸ್ತಿಯೂ ದೊರೆಯಿತು. ಇದು ನನಗೆ ಈ ನಾಟಕವನ್ನು ಪ್ರಕಟಿಸಲು ಹುರಿದುಂಬಿಸಿತು.

ಮೂರನೆಯದಾದ 'ನಗರವಧು ಸಾಲವತಿ' ಹಿಂದಿ ಸಾಹಿತ್ಯ ಕ್ಷೇತ್ರದ ಮಹಾನ್ ಲೇಖಕರಾದ ಜಯಶಂಕರ್ ಪ್ರಸಾದ್ ಅವರ ಸಣ್ಣಕತೆ 'ಸಾಲವತಿ'ಯನ್ನು ಆಧರಿಸಿ ಬರೆದುದಾಗಿದೆ. ಸೌಂದರ್ಯ ಸ್ಪರ್ಧೆ, ಮಹಿಳಾವರ್ಷ ಇತ್ಯಾದಿ ಸಂದರ್ಭಗಳಿಗೆ ಪ್ರಸ್ತುತವೆನಿಸುವಂತೆ ಕಾಣಿಸಿದ ಈ ಕತೆಯನ್ನು ಪ್ರಜಾವಾಣಿಗಾಗಿ ವಿಸ್ತರಿಸಿ ರೂಪಾಂತರಿಸಿ ಕೊಟ್ಟೆ. ಅದಕ್ಕೆ ದೊರೆತ ಮೆಚ್ಚುಗೆ, ಪ್ರೋತ್ಸಾಹಗಳು, ಜೊತೆಗೆ ಆ ಕತೆಯಲ್ಲಿನ ಸಮಕಾಲೀನ ಅಂಶಗಳು ಇದನ್ನು ನಾಟಕರೂಪಕ್ಕೆ ತರಲು ನನಗೆ ಪ್ರೇರಣೆ ನೀಡಿದವು. 'ಸೌಂದರ್ಯ ಸ್ಪರ್ಧೆಯ' ಹೆಸರಿನಲ್ಲಿ ಆಯ್ಕೆಯಾಗುವ ಸುಂದರ ಸ್ತ್ರೀಯರು ವ್ಯಾಪಾರಿ ವಸ್ತುಗಳಾಗಿ ಮಾರಾಟವಾಗುವ ಅಪಾಯವನ್ನು ಮನಗಾಣದೆ ಮೋಹಿತರಾಗಿ ಔದ್ಯಮಿಕ ಜಗತ್ತು ಎಸೆಯುವ ವರ್ಣತಂತುಗಳ ಆಕರ್ಷಕ ಜಾಲದಲ್ಲಿ ಸಿಕ್ಕಿಬೀಳುವ ದುರಂತ ಇಂದಷ್ಟೇ ಅಲ್ಲದೆ ಹಿಂದೆಯೂ ಇದ್ದಿತೆಂಬುದಕ್ಕೆ ಸಾಲವತಿಯ ಜೀವಂತ ಸಂಗತಿಗಳೇ ಸಾಕ್ಷಿಯಾಗಿವೆ. ವಸಂತ ಪರ್ವದ ಸಂದರ್ಭದಲ್ಲಿ ಸೌಂದರ್ಯ ಸ್ಪರ್ಧೆ ನಡೆದು ಸೌಂದರ್ಯ ರಾಣಿಯೆಂದು ಆಯ್ಕೆಯಾಗುವ ಹೆಣ್ಣು 'ಕಾಮನ ಪೂಜೆ' ಯನ್ನು ಮಾಡುವ ಗೌರವಕ್ಕೆ ಪಾತ್ರಳಾಗುವ ಮತ್ತು ಕ್ರಮೇಣ ಅವಳಿಗೆ ಮುಕ್ತತೆಯನ್ನು, ವೈಯಕ್ತಿಕ ಸ್ವಾತಂತ್ರ್ಯವನ್ನು ನೀಡುತ್ತಲೇ ವೇಶ್ಯಾವೃತ್ತಿಗೆ ದೂಡುವ ದುರಂತವನ್ನೂ, ಇದರ ಹಿನ್ನೆಲೆಯಲ್ಲಿನ ರಾಷ್ಟ್ರದ ಆರ್ಥಿಕ ನೀತಿಯನ್ನೂ, ಸ್ವಾರ್ಥಿಗಳ ದುರುದ್ದೇಶಗಳನ್ನೂ ಈ ನಾಟಕದಲ್ಲಿ ತರುವುದಕ್ಕೆ ಪ್ರಯತ್ನಿಸಿತ್ತಿದ್ದೇನೆ. ಮುಗ್ಧ ಹೆಣ್ಣೊಬ್ಬಳು ವೇಶ್ಯಾ ವ್ಯವಸ್ಥೆಗೆ ಬಲಿಯಾಗಿ ಮಾನಸಿಕವಾಗಿ ನರಳುವುದನ್ನೂ ಇಲ್ಲಿ ದರ್ಶಿಸಿದ್ದೇನೆ.

ಈ ಮೂರು ನಾಟಕಗಳು ನನ್ನ ಇಂಗಿತಗಳನ್ನು ನನ್ನ ಆಶಯಗಳನ್ನು ವಿಚಾರಗಳನ್ನು ಬಿಂಬಿಸುವಲ್ಲಿ ಸಾರ್ಥಕವಾಗಿವೆ ಎಂಬ ನಂಬಿಕೆಯಿಂದ ಓದುಗರ ಮತ್ತು ಆಡುಗರ (ನಾಟಕ ಆಡುವವರು) ಮುಂದೆ ಇಡುತ್ತಿದ್ದೇನೆ. ಪ್ರೀತಿಯಿಂದ ಸ್ವೀಕರಿಸುತ್ತಾರೆಂಬ ಭರವಸೆ ನನಗಿದೆ.

ಪ್ರಕಾಶಕರ ಕೊರತೆ, ಲೇಖಕರ ಬಗ್ಗೆ ತಳೆಯುವ ತಿರಸ್ಕಾರ ಧೋರಣೆಯ ಪರಿಸರದಲ್ಲಿಯೂ ಹೃದಯವಂತಿಕೆಯಿಂದ ನನ್ನ ನಾಟಕಗಳನ್ನು ಓದಿ, ಮೆಚ್ಚಿ ಪ್ರಕಟಿಸಲು ಮುಂದೆ ಬಂದಿರುವ 'ಮಹಿಳಾ ಸಾಹಿತ್ಯಿಕಾ' ಪ್ರಕಾಶನದ ನಿರ್ದೇಶಕಿ ಶ್ರೀಮತಿ ಹನುಮಾಕ್ಷಿ ಗೋಗಿ ಅವರಿಗೆ ನನ್ನ ಹೃತ್ಪೂರ್ವಕ ಕೃತಜ್ಞತೆಗಳು. ಇದೇ ಬಗೆಯ ಪ್ರೋತ್ಸಾಹ ಇನ್ನೂ ಮುಂದೆಯೂ ಇರಲೆಂದು ಹಾರೈಸುತ್ತೇನೆ.

**ಡಾ.ವಿಜಯಾ ಸುಬ್ಬರಾಜ್**

ಕನ್ನಡ ವಿಭಾಗ, ಎಂ.ಇ.ಎಸ್.ಕಾಲೇಜು
ಮಲ್ಲೇಶ್ವರಂ, ೧೫ ನೇ ಕ್ರಾಸ್,
ಬೆಂಗಳೂರು–೩

# ಪ್ರೇಮ ಸಮಾಧಿ

## ಅರಿಕೆ

ದಿ॥ ಟಿ.ಎನ್.ಎಂ. ಅವರ ಸಾಹಿತ್ಯ ಕಣಜದಲ್ಲಿ ದೊರೆತ ಒಂದು ಅಮೂಲ್ಯ ಕತೆ ಇನೇಜ್ ಡಿ. ಕ್ಯಾಸ್ಟ್ರೋ ಅವರ "ರುದ್ರ ಸಮಾರಂಭ" ೧೯೫೦-೫೧ ರಲ್ಲಿ ಪ್ರಕಟವಾದ ಆ ಕಥಾಗುಚ್ಛದಲ್ಲಿ ಮೂರು ಕತೆಗಳು 'ಪ್ರೇಮ ಸಮಾಧಿ' ಎಂಬ ಶೀರ್ಷಿಕೆಯ ಕಿರುಹೊತ್ತಿಗೆಯ ಮೂಲಕ ನಮ್ಮ ಗ್ರಂಥಮಾಲೆಯಿಂದ ೧೯೯೪ ರಲ್ಲಿ ಪ್ರಕಟವಾದವು. ರುದ್ರ ರಮಣೀಯ ಇನೇಜ್‌ಳ ಕತೆಯನ್ನು ಆಧರಿಸಿ ಭಾರತೀಯ ಪರಿಸರಕ್ಕೆ ಒಗ್ಗುವಂತೆ ಉತ್ತಮ ವಿಮರ್ಶಕರೂ, ಶ್ರೇಷ್ಠ ನಾಟಕಕಾರರೂ, ಸಮರ್ಥ ಅಧ್ಯಾಪಕರೂ ಆದ ಡಾ.ವಿಜಯಾ ಸುಬ್ಬರಾಜ್ ಅವರು ರಂಗಾಭಿನಯಕ್ಕೆ ಯೋಗ್ಯವಾಗುವಂತೆ ನಾಟಕವನ್ನು ರಚಿಸಿ ತಮ್ಮ ಪ್ರತಿಭಾ ಕ್ಷಿತಿಜಕ್ಕೆ ಒಂದು ಗರಿಯನ್ನು ಮೂಡಿಸಿಕೊಂಡಿದ್ದಾರೆ. ಈ ಮೂಲಕ ಕನ್ನಡಿಗರಿಗೆ ಒಂದು ಅತ್ಯುತ್ತಮ ರುದ್ರ ನಾಟಕವನ್ನು ನೀಡಿದ್ದಾರೆ. ಅದಕ್ಕಾಗಿ ಅವರಿಗೆ ನಮ್ಮ ಗ್ರಂಥಮಾಲೆಯು ಕೃತಜ್ಞತೆಯನ್ನು ಅರ್ಪಿಸುತ್ತದೆ.

ಅತ್ಯಲ್ಪ ಕಾಲದಲ್ಲಿ ಈ ಗ್ರಂಥದ ಛಾಯಾಕ್ಷರ ಜೋಡಣೆ ಮಾಡಿದ ವರ್ಷಿಣಿ ಗ್ರಾಫಿಕ್ಸ್ ಅವರಿಗೂ, ಮುದ್ರಿಸಿದ ಸ್ನೇಹಾ ಪ್ರಿಂಟರ್ಸ್ ಅವರಿಗೂ, ವಿಶೇಷ ಉತ್ಸುಕತೆಯಿಂದ ಬೆಂಬಲ ಸೂಚಿಸಿದ ಮಿತ್ರರಾದ ಡಾ.ಎಸ್.ವಿದ್ಯಾಶಂಕರ ಅವರಿಗೂ ನನ್ನ ನೆನಕೆಗಳು ಸಲ್ಲುತ್ತವೆ.

–ಬಿ. ವೀರಭದ್ರಯ್ಯ

## ನನ್ನ ಮಾತು

ದಿ. ಟಿ.ಎನ್.ಮಹದೇವಯ್ಯ ಸರ್ವೋದಯ ಕಾಲದ ಬಹುಮುಖ ಪ್ರತಿಭೆಯ ಕವಿಗಳು. ಕಾವ್ಯ, ಕತೆ, ನಾಟಕ, ಪ್ರಬಂಧ–ಹೀಗೆ ಹಲವಾರು ಕ್ಷೇತ್ರಗಳಲ್ಲಿ ತಮ್ಮದೇ

ಒಂದು ವಿಶಿಷ್ಟ ಛಾಪನ್ನು ರೂಪಿಸಿ ಹೋಗಿದ್ದಾರೆ. ಒಂದೆರಡು ಸಂದರ್ಭಗಳಲ್ಲಿ ಅವರ ಕಾವ್ಯ ಮತ್ತು ನಾಟಕಗಳನ್ನು ಗಮನಿಸುವ ಅವಕಾಶ ಒದಗಿಬಂತು. ಅವರ ಬರವಣಿಗೆಯಲ್ಲಿನ ಕೆಲವಾರು ಅಂಶಗಳು ನನಗೆ ಮೆಚ್ಚಿಗೆಯಾದವು. ವಿಶೇಷವಾಗಿ ಅವರು ಬರೆದ ಮೂರು ದುರಂತ ಪ್ರಣಯ ಕಥೆಗಳ ಸಂಕಲನವಾದ 'ಪ್ರೇಮ-ಸಮಾಧಿ' ಎನ್ನುವ ಕೃತಿ. ಇದರಲ್ಲಿ ವಿಶ್ವದ ಬೇರೆ ಬೇರೆ ರಾಜ ವಂಶಗಳಲ್ಲಿನ ವ್ಯಕ್ತಿಗಳ ರಹಸ್ಯ ಪ್ರಣಯ ದುರಂತದಲ್ಲಿ ಕೊನೆಯಾದ ಮಾರ್ಮಿಕ ಚಿತ್ರಣವನ್ನು ಬಿಂಬಿಸಲಾಗಿದೆ. ವಿಶೇಷವಾಗಿ ಈ ಕೃತಿಯಲ್ಲಿನ ಮೊದಲ ಮತ್ತು ಶೀರ್ಷಿಕೆಯ ಕಥೆಯಾದ ಪ್ರೇಮ-ಸಮಾಧಿ ಓದಿ ಕಲ್ಪನೆಗೂ ಮೀರಿದ ಆ ಕಥಾನಕದಿಂದ ರೋಮಾಂಚನಗೊಂಡೆ. ಪೋರ್ಚುಗೀಸಿನ ಇನೇಜ್ ಪೆಡ್ರೋರ ಪ್ರಣಯ ಸಂಬಂಧಗಳು, ರಾಜವಂಶದ ಗೌರವಕ್ಕಾಗಿ ಇನೇಜ್ ಅನುಭವಿಸಿದ ನೋವು, ಅವಮಾನ, ಕಡೆಗೆ ಸಾವು ನನ್ನನ್ನು ತೂಗಿಸಿತು. ಇದನ್ನು ಭಾರತೀಯ ಪರಿಸರಕ್ಕೆ ಹೊಂದಿಸಿ ಕಾಲ್ಪನಿಕ ರಾಜವಂಶದ ಹಿನ್ನೆಲೆಯೊಂದನ್ನು ಸೃಷ್ಟಿಸಿಕೊಂಡು ನಾಟಕವನ್ನು ಬರೆದರೆ ಹೇಗಿರುತ್ತದೆಂದು ಊಹಿಸಿಕೊಂಡು ಪ್ರೊ. ವೀರಭದ್ರಯ್ಯನವರಿಗೆ ತಿಳಿಸಿದೆ. ಒಂದೆರಡು ವರ್ಷಗಳೇ ಕಳೆದವು. ಅದರ ಬಗ್ಗೆ ಮೌನ ತಳೆದಿದ್ದೆ. ಆದರೆ ವೀರಭದ್ರಯ್ಯನವರ ಪ್ರಚೋದನೆ ಪ್ರೋತ್ಸಾಹಗಳಿಂದ ಈ ನಾಟಕದ ರಚನೆಯ ಸಾಹಸಕ್ಕೆ ಕೈ ಹಾಕಿದೆ. ಹೇಗೋ ಸಾಗಿತು, ಈಗ ನಾಟಕ ಸಿದ್ಧವಾಗಿ ನಿಮ್ಮ ಮುಂದಿದೆ. ಕತೆಯ ಹಂದರನ್ನಷ್ಟೇ ತೆಗೆದುಕೊಂಡಿದ್ದೇನೆ. ಉಳಿದದ್ದು ಕಲ್ಪನೆಯ ಮೂಲಕ ಮೈ ಪಡೆದಿದೆ. ಇದನ್ನು ಓದಿಯೋ ಅಭಿನಯಿಸಿಯೋ ಇದರ ಯಶಸ್ಸನ್ನು, ಸಾರ್ಥಕತೆಯನ್ನು, ಅರ್ಥಪೂರ್ಣತೆಯನ್ನು ಪರೀಕ್ಷಿಸಿಕೊಳ್ಳಬೇಕಾಗಿದೆ. ಆ ಕೆಲಸವನ್ನು ಓದುಗರಿಗೆ ಆಡುಗರಿಗೆ ಬಿಡುತ್ತೇನೆ. ನಿರ್ಮಲ ಪ್ರೀತಿ ತ್ಯಾಗಗಳೇ ಇಲ್ಲಿ ಮುಖ್ಯವಸ್ತು. ಇದನ್ನು ನಿರ್ವಹಿಸುವಲ್ಲಿ ಎದುರಾಗುವ ಅಡ್ಡಿ ಆತಂಕಗಳು, ಕಡೆಗೆ ತೆರಬೇಕಾಗಿ ಬರುವ ಬೆಲೆಯ ಸ್ವರೂಪ ದರ್ಶನ ಮಾಡಿಸುವುದು ನನ್ನ ಉದ್ದೇಶ. ಪ್ರತಿಮೆ ಪ್ರತೀಕಗಳ ಬೆನ್ನ ಹಿಂದೆ ಬೀಳದೆ ಕಥೆಯ ಎಳೆಯನ್ನು ಸಂಭಾಷಣೆಗಳ ಮೂಲಕವೇ ಮುಂದುವರೆಸಿದ್ದೇನೆ.

ಪ್ರೊ.ಬಿ.ವೀರಭದ್ರಯ್ಯನವರು ದಿವಂಗತ ಟಿ.ಎನ್.ಮಹದೇವಯ್ಯನವರ ವಿಸ್ತೃತ ಮೌಲಿಕ ಸಾಹಿತ್ಯವನ್ನು ಸಾಹಿತ್ಯವಲಯಕ್ಕೆ ಪರಿಚಯಿಸುವ ಪ್ರಯತ್ನದಲ್ಲಿ ಈ ನಾಟಕವೂ ಪ್ರಕಟವಾಗಲಿ ಎಂಬ ನನ್ನ ಹಾರೈಕೆಗೆ ನೀರೆರೆದಿದ್ದಾರೆ. ಪ್ರೀತಿ, ಅಭಿಮಾನ, ಪ್ರೋತ್ಸಾಹಗಳಿಂದ ನಾಟಕ ಕೃತಿಯೊಂದರ ಹುಟ್ಟಿಗೆ ಕಾರಣರಾದ ಅವರಿಗೆ ನನ್ನ ಹೃತ್ಪೂರ್ವಕ ಕೃತಜ್ಞತೆಗಳು.

**-ಡಾ. ವಿಜಯಾ ಸುಬ್ಬರಾಜ್**

# ದಂಗೆ ಎದ್ದವಳು

## ಮುನ್ನುಡಿ

ಡಾ॥ ವಿಜಯಾ ಸುಬ್ಬರಾಜ್ ಅವರ ಈ ನಾಟಕ ಹದಿನಾಲ್ಕು ದೃಶ್ಯಗಳಲ್ಲಿ ಹರಡಿಕೊಂಡ ಕಥಾ ವಿನ್ಯಾಸವನ್ನು ಹೊಂದಿದೆ. ಒಂದು ಕಡೆ ವಿಕ್ರಮ ರಾಯನ ರಾಜ ಪರಿವಾರ; ಇನ್ನೊಂದು ಕಡೆ ಮಲ್ಲನ ಗೌಡನ ಪ್ರಜಾ ಪರಿವಾರ, ನಡುವಿನ ಕೊಂಡಿಯಾಗಿ ಗೌಡರ ಮಗಳು 'ಮಾದೇವಿ' ಅವಳೇ ಈ ನಾಟಕದ ಕ್ರಿಯಾ ಬಿಂದು. ಭಾಗವತ ಮೇಳ. ಪ್ರೇಕ್ಷಕರು, ಪ್ರಾರ್ಥನೆ......ಹೀಗೆ ಸಾಂಪ್ರದಾಯಿಕ ಎನ್ನಬಹುದಾದ ಚೌಕಟ್ಟಿನಲ್ಲಿಯೇ ನಾಟಕದ ಪ್ರಾರಂಭ. ಆಶಯ ಕೂಡಾ ನಮ್ಮ ಜಾನಪದ ಕತೆಗಳದೇ. ನಾಡಿಗೆ ವಿಪತ್ತು ಬಂದಾಗ 'ಬಲಿ' ಕೊಡುವುದು ಈ 'ಬಲಿ' ಕೂಡ ಆಸಕ್ತ ಶಕ್ತಿಗಳ ಕಾರಸ್ಥಾನದ ಫಲವೇ. 'ಬಲಿ' ಯಾದ ವ್ಯಕ್ತಿ ದೈವೀ ಪಟ್ಟಕ್ಕೆ ಏರುವುದು ಮಾಮೂಲಿ.

ಈ ನಾಟಕದ ವೈಶಿಷ್ಟ್ಯ ಇರುವುದು ಈ ಬಲಿದಾನದ ಪ್ರಕ್ರಿಯೆಯಲ್ಲಿ ವಿಜಯಾ ಅವರು ಮಾಡಿಕೊಂಡಿರುವ ಬದಲಾವಣೆಯಲ್ಲಿ. ಮಾದೇವಿ ಕೇವಲ ಹರಕೆಯ ಕುರಿಯಾಗದೆ ಎಚ್ಚೆತ್ತ ಮಹಿಳೆಯ ಧ್ವನಿಯಾಗುತ್ತಾಳೆ. ಶೋಷಕ ಸಮಾಜಕ್ಕೆ ನೇರವಾಗಿ ಸವಾಲು ಹಾಕುವ ಮೂಲಕ ದಂಗೆಯೇಳುತ್ತಾಳೆ. ಮೂಕ ಪ್ರಜೆಗಳಿಗೆ ಬಾಯಿ ಆಗುತ್ತಾಳೆ.

ಮಾದೇವಿಯ ಬಲಿದಾನದ ನಂತರದ ಮಾತಿದು: 'ತೊಂದ್ರೆ ಏನಾತು ತಮ್ಮ' ಕತ್ತಿ ಎತ್ತಿ ಹೊಡೆದದ್ದೇ ಮಾದೇವಿ ಮಾಯವಾದಳಂತೆ. ರಕ್ತ ಮಾತ್ರ ಬುಗ್ಗೆಯಂತೆ ಚಿಲ್ ಅಂತ ಚಿಮ್ಮಿ ಆಕಾಶವೆಲ್ಲ ಕೆಂಪಾಯ್ತಂತೆ! ಕೆಂಪು ಆಕಾಶದಿಂದ ದೊಡ್ಡ ಸಿಡಿಲೊಂದು ರಾಜ ಪರಿವಾರದ ಮೇಲೆ ಬಿದ್ದು ರಾಜ. ರಾಣಿ, ಮಂತ್ರಿ, ಪುರೋಹಿತರ ಹೆಣಗಳು ಬಿದ್ದವಂತೆ! ಭಯಾನಕವಾದ ದೃಶ್ಯ! ಹೋಮಕುಂಡದ ಬೆಂಕಿಗೆ ಮೇಲಿಂದ ಕೆಂಪು ಮಳೆ ಸುರಿಯಿತಂತೆ!

ಮಾದೇವಿ ಪ್ರಕೃತಿಯೇ ಆಗಿ ಮನುಷ್ಯ ನಿರ್ಮಿತ ಶೋಷಕ ವ್ಯವಸ್ಥೆಯನ್ನು ನಾಶ ಮಾಡುವುದು, ಅವಳು ದೇವಿಯಾಗಿ ಮಾರ್ಪಡುವುದು– ಇವೆಲ್ಲ

ನಾಟಕಕಾರ್ತಿಯ ಕ್ರಾಂತಿಕಾರಿ ಆಶಯಗಳೇ. ಆದರೆ ನಿಜವಾದ ಮಹಿಳಾ ಚಳುವಳಿ ಈ ರೀತಿ ನಡೆಯಬೇಕೇ ಎಂಬುದು ಚರ್ಚಾಸ್ಪದ ವಿಷಯ.

ನಾಟಕದಲ್ಲಿ 'ಕ್ರಿಯೆ' ಎಂಬುದು ಬಹಳ ಮಟ್ಟಿಗೆ ನೇಪಥ್ಯದಲ್ಲಿಯೇ ನಡೆಯುತ್ತದೆ. ರಂಗದ ಮೇಲೆ ನಮಗೆ ಸಿಗುವುದು ಆ ಘಟನೆಗಳ ವರದಿ ಮತ್ತು ಪಾತ್ರಗಳ ಸಂಭಾಷಣೆಗಳು. ಈ ನಿಟ್ಟಿನಲ್ಲಿ ವಿಜಯಾ ಅವರು ನಾಟಕದ ಸಮಗ್ರ ಬಂಧದ ಬಗ್ಗೆ ಹೆಚ್ಚಿನ ನಿಗಾ ವಹಿಸುವುದು ಉಚಿತ. ಆದರೆ ಸಮರ್ಥ ನಿರ್ದೇಶಕರು ರಂಗ ಪ್ರಯೋಗಕ್ಕಾಗಿ ಸರಿಯಾಗಿ ಬಳಸಿಕೊಳ್ಳುವ ಅನೇಕ ಅವಕಾಶಗಳು ಈ ಪಠ್ಯದಲ್ಲಿವೆ.

ಬೆಂಗಳೂರು **–ಚಂದ್ರಶೇಖರ ಪಾಟೀಲ**

## ನಾನೇಕೆ ಬರೆದೆ

ನಾಟಕ, ಕಾವ್ಯ – ಎರಡೂ ಪ್ರಕಾರಗಳು ನನ್ನ ಆಪ್ತ ಅಭಿವ್ಯಕ್ತಿ ರೂಪಗಳು. ಎಳೆಯ ವಯಸ್ಸಿನಿಂದಲೇ ಚಿಕ್ಕಪ್ಪನ (ಶೇಷಾಚಲಂ) ಬಣ್ಣದ ಬದುಕಿನ ದಟ್ಟ ಪ್ರಭಾವ ನನ್ನ ಮೇಲಾಗಿತ್ತು. ಬಾಲ ನಟನಾಗಿ ಗುಬ್ಬಿ ಕಂಪೆನಿ ಸೇರಿ ಸುಮಾರು ೨೫ ವರುಷಗಳು ವೃತ್ತಿ ರಂಗಭೂಮಿಯನ್ನು ಬದುಕನ್ನಾಗಿ ಆರಿಸಿಕೊಂಡಿದ್ದರು. ನಿರಂತರವಾಗಿ ನಾಟಕಗಳನ್ನು ನೋಡುತ್ತಿದ್ದ ನನಗೆ ನಾನೂ ಒಂದು ದಿನ ದೊಡ್ಡ ಕಲಾವಿದೆಯಾಗಬೇಕೆಂದು ಆಶಿಸಿದ್ದೆ. ಚಿಕ್ಕಪ್ಪ ತನ್ನ ನಾಟಕಗಳಲ್ಲಿನ ಕೆಲವು ಸಂಭಾಷಣೆಗಳನ್ನು ಬಾಯಿ ಪಾಠ ಮಾಡಿಸಿದ್ದರು. ಅಷ್ಟೇ ಸಾಕಾಗಿ ನಾನೂ ನನ್ನ ಗೆಳತಿಯರೂ ಸೇರಿಕೊಂಡು ಯಾರದಾದರೂ ದೊಡ್ಡ ಮನೆಯೊಂದರಲ್ಲಿ ಸೀರೆಗಳನ್ನು ಪರದೆಗಳಾಗಿಸಿ, ನಮಗೆ ಸುಲಭವಾಗಿ ದೊರೆಯುತ್ತಿದ್ದ ಪೌಡರ್, ಕುಂಕುಮ, ಕಾಗೆ ಬಂಗಾರ (ಮೈಕಾ) ವನ್ನೇ ಪ್ರಸಾದನ ಸಾಮಗ್ರಿಯಾಗಿ ಬಳಸಿಕೊಂಡು ಬೀದಿಯವರನ್ನೆಲ್ಲಾ ಆಹ್ವಾನಿಸಿ ಮನರಂಜನೆ ನೀಡುತ್ತಿದ್ದೆವು. ಆಗಿನಿಂದ ಬೆಳೆಸಿಕೊಂಡ ನಾಟಕ ಪ್ರೀತಿ ಒಂದು ಕಡೆಯಾದರೆ, ನಾನು ಬರವಣಿಗೆಗೆ ತೊಡಗಿದ ಮೇಲೆ ಕಾವ್ಯ, ಕತೆ, ಕಾದಂಬರಿ ಮುಂತಾದವುಗಳ ಜೊತೆಗೆ ನಾಟಕಗಳನ್ನೂ ರಚಿಸತೊಡಗಿದೆನಾದರೂ ಪ್ರಕಟಿಸುವ ಧೈರ್ಯ ಸಾಲದೆ ಹಸ್ತ ಪ್ರತಿಯ ರೂಪದಲ್ಲೇ ಉಳಿಸಿಕೊಂಡಿದ್ದೆ. ಎಲ್ಲ ವೇದಿಕೆಗಳಿಂದಲೂ ಮಹಿಳೆಯರು ನಾಟಕ ರಚನೆಯ ಕಡೆ ಹೆಚ್ಚಿಗೆ ತೊಡಗಿಸಿಕೊಂಡಿಲ್ಲವೆಂಬ ಮಾತು ಕೇಳಿ ಬರುತ್ತಿತ್ತು. ಆದ್ದರಿಂದ ನಾನೇಕೆ ಈ ದಿಕ್ಕಿನಲ್ಲಿ ಪ್ರಯತ್ನಿಸಬಾರದು ಎನಿಸಿ, ಧೈರ್ಯ ಮಾಡಿದೆ. ಮೊಟ್ಟಮೊದಲಿಗೆ ಹುಬ್ಬಳ್ಳಿಯ 'ಮಹಿಳಾ ಸಾಹಿತ್ಯಿಕಾ'

ಪ್ರಕಾಶನದಿಂದ. ಶ್ರೀಮತಿ ಹನುಮಾಕ್ಷಿಗೋಗಿ ಅವರ ಪ್ರೋತ್ಸಾಹದಿಂದ "ಪಾಂಚಾಲಿ ಮತ್ತು ಇತರ ನಾಟಕಗಳು" ಎಂಬ ಹೆಸರಿನಲ್ಲಿ ಮೂರು ನಾಟಕಗಳ ಸಂಕಲನವೊಂದು ಹೊರಬಂತು. ಇದಕ್ಕೆ ಸಾಕಷ್ಟು ಮೆಚ್ಚುಗೆ ಮತ್ತು ಪ್ರಶಸ್ತಿಗಳು ಬಂದ ಕಾರಣದಿಂದ ನನಗೂ ಪ್ರೋತ್ಸಾಹ ದೊರೆತಂತಾಯಿತು ಮತ್ತು ಭರವಸೆಯೂ ಉಂಟಾಯಿತು. ೧೯೯೮ ರಲ್ಲಿ ಬಂದ ಈ ನಾಟಕ ಸಂಕಲನದ ನಂತರ ಈಗ 'ದಂಗೆ ಎದ್ದವಳು' ಎಂಬ ಹೊಸ ನಾಟಕವೊಂದು ಬೆಳಕು ಕಾಣುತ್ತಿರುವುದು ನನಗೆ ನಿಜವಾಗಿಯೂ ಸಂತೋಷವೆನಿಸಿದೆ. ಕೆಲವು ವರ್ಷಗಳ ಹಿಂದೆ ಕರ್ನಾಟಕ ನಾಟಕ ಅಕಾಡೆಮಿ ಉಳವಿಯಲ್ಲಿ ನಾಟಕ ರಚನಾ ಶಿಬಿರವನ್ನು ಏರ್ಪಡಿಸಿತ್ತು. ನಾಟಕವೊಂದನ್ನು ಅಲ್ಲಿ ಬರೆಯಲೇಬೇಕಾದ ಒತ್ತಡಕ್ಕೆ ಮಣಿದು ವಸ್ತುವಿಗಾಗಿ ಚಡಪಡಿಸುತ್ತಿದ್ದೆ. ಮೂರು ನಾಲ್ಕು ದಿನಗಳ ನಂತರ ತಟ್ಟನೆ ಯಾವುದೋ ಒಂದು ವಿಚಾರ ಹೊಳೆದು ಮೊದಲ ಪುಟಕ್ಕೆ ಕೈ ಹಚ್ಚಿದೆ. ಆದರೆ ಬರೆಯುತ್ತಾ ಹೋದಂತೆ ನಾಟಕದ ಸ್ಪಷ್ಟ ರೂಪವೊಂದು ತಂತಾನೆ ನನ್ನ ಮುಂದೆ ಮೂಡಿತು.

ಮೊದಲು ಅದಕ್ಕೆ 'ಬೆಂಕಿ ಮಳೆ' ಎಂದು ಹೆಸರಿಸಿದೆ. ನಂತರ ಈ ನಾಟಕದ 'ಮಾದೇವಿ' ಯ 'ದಂಗೆ' ಯೇ ನಿಜವಾದ ತಿರುವನ್ನು ನಾಟಕಕ್ಕೆ ಕಲ್ಪಿಸಿದೆ ಎನಿಸಿ 'ದಂಗೆ ಎದ್ದವಳು' ಎಂದು ನಾಮಾಂತರ ಮಾಡಿದೆ. ಸಮರ್ಥ ನಿರ್ದೇಶಕರ ಕೈಯಲ್ಲಿ ಈ ನಾಟಕ ಅದ್ಭುತವಾಗಿ, ಪರಿಣಾಮಕಾರಿಯಾಗಬಲ್ಲದು ಎನ್ನುವ ಅಭಿಪ್ರಾಯವನ್ನು ಓದಿದ ಹಲವಾರು ಮಂದಿ, ವ್ಯಕ್ತಪಡಿಸಿರುವರಾದರೂ ಅಂತಹ ಅವಕಾಶ ನನ್ನ ಪಾಲಿಗೆ ದೂರದ ಬೆಟ್ಟವೇ ಆಗಿದೆ. ಕನ್ನಡ ರಂಗಭೂಮಿಯಲ್ಲಿ ಅನೇಕ ನಾಟಕಗಳನ್ನು ಪ್ರದರ್ಶಿಸಲಾಗುತ್ತಿದೆಯಾದರೂ ಅವು ಹೆಸರಾಂತ ನಾಟಕಕಾರರದಾಗಿರುತ್ತದೆ ಇಲ್ಲವೆ ರಂಗ ಪ್ರಯೋಗಕ್ಕಾಗಿಯೇ ನಿರ್ದೇಶಕರ ಆದೇಶದ ಮೇರೆಗೆ ಅವರ ನಿರೀಕ್ಷೆಗಳಿಗೆ ತಕ್ಕಂತೆ ನಾಟಕಗಳನ್ನು ಹೆಸರಾಂತ ಸಾಹಿತಿಗಳಿಂದ ಇಲ್ಲವೆ ರಂಗತಜ್ಞರಿಂದ ಬರೆಸಲಾಗುತ್ತವೆ. ಇಲ್ಲವಾದರೆ ಕೆಲವೊಮ್ಮೆ ಖ್ಯಾತಿವೆತ್ತ ಕವಿಗಳ, ಸಾಹಿತಿಗಳ ಕತೆ, ಕವನಗಳನ್ನು ರಂಗ ರೂಪಾಂತರಿಸಿ ನುರಿತ ನಿರ್ದೇಶಕರಿಂದ ಪ್ರಯೋಗವಾಗುತ್ತವೆ. ಇಂತಹ ಪರಿಸ್ಥಿತಿಯಲ್ಲಿ ನಾನು ನಾಟಕ ಬರೆಯ ಹೊರಟಿರುವುದು ಹುಚ್ಚು ಸಾಹಸವೇ ಆದರೂ. ಓದು ನಾಟಕವಾಗಿಯಾದರೂ ಸಹೃದಯರು ಇದನ್ನು ಸ್ವೀಕರಿಸುತ್ತಾರೆಂಬ ಭರವಸೆಯನ್ನು ತಳೆದು ಪ್ರಕಟಣೆಗೆ ಮುಂದಾಗಿದ್ದೇನೆ. ನಿರಾಶಾದಾಯಕ ಪರಿಸರದಲ್ಲೂ ಜಯಪ್ರಕಾಶ ಹೆಗಡೆ, ಸೀತಾರಾಮ ಹೆಗಡೆಯಂತಹವರು ಪ್ರಕಟಿಸಲು ಸಾಹಸ ಮಾಡಿ ಮುಂದೆ ಬಂದಿದ್ದಾರೆ. ಅದಕ್ಕಾಗಿ ಅವರಿಗೆ ನಾನು ಕೃತಜ್ಞಳಾಗಿದ್ದೇನೆ.

ಅಳುಕಿನಿಂದಲೇ, ಪ್ರೊಫೆಸರ್ ಚಂದ್ರಶೇಖರ ಪಾಟೀಲ ಅವರನ್ನು ಕೇಳಿಕೊಂಡಾಗ, ಪ್ರೀತಿಯಿಂದ ಓದಿ ಚೆಂದದ ಮುನ್ನುಡಿಯನ್ನು ಬರೆದುಕೊಟ್ಟಿದ್ದಾರೆ. ನಾಟಕಗಳನ್ನು ಬರೆದು, ಅವರ ನಾಟಕಗಳನ್ನೆಲ್ಲಾ ಅನೇಕ ರಂಗ ತಂಡಗಳ ಮೂಲಕ ಯಶಸ್ವಿ

ಪ್ರಯೋಗಗಳಾಗಿಸಿದ, ಅವರ ಅಭಿಪ್ರಾಯಗಳು ನನ್ನ ಪಾಲಿಗೆ ಬಹು ಮಹತ್ವದ್ದು. ಅವರು ಸೂಚಿಸುವ ಸಲಹೆಗಳನ್ನು ಹೃತ್ಪೂರ್ವಕವಾಗಿ ಒಪ್ಪಿಕೊಳ್ಳುತ್ತಾ, ಅವರು ಬರೆದುಕೊಟ್ಟ ಮುನ್ನುಡಿಗಾಗಿ ನನ್ನ ಕೃತಜ್ಞತೆಗಳು.

ಈ ಕೃತಿಯನ್ನು ಅಂದವಾಗಿ ಮುದ್ರಿಸಿಕೊಟ್ಟ ಮುದ್ರಕರಿಗೂ. ಸುಂದರವಾದ ಮುಖಪುಟವನ್ನು ರಚಿಸಿಕೊಟ್ಟ ಕಲಾವಿದರಿಗೂ ನನ್ನ ಹೃತ್ಪೂರ್ವಕ ಕೃತಜ್ಞತೆಗಳು.

ಓದುಗರು, ನಾಟಕ ತಂಡಗಳು ಈ ಕೃತಿಯನ್ನು ಪ್ರೀತಿಯಿಂದ ಒಪ್ಪಿಕೊಂಡು, ರಂಗ ಪ್ರಯೋಗಕ್ಕೆ ಅಳವಡಿಸಿಕೊಂಡಲ್ಲಿ ನನ್ನ ಪ್ರಯತ್ನ, ಆಸೆಗಳು ಸಫಲವಾಗುತ್ತವೆ. ಇಂತಹ ಸಫಲತೆಯ ಕನಸನ್ನು ಹೊತ್ತು ತಮ್ಮೆಲ್ಲರ ಮುಂದೆ ಇರಿಸಿದ್ದೇನೆ.

**–ವಿಜಯಾ ಸುಬ್ಬರಾಜ್**

# ಮತ್ತೊಂದು ಮಹಾಭಾರತ

## ಮುನ್ನುಡಿ

ಡಾ॥ ವಿಜಯಾ ಸುಬ್ಬರಾಜ್ ಅವರ 'ಮತ್ತೊಂದು ಮಹಾಭಾರತ' ನಾಟಕಕ್ಕೆ ಆಧಾರವಾಗಿರುವುದು ತೆಲುಗಿನ ಮಹಾಕವಿ 'ಶ್ರೀನಾಥ' ನ 'ಪಲ್ನಾಟಿ ಚರಿತ್ರಂ, ಕಾವ್ಯ. ಎರಡು ಅಂಕಗಳ ಹದಿಮೂರು ದೃಶ್ಯಗಳಲ್ಲಿ ಕಥೆಯ ಸನ್ನಿವೇಶಗಳು ಹರಡಿಕೊಂಡಿವೆ.

ಸಮಾಜದ ಬದುಕನ್ನು ರೂಪಿಸುವ ರಾಜಕೀಯ ವ್ಯವಸ್ಥೆ, ರಾಜಸತ್ತೆ, ಧರ್ಮಸತ್ತೆ, ಪ್ರಜಾಸತ್ತೆ ಯಾವುದೇ ಇರಲಿ. ಅಲ್ಲಿ 'ಅಧಿಕಾರ' (Power) ಎಂಬುದೇ ಸಕಲ ವಿದ್ಯಮಾನಗಳ ಕೇಂದ್ರಬಿಂದು. ಅದು ಅಧಿಕಾರ ರಾಜಕೀಯ (Power Politics) ಇಲ್ಲಿ ಮನುಷ್ಯ ಸಂಬಂಧಗಳು ಸಹಜವಾಗಿ ಅರಳಲಾರವು; ಎಲ್ಲ ಸಂಬಂಧಗಳೂ ರಾಜಕೀಕರಣಗೊಳ್ಳುತ್ತವೆ. ಒಂದು ವಿಷಣ್ಣ, ದುರಂತಮಯ, ರಹಸ್ಯಾತ್ಮಕ ಸ್ಥಿತಿಯನ್ನು ನಿರ್ಮಿಸುತ್ತವೆ. ಮೋಸ, ಕಪಟ, ಕೊಲೆ, ಬೇಹುಗಾರಿಕೆ, ವೈಯಕ್ತಿಕ ಪ್ರತಿಷ್ಠೆ, ಸೇಡು ಇವೆಲ್ಲ ಇಲ್ಲಿ ಮಾಮೂಲಿ.

ವಿಜಯಾ ಅವರ ಈ ನಾಟಕದ ರಾಜ ನಲಗಾಮ; ಅವರಿಗೆ ನಾಗಮಣಿ (ನಾಯಕಿ) ಮತ್ತು ಬ್ರಹ್ಮಣ್ಣ ಸಚಿವರು, ಸಲಹೆಗಾರರು ಈ ಎರಡು ಪಾತ್ರಗಳ ಸಂಘರ್ಷವೇ ಈ ನಾಟಕದ ಜೀವಾಳ. ಎರಡು ವಿಭಿನ್ನ ವ್ಯಕ್ತಿತ್ವಗಳ, ಎರಡು ಮಹತ್ವಾಕಾಂಕ್ಷೆಗಳ ತಿಕ್ಕಾಟದಿಂದಾಗಿ ನಾಟಕದಲ್ಲಿ ಅನೇಕ ಅನಿರೀಕ್ಷಿತ ತಿರುವುಗಳು ಉಂಟಾಗಿ ಮುಂದೇನು? ಮುಂದೇನು ಎಂಬ ಕುತೂಹಲ ಓದುಗ/ಪ್ರೇಕ್ಷಕರಲ್ಲಿ ಉಂಟಾಗುತ್ತದೆ. ಆದರೆ ಕೊನೆಗೂ ಯಾರು ಗೆಲ್ಲುತ್ತಾರೆ ಎಂಬುದರ ಸ್ಪಷ್ಟ ಸೂಚನೆ ನಮಗೆ ದೊರೆಯುವುದಿಲ್ಲ. ಈ ದೊರೆಯದಿರುವುದೇ ಮುಖ್ಯ ಅಂತ ನನ್ನ ಅನ್ನಿಸಿಕೆ. ಏಕೆಂದರೆ ಅಧಿಕಾರ, ರಾಜಕೀಯ ಎಂಬುದು ನಿರಂತರ ಪ್ರಕ್ರಿಯೆ. ಅದಕ್ಕೆ ನಿಶ್ಚಿತ 'ಕೊನೆ' ಎಂಬುದಿಲ್ಲ.

ಒಂದೆರಡು ದೃಶ್ಯಗಳನ್ನು ಬಿಟ್ಟರೆ, ನಾಟಕದ ಬಹುತೇಕ ಸನ್ನಿವೇಶಗಳಲ್ಲಿ ರಂಗದ ಮೇಲೆ ನಾವು ಕಾಣುವುದು ಚರ್ಚೆ, ವಾದ. ವಿವಾದ ಮತ್ತು ಸಂಘರ್ಷ. ಕ್ರಿಯೆಗೆ

ಸಾಕಷ್ಟು ಅವಕಾಶವಿರುವ ಘಟನಾವಳಿಗಳಿವೆ. ಅವುಗಳನ್ನು ನಾಟಕದ ಬಂಧದಲ್ಲಿ ಔಚಿತ್ಯಪೂರ್ಣವಾಗಿ ವಿಜಯಾ ಅವರು ಬಳಸಿಕೊಳ್ಳಬಹುದಿತ್ತು. ಆ ಕೊರತೆಯನ್ನು ತುಂಬುವಂತೆ ಎಲ್ಲ ಪ್ರಮುಖ ಪಾತ್ರಗಳ ಮುಲಕ ಶಕ್ತಿಯುತವಾದ ಮಾತುಗಳನ್ನು ಅವರು ಹೊರಡಿಸುವಲ್ಲಿ ಯಶಸ್ವಿಯಾಗಿದ್ದಾರೆ.

ವ್ಯಾಸ ಪ್ರಣೀತ 'ಮಹಾಭಾರತ' ಮಹಾಕಾವ್ಯ ಅಧಿಕಾರ-ರಾಜಕೀಯದ ಮಹಾಗಾಥೆ. ವಿಜಯಾ ಅವರ ನಾಟಕದ ಶೀರ್ಷಿಕೆ ಆ ಮಹಾಕಾವ್ಯದ ದ್ರವ್ಯವನ್ನು ಮಾತ್ರ ಧ್ವನಿಸುತ್ತದೆ.

ನಾಟಕ ಕಟ್ಟುವ ಕೌಶಲ್ಯದಲ್ಲಿ ವಿಜಯಾ ಅವರು ಇನ್ನೂ ಹೆಚ್ಚಿನ ಯಶಸ್ಸು ಕಾಣಲಿ ಅಂತ ಹಾರೈಸುವೆ.

**–ಚಂದ್ರಶೇಖರ ಪಾಟೀಲ**

## ನಾನೇಕೆ ಬರೆದೆ

ನಾಟಕ, ಕಾವ್ಯ-ಎರಡೂ ಪ್ರಕಾರಗಳನ್ನು ನನ್ನ ಆಪ್ತ ಅಭಿವ್ಯಕ್ತಿ ರೂಪಗಳು. ಎಳೆಯ ವಯಸ್ಸಿನಿಂದಲೇ ಚಿಕ್ಕಪ್ಪನ (ಶೇಷಾಚಲಂ) ಬಣ್ಣದ ಬದುಕಿನ ದಟ್ಟ ಪ್ರಭಾವ ನನ್ನ ಮೇಲಾಗಿತ್ತು. ಬಾಲ ನಟನಾಗಿ ಗುಬ್ಬಿ ಕಂಪನಿ ಸೇರಿ ಸುಮಾರು ೨೫ ವರುಷಗಳು ವೃತ್ತಿ ರಂಗಭೂಮಿಯನ್ನು ಬದುಕನ್ನಾಗಿ ಆರಿಸಿಕೊಂಡಿದ್ದರು. ನಿರಂತರವಾಗಿ ನಾಟಕಗಳನ್ನು ನೋಡುತ್ತಿದ್ದ ನನಗೆ ನಾನೂ ಒಂದು ದಿನ ದೊಡ್ಡ ಕಲಾವಿದೆಯಾಗಬೇಕೆಂದು ಆಶಿಸಿದ್ದೆ. ಚಿಕ್ಕಪ್ಪ ತನ್ನ ನಾಟಕಗಳಲ್ಲಿನ ಕೆಲವು ಸಂಭಾಷಣೆಗಳನ್ನು ಬಾಯಿಪಾಠ ಮಾಡಿಸಿದ್ದರು. ಅಷ್ಟೇ ಸಾಕಾಗಿ ನಾನೂ ನನ್ನ ಗೆಳತಿಯರು ಸೇರಿಕೊಂಡು ಯಾರದಾದರೂ ದೊಡ್ಡ ಮನೆಯೊಂದರಲ್ಲಿ ಸ್ಟೇಜ್ ನಿರ್ಮಿಸಿ, ಸೀರೆಗಳನ್ನು ಪರದೆಗಳಾಗಿಸಿ, ನಮಗೆ ಸುಲಭವಾಗಿ ದೊರೆಯುತ್ತಿದ್ದ ಪೌಡರ್, ಕುಂಕುಮ, ಕಾಗೆ ಬಂಗಾರ (ಮೈಕಾ) ವನ್ನೇ ಪ್ರಸಾಧನ ಸಾಮಗ್ರಿಯಾಗಿ ಬಳಸಿಕೊಂಡು ಬೀದಿಯವರನ್ನೆಲ್ಲಾ ಆಹ್ವಾನಿಸಿ ಮನರಂಜನೆ ನೀಡುತ್ತಿದ್ದೆವು. ಆಗಿನಿಂದ ಬೆಳೆಸಿಕೊಂಡ ನಾಟಕ ಪ್ರೀತಿ ಒಂದು ಕಡೆಯಾದರೆ, ನಾನು ಬರವಣಿಗೆಗೆ ತೊಡಗಿದ ಮೇಲೆ ಕಾವ್ಯ, ಕತೆ. ಕಾದಂಬರಿ ಮುಂತಾದವುಗಳ ಜೊತೆಗೆ ನಾಟಕಗಳನ್ನೂ ರಚಿಸತೊಡಗಿದೆನಾದರೂ. ಪ್ರಕಟಿಸುವ ಧೈರ್ಯ ಸಾಲದೆ, ಹಸ್ತ ಪ್ರತಿಯ ರೂಪದಲ್ಲೇ ಉಳಿಸಿಕೊಂಡಿದ್ದೆ. ಎಲ್ಲ ವೇದಿಕೆಗಳಿಂದಲೂ ಮಹಿಳೆಯರು ನಾಟಕ ರಚನೆಯ ಕಡೆ

ಹೆಚ್ಚಿಗೆ ತೊಡಗಿಸಿಕೊಂಡಿಲ್ಲವೆಂಬ ಮಾತು ಕೇಳಿ ಬರುತ್ತಿತ್ತು. ಆದ್ದರಿಂದ ನಾನೇಕೆ ಈ ದಿಕ್ಕಿನಲ್ಲಿ ಪ್ರಯತ್ನಿಸಬಾರದು ಎನಿಸಿ, ಧೈರ್ಯ ಮಾಡಿದೆ. ಮೊಟ್ಟಮೊದಲಿಗೆ ಹುಬ್ಬಳ್ಳಿಯ 'ಮಹಿಳಾ ಸಾಹಿತ್ಯಿಕಾ' ಪ್ರಕಾಶನದಿಂದ ಶ್ರೀಮತಿ ಹನುಮಾಕ್ಷಿ ಗೋಗಿ ಅವರ ಪ್ರೋತ್ಸಾಹದಿಂದ 'ಪಾಂಚಾಲಿ ಮತ್ತು ಇತರ ನಾಟಕಗಳು' ಎಂಬ ಹೆಸರಿನಲ್ಲಿ ಮೂರು ನಾಟಕಗಳ ಸಂಕಲನವೊಂದು ಹೊರಬಂತು. ಇದಕ್ಕೆ ಸಾಕಷ್ಟು ಮೆಚ್ಚುಗೆ ಮತ್ತು ಪ್ರಶಸ್ತಿಗಳು ಬಂದ ಕಾರಣದಿಂದ ನನಗೂ ಸ್ವಲ್ಪ ಪ್ರೋತ್ಸಾಹ ದೊರೆತಂತಾಯಿತು ಮತ್ತು ಭರವಸೆಯೂ ಉಂಟಾಯಿತು. ೧೯೯೮ ರಲ್ಲಿ ಬಂದ ಈ ನಾಟಕ ಸಂಕಲನದ ನಂತರ ಈಗ ನನ್ನ ಮತ್ತೊಂದು ನಾಟಕವಾಗಿ 'ಮತ್ತೊಂದು ಮಹಾಭಾರತ' ನಾಟಕ ಹೊರ ಬರುತ್ತಿದೆ. ತೆಲುಗಿನ ಮಹಾಕವಿ ಶ್ರೀನಾಥನ 'ಮಹಾಕಾವ್ಯ ಪಲ್ನಾಟಿ ಚರಿತ್ರಂ' ನಲ್ಲಿನ 'ನಾಗಮಣಿ' ಪಾತ್ರ ನನ್ನನ್ನು ಬಹುವಾಗಿ ತೂಗಿಸಿದ್ದು, ನಾಟಕಕ್ಕೆ ಅಳವಡಿಸಬಹುದಾದ ಅಂತಃಸತ್ವವಿದ್ದು ಮನುಷ್ಯ ಸಹಜ ಮೂಲ ಪ್ರವೃತ್ತಿಗಳಾದ ದ್ವೇಷ, ಅಸೂಯೆ, ಅಧಿಕಾರ ದಾಹ, ಅಹಮಿಕೆ ಇತ್ಯಾದಿಗಳಿಗೆ ಮತ್ತು ಇವುಗಳಿಂದಾಗಿ ಸಿಡಿದು ಹೊಮ್ಮುವ ಸಂಘರ್ಷಗಳ ನಿರೂಪಣೆಗೆ ಸಾಕಷ್ಟು ಅವಕಾಶಗಳಿವೆಯೆಂದು ನನಗೆ ಹೊಳೆದ ಕಾರಣ ಈ ನಾಟಕವನ್ನು ಬರೆದೆ. ಸುಮಾರು ಎರಡು ಗಂಟೆಗಳ ವ್ಯಾಪ್ತಿಯುಳ್ಳ ಈ ನಾಟಕವನ್ನು ಆಕಾಶವಾಣಿಯಾಗಿ ೩೦ ನಿಮಿಷಕ್ಕೆ ಅಳವಡಿಸಿಕೊಟ್ಟೆ. ರಾಷ್ಟ್ರೀಯ ನಾಟಕ ಪ್ರಸಾರವಾಗಿ ಆಕಾಶವಾಣಿಯಿಂದ ಅತ್ಯಂತ ಪರಿಣಾಮಕಾರಿಯಾಗಿ ನಿರ್ದೇಶಿತವಾಗಿ ಬಿತ್ತರಗೊಂಡಿತು.

ನನ್ನ ಅದೃಷ್ಟ. ಅಕ್ಷಯ ಪ್ರಕಾಶನದವರು ಈ ನಾಟಕವನ್ನು ಪ್ರಕಟಿಸಲು ಮುಂದೆ ಬಂದಿದ್ದಾರೆ. ಅವರಿಗೆ ನನ್ನ ಕೃತಜ್ಞತೆಗಳು. ಈ ಕೃತಿಯನ್ನು ಕುರಿತು ಚಿಕ್ಕದಾದರೂ ಚೊಕ್ಕ ಮಾತುಗಳಲ್ಲಿ ಮುನ್ನುಡಿ ಬರೆದುಕೊಟ್ಟ ಹೆಸರಾಂತ ಕವಿ, ನಾಟಕಕಾರ, ವಿಮರ್ಶಕ, ಅಂಕಣಕಾರ ಎಲ್ಲಕ್ಕಿಂತ ಹೆಚ್ಚಾಗಿ ಕನ್ನಡಪರ ಹೋರಾಟಗಾರ ಎನಿಸಿಕೊಂಡವರೂ ಆದ, ಪ್ರೀತಿಯಿಂದ 'ಚಂಪಾ' ಎಂದೇ ಕರೆಸಿಕೊಂಡ ಪ್ರೊ॥ ಚಂದ್ರಶೇಖರ ಪಾಟೀಲ ಅವರಿಗೆ ನನ್ನ ಗೌರವಪೂರ್ವಕ ಕೃತಜ್ಞತೆಗಳು.

ಈ ಕೃತಿಯನ್ನು ಅಂದವಾಗಿ ಮುದ್ರಿಸಿಕೊಟ್ಟ ಮುದ್ರಕರಿಗೂ, ಸುಂದರವಾಗಿ ಮುಖಪುಟವನ್ನು ರಚಿಸಿಕೊಟ್ಟ ಕಲಾವಿದರಿಗೂ ನನ್ನ ಹೃತ್ಪೂರ್ವಕ ಕೃತಜ್ಞತೆಗಳು.

ಓದುಗರು, ನಾಟಕ ತಂಡಗಳು ಈ ಕೃತಿಯನ್ನು ಪ್ರೀತಿಯಿಂದ ಒಪ್ಪಿಕೊಂಡು, ರಂಗಪ್ರಯೋಗಕ್ಕೆ ಅಳವಡಿಸಿಕೊಂಡಲ್ಲಿ ನನ್ನ ಪ್ರಯತ್ನ, ಆಸೆಗಳು ಸಫಲವಾಗುತ್ತವೆ. ಇಂತಹ ಸಫಲತೆಯ ಕನಸನ್ನು ಹೊತ್ತು ತಮ್ಮೆಲ್ಲರ ಮುಂದೆ ಇರಿಸಿದ್ದೇನೆ.

**–ವಿಜಯಾ ಸುಬ್ಬರಾಜ್**

# ಮಿಲನ

## ನನ್ನ ಮಾತು

ಸಂಸ್ಕೃತ ನಾಟಕಕಾರರಲ್ಲಿ ಭಾಸನಿಗೆ ಮಹತ್ವದ ಸ್ಥಾನವಿದೆ. ಮಹಾಭಾರತದ ಕಥಾ ಪ್ರಸಂಗಗಳನ್ನು ತೆಗೆದುಕೊಂಡು ರಚಿಸಿದ ಮಧ್ಯಮ ವ್ಯಾಯೋಗ, ದೂತಘಟೋದ್ಗಜ ಇತ್ಯಾದಿ ನಾಟಕಗಳನ್ನು ಮರೆಯುವ ಹಾಗಿಲ್ಲ. ಇವುಗಳೇ ಅಲ್ಲದೆ ಚಾರುದತ್ತ, ಅವಿಮಾರಕ ಮುಂತಾದ ನಾಟಕಗಳನ್ನೂ ರಚಿಸಿರುವನಾದರೂ ಅಷ್ಟಾಗಿ ಅವು ಪ್ರಯೋಗಗೊಳ್ಳಲಿಲ್ಲ. ನಾನು ಭಾಸನ ಈ ಎರಡೂ ನಾಟಕಗಳನ್ನು ಆಕಸ್ಮಿಕ ಕುತೂಹಲದಿಂದ ಓದಿದೆ. ಈ ಎರಡರಲ್ಲಿ ಅವಿಮಾರಕ ನನ್ನನ್ನು ಬಹಳವಾಗಿ ಪ್ರಭಾವಿಸಿತು. ಇದೊಂದು ಅತಿ ಸಣ್ಣ ನಾಟಕ. ನನಗೆ ಇದರಲ್ಲಿನ ಪ್ರಣಯ ಸಾಹಸದ ಕಥಾನಕ ಖುಷಿ ಎನಿಸಿತು. ಇದನ್ನು ಮೂಲವಾಗಿರಿಸಿಕೊಂಡು ಪಾತ್ರ, ಸನ್ನಿವೇಶಗಳನ್ನು ಸೇರಿಸಿಕೊಂಡು ಸುಮಾರು ಎರಡು ಗಂಟೆಗಳ ನಾಟಕವನ್ನಾಗಿ ವಿಸ್ತರಿಸಿಕೊಳ್ಳುವ ಸಾಧ್ಯತೆಗಳು ಕಾಣಿಸಿದವು. ಹಾಗಾಗಿ ನನ್ನ ಈ ನಾಟಕ ಯಥಾವತ್ತಾದ ಭಾಷಾಂತರವೂ ಅಲ್ಲ; ರೂಪಾಂತರವೂ ಅಲ್ಲ. ನನಗೆ ತೋಚಿದಂತೆ ಪಾತ್ರಗಳನ್ನು, ಸಂಭಾಷಣೆಗಳನ್ನು, ಸನ್ನಿವೇಶಗಳನ್ನು ನನ್ನ ಆಶಯಕ್ಕೆ ಕಲ್ಪಿಸಿಕೊಂಡು ಬರೆದೆ. ಜಗತ್ತಿನಲ್ಲಿ ಅತಿ ಪ್ರಾಚೀನ ಕಾಲದಿಂದಲೂ ಇಂತಹ ಪ್ರಣಯ ಸಾಹಸ ಕತೆಗಳು ಪ್ರಚಲಿತವಿದ್ದು ಸೃಜನಶೀಲ ಮನಸ್ಸುಗಳಿಗೆ ಇದು ಅತ್ಯಂತ ಪ್ರೀತಿಯ ವಸ್ತುವಾಗಿತ್ತು. ನನಗೂ ಈ ಕಥಾನಕ ಅತ್ಯಂತ ರೋಚಕವೆನಿಸಿದ ಕಾರಣ, ಭಾಸನ ನಾಟಕದ ಪ್ರೇರಣೆ ಪಡೆದು ರಚಿಸಿ, ಇದಕ್ಕೆ 'ಮಿಲನ' ಎಂದು ಹೆಸರಿಸಿದೆ. ಷೇಕ್ಸ್‌ಪಿಯರ್‌ನ 'ಮಿಡ್ ಸಮ್ಮರ್ ನೈಟ್ಸ್ ಡ್ರೀಮ್' ಮಾದರಿಯಲ್ಲಿ ಪರಿಣಾಮಕಾರಿಯಾಗಿ ರಂಗದ ಮೇಲೆ ಮೂಡಿಸಲು ಸಾಧ್ಯವೆಂಬ ನಂಬಿಕೆಯಿದೆ. ಆದರೆ ಸಮರ್ಥ ನಿರ್ದೇಶಕರು ಮುಂದೆ ಬಂದು ಇದನ್ನು ಪ್ರಯೋಗಕ್ಕೆ ತೆಗೆದುಕೊಂಡರೆ ನನ್ನ ಶ್ರಮ ಸಾರ್ಥಕವಾಗುತ್ತದೆ. ಆದರೆ ಅಂತಹ ಅವಕಾಶ ದೊರೆಯುವುದೇ ಸಮಸ್ಯೆಯಾಗಿದ್ದರೂ 'ಭರವಸೆ' ಯ ಭಾವದೊಂದಿಗೆ ಈ ನಾಟಕವನ್ನು ಓದುಗರ ಮುಂದಿರಿಸಿದ್ದೇನೆ.

ಈ ನಾಟಕವನ್ನು ಪ್ರಕಟಿಸಲು ಮುಂದಾದ ಸೀತಾರಾಮ ಹೆಗಡೆ ಅವರಿಗೆ, ಅಂದವಾಗಿ ಮುದ್ರಿಸಿದ ಮುದ್ರಕರಿಗೂ ಮುಖಪುಟವನ್ನು ರಚಿಸಿಕೊಟ್ಟ ಕಲಾವಿದರಿಗೂ ನನ್ನ ಹೃದಯಪೂರ್ವಕ ಕೃತಜ್ಞತೆಗಳು.

**–ವಿಜಯಾ ಸುಬ್ಬರಾಜ್**

# ಇದೇ ಲೇಖಕಿಯ ಇತರ ಕೃತಿಗಳು

## ಕವನ ಸಂಕಲನಗಳು

೧) ತ್ರಿಶಂಕು
೨) ಏನು ಹೇಳಲಿ ಗೆಳೆಯಾ
೩) ಹಾಡೇನ ಪಾಡೇನ
೪) ಈ ತೆರದ ನಿರೀಕ್ಷೆಯಲ್ಲಿ
೫) ವಸುಂಧರೆಯ ಪ್ರಾಯ
೬) ಸಖ ಬಾ ಸಂಚಾರಕೆ
೭) ಅಕ್ಕನ ವಚನಗಳು (ಇಂಗ್ಲಿಷಿಗೆ ಅನುವಾದ)
೮) ಅಂಬಿಗರ ಚೌಡಯ್ಯ (ಇಂಗ್ಲಿಷಿಗೆ ಅನುವಾದ)
೯) ಪರ್ಷಿಯನ್ ಕವಿತೆಗಳು (ಅಚ್ಚಿನಲ್ಲಿ)

## ಕಾದಂಬರಿಗಳು

೧) ಸೌರಭಸೇತು/ಬುವಿಯಿಂದ ಬಾನಿಗೆ
೨) ಹರಿದತ್ತ ಹರಿವ ಚಿತ್ತ
೩) ತಪ್ಪಿದ ಹೆಜ್ಜೆಗಳು
೪) ನಡುವಯಸ್ಸಿನಲ್ಲಿ (ಚೀನೀ ಭಾಷೆಯಿಂದ ಕನ್ನಡಕ್ಕೆ)
೫) ಶಾಲ್ಮಲಿ (ಹಿಂದಿಯಿಂದ ಕನ್ನಡಕ್ಕೆ)
೬) ಸೂರ್ಯಕಾಂತಿಗಳ ಮಡಿಲಲ್ಲಿ (ಇಂಗ್ಲೀಷಿನಿಂದ)
೭) ಪ್ರಾಣಿಗಳ ಪ್ರಭುತ್ವ (ಇಂಗ್ಲೀಷಿನಿಂದ)

## ಕಥಾ ಸಂಕಲನಗಳು

೧) ಮಾ ನಿಷಾದ
೨) ಅದೇ ಮುಖ
೩) ಕಾಣದ ಓಕ್ಕಿನತ್ತ
೪) ಲುಷುನ್‌ರ ಎರಡು ನೀಳ್ಗತೆಗಳು (ಚೀನೀ ಭಾಷೆಯಿಂದ ಕನ್ನಡಕ್ಕೆ)
೫) ಹುಚ್ಚನ ದಿನಚರಿ ಮತ್ತು ಇತರ ಕತೆಗಳು (ಚೀನೀ ಭಾಷೆಯಿಂದ ಕನ್ನಡಕ್ಕೆ)
೬) ಕನ್ನಡ ಕಾವ್ಯ ಪರಂಪರೆಯಲ್ಲಿ ಪ್ರೀತಿಯ ನೆಲೆಗಳು
(ಕನ್ನಡ ಕಾವ್ಯಗಳಲ್ಲಿನ ಪ್ರೀತಿ ಸಂದರ್ಭಗಳ ಕಥಾರೂಪಗಳು)
೭) ಕಥಾಂತರಂಗ (ಸಮಗ್ರ ಕತೆಗಳು)

**ಜೀವನ ಚರಿತ್ರೆ**

೧) ಮಹಾದೇವಿ ವರ್ಮಾ
೨) ಅಕ್ಕಮಹಾದೇವಿ (ಕನ್ನಡದಿಂದ ಇಂಗ್ಲಿಷ್‌ಗೆ)
೩) ಹರಿಹರನ ಕಾವ್ಯದಲ್ಲಿ ಬಸವಣ್ಣ
೪) ರಾಘವಾಂಕನ ಚಿತ್ರಿಸಿದ ಸಿದ್ಧರಾಮ
೫) ಚಾಮರಸನ ಪ್ರಭುಲಿಂಗ ಲೀಲೆಯಲ್ಲಿ ಅಲ್ಲಮಪ್ರಭು
೬) ನಿಜಗುಣ ಶಿವಯೋಗಿ
೭) ಬಾಲಲೀಲಾ ಮಹಾಂತ ಶಿವಯೋಗಿ
೮) ಮಿನುಗಿ ನಲುಗಿದ ಕಲ್ಪನಾ
೯) ಪೊಟ್ಟಿ ಶ್ರೀರಾಮುಲು (ಇಂಗ್ಲಿಷಿನಲ್ಲಿ)

**ನಾಟಕಗಳು**

೧) ಪಾಂಚಾಲಿ
೨) ಪಾದ್ರಿಯೊಬ್ಬನ ಕತೆ
೩) ನಗರ ವಧು ಸಾಲವತಿ
೪) ಮತ್ತೊಂದು ಮಹಾಭಾರತ
೫) ಮಿಲನ
೬) ದಂಗೆಯೆದ್ದವಳು
೭) ಪ್ರೇಮ ಸಮಾಧಿ
೮) ಕಟಕಟೆಯಲ್ಲಿ ನಿಂತು (ಅನುವಾದ)

**ಪ್ರವಾಸ ಕಥನ**

೧) ಸ್ವರ್ಗ ದ್ವೀಪದ ಕನಸಿನ ಬೆನ್ನೇರಿ

**ಸಂಶೋಧನೆ – ವಿಮರ್ಶೆ**

೧) ಕನ್ನಡದಲ್ಲಿ ಗೀತನಾಟಕಗಳ ಅಧ್ಯಯನ (ಸಂಶೋಧನೆ)
೨) ಸ್ಪಂದನ
೩) ಸಮಾಲೋಚನ
೪) ಅಕ್ಕನ ವಚನಗಳಲ್ಲಿ ಪ್ರತಿಭಟನೆ ಮತ್ತು ಅನುಭಾವ
೫) ಪು.ತಿ.ನ. ಗೀತನಾಟಕಗಳಲ್ಲಿ ತಾತ್ವಿಕ ಚಿಂತನೆಗಳು
೬) ಮಂಥನ
೭) ಸಂಸ್ಕೃತಿ ದನಿಗಳು (ಅಂಕಣ ವಿಮರ್ಶೆ)

**ಮಕ್ಕಳ ಸಾಹಿತ್ಯ**

೧) ರಾಮಾಯಣ - ಕನ್ನಡ
೨) ರಾಮಾಯಣ - ಕನ್ನಡದಿಂದ ಇಂಗ್ಲಿಷಿಗೆ
೩) ಮಹಾಭಾರತ - ಕನ್ನಡ
೪) ಮಹಾಭಾರತ - ಕನ್ನಡದಿಂದ ಇಂಗ್ಲಿಷಿಗೆ
೫) ಹನುಮಾನ್ (ಅಚ್ಚಿನಲ್ಲಿ)
೬) ಶ್ರೀಕೃಷ್ಣ (ಅಚ್ಚಿನಲ್ಲಿ)
೭) ಪೌರಾಣಿಕ ಏಕಾಂಕಗಳು (ಅಚ್ಚಿನಲ್ಲಿ)
೮) ಬಸವಣ್ಣ
೯) ಪಂಚತಂತ್ರ (ನಾಟಕ ರೂಪಾಂತರ) (ಕನ್ನಡದಲ್ಲಿ)
೧೦) ಪಂಚತಂತ್ರ (ನಾಟಕ ರೂಪಾಂತರ) (ಇಂಗ್ಲಿಷಿನಲ್ಲಿ)
೧೧) ಪುಣ್ಯಕೋಟಿ (ನಾಟಕ)
೧೨) ಕಿಂದರಿಜೋಗಿ (ನಾಟಕ)
೧೩) ಕಾಗಾಯಣ (ನಾಟಕ)



ಈ ಕಾಲದಲ್ಲಿಯೂ ಮಹಿಳೆ ಅನೇಕ ಬಿಕ್ಕಟ್ಟುಗಳ ನಡುವೆಯೇ ತನ್ನತನ, ಅಭಿವ್ಯಕ್ತಿ ತೋರಬೇಕಿದೆ. ಒಂದೆಡೆ ಪರಂಪರೆ, ಮತ್ತೊಂದೆಡೆ ಈಗಾಗಲೇ ಇರುವ ದಿಗ್ಗಜರ ಮಾರ್ಗ, ಮತ್ತೊಂದೆಡೆ 'ಅಸ್ತಿತ್ವ' ತೋರಬೇಕಾದ, ಉಳಿಯಬೇಕಾದ ಹಂತದಲ್ಲಿ ತಮ್ಮ ನಾಟಕಗಳ ಮೂಲಕ ಹೊಸತನಕ್ಕೆ ಸ್ಪಂದಿಸಿರುವ ಡಾ. ವಿಜಯಾ ಅಭಿನಂದನೀಯರು. ತೆಲುಗು, ಹಿಂದೀ, ಪಂಜಾಬಿ ಸಾಹಿತ್ಯವನ್ನು ಕನ್ನಡಕ್ಕೆ ಅನುವಾದಿಸಿರುವ, ರೂಪಾಂತರಿಸಿರುವ ಅವರ ಪ್ರಯತ್ನ ಕಡಿಮೆಯದಲ್ಲ. ಗ್ರೀಕ್, ಇಂಗ್ಲೀಷ್, ಇಟಾಲಿಯನ್, ಸಂಸ್ಕೃತ ಸಾಹಿತ್ಯದ ಅವರ ತಿಳುವಳಿಕೆ ಉಲ್ಲೇಖಾರ್ಹ. ಈ ಹಿನ್ನೆಲೆಯಲ್ಲಿ 'ಮಹಿಳೆ'ಯ ವಿವಿಧ ಮುಖಗಳನ್ನು, ಆಯಾಮ, ಅಭೀಪ್ಸೆ, ಹೊಯ್ದಾಟ, ಪ್ರತಿಭಟನೆ, ವ್ಯಕ್ತಿತ್ವ, ಅಸ್ತಿತ್ವಗಳನ್ನು ತಮ್ಮ ನಾಟಕಗಳ ಮೂಲಕ ನಿರೂಪಿಸಿರುವ ಡಾ. ವಿಜಯಾ ಅವರ ಕೃಷಿ ಸ್ವಾಗತಾರ್ಹ. ಅವರ ಈ ನಾಟಕಗಳ 'ಸಮಗ್ರ ಪ್ರಕಟಣೆ' ಹೊಸ ಓದಿಗೆ, ಹೊಸ ನಿರ್ವಚನಕ್ಕೆ ಈಡಾಗಬೇಕಿದೆ.

ಡಾ. ಎಸ್.ಪ್ರಸಾದಸ್ವಾಮಿ
(ಮುನ್ನುಡಿಯಿಂದ)



ಕಣ್ವ ಪಬ್ಲಿಕೇಷನ್ಸ್ ಪ್ರೈವೇಟ್ ಲಿ.
ಬೆಂಗಳೂರು